# ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳು ಹಾಗೂ ಅವುಗಳ ತಾತ್ವಿಕ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು
ಚಂದ್ರಶೇಖರ ಕಾಳನ್ನವರ

ಮಾರ್ಗದರ್ಶಕರು
ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





ಭಾಷಾನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬
೨೦೨೦

# ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳು ಹಾಗೂ ಅವುಗಳ ತಾತ್ವಿಕ ಸ್ವರೂಪ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
**ಚಂದ್ರಶೇಖರ ಕಾಳನ್ನವರ**

ಮಾರ್ಗದರ್ಶಕರು
**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಭಾಷಾನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

**ಚಂದ್ರಶೇಖರ ಕಾಳನ್ನವರ** ಅವರು ನನ್ನ ಮಾರ್ಗದರ್ಶನದಲ್ಲಿ **"ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳು ಹಾಗೂ ಅವುಗಳ ತಾತ್ವಿಕ ಸ್ವರೂಪ"** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು
**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೧೬-೯-೨೦೨೦

ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**"ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳು ಹಾಗೂ ಅವುಗಳ ತಾತ್ವಿಕ ಸ್ವರೂಪ"** ಎಂಬ ಮಹಾಪ್ರಬಂಧವನ್ನು **ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಡಾ. ವೀರೇಶ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೆ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರ ವಾದ ಸಂಶೋಧನ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**ಚಂದ್ರಶೇಖರ ಕಾಳನ್ನವರ**
**ಸಂಶೋಧಕರು**
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೧೪/೯/೨೦೨೦
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ-ಒಂದು :
## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಇದುವರೆಗಿನ ಸಮೀಕ್ಷೆ

೧.೧ ಅಧ್ಯಯನದ ಉದ್ದೇಶ, ವ್ಯಾಪ್ತಿ

೧.೨ ಅಧ್ಯಯನದ ವಿಧಾನ ಮತ್ತು ಸ್ವರೂಪ

೧.೩ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ–ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಇದುವರೆಗಿನ ಸಮೀಕ್ಷೆ

**ಪ್ರಸ್ತಾವನೆ :**

ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದ ವಸಾಹತುಶಾಹಿ ಕರ್ನಾಟಕವು ೫೦ಕ್ಕೂ ಹೆಚ್ಚು ತುಂಡುಗಳಲ್ಲಿ ಹರಿದು ಹೋಗಿತ್ತು. ಇದು ಒಂದು ಭಾಷಿಕ ಅಥವಾ ಭೌಗೋಳಿಕ ಪ್ರಾಂತ್ಯಗಳ ಜನರ ನಡುವೆ ಹಲವು ಅಸಮಾನತೆಗಳಿಗೆ ಕಾರಣವಾಯಿತು. ಹದಿನೆಂಟನೆಯ ಶತಮಾನದ ಉತ್ತರಾರ್ಧದ ವೇಳೆಗೆ ಬ್ರಿಟಿಷರು ಗೆದ್ದುಕೊಂಡಿದ್ದ ಹಾಗೂ ವಿವಿಧ ಆಡಳಿತದ ವರದಿಯಲ್ಲಿ ಹಂಚಿಹೋಗಿದ್ದ ಕನ್ನಡ ಭೂಪ್ರದೇಶಗಳ ಸಂಖ್ಯೆ ೨೨ ಆಗಿತ್ತು. ಇದರ ಜೊತೆಗೆ ಮೂರು ಕಂಟೋನ್ಮೆಂಟ್ ಪ್ರದೇಶಗಳು ಒಂಬತ್ತು ಜಹಗೀರಗಳು ಇದ್ದವು. ಪ್ರಮುಖ ಆಡಳಿತ ಘಟಕಗಳಾಗಿ ಮುಂಬೈ ಕರ್ನಾಟಕ, ಮೈಸೂರು ಕರ್ನಾಟಕ, ಹೈದರಾಬಾದ ಕರ್ನಾಟಕ, ಮದರಾಸು ಕರ್ನಾಟಕ ಹಾಗೂ ಕೊಡಗು ಘಟಕಗಳಲ್ಲಿ ಹರಿದು ಹಂಚಿಹೋಗಿತ್ತು. ಇದಲ್ಲದೆ ಮುಂಬೈ ಕರ್ನಾಟಕದಲ್ಲಿ ಸಂಸ್ಥಾನಗಳು, ಜಹಗೀರಗಳು, ಬೆಳಗಾವಿಯ ದಂಡುಪ್ರದೇಶವು ಸೇರಿ ಕನ್ನಡ ನಾಡು ನುಡಿ ಹಾಗೂ ಜನಸಂಸ್ಕೃತಿಗಳ ಅನನ್ಯತೆಗೆ ತೀವ್ರವಾದ ಧಕ್ಕೆಯಾಗಿತ್ತು.

ಈ ಮಧ್ಯೆ ಭಾರತದ ಆರ್ಥಿಕ ಸಂಪತ್ತನ್ನು ೩೫೦ ವರ್ಷಗಳ ಕಾಲ ಬರಿದು ಮಾಡಿದ ವಸಾಹತು ಆರ್ಥಿಕ ನೀತಿಗಳು, ವಿಪರೀತ ತೆರಿಗೆಯ ಪದ್ಧತಿಗಳು ಭಾರತದ ಆ ಮೂಲಕ ಕರ್ನಾಟಕದ ದುಡಿಯುವ ವರ್ಗಗಳ ಬವಣೆಗಳನ್ನು ದ್ವಿಗುಣಗೊಳಿಸಿದವು. ಈಸ್ಟ್ ಇಂಡಿಯಾ ಕಂಪನಿಯು ಕರ್ನಾಟಕ ಭಾಗದಿಂದ ಹತ್ತಿ ಮತ್ತು ಸಾಂಬಾರ ಪದಾರ್ಥಗಳನ್ನು ಇಂಗ್ಲೆಂಡಿಗೆ ರವಾನಿಸುವ ರೀತಿಯಲ್ಲಿಯೇ ಇಲ್ಲಿನ ಕಬ್ಬಿಣ, ಚಿನ್ನ ಮರದ ಸಂಪನ್ಮೂಲಗಳನ್ನು ರವಾನಿಸುತ್ತಿತ್ತು. ಅಂದರೆ ಕರ್ನಾಟಕದಿಂದ ಕಚ್ಚಾವಸ್ತುಗಳಾಗಿ ರಫ್ತಾಗುತ್ತಿದ್ದ ಪದಾರ್ಥಗಳು ಸಿದ್ಧವಸ್ತುಗಳಾಗಿ ಬಂದು ಇಂಡಿಯಾ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತಿದ್ದವು. ಹೀಗೆ ಮಾರಾಟವಾಗುವ ವಸ್ತುವಿನಿಂದ ಬರುವ ಲಾಭವೂ ಕೂಡ ಇಂಗ್ಲೆಂಡಿಗೆ ತಲುಪುತ್ತಿತ್ತು. ಇದರಿಂದ ಇಲ್ಲಿನ ಸಹಸ್ರಾರು

ಬೃಹತ್ ಮತ್ತು ಸಣ್ಣ ಕೈಗಾರಿಕೆಗಳು, ಗೃಹ ಕೈಗಾರಿಕೆಗಳು, ಕುಶಲಕರ್ಮಿಗಳು, ರೈತರು, ವ್ಯಾಪಾರಸ್ಥರು ಆರ್ಥಿಕವಾಗಿ ಬಸವಳಿದಿದ್ದರು. ಈ ಪ್ರಕ್ರಿಯೆಯಿಂದ ಬಹುದೊಡ್ಡ ಉತ್ಪಾದನಾ ಮಾರ್ಗವಾಗಿ ಬದುಕುತ್ತಿದ್ದ ಲಕ್ಷಾಂತರ ಜನರು ತಮ್ಮ ಉದ್ಯೋಗದಲ್ಲಿನ ಬೇಡಿಕೆ ಮತ್ತು ಹಿಡಿತವನ್ನು ಕಳೆದುಕೊಂಡರು. ಬ್ರಿಟಿಷ್ ಆರ್ಥಿಕ ಶೋಷಣೆಯ ಜೊತೆಗೆ ೧೮೨೪ರಿಂದ ೧೯೦೦ರ ವಿವಿಧ ವರ್ಷಗಳಲ್ಲಿ ಬಂದ ಕ್ಷಾಮಗಳು, ಅತೀವೃಷ್ಟಿ ಮತ್ತು ಅನಾವೃಷ್ಟಿಗಳು ಆಹಾರ ಪದಾರ್ಥಗಳ ತೀವ್ರ ಅಭಾವವನ್ನುಂಟು ಮಾಡಿದವು. ಕಬ್ಬಿಣ, ಚಿನ್ನ, ಬೆಳ್ಳಿಯಂಥ ಮೂಲಧಾತು ಮತ್ತು ಅವುಗಳ ಉತ್ಪಾದನೆಗಳ ಮೇಲಿನ ಕರ ಭಾರಗಳು, ನಿರ್ಬಂಧಗಳು, ನಿಷೇಧಗಳು ವಿಶ್ವಕರ್ಮರಂತಹ ಕೌಶಲ್ಯಶೀಲ ಸಮುದಾಯಗಳಲ್ಲಿ ತಟಸ್ಥತೆಯನ್ನು ಹುಟ್ಟುಹಾಕಿದವು.

ಮತ್ತೊಂದೆಡೆ ವಿವಿಧ ಮಿಶನರಿಗಳು ಕರ್ನಾಟಕದಾದ್ಯಂತ ಆಧುನಿಕ ಶಿಕ್ಷಣ ಮತ್ತು ಮುದ್ರಣ ಯಂತ್ರಗಳನ್ನು ತಮ್ಮ ತತ್ವ ಸಿದ್ಧಾಂತಗಳ ಪ್ರತಿಪಾದನೆಗೆ ಹಾಗೂ ಮತಪ್ರಚಾರಕ್ಕೆ ಬಳಸಿಕೊಳ್ಳುವ ಕ್ರಿಯೆಗಳು ಸಕ್ರಿಯವಾಗಿದ್ದವು. ಬೈಬಲ್ ಅನುವಾದ, ಸ್ಥಳೀಯ ಸಾಹಿತ್ಯ ಅಥವಾ ಪಠ್ಯಪುಸ್ತಕಗಳ ಪ್ರಕಟನೆ, ಶಬ್ದಕೋಶಗಳ ರಚನೆ, ಪತ್ರಿಕೆಗಳ ಪ್ರಕಟನೆಯೂ ಅವ್ಯಾಹತವಾಗಿ ಇದೇ ಕಾಲದಲ್ಲಿ ನಡೆಯುತ್ತಿತ್ತು. ಡಾ. ಶ್ರೀನಿವಾಸ ಹಾವನೂರ ಅವರು ಗುರುತಿಸುವಂತೆ ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಕಟವಾದ ಕೃತಿಗಳಿಗೆ ಮತೀಯ ದೃಷ್ಟಿಯೇ ಪ್ರಚೋದಕವಾಗಿತ್ತು ಮತ್ತು ತಮ್ಮ ತಮ್ಮ ವಿಶಿಷ್ಟ ಮತಗಳ ಹೆಚ್ಚುಗಾರಿಕೆ ತೋರಿಸುವ ಪರಿಪಾಠವು ಕಂಡುಬಂದು ಮುಂದಿನ ಶತಮಾನದಲ್ಲಿ ಇದು ಮತ್ತಷ್ಟು ಹೆಚ್ಚಾಯಿತು.

ವಿಚಿತ್ರವೆಂದರೆ ತಮ್ಮ ವಸಾಹತು ಸ್ಥಾಪನೆ ಹಾಗೂ ಮತಪ್ರಚಾರದ ಉದ್ದೇಶದಿಂದ ನಡೆದ ಈ ಎಲ್ಲಾ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಅಂದಿನ ಕನ್ನಡಿಗರ ಮನಸ್ಸಿನಲ್ಲಿ ವಿಚಾರ ಪ್ರಚೋದನೆಯನ್ನು ಉಂಟು ಮಾಡಿದವು. ಆಧುನಿಕ ಶಿಕ್ಷಣವು ಅದುವರೆಗೂ ಅಧೀನವಾಗಿದ್ದ ಹಾಗೂ ನಿರ್ದೇಶಿತ ಸಮುದಾಯಗಳಲ್ಲಿ ಹೊಸ ಸಂಚಲನೆಯನ್ನು ಸೃಷ್ಟಿಸಿದವು. ಕಲಿಯಬೇಕು, ಬರೆಯಬೇಕು ಎನ್ನುವ ಹಂಬಲಗಳನ್ನು ಹುಟ್ಟಿಸಿದವು. ಸ್ವಭಾಷೆ ಮತ್ತು ಸ್ವಧರ್ಮ ವಾಸ್ತವತೆ, ಸ್ವವಿಚಾರದ ಅಭಿವ್ಯಕ್ತಿ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಜ್ಞೆಯನ್ನು ಜಾಗೃತಿಗೊಳಿಸಿದ್ದು ಅಷ್ಟೇ ಸತ್ಯ. ಈ ಉತ್ಕಟತೆ ಆ ಕಾಲದ ಪ್ರಜ್ಞಾವಂತ ಸಮುದಾಯಗಳಲ್ಲಿ ಧರ್ಮ ಮತ್ತು ವಾಙ್ಮಯಕ್ಕೆ ಸಂಬಂಧಿಸಿದ ಅನೇಕ ಸಾಹಿತ್ಯ ಕೃತಿಗಳ ಅನುವಾದ, ಚರಿತ್ರೆಗಳ ರಚನೆ, ಪತ್ರಿಕೆಗಳ ಪ್ರಕಟನೆ, ಆ ಮೂಲಕ ಸಮುದಾಯ ಸಂಘಟನೆಗೆ ಪ್ರೇರಣೆಯನ್ನು ಒದಗಿಸಿತು.

ಆಧುನಿಕ ಶಿಕ್ಷಣ ತನ್ನೆಲ್ಲ ಸಮಸ್ಯೆಗಳಿಗೆ ವಿಮೋಚನೆಯ ಹಾದಿ ಎನ್ನುವುದನ್ನು ಆ ಕಾಲದ ಸಮುದಾಯಗಳು ಮನದಟ್ಟು ಮಾಡಿಕೊಂಡಿದ್ದವು. ಅದರಲ್ಲಿಯೂ ಕರ್ನಾಟಕ ಲಿಂಗಾಯತ ಸಮುದಾಯವು ಈ ಸತ್ಯವನ್ನು ಬಹುಬೇಗ ಅರ್ಥಮಾಡಿಕೊಂಡಿತು. ಫ.ಗು.ಹಳಕಟ್ಟಿಯಂತಹ

ವಿದ್ವಾಂಸರು ಈ ನಿಟ್ಟಿನಲ್ಲಿ ಮಹತ್ವದ ಹೆಜ್ಜೆ ಇಟ್ಟು ಶಿಕ್ಷಣ ಕೇಂದ್ರಗಳನ್ನು ಹಾಗೂ ಪೋಷಕ ಸಂಸ್ಥೆಗಳನ್ನು ಕಟ್ಟಿ ಬೆಳೆಸುವಲ್ಲಿ ಬದುಕನ್ನೇ ಸವೆಸಿಬಿಡುತ್ತಾರೆ. ಅಂಥವರ ಪರಿಶ್ರಮದಿಂದ ಉತ್ತರ ಕರ್ನಾಟಕದಲ್ಲಿ ಲಿಂಗಾಯತ ಶಿಕ್ಷಣ ಸಂಸ್ಥೆಗಳು, ಸಾಹಿತ್ಯಿಕ ಚಟುವಟಿಕೆಗಳು, ಪತ್ರಿಕಾ ವ್ಯವಸಾಯಗಳು ದ್ವಿಗುಣಗೊಳ್ಳುತ್ತವೆ. ಅಕ್ಷರ ಜಾಗೃತಿ ಕೇವಲ ಶಿಕ್ಷಣವಾಗದೆ, ಈ ನೆಲದ ಮಣ್ಣು, ನೀರು, ಗಾಳಿ ಮತ್ತು ಬೆಳಕಿಗೆ ಹೊಂದಬೇಕು. ಅದಾಗದಿದ್ದರೆ ಅಂತಹ ಶಿಕ್ಷಣ ನಿಸಾರ ಮತ್ತು ನಿರರ್ಥಕ ಎಂಬುದು ಡಾ. ಫ.ಗು.ಹಳಕಟ್ಟಿಯವರ ದೃಢನಂಬಿಕೆಯಾಗಿತ್ತು. ಹೀಗಾಗಿ ಆಧುನಿಕ ಶಿಕ್ಷಣದ ಜೊತೆಗೆ ವೃತ್ತಿ ನೈಪುಣ್ಯತೆಯು ಬೆಳೆಯಬೇಕೆನ್ನುವ ಸಿದ್ಧಾಂತಗಳನ್ನು ಜಾರಿಗೆ ತಂದರು. ಸ್ವತಃ ಹಳಕಟ್ಟಿಯವರು ತಮ್ಮ ಎರಡನೆಯ ಮಗ ಚಂದ್ರಶೇಖರನಿಗೆ ಎಫ್.ವಾಯ್ ಪರೀಕ್ಷೆಯಾದ ನಂತರ ನೇಯ್ಗೆಯ ಕುರಿತು ಜಾಗೃತಿ ಶಿಕ್ಷಣ ಕೊಡಿಸಿದ್ದರು.

ಆಧುನಿಕ ಶಿಕ್ಷಣ ಮತ್ತು ಮುದ್ರಣ ಪ್ರವೇಶವನ್ನು ಮತ ಪ್ರಚಾರದ ಮಿಶನರಿಗಳ ಉದ್ದೇಶಕ್ಕಿಂತ ಭಿನ್ನವಾಗಿ ತನ್ನ ಸಬಲೀಕರಣಕ್ಕಾಗಿ ಕರ್ನಾಟಕದ ಸಮುದಾಯಗಳು ಬಳಸಿಕೊಂಡದ್ದು ವಿಶೇಷ. ತನ್ನ ವಾಙ್ಮಯ ಸೃಷ್ಟಿ ಮತ್ತು ಪತ್ರಿಕಾ ಪ್ರಚಾರಕ್ಕೆ ಮುದ್ರಣವನ್ನು ಹಳಕಟ್ಟಿಯಂಥವರು ಆರ್ಥಿಕ ಮುಗ್ಗಟ್ಟಿನ ನಡುವೆಯೂ ಸಮರ್ಥವಾಗಿ ಬಳಸಿಕೊಂಡರು.

ಭಾರತದಲ್ಲಿ ೧೯೨೩-೨೪ರ ಹೊತ್ತಿಗೆ ಒಟ್ಟು ೧೩೬೩ ವಾರ್ತಾಪತ್ರಿಕೆಗಳು ೨೮೮೮ ಇತರ ಬಗೆಯ ಕ್ಲುಪ್ತಕಾಲದ ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಪಾಶ್ಚಾತ್ಯ ದೇಶಗಳಲ್ಲಿಯೂ ಈ ಕಾಲ ಘಟ್ಟದಲ್ಲಿ ಪತ್ರಿಕೆಗಳು ಮನುಷ್ಯನ ಭಾವನೆಗಳನ್ನು ರೂಪಿಸಿಕೊಳ್ಳುವಲ್ಲಿ ಪ್ರಮುಖ ಪಾತ್ರವಾಗಿದ್ದನ್ನು, ವೃತ್ತ ಪತ್ರಿಕೆಯ ಇತಿಹಾಸದಿಂದ ತಿಳಿಯಲಾಗಿದೆ.

ಲಿಂಗಾಯತ ಧರ್ಮತತ್ವಗಳನ್ನು ಪ್ರಸಾರ ಮಾಡಲು ೧೮೭೦ರಲ್ಲಿ ಚಂದ್ರೋದಯ ಎನ್ನುವ ವಾರಪತ್ರಿಕೆ ಧಾರವಾಡದ ವಿಭೂತಿ ಹುಚ್ಚಯ್ಯನವರಿಂದ ಪ್ರಾರಂಭವಾಗುತ್ತದೆ. ಅವು ೧೯೨೨ ಬೆಂಗಳೂರಿನ ಜೆ.ಎಂ.ಸಿದ್ಧಲಿಂಗಪ್ಪನವರ ವಿಶ್ವಭಾರತೀಯ ಪತ್ರಿಕೆಯವರೆಗೂ ಹಾಗೂ ನಂತರವೂ ೫೦ಕ್ಕೂ ಹೆಚ್ಚು ಪತ್ರಿಕೆಗಳು ಜನ್ಮ ಪಡೆಯುತ್ತವೆ. ದಕ್ಷಿಣ ಭಾರತ ಅಷ್ಟೇ ಅಲ್ಲದೆ ಉತ್ತರ ಭಾರತದಲ್ಲಿಯೂ ವಿವಿಧ ರೀತಿಯ ಪತ್ರಿಕೆಗಳು ಜನ್ಮ ತಾಳುತ್ತವೆ. ಧರ್ಮ, ತತ್ವ, ರಾಜಕೀಯ, ಸಮಾಜ, ಕಲೆ, ಸಾಹಿತ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಪ್ರಕಟಿಸುವುದರ ಜೊತಗೆ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಬ್ರಿಟನ್‌ನಂತಹ ದೇಶಗಳಲ್ಲಿ ಹಲವು ರೀತಿಯ ಪತ್ರಿಕೆಗಳು ಹುಟ್ಟಿಕೊಳ್ಳುತ್ತವೆ. ನಾನಾ ಪ್ರಾಂತ್ಯಗಳ ನಾನಾ ಜಿಲ್ಲೆಗಳ ಪ್ರಯೋಜನಕ್ಕಾಗಿ ದಿನ, ವಾರ ಪತ್ರಿಕೆಗಳ ಜೊತೆಗೆ ಬಗೆಬಗೆಯ ಶಾಸ್ತ್ರಗಳು, ಬಗೆ ಬಗೆಯ ಕಸುಬುಗಳು, ಬಗೆ ಬಗೆಯ ಕಲೆ ಕುಶಲ ವಿದ್ಯೆಗಳು, ಸಮುದಾಯಕೇಂದ್ರಿತ ಪ್ರತ್ಯೇಕ ಪತ್ರಿಕೆಗಳೇ ಹುಟ್ಟಿಕೊಳ್ಳುತ್ತವೆ.

ಗಂಡಸರ ಫ್ಯಾಷನ್‌ಗೇ ಒಂದು ಹೆಂಗಸರ ಫ್ಯಾಷನ್‌ಗೇ ಒಂದು, ಕೋಳಿ ಸಾಕುವವರಿಗೆ, ಪಾದರಕ್ಷೆ ಮಾಡುವಂತ ಸಮುದಾಯ, ವರ್ತಕ, ವ್ಯವಸಾಯ ಉದ್ಯೋಗಗಳಿಗೆ ಪ್ರತ್ಯೇಕ ಪತ್ರಿಕೆಗಳು ಹುಟಿಕೊಳ್ಳುತ್ತವೆ. (ಡಿ.ವಿ.ಜಿ. ವೃತ್ತ ಪತ್ರಿಕೆ ಪು. ೧೦: ೧೯೮೮)

ಕನ್ನಡ ನಾಡಿನ ಪ್ರಥಮ ಪತ್ರಿಕೆಯೆಂದು ನಮೂದಾಗಿರುವ 'ಕಂನಾಡ ಸಮಾಚಾರ' (೧೮೧೨) ಬಳ್ಳಾರಿಯ ಜರ್ಮನ್ ಪಾದ್ರಿಗಳಿಂದ ಧರ್ಮ ಪ್ರಸಾರಕ್ಕಾಗಿಯೇ ಪ್ರಕಟವಾದ ಪತ್ರಿಕೆಯಾಗಿದೆ. ಇದು ಮೂಲ "ಮಂಗಳೂರು ಸಮಾಚಾರ" ಪತ್ರಿಕೆಯಾಗಿದ್ದು ನಂತರ ೧೮೪೪ರಿಂದ "ಕಂನಾಡ ಸಮಾಚಾರ" ಹೆಸರಿನಿಂದ ಬಳ್ಳಾರಿಯಿಂದ ಪ್ರಕಟವಾಗುತ್ತಿತ್ತು ಎನ್ನುವ ವಾದವೂ ಇದೆ. (ನೋಡಿ : ಡಾ. ಪಂಡಿತ ರಾಠೋಡ : ಡಾ. ಫ.ಗು. ಹಳಕಟ್ಟಿಯವರ ಪತ್ರಿಕಾ ಸಾಹಿತ್ಯ ಪು. ೩೭: ೨೦೧೪) ವಾದ ಏನೇ ಇದ್ದರೂ ಆ ಕಾಲದ ಮೈಸೂರು ಮತ್ತು ಮುಂಬೈ ಕರ್ನಾಟಕದಲ್ಲಿ ಈ ಪತ್ರಿಕೆ ವ್ಯಾಪಕ ಪ್ರಸಾರದಲ್ಲಿತ್ತು. ಧರ್ಮದ ವಿಚಾರದೊಂದಿಗೆ ನಾಡು ನುಡಿಗೆ ಸಂಬಂಧಪಟ್ಟ ವಿಚಾರಗಳೂ ಇದರಲ್ಲಿ ಪ್ರಸ್ತಾಪಿಸಲ್ಪಟ್ಟಿವೆ.

ವಿದ್ವಾಂಸರು ಗುರುತಿಸುವಂತೆ ಸುಮಾರು ೧೮೫೩–೪೪ ಕಾಲಘಟ್ಟದಿಂದ ಆರಂಭವಾಗುವ ಕರ್ನಾಟಕ ಅಥವಾ ಕನ್ನಡ ಪತ್ರಿಕಾ ವ್ಯವಸಾಯವು ಪ್ರಮುಖವಾಗಿ ಮಂಗಳೂರು, ಬೆಂಗಳೂರು ಮತ್ತು ಧಾರವಾಡ ಕೇಂದ್ರವಾಗಿ ಬೆಳೆದು ಬಂದಿವೆ. ಮೈಸೂರಿನ ವೃತ್ತಾಂತ ಬೋಧಿನಿಯಿಂದ (ಕ್ರಿ.ಶ. ೧೮೫೯) ಹಿಡಿದು ವೆಂಕಟರಂಗೋ ಕಟ್ಟಿಯವರ ಸ್ವದೇಶಾಭಿಮಾನಿ ಪತ್ರಿಕೆ ವರೆಗೂ (೧೮೯೫) ಧರ್ಮ ಮತ, ನುಡಿ, ಭಾಷೆ ಸಾಹಿತ್ಯ, ಕಲೆ. ಸಂಗೀತ, ವಿಜ್ಞಾನ ವಿಷಯಗಳಲ್ಲಿ ಅಡಕಗೊಂಡು ಬೆಳೆದು ಬಂದಿವೆ. ಈ ಹಿನ್ನಲೆಯಲ್ಲಿ ವಿಶ್ವಕರ್ಮ ಪತ್ರಿಕಗಳನ್ನು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಿದ್ದೇನೆ.

**೧.೧ ಅಧ್ಯಯನದ ಉದ್ದೇಶ :**

ಸಾಮಾಜಿಕ ಸುಧಾರಣೆಗಳ ತುಡಿತ, ಅದರ ಮಂಡನೆಗೆ ಲೇಖನಿ ಅಗತ್ಯ ಎನ್ನುವುದನ್ನು ಈ ಕಾಲದ ಸುಧಾರಣಾವಾದಿಗಳು ನಂಬಿದ್ದರು. ಈ ಗುಣವನ್ನು ರಾಜಾರಾಮ ಮೋಹನರಾಯ ಅವರಲ್ಲಿ ಕಾಣುತ್ತೇವೆ. ಸತಿಪದ್ಧತಿಯಂತಹ ಸಾಮಾಜಿಕ ಅನಿಷ್ಟಗಳನ್ನು ತಮ್ಮ ಹರಿತವಾದ ವಿಚಾರಧಾರೆ ಮತ್ತು ಲೇಖನಿಯಿಂದಲೇ ಖಂಡಿಸಿ ಸುಧಾರಣೆಗೆ ಹಂಬಲಿಸಿದರು.

೧೮–೧೯ನೇ ಶತಮಾನದಲ್ಲಿ ಇಡೀ ಜಗತ್ತು ತನ್ನ ರಾಜಕೀಯ ಆರ್ಥಿಕ ಸಮಾಜಿಕ ಧಾರ್ಮಿಕ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವಲ್ಲಿ ಮತ್ತು ವಿಸ್ತರಿಸುವಲ್ಲಿ ಪತ್ರಿಕಾ ಸಾಹಿತ್ಯದ ಮೇಲೆ ಅವಲಂಬಿತವಾಗಿತ್ತು. ಅದಕ್ಕಾಗಿ ವಿವಿಧ ರೀತಿಯ ಪತ್ರಿಕೆಗಳನ್ನು ವಿವಿಧ ಭಾಷೆಯಲ್ಲಿ ವಿವಿಧ ಸಮುದಾಯಗಳು ಪ್ರಕಟಿಸುತ್ತ ತನ್ನ ಸಾಂಸ್ಕೃತಿಕ ಅನನ್ಯತೆಗಳನ್ನು ಕಂಡುಕೊಳ್ಳಲು ಹಂಬಲಿಸಿದ್ದು ಚಾರಿತ್ರಿಕ ಸತ್ಯವಾಗಿದೆ. ಇದಕ್ಕೆ ಕರ್ನಾಟಕದ ವಿಶ್ವಕರ್ಮ ಸಮುದಾಯವು ಹೊರತಲ್ಲ.

ವಿಶ್ವಕರ್ಮ ಸಮುದಾಯವು ತನ್ನ ಪಾರಂಪರಿಕ ವೃತ್ತಿಯೊಂದಿಗೆ ಆ ಸಮುದಾಯದ ವಿದ್ಯಾವಂತರು ತನ್ನ ಪುರಾತನ ಸಂಸ್ಕೃತಿಯ ಹೆಗ್ಗಳಿಕೆಯನ್ನು ಗೌರವಗಳನ್ನು ಪುನಃ ಕಟ್ಟಿಕೊಳ್ಳಲು ಹರಿದು ಹಂಚಿಹೋಗಿದ್ದ ತನ್ನ ಸಮುದಾಯವನ್ನು ಭಾವನಾತ್ಮಕವಾಗಿ ಹಾಗೂ ಸಾಮಾಜಿಕವಾಗಿ ಒಗ್ಗೂಡಿಸಿಕೊಳ್ಳಲು ಸಾಹಿತ್ಯ ಸೃಷ್ಟಿ ಮತ್ತು ಪತ್ರಿಕಾ ಮಾಧ್ಯಮವನ್ನು ಪ್ರಬಲ ವಾಹಕವಾಗಿ ಬಳಸಿಕೊಂಡ ಬಗೆಗಳನ್ನು ಗುರುತಿಸುವುದು ಈ ಅಧ್ಯಯನದ ಒಟ್ಟು ಉದ್ದೇಶವಾಗಿದೆ.

೧. ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ವಸ್ತುನಿಷ್ಠ ವೈಚಾರಿಕ ಪತ್ರಿಕೆಗಳಾಗಿವೆ. ಸಾಹಿತ್ಯಿಕ, ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಹಾಗೂ ಸಾಂಸ್ಕೃತಿಕವಾಗಿ, ಪ್ರಾದೇಶಿಕವಾಗಿ ಭಿನ್ನವಾಗಿವೆ. ಇಂದಿನ ಪತ್ರಿಕೋದ್ಯಮ ಬಂಡವಾಳ ಹಾಕಿ, ಲಾಭ ಪಡೆಯುವ ಉದ್ಯಮವಾಗಿ ಪರಿಣಮಿಸಿದೆ. ಆದರೆ ಇದಕ್ಕೆಲ್ಲ ಹೊರತಾಗಿ ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳು ಒಬ್ಬೊಬ್ಬ ವ್ಯಕ್ತಿಯ ಮತ್ತು ಸಮುದಾಯದ ಸಾಹಸ ಪ್ರತೀಕವಾಗಿವೆ. ಸಮಾಜದ ಸಮಗ್ರ ಒಗ್ಗಟ್ಟು, ಸಾಂಸ್ಕೃತಿಕ ಅನನ್ಯತೆಯನ್ನು ಸಾಹಿತ್ಯದ ಸೇವೆ ಧ್ಯೇವಾಗಿಸಿಕೊಂಡ ಸಾಹಿತಿಗಳು, ಸಮಾಜ ಸುಧಾರಕರು, ವಿದ್ಯಾವಂತರು, ಪತ್ರಿಕಾ ವಲಯದಲ್ಲಿ ಸಂಪಾದಕರಾಗಿ, ಪ್ರಕಾಶಕರಾಗಿ, ಮಾಲೀಕರಾಗಿ, ಪರಿಶ್ರಮ ವಹಿಸಿದ್ದಾರೆ. ಹೀಗೆ ಹಲವರ ಪರಿಶ್ರಮದಿಂದ ಪ್ರಸಾರವಾಗುವ ಪತ್ರಿಕೆಗಳು ಒಂದು ಸಮುದಾಯದ ಸಂಸ್ಕೃತಿಯನ್ನು ಪೀಳಿಗೆಯಿಂದ ಪೀಳಿಗೆಗೆ, ಕಾಲದಿಂದ ಕಾಲಕ್ಕೆ ಕೊಂಡೊಯ್ಯುವ ವಾಹಕವಾಗಿ ಕಾರ್ಯನಿರ್ವಹಿಸುತ್ತ ಬಂದಿವೆ.ಇಂತಹ ಚಾರಿತ್ರಿಕ ಮಹತ್ವವಿರುವ ವಿಶ್ವಕರ್ಮ ಪತ್ರಿಕೆಗಳ ಇತಿಹಾಸವನ್ನ ಮರು ರಚಿಸಿಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

೨. ವಿಶ್ವಕರ್ಮ ಸಮುದಾಯ ತನ್ನ ಪತ್ರಿಕೆಗಳ ಮೂಲಕ ಕಟ್ಟಿಕೊಂಡ ತನ್ನ ಐತಿಹಾಸಿಕ ಚಲನೆಗಳನ್ನು ಅದರ ಸ್ಥಗಿತತೆಯನ್ನು ಈ ಅಧ್ಯಯನದಲ್ಲಿ ನೋಡಲಾಗಿದೆ. ವಿಶ್ವಕರ್ಮ ಸಮಾಜವು ಚಿಕ್ಕ ಚಿಕ್ಕ ಹಳ್ಳಿಗಳಲ್ಲಿರುವ ಬಡಿಗ, ಕಮ್ಮಾರ, ಪತ್ತಾರ ಮತ್ತು ಶಿಲ್ಪಿಗಳು, ಜಾಗತೀಕರಣ ಸವಾಲುಗಳು ಸ್ವೀಕರಿಸಿ, ತನ್ನ ಸಮುದಾಯದ ಕಲೆಗಳನ್ನು, ಆಚರಣೆಗಳನ್ನು ಉಳಿಸಿ ಬೆಳೆಸಿಕೊಂಡಿರುವುದನ್ನು ಪತ್ರಿಕಾ ರಂಗದ ಮೂಲಕ ಗುರುತಿಸ ಬಯಸುತ್ತೇನೆ. ಅಂದರೆ ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಹಿತ್ಯಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಚಾರಿತ್ರಿಕವಾಗಿ, ಭಾಷಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಆ ಸಮುದಾಯದ ಧಾರಣ ಶಕ್ತಿಯನ್ನು ರೂಪಿಸಿದ ತಾತ್ವಿಕ ಸಂಗತಿಗಳ ಕುರಿತು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

೩. ವಿಶ್ವಕರ್ಮ ಪತ್ರಿಕೆಗಳು ಅಗ್ರಲೇಖನಗಳೊಂದಿಗೆ ಜಾಹಿರಾತುಗಳ ಮೂಲಕ ತನ್ನ ಪ್ರಗತಿಪರ ಚಿಂತನೆಗಳನ್ನು ಪ್ರಕಟಿಸುವದರ ಮೂಲಕ ವರ್ತಮಾನದ ಸಮಸ್ಯೆಗಳಿಗೆ ಮುಖಾಮುಖಿಯಾಗಿವೆ. ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ವಿವಿಧ ಬಗೆಯ ವಿಶ್ವಕರ್ಮ ಪತ್ರಿಕೆಗಳನ್ನು ನಿಯತಕಾಲಿಕೆಗಳನ್ನು ವರ್ಗೀಕರಣ ಮಾಡಿ, ಆ ಮೂಲಕ ಪತ್ರಿಕೆಯ ವಿವಿಧ ಉದ್ದೇಶಗಳನ್ನು ಗುರುತಿಸುವುದು ನನ್ನ ಉದ್ದೇಶವಾಗಿದೆ.

೪. ವಿಶ್ವಕರ್ಮ ಪತ್ರಿಕೆಗಳು ತನ್ನ ಸಾಂಸ್ಕೃತಿಕ ಅನನ್ಯತೆಯೊಂದಿಗೆ ಕನ್ನಡ ಗದ್ಯದ ಬೆಳವಣಿಗೆಯಲ್ಲಿ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದನ್ನು ಶೋಧಿಸುವುದು ಈ ಅಧ್ಯಯನದ ಮತ್ತೊಂದು ಪ್ರಮುಖ ಉದ್ದೇಶವಾಗಿದೆ.

ವಿಶ್ವಕರ್ಮ ಪತ್ರಿಕೆಗಳ ವೈಶಿಷ್ಟ್ಯಗಳು, ಇಂದಿನ ತಂತ್ರಜ್ಞಾನದ ಅವಶ್ಯಕತೆ ಹಾಗೂ ಅವುಗಳ ಎದುರಿಸಿರುವ ಸವಾಲುಗಳು, ಕನ್ನಡ ಪತ್ರಿಕೆಗಳ ಬೆಳವಣಿಗೆಗೆ ವಿಶ್ವಕರ್ಮ ಸಮುದಾಯದವರ ಕೊಡುಗೆ, ಸಾಧನೆ ಹಾಗೂ ಅವರ ಅನುಭವವನ್ನು ವಿಶ್ಲೇಷಣೆ ಮಾಡಿದ್ದೇನೆ. ವಿಶ್ವಕರ್ಮ ಪತ್ರಿಕೆಗಳ ಅನನ್ಯತೆಯೊಂದಿಗೆ ಪ್ರಾದೇಶಿಕ, ಭಾಷಿಕ, ಸಮುದಾಯ ಹಾಗೂ ಮಹಿಳಾ ಸಂವೇದನೆಯನ್ನು ವಿವಿಧ ಆಕರಗಳ ನೆಲೆಯಲ್ಲಿ ಅಧ್ಯಯನ ಮಾಡಿರುತ್ತೇನೆ. ಒಟ್ಟಿನಲ್ಲಿ ಬಹುಮುಖಿ ಉದ್ದೇಶಗಳ ಹಿನ್ನಲೆಯಲ್ಲಿ ವಿಶ್ವಕರ್ಮ ಪತ್ರಿಕೆಗಳ ಅಧ್ಯಯನ, ಅವುಗಳ ತಾತ್ವಿಕ ಸ್ವರೂಪವನ್ನು ಕುರಿತಾದ ಸಂಶೋಧನೆಗೆ ಈ ಅಧ್ಯಯನವನ್ನು ಮೀಸಲಿರಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ :**

'ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳು ಹಾಗೂ ಅವುಗಳ ತಾತ್ವಿಕ ಸ್ವರೂಪ' ಇದು ನನ್ನ ಅಧ್ಯಯನದ ವಸ್ತುವಾಗಿದೆ. ಅಂದರೆ ಕಳೆದ ಸುಮಾರು ಎಪ್ಪತ್ತು ವರುಷಗಳಿಂದ ವಿಶ್ವಕರ್ಮ ಸಮುದಾಯದವರಿಂದ ಕನ್ನಡ ಭಾಷೆಯಲ್ಲಿ ಪ್ರಕಟ ಮತ್ತು ಪ್ರಸಾರವಾಗುತ್ತಿರುವ ಇಪ್ಪತ್ತೆರಡು ಪತ್ರಿಕೆಗಳಿಗೆ ಸೀಮಿತವಾಗಿದೆ. ಇದರಲ್ಲಿ ದಿನ ಪತ್ರಿಕೆ, ವಾರ ಪತ್ರಿಕೆ, ಪಾಕ್ಷಿಕ ಪತ್ರಿಕೆ, ಮಾಸಿಕ ಪತ್ರಿಕೆ, ದ್ವೈಮಾಸಿಕ ಮತ್ತು ತ್ರೈಮಾಸಿಕ ಪತ್ರಿಕೆಗಳು ಸಂಲಗ್ನಗೊಳ್ಳುತ್ತವೆ. ಸ್ವಧರ್ಮ ಮತ್ತು ಸ್ವಭಾಷೆಗಳ ಮೇಲಿನ ಅಭಿಮಾನದ ಜೊತೆಗೆ ಕನ್ನಡ ಭಾಷೆಯ ಬೆಳವಣಿಗೆಗೆ ವಿಶ್ವಕರ್ಮ ಪತ್ರಿಕೆಗಳು ಸಲ್ಲಿಸಿದ ಕೊಡುಗೆಯನ್ನು ಕ್ರೋಢೀಕರಿಸಲು ನನ್ನ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಿದ್ದೇನೆ.

**೧.೨. ಅಧ್ಯಯನದ ವಿಧಾನ :**

ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳ ಕುರಿತಾದ ಮೊಟ್ಟಮೊದಲ ಸಮಗ್ರ ಶೈಕ್ಷಣಿಕ ಅಧ್ಯಯನ ಇದಾಗಿದೆ. ಪ್ರಸ್ತುತ ಈ ಅಧ್ಯಯನದಲ್ಲಿ ದಾಖಲಾತಿ ಹಾಗೂ ವಿಶ್ಲೇಷಣಾ ವಿಧಾನದ ಮಾದರಿಗಳನ್ನು ಅಳವಡಿಸಿಕೊಂಡಿದ್ದೇನೆ. ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳ ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಮತ್ತು ಅವುಗಳ ವರ್ತಮಾನದ ಸ್ಥಿತಿಗತಿಗಳ ಶೋಧ ಹಾಗೂ ಅರ್ಥೈಸುವ ವಿಧಾನಗಳನ್ನು ಮುಖ್ಯವಾಗಿ ಬಳಸಿದ್ದೇನೆ.

ನನ್ನ ಅಧ್ಯಯನವು ಕ್ಷೇತ್ರಕಾರ್ಯವನ್ನು ಅವಲಂಬಿಸಿದ್ದ ಕಾರಣ ಮಾಹಿತಿ ಸಂಗ್ರಹ ಅವಲೋಕನ ಹಾಗೂ ಸಂದರ್ಶನ ವಿಧಾನಗಳನ್ನು ಅಳವಡಿಸಿಕೊಂಡಿರುವೆ. ಸಂಪಾದಕರು, ಪ್ರಕಾಶಕರು, ಮಾಲೀಕರು, ವರದಿಗಾರರು, ಛಾಯಾಚಿತ್ರಗಾರರು, ಚಂದಾದಾರರು, ಹಾಗೂ

ಜಾಹೀರಾತುದಾರರನ್ನು ಸಂದರ್ಶನ ಮಾಡಿದ್ದೇನೆ. ನನ್ನ ಈ ಸಂಶೋಧನಾ ಅಧ್ಯಯನಕ್ಕೆ ವಿಶ್ವಕರ್ಮ ಪತ್ರಿಕೆಗಳ ಸಂಗ್ರಹದ ಜೊತೆಗೆ ವಿಶ್ವಕರ್ಮ ಸಮುದಾಯದ ಗ್ರಂಥ ಹಾಗೂ ಲೇಖನಗಳನ್ನು ಪೂರಕ ಆಕರಗಳನ್ನಾಗಿ ಬಳಕೆ ಮಾಡಿಕೊಂಡಿದ್ದೇನೆ.

**ಸ್ವರೂಪ :**

ಅಧ್ಯಯನದ ಅನುಕೂಲಕ್ಕಾಗಿ ಮಾಹಾಪ್ರಬಂಧವನ್ನು ಒಟ್ಟು ಒಂಬತ್ತು ಅಧ್ಯಾಯಗಳನ್ನಾಗಿ ವಿಭಾಗೀಕರಿಸಿಕೊಳ್ಳಲಾಗಿದೆ.

**ಅಧ್ಯಾಯ ಒಂದು:** ಮಹಾಪ್ರಬಂಧದ ತಾತ್ವಿಕ ನೆಲೆಯನ್ನು ಸ್ಥೂಲವಾಗಿ ಈ ಅಧ್ಯಾಯದಲ್ಲಿ ವಿವರಿಸಿದೆ. ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಇದು ವರೆಗಿನ ಒಟ್ಟು ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಆ ಮೂಲಕ ಸಂಶೋಧನೆಗೆ ಬೇಕಾದ ಒಂದು ಸ್ಪಷ್ಟ ದಾರಿಯನ್ನು ರೂಪಿಸಿಕೊಳ್ಳಲಾಗಿದೆ.

**ಅಧ್ಯಾಯ ಎರಡು:** ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳ ಹುಟ್ಟಿಗೆ ಕಾರಣವಾದ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಹಲವು ಪ್ರಭಾವ ಮತ್ತು ಪ್ರೇರಣೆಗಳ ಹಿನ್ನೆಲೆಯನ್ನು ಗುರ್ತಿಸಿಕೊಳ್ಳಲಾಗಿದೆ. ಇದರ ಕುರಿತು ಲಿಖಿತ ಆಕರಗಳು ಮತ್ತು ಪರಿಕರಗಳನ್ನು ಸಂಗ್ರಹಿಸಿ, ಸಂಯೋಜಿಸಿ ಮುಂದಿನ ವಿಶ್ಲೇಷಣೆಗೆ ಒಂದು ತಳಹದಿ ರೂಪಿಸಿಕೊಳ್ಳಲಾಗಿದೆ. ಇದರಲ್ಲಿ ಪ್ರಮುಖವಾಗಿ ಪತ್ರಿಕೆಗಳ ಹುಟ್ಟಿಗೆ ಒತ್ತಾಸೆಯಾಗಿ ನಿಂತ ಬಾಹ್ಯ ಮತ್ತು ಆಂತರಿಕ ಕಾರಣಗಳನ್ನು ಮತ್ತು ಅದರ ಒತ್ತಾಸೆಯಗಳನ್ನು ಗುರುತಿಸಲಾಗಿದೆ. ದೇಶ ಭಾಷೆಗಳ ಹಿನ್ನಲೆ, ಸಾಂಸ್ಕೃತಿಕ ಹಿನ್ನಲೆ, ರಾಜಕೀಯ ಹಿನ್ನಲೆ, ಧಾರ್ಮಿಕ ಸಮಾಜ ಸಂಘಟನೆ, ಪಂಚಕಲೆಗಳ ಪುನರುಜ್ಜೀವನ ಮತ್ತು ಹಿನ್ನೆಲೆಯಲ್ಲಿ ವಿಶ್ವಕರ್ಮ ಪತ್ರಿಕೆಗಳ ಒಟ್ಟು ಚಾರಿತ್ರಿಕ ಬೆಳವಣಿಗೆಯನ್ನು ನೋಡಲಾಗಿದೆ.

**ಅಧ್ಯಾಯ ಮೂರು:** 'ವಿಶ್ವಕರ್ಮ ಪತ್ರಿಕೆಗಳ ರಾಚನಿಕ ಸ್ವರೂಪ' ಈ ಅಧ್ಯಾಯದಲ್ಲಿ ಒಟ್ಟು ವಿಶ್ವಕರ್ಮ ಪತ್ರಿಕೆಗಳ ಚಾರಿತ್ರಿಕ ಬೆಳವಣಿಗೆಯನ್ನು ವಿವರಿಸಿದ್ದೇನೆ. ಅವುಗಳಲ್ಲಿರುವ ವಿಷಯಗಳಿಗನುಗುಣವಾಗಿ, ಆಯಾ ಕಾಲಘಟ್ಟಗಳಲ್ಲಿ ಪ್ರಾದೇಶಿಕವಾಗಿರುವ ವಿಶ್ವಕರ್ಮ ಪತ್ರಿಕೆಗಳ ಬೆಳವಣಿಗೆ ಮತ್ತು ವಿಕಾಸವನ್ನು ಮತ್ತು ಪತ್ರಿಕೆಗಳ ಸಂಪಾದಕರ ಕುರಿತು ವಿವರಿಸಲಾಗಿದೆ.

**ಅಧ್ಯಾಯ ನಾಲ್ಕು:** 'ವಿಶ್ವಕರ್ಮ ಪತ್ರಿಕೆಗಳ ವಿವಿಧ ಆಯಾಮಗಳು' ಈ ಅಧ್ಯಾಯದಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಆಯಾಮಗಳು ಮತ್ತು ವಿಶ್ವಕರ್ಮರ ಲಲಿತ ಕಲೆಗಳು ಹೀಗೆ ವಿವಿಧ ಆಯಾಮಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ಐದು:** 'ವಿಶ್ವಕರ್ಮ ಪತ್ರಿಕೆಗಳು : ಸಂಶೋಧನೆ ಮತ್ತು ಸೃಜನಶೀಲ ಅನುಸಂಧಾನ' ಎಂಬ ಈ ಅಧ್ಯಾಯದಲ್ಲಿ ವಿಶ್ವಕರ್ಮರು, ಪತ್ರಿಕೆಗಳಲ್ಲಿ ಪ್ರಕಟವಾಗಿರುವ ವಿವಿಧ ವಿದ್ವಾಂಸರ ಸಂಶೋಧನಾ ಲೇಖನಗಳನ್ನು ಕುರಿತ ವಿಚಾರಗಳನ್ನು ಈ ಅಧ್ಯಾಯದಲ್ಲಿ ಅಳವಡಿಸಲಾಗಿದೆ.

ಇದರೊಂದಿಗೆ, ವಿಶ್ವಕರ್ಮರ ಸೃಜನಶೀಲ ಸಾಹಿತ್ಯದ ಅನುಸಂಧಾನದಲ್ಲಿ ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಪುಸ್ತಕ ಪರಿಚಯ, ವ್ಯಕ್ತಿ ಪರಿಚಯ, ವಿಜ್ಞಾನ, ತಂತ್ರಜ್ಞಾನ ಮತ್ತು ಮಹಿಳಾ ಸಂವೇದನೆ ಇವುಗಳ ಕುರಿತಾದ ವಿಚಾರಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಧ್ಯಾಯ ಆರು:** 'ವಿಶ್ವಕರ್ಮರು ಮತ್ತು ಕನ್ನಡ ಪತ್ರಿಕಾ ಜಗತ್ತು' ಈ ಅಧ್ಯಾಯದಲ್ಲಿ ನಾಡಿನ ವಿವಿಧ ಪತ್ರಿಕೆಗಳಲ್ಲಿ ವಿಶ್ವಕರ್ಮ ಸಮುದಾಯದವರು ಮತ್ತು ವಿಶ್ವಕರ್ಮೇತರ ಸಮುದಾಯದವರು ಪತ್ರಿಕಾ ವರದಿಗಾರರಾಗಿ, ಅಂಕಣಕಾರರಾಗಿ, ಕಥೆಗಾರರಾಗಿ, ವ್ಯಂಗಚಿತ್ರಗಾರರಾಗಿ, ಛಾಯಾಚಿತ್ರಗಾರರಾಗಿ, ಮಾಲೀಕರಾಗಿ, ತಾಂತ್ರಿಕ ವಿಭಾಗದಲ್ಲಿ ತಮ್ಮದೆ ಸೇವೆ ಮಾಡಿರುವ ಹಾಗೂ ಅನೇಕ ಸಾಧಕರ ಸಾಧನೆಯ ಅನುಭವಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಅಧ್ಯಾಯ ಏಳು:** 'ವಿಶ್ವಕರ್ಮ ಪತ್ರಿಕೆಗಳಲ್ಲಿ ನಾಡು ನುಡಿಯ ಸಂಬಂಧಿತ ಚರ್ಚೆಗಳು' ಈ ಅಧ್ಯಾಯದಲ್ಲಿ ಕರ್ನಾಟಕ ಏಕೀಕರಣದ ವಿಚಾರಗಳು ಹಾಗೂ ಪ್ರಾಂತ್ಯಗಳ ಚರ್ಚೆಗಳು, ಸಮ್ಮೇಳನಗಳ ಕುರಿತ ವಿಚಾರಗಳು ಹಾಗೂ ನಾಡು ನುಡಿಯ ಬಗ್ಗೆ ಬಂದಿರುವ ಇತರೆ ಚರ್ಚೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಿದ್ದೇನೆ.

**ಅಧ್ಯಾಯ ಎಂಟು:** 'ವಿಶ್ವಕರ್ಮ ಪತ್ರಿಕೆಗಳ ಅನನ್ಯತೆ' ಈ ಅಧ್ಯಾಯದಲ್ಲಿ ವಿಶ್ವಕರ್ಮ ಸಮುದಾಯದಲ್ಲಿರುವ ಅನನ್ಯತೆಯನ್ನು ಕುರಿತು

**ಅಧ್ಯಾಯ ಒಂಭತ್ತು:** ಸಮಾರೋಪ, ಅಧ್ಯಯನದ ಫಲಿತಗಳು, ಇದರಲ್ಲಿ ಒಟ್ಟು ನನ್ನ ಸಂಶೋಧನೆಯಿಂದ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ. ಕೊನೆಯಲ್ಲಿ ಅನುಬಂಧಗಳನ್ನು ನೀಡಲಾಗಿದೆ.

ಒಟ್ಟು ಕನ್ನಡ ಪತ್ರಿಕಾ ರಂಗದಲ್ಲಿ ಮೂಡಿ ಬಂದಿರುವ ವಿಶ್ವಕರ್ಮ ಪತ್ರಿಕೆಗಳ ತಾತ್ವಿಕತೆಯ ನೆಲೆಗಟ್ಟುಗಳನ್ನು ಕಂಡುಕೊಳ್ಳುವ ಜೊತೆಗೆ ಅಂದಿನ ಪತ್ರಿಕಾ ಮಾಧ್ಯಮದ ವಿಷಯಗಳು ಮತ್ತು ಇಂದಿನ ಪತ್ರಿಕಾ ಮಾಧ್ಯಮದ ವಿಷಯಗಳಿಗಿರುವ ವಿಭಿನ್ನತೆಯನ್ನು ನನ್ನ ಮಹಾಪ್ರಬಂಧದಲ್ಲಿ ಕಟ್ಟಿಕೊಡಲಾಗಿದೆ.

**೧.೩. ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ :**

ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜವು ಒಂದು ಕ್ರಿಯಾಶೀಲ ಸಮುದಾಯವಾಗಿದೆ. ಇಂದು ಎಲ್ಲ ಕ್ಷೇತ್ರಗಳಲ್ಲಿಯೂ ಈ ಸಮುದಾಯದ ಜನ ತಮ್ಮ ಸೃಷ್ಟಿಶೀಲ ಸಿದ್ಧಿ ಸಾಧನೆಗಳಿಂದ ನಾಡವರ ಗಮನ ಸೆಳೆದಿದ್ದಾರೆ. ವಿಶ್ವಕರ್ಮ ಸಮಾಜದ ವ್ಯಕ್ತಿಗಳು ತಮ್ಮ ಅಪಾರ ಪರಿಶ್ರಮದಿಂದ ಎಲ್ಲ ಕ್ಷೇತ್ರಗಳಲ್ಲಿಯೂ ಸಾಧನೆ ಮಾಡುತ್ತಿದ್ದಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ೧೯೪೦ರ ದಶಕದಿಂದ ವಿಶ್ವಕರ್ಮ ಸಮಾಜದ ಹಿರಿಯರು ಪ್ರಕಟಿಸುತ್ತ ಬಂದ ಪತ್ರಿಕೆಗಳು ಎಂದರೆ

ಅತಿಶಯೋಕ್ತಿಯಾಗಲಾರದು. ಸಮಾಜ ಜಾಗೃತಿಗಾಗಿ ವಿಶ್ವಕರ್ಮ ಸಮಾಜದ ಹತ್ತಾರು ಪತ್ರಿಕೆಗಳು ಪ್ರಕಟಗೊಂಡು, ನಾಡಿನ ತುಂಬ ಹತ್ತಾರು ಸಾವಿರ ಜನರಿಗೆ ಸಂದೇಶಗಳನ್ನು ಮುಟ್ಟಿಸುವ ಪ್ರಾಮಾಣಿಕ ಪ್ರಯತ್ನ ಮಾಡುತ್ತಿವೆ. ಹೀಗಾಗಿ ವಿಶ್ವಕರ್ಮ ಸಮಾಜದ ಏಳ್ಗೆಯಲ್ಲಿ ಪತ್ರಿಕೆಗಳ ಪಾತ್ರ ಗಣನೀಯವಾಗಿದೆ ಎಂದು ಹೇಳಬಹುದು. ವಿಶ್ವಕರ್ಮ ಬ್ರಾಹ್ಮಣ ಧರ್ಮ ಇಂದು ತನ್ನ ಎಲ್ಲ ಎಲ್ಲೆಗಳನ್ನು ಮೀರಿ ಬೆಳೆದಿದೆ. ಧರ್ಮಗಳು ಜಾತಿಗಳಾಗಿ ಪರಿಣಮಿಸುತ್ತಿರುವ ಜಾಗತೀಕರಣದ ಸಂದರ್ಭದಲ್ಲಿ ಎಲ್ಲ ಧರ್ಮ-ಸಮಾಜಗಳು ಅವನತಿಹೊಂದುವ ಸಾಧ್ಯತೆ ಇರುವುದರಿಂದ ಪತ್ರಿಕೆಗಳಿಂದ ಮಾತ್ರ ಅದನ್ನು ಉಳಿಸಿ-ಬೆಳೆಸಲು ಸಾಧ್ಯವಿದೆ. ಈ ಸಂದರ್ಭದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಸಮುದಾಯಗಳು ಪತ್ರಿಕೆಗಳನ್ನು ಪ್ರಾರಂಭಿಸಲು ಮುಂದಾದವು.

**ಸಮುದಾಯದ ಪತ್ರಿಕೆಗಳು :**

ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜವನ್ನು ಹೊರತು ಪಡಿಸಿದರೆ, ಧಾರ್ಮಿಕವಾಗಿ, ಸಾಮಾಜಿಕವಾಗಿ ಹೆಚ್ಚು ಪತ್ರಿಕೆಗಳನ್ನು ಪ್ರಕಟಿಸಿದವರು ಲಿಂಗಾಯತರು. ಆರಂಭದ ಘಟ್ಟದಿಂದಲೂ ಲಿಂಗಾಯತರು ಪತ್ರಿಕಾ ಕ್ಷೇತ್ರದಲ್ಲಿ ಕಾರ್ಯ ಮಾಡುತ್ತ ಬಂದಿದ್ದಾರೆ.

ಲಿಂಗಾಯತ ಧರ್ಮ-ಸಾಹಿತ್ಯ-ಸಮಾಜ-ಸಂಸ್ಕೃತಿಗಳನ್ನು ಕುರಿತು ೧೯ನೆಯ ಶತಮಾನದಲ್ಲಿ ನಡೆದ ಪ್ರಯತ್ನಗಳು ಅತ್ಯಂತ ಶ್ಲಾಘನೀಯವಾಗಿವೆ. ಲಿಂಗಾಯತ ಸಂಸ್ಕೃತಿಯ ಅಸ್ತಿತ್ವವನ್ನು ಕಾಪಾಡುವಲ್ಲಿ ಮಾಡಿದ ಪ್ರಯೋಗಗಳು ಇಂದಿಗೂ ಮಾದರಿಯಾಗಿವೆ. ಸಾಹಿತ್ಯ ಮತ್ತು ಪತ್ರಿಕೆಗಳ ಮೂಲಕ ಆದ ಜಾಗೃತಿಯೂ ಅನನ್ಯವಾದುದು.

ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳನ್ನು ಮಾಸಪತ್ರಿಕೆಗಳಲ್ಲಿ ಭಾಗಭಾಗವಾಗಿ ಪ್ರಕಟಿಸುವ ಕಾರ್ಯ ೧೮೯೨ರಲ್ಲಿ ಎಂ.ಎ. ರಾಮಾನುಜೈಯಂಗಾರ್ ಮತ್ತು ಎಸ್.ಜಿ. ನರಸಿಂಹಾಚಾರ್ ಅವರಿಂದ ಪ್ರಾರಂಭವಾಯಿತು. 'ಕರ್ನಾಟಕ ಕಾವ್ಯ ಮಂಜರಿ' ಎಂಬ ಮಾಸಪತ್ರಿಕೆಯನ್ನು ಅವರು ಪ್ರಕಟಿಸುವ ಮೂಲಕ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಮೊದಲ ಬಾರಿಗೆ ಪ್ರಕಟಿಸಿದರು. ಈ ಮಾಸಿಕವೇ ಮುಂದೆ 'ಕರ್ನಾಟಕ ಕಾವ್ಯಕಲಾನಿಧಿ' ಎಂಬ ಹೆಸರಿನಲ್ಲಿ ಮತ್ತಷ್ಟು ಕ್ರಿಯಾಶೀಲವಾಗಿ ಕಾರ್ಯ ಮಾಡಿತು. ಈ ಪತ್ರಿಕೆಯಲ್ಲಿಯೇ ಹರಿಹರನ 'ಪಂಪಾ ಶತಕ', ಗುಬ್ಬಿಯ ಮಲ್ಲಣಾರ್ಯನ 'ಭಾವಚಿಂತಾರತ್ನ' ಮೊದಲಾದ ಕೃತಿಗಳು ಪ್ರಕಟಗೊಂಡವು.

ಪತ್ರಿಕೆಗಳು ವಿಶ್ವದ ವಿಶೇಷ ಸಂಗತಿಗಳನ್ನು ಮುಟ್ಟಿಸುವ ಪ್ರಮುಖ ವಾಹಕಗಳು. ಒಂದು ದೇಶದ ಚರಿತ್ರೆಯನ್ನು ಕಟ್ಟಬೇಕಾದ ಸಂದರ್ಭದಲ್ಲಿ ಪತ್ರಿಕೆಗಳು ನಿರ್ವಹಿಸುವ ಪಾತ್ರ ಅನನ್ಯ. ಉಳಿದ ಪ್ರಸಾರ ಮಾಧ್ಯಮಗಳಿಗಿಂತ ಅತ್ಯಂತ ಸುಲಭವಾಗಿ, ವ್ಯಾಪಕವಾಗಿ ಜನಸಮುದಾಯವನ್ನು ತಲುಪಬಲ್ಲ ಶಕ್ತಿ ಸಾಮರ್ಥ್ಯ ಪತ್ರಿಕೆಗಳಿಗಿದೆ. ಇಂದು ತಂತ್ರಜ್ಞಾನ ಕ್ಷೇತ್ರದಲ್ಲಾದ ಬದಲಾವಣೆಯಿಂದ ಏನೆಲ್ಲಾ ತೀವ್ರತರದ ಸಂದೇಶಗಳನ್ನು ರವಾನಿಸಬಹುದಾದರೂ ಪತ್ರಿಕೆಗಳಲ್ಲಿ ಬರುವ ವಿಷಯಗಳಿಗೆ ಒಂದು ಅಧಿಕೃತ ವಿಶ್ವಾಸವಿರುತ್ತದೆ ಎಂಬ ಮಾತನ್ನು ಯಾರೂ ಅಲ್ಲಗಳೆಯಲಾರರು.

ಪತ್ರಿಕೆಗಳು ನಮ್ಮ ದಿನಮಾನದ ಒಟ್ಟು ಚಿತ್ರಣವನ್ನು ಅತ್ಯಂತ ವಾಸ್ತವ ನೆಲೆಯಲ್ಲಿ ಕಟ್ಟಿಕೊಡುತ್ತವೆ. ಸಮಕಾಲೀನ ಜನಾಂಗದ ವಿದ್ಯಮಾನಗಳನ್ನು, ಸಮಾಜದ ಸ್ಥಿತಿ-ಗತಿಗಳನ್ನು, ಅದರ ದೋಷ ದೌರ್ಬಲ್ಯಗಳನ್ನು, ಶಕ್ತಿ-ಮಿತಿಗಳನ್ನು ಕರಾರುವಕ್ಕಾಗಿ ಹೇಳುವ ತಾಕ್ಕತ್ತು ಪತ್ರಿಕೆಗಳಿಗೆ ಮಾತ್ರ ಇದೆ. ಪತ್ರಿಕೆಯಲ್ಲಿ ಬಂದ ಒಂದು ಸಣ್ಣ ಸುದ್ದಿ ಹೊಸ ಇತಿಹಾಸಕ್ಕೆ ನಾಂದಿ ಹಾಡಬಹುದು. ಒಂದು ಪತ್ರಿಕೆ ಮನಸ್ಸು ಮಾಡಿದರೆ ಸರ್ಕಾರವನ್ನೇ ಉರುಳಿಸಬಹುದು; ಮಂತ್ರಿಗಳನ್ನು ಮನೆಗೆ ಕಳಿಸಬಹುದು; ಒಂದು ದೊಡ್ಡ ಚಳವಳಿಗೆ ಬುನಾದಿ ಹಾಕಬಹುದು. ಹೀಗಾಗಿ ಪತ್ರಿಕೆಗಳನ್ನು ಭಾರತದ ಸಂವಿಧಾನ ತಳಪಾಯದ ನಾಲ್ಕನೆಯ ಪ್ರಮುಖ ಅಂಗವೆಂದು ಪರಿಗಣಿಸಲಾಗಿದೆ. ಕಾರ್ಯಾಂಗ, ನ್ಯಾಯಾಂಗ, ಶಾಸಕಾಂಗಗಳಂತೆ ಪತ್ರಿಕಾಂಗವೂ ಒಂದಾಗಿ ಪರಿಗಣಿಸಲ್ಪಟ್ಟಿದೆ. ಹೀಗಾಗಿ ಸಮಾಜದ ಶ್ರೇಯೋಭಿವೃದ್ಧಿಯಲ್ಲಿ, ನಾಡಿನ ಪ್ರಗತಿಯಲ್ಲಿ ಪತ್ರಿಕೆಗಳ ಪಾತ್ರ ಅತ್ಯಂತ ಪ್ರಮುಖವಾದುದು.

ಕನ್ನಡ ಪತ್ರಿಕೆಗಳ ಪ್ರಕಟಣೆಯ ಇತಿಹಾಸವನ್ನು ಗಮನಿಸಿದರೆ ಡಾ. ಶ್ರೀನಿವಾಸ ಹಾವನೂರ ಅವರು ತಮ್ಮ ಹೊಸಗನ್ನಡ ಅರುಣೋದಯ ಎಂಬ ಸಂಶೋಧನಾ ಪ್ರಬಂಧದಲ್ಲಿ ಕ್ರಿ.ಶ. ೧೮೫೯ರಲ್ಲಿ ಮೈಸೂರಿನಿಂದ ಪ್ರಕಟವಾದ 'ವೃತ್ತಾಂತ ಬೋಧಿನಿ' ಕರ್ನಾಟಕದ ಮೊಟ್ಟಮೊದಲ ಪತ್ರಿಕೆ ಎಂದು ಹೇಳಿದ್ದಾರೆ. ಆದರೆ ಅವರ ನಿರ್ಣಯ ತಪ್ಪಾದುದು. ಅದಕ್ಕೂ ಒಂಬತ್ತು ವರುಷಗಳ ಮೊದಲೆ ಅಂದರೆ ೧೮೫೦ರಲ್ಲಿ 'ಸುಬುದ್ಧಿ ಪ್ರಕಾಶ' ಎಂಬ ಪತ್ರಿಕೆ ಬೆಳಗಾವಿಯಿಂದ ಪ್ರಕಟವಾಗುತ್ತಿತ್ತು. ಇದು ಬೆಳಗಾವಿಗೆ ಒಂದು ಹೆಮ್ಮೆ. ಕರ್ನಾಟಕದ ಮೊಟ್ಟಮೊದಲ ಕನ್ನಡ ಭಾಷಾ ಪತ್ರಿಕೆಯೊಂದನ್ನು ಬೆಳಗಾವಿಯಲ್ಲಿ ಪ್ರಕಟವಾಗುತ್ತಿತ್ತು ಎಂದರೆ ಅದು ಅಚ್ಚಗನ್ನಡ ಪ್ರದೇಶವಾಗಿತ್ತೆಂಬುದಕ್ಕೆ ನಿಚ್ಚಳ ನಿದರ್ಶನವೆನಿಸಿದೆ.

'ವೃತ್ತಾಂತ ಬೋಧನಿ' 'ಸುಬುದ್ಧಿ ಪ್ರಕಾಶ' ಪತ್ರಿಕೆಗಳ ಸಾಧನೆ ಅಷ್ಟೇನೂ ಪರಿಣಾಮಕಾರಿಯಾಗಿರಲಿಲ್ಲ. ಆದರೆ ೧೮೭೫ರಲ್ಲಿ ಮೊಟ್ಟಮೊದಲು ಲಿಂಗಾಯತ ಸಮುದಾಯದ ಹಿರಿಯ ಮುಖಂಡರಾದ ಡೆಪ್ಯೂಟಿ ಚೆನ್ನಬಸಪ್ಪನವರು ಪ್ರಕಟಿಸಿದ 'ಮಠ' ಪತ್ರಿಕೆ ಇಂದಿಗೂ ಜೀವಂತವಾಗಿರುವುದು ಒಂದು ದೊಡ್ಡ ಇತಿಹಾಸವಾಗಿದೆ. (ಮಠ ಪತ್ರಿಕೆ ಕಾಲಕಾಲಕ್ಕೆ ತನ್ನ ಸ್ವರೂಪ ವಿನ್ಯಾಸ ಹೆಸರಿನೊಂದಿಗೆ ಬದಲಾವಣೆ ಹೊಂದುತ್ತ ಇಂದು ಜೀವನ ಶಿಕ್ಷಣ ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿದೆ)

ಕನ್ನಡ ಕುಲದೀಪಕರಾದ ಡೆಪ್ಯೂಟಿ ಚೆನ್ನಬಸಪ್ಪನವರ ಪೂರ್ವಜರು ಬೆಳಗಾವಿ ಜಿಲ್ಲೆಯ ಗೋಕಾಕದವರು. ಚೆನ್ನಬಸಪ್ಪನವರು ಬೆಳಗಾವಿಗೆ ಎಜ್ಯುಕೇಶನಲ್ ಇನ್ಸಪೆಕ್ಟರ್ ಆಗಿ ಬಂದ ನಂತರ ಮಾಡಿದ ಮೊಟ್ಟ ಮೊದಲ ಕೆಲಸ ಲಿಂಗಾಯತ ಬಡವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದು ಮತ್ತು ಕನ್ನಡ ಭಾಷಾ ಅಭಿವೃದ್ಧಿಯನ್ನು ಮಾಡುವುದು. ಇವುಗಳಿಗೆ ಪೂರಕವಾಗಿ 'ಮಠ' ಪತ್ರಿಕೆಯನ್ನು ಪ್ರಾರಂಭಿಸಿದರು. ಮಠ ಪತ್ರಿಕೆಯ ಮೊಟ್ಟಮೊದಲ ಸಂಚಿಕೆ ೧೮೭೫

ಜೂನ ತಿಂಗಳಲ್ಲಿ ಪ್ರಾರಂಭವಾಯಿತು. ಮೊದಲ ಸಂಚಿಕೆಯಲ್ಲಿ ಅವರು ಹೇಳಿದ ಮಾತುಗಳನ್ನು ಕೇಳಿದರೆ ಮಠ ಪತ್ರಿಕೆಯ ಉದ್ದೇಶದ ವಿವರಗಳು ಸ್ಪಷ್ಟವಾಗಿ ಗೋಚರಿಸುತ್ತವೆ:

'ಈ ಕರ್ನಾಟಕ ಸೀಮೆಯಲ್ಲಿ ಶುದ್ಧವಾದ ಕನ್ನಡ ಭಾಷೆಯ ವಿಸ್ತಾರವು ಆಗತಕ್ಕದೆಂಬುದಾಗಿ ಸಾರಾಸಾರ ವಿಚಾರವುಳ್ಳ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ದೊರೆಗಳು ಆಲೋಚನೆ ಮಾಡುವವರಾಗಿ ಕೆಲವು ಸಂವತ್ಸರಗಳ ಕೆಳಗೆ ಈ ಸೀಮೆಯ ಜನರಿಗಾಗಿ ಕನ್ನಡ ಭಾಷೆಯಲ್ಲಿ 'ಕನ್ನಡ ಜ್ಞಾನಬೋಧಕ'ವೆಂದು ಒಂದು ಮಾಸಿಕ ಪತ್ರಿಕೆಯನ್ನು ಪ್ರಸಿದ್ಧಮಾಡಲು ಅಪ್ಪಣೆಸಿದ್ದ ಪ್ರಕಾರ, ಸನ್ ೧೮೬೭ನೇ ಇಸ್ವಿ ಮೇ ತಿಂಗಳ ವರೆಗೂ ಧಾರವಾಡ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟು ಚಂನಾಗಿ ಸಾಗುವಂಥದ್ದಾಯಿತು. ಆ ಕ್ರಮವು ಕೆಲವು ಅಡ್ಡಿಗಳುಂಟಾಗಿ ನಷ್ಟವಾದದ್ದರಿಂದ ದೊರೆಗಳು 'ವಿಚಿತ್ರ ವರ್ತಮಾನ ಸಂಗ್ರಹ'ವೆಂಧು ಒಂದು ಸಮಾಚಾರ ಪತ್ರಿಕೆಯನ್ನು ತಿಂಗಳಿಗೆರಡಾವರ್ತಿ ಛಾಪಿಸಿ ತರಿಸುವ ಬಗ್ಗೆ ಬೆಂಗಳೂರಿನಲ್ಲಿ ಇರುವ ಅಚ್ಚು ಹಾಕುವವರಿಗೆ ಬರೆದು ಕಳಿಹಿಸಲಾಗಿ ಅವರದಕ್ಕೆ ಒಡಂಬಟ್ಟದ್ದರಿಂದ ಒಂದೆರಡು ವರ್ಷಗಳ ಮಟ್ಟಿಗೂ ಅಂದರೆ ಅಂದಿನಿಂದ ಸನ್ ೧೮೬೩ನೇ ಇಸವಿ ಡಿಸೆಂಬರ ತಿಂಗಳವರೆಗೂ ಚಂನಾಗಿ ಸಾಗುವಂಥದ್ದಾಯಿತು. ಅನಂತರದಲ್ಲಿ ಆ ಅಚ್ಚಿನವರು ತಮ್ಮ ಆದಾಯಕ್ಕೂ ವೆಚ್ಚಕ್ಕೂ ಸರಿ ಬೀಳುವುದಿಲ್ಲ ತಂಮಿಂದಾ ಕ್ರಮವು ನಡಿಸಲಾಗದು ಎಂದು ಹೇಳುವಂಥವರಾಗಿ ಬಿಟ್ಟು ಬಿಟ್ಟರು. ಆದ್ದರಿಂದ ಬೆಳಗಾವಿಯಲ್ಲಿ ಇತ್ತಲಾಗಿ ನಿರ್ಮಾಣವಾದ 'ಸಮಾಚಾರ' ಅಚ್ಚಿನಲ್ಲಿ ಕೇವಲ ಪೂರ್ವದಲ್ಲಿ ಪ್ರಕಟಿಸುತ್ತಿರುವ 'ಕನ್ನಡ ಜ್ಞಾನಬೋಧಕ'ವು ಮರಳಿ ಪ್ರಕಟಿಸಬೇಕೆಂದು ದೊರೆಗಳು ಅಪ್ಪಣೆ ಮಾಡಿದರು. ಆ ಪ್ರಕಾರ ಇಂದಿನ ಪರಿಯಂತರಕ್ಕೂ ಅನುಕ್ರಮವು ನಡೆಯಿತು. ವರ್ತಮಾನ ಕಾಲದಲ್ಲಿ ಅಚ್ಚಿನ ವೆಚ್ಚಕ್ಕೂ ಆದಾಯಕ್ಕೂ ಬಹಳ ಹೆಚ್ಚು ಕಡಿಮೆಯಾಗಿರುವುದನ್ನು ಕಂಡು ಈ 'ಜ್ಞಾನಬೋಧಕ'ವೆಂಬ ಪತ್ರಿಕೆ ಮುಂದಕ್ಕೆ ಸಾಗಿಸುವುದಕ್ಕೆ ಮಾರ್ಗವಿಲ್ಲ. ಅದಕ್ಕಾಗಿ ಈ ಕ್ರಮವನ್ನು ಬಿಟ್ಟುಕೊಟ್ಟು ಇದಕ್ಕೆ ಬದಲಾಗಿ ಮಠಗಳಿಗೋಸ್ಕರ (ಅಂದರೆ ಶಾಲೆಗಳಿಗೆ) ಒಂದು 'ಮಠ' ಪತ್ರಿಕೆಯನ್ನು ತಿಂಗಳಿಗೊಂದಾವರ್ತಿ ಛಾಪಿಸುವುದು ಲೇಸಾಗಿ ಕಾಣಿಸುತ್ತದೆಂದು, ಮೇ. ಲಿಟಲ್ ಸಾಹೇಬ ಬಹದ್ದೂರ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್‌ರು ಮೇ. ಹರ್ವರ್ಡ ಸಾಹೇಬ ಬಹದ್ದೂರ ಡೈರೆಕ್ಟರ್ ಆಫ್ ಪಬ್ಲಿಕ ಇನ್ಸ್‌ಟ್ರಕ್ಶನ್ ಇವರಿಗೆ ಬರೆದು ಕಳುಹಿಸಿದ್ದರಿಂದ, ಈ ಸಲೆ ಸೊಗಸಾಲೋಚನೆಗೆ ಮೆಚ್ಚಿ, ಅದರಂತೆ ಮಾಡಿ ಎಂದು ಅಪ್ಪಣೆ ಕೊಡುವಂಥವರಾದರು. ಅದಕ್ಕಾಗಿ ಅವರ ಅಪ್ಪಣೆಯ ಪ್ರಕಾರ ಇಗ್ಯೆ ನೂತನವಾಗಿ ಈ ಮಾಸಿಕ 'ಮಠಪತ್ರಿಕೆ'ಯನ್ನು ಪ್ರಸಿದ್ಧಿಯಾಗಿ ಮಾಡಿರುತ್ತದೆ'.

ಚೆನ್ನಬಸಪ್ಪನವರು ಮಠ ಪತ್ರಿಕೆಯ ಮೊಟ್ಟ ಮೊದಲ ಸಂಪಾದಕರು. ಅವರು ಹಾಕಿಕೊಟ್ಟ ಪತ್ರಿಕಾ ಬೀಜಗಳು ವಿಸ್ತಾರ ವಿಸ್ತಾರೋನ್ನತವಾಗಿ ಬೆಳೆಯಿತು ಎಂಬುದು ಇಂದು ಇತಿಹಾಸ. ಈ ಹಿನ್ನೆಲೆಯಲ್ಲಿ ಲಿಂಗಾಯತರೇ ಕನ್ನಡ ಪತ್ರಿಕೋದ್ಯಮಕ್ಕೆ ಒಂದು ಮೂರ್ತ ಸ್ವರೂಪ ಕೊಟ್ಟರು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಪಾಟೀಲ ಪುಟ್ಟಪ್ಪನವರ 'ಪ್ರಪಂಚ', ಲಂಕೇಶರ 'ಲಂಕೇಶ ಪತ್ರಿಕೆ'ಗಳು ಕನ್ನಡ ನಾಡಿನಲ್ಲಿ ಮಾಡಿದ ಸಂಚಲನ ಅಪಾರವಾದುದು.

**ಮೈಸೂರ ಸ್ಟಾರ್ :**

ಮೈಸೂರಿನಲ್ಲಿ ದಿವಾನ್ ಬಹದ್ದೂರ ಯಜಮಾನ ವೀರಸಂಗಪ್ಪನವರು 'ಮೈಸೂರ ಸ್ಟಾರ್' ಪತ್ರಿಕೆಯನ್ನು ೧೮೯೦ರಲ್ಲಿ ಪ್ರಾರಂಭಿಸಿದರು. ಮೈಸೂರು ಭಾಗದ ಲಿಂಗಾಯತರ ಅಸ್ತಿತ್ವಕ್ಕಾಗಿ ಶ್ರಮಿಸಿದ ಶ್ರೇಯಸ್ಸು ಈ ಪತ್ರಿಕೆಗೆ ಸಲ್ಲಬೇಕು. ಧಾರ್ಮಿಕವಾಗಿ ಲಿಂಗಾಯತರನ್ನು ಶೂದ್ರರು ಎಂದು ಉಚ್ಚವರ್ಗದ ಸಮಾಜದ ಜನರು ಕರೆಯತೊಡಗಿದ ಸಂದರ್ಭದಲ್ಲಿ ಲಿಂಗಾಯತರೂ ಬ್ರಾಹ್ಮಣರಷ್ಟೇ ಶ್ರೇಷ್ಠರು. ಅವರು ಕೂಡ ಸಂಸ್ಕೃತವನ್ನು ಕಲಿಯಬಲ್ಲರು ಎಂಬುದನ್ನು ಸಾಬೀತು ಪಡಿಸಿದ ಶ್ರೇಯಸ್ಸು ಮೈಸೂರು ಸ್ಟಾರ್ ಪತ್ರಿಕೆಗೆ ಸಲ್ಲಬೇಕು. ಈ ಪತ್ರಿಕೆಯನ್ನು ಮುಂದಿಟ್ಟುಕೊಂಡು ಯಜಮಾನ ವೀರಸಂಗಪ್ಪನವರು ಹೋರಾಡಿ, ಲಿಂಗಾಯತರು 'ಲಿಂಗೀಬ್ರಾಹ್ಮಣರು' ಎಂದು ಮದ್ರಾಸ್ ಕೋರ್ಟಿನಿಂದ ನಿರ್ಣಯ ಹೊರಡಿಸುವಲ್ಲಿ ಯಶಸ್ವಿಯಾದರು. ಇದರಿಂದ ಎಲ್ಲರಿಗೂ ಬ್ರಾಹ್ಮಣರೆನಿಸಿಕೊಳ್ಳಬೇಕೆಂಬ ಚಪಲ ಹೆಚ್ಚಾಯಿತು. ದಲಿತರು ಕೋರ್ಟಿಗೆ ಹೋಗಿ 'ಮಾತಂಗ ಬ್ರಾಹ್ಮಣರು' ಎಂಬ ಸರ್ಟಿಫಿಕೇಟ್‌ನ್ನು ತಂದರೆಂಬುದು ಇಂದು ಇತಿಹಾಸ. ಹೀಗೆ ಮೈಸೂರು ಸ್ಟಾರ್ ಪತ್ರಿಕೆ ಪ್ರಕಟವಾದ ಕಾಲಾವಧಿ ಕಡಿಮೆಯಾದರು, ಮಾಡಿದ ಪರಿಣಾಮ ಮಾತ್ರ ದೀರ್ಘಾವಧಿಯಾಗಿರುವುದನ್ನು ಕಾಣಬಹುದು.

**ಶಿವಾನುಭವ :**

ಡಾ. ಫ.ಗು.ಹಳಕಟ್ಟಿಯವರು ೧೯೨೬ ಫೆಬ್ರುವರಿ ತಿಂಗಳಲ್ಲಿ 'ಶಿವಾನುಭವ' ಪತ್ರಿಕೆಯನ್ನು ಪ್ರಾರಂಭ ಮಾಡಿದರು. ಸತತ ೩೫ ವರುಷಗಳ ಕಾಲ ಈ ಪತ್ರಿಕೆಯನ್ನು ಪ್ರಕಟಿಸಿದರು. ಲಿಂಗಾಯತರು ತಮ್ಮ ಅಸ್ತಿತ್ವ ಮತ್ತು ಅಸ್ಮಿತೆಯನ್ನು ಕಳೆದುಕೊಂಡು ಅಯೋಮಯ ಸ್ಥಿತಿಯಲ್ಲಿದ್ದಾಗ ನಿಜವಾದ ಬಸವಾದಿ ಪ್ರಮಥರ ತತ್ವಗಳನ್ನು ಪ್ರಸಾರ ಮಾಡುವ ಉದ್ದೇಶದಿಂದ ಹುಟ್ಟಿಕೊಂಡ ಈ ಪತ್ರಿಕೆ ಒಂದು ಜನಾಂಗದ ಇತಿಹಾಸವನ್ನೇ ಬದಲು ಮಾಡಿತು ಎಂದು ಹೇಳಿದರೆ ಅತಿಶಯೋಕ್ತಿಯಲ್ಲ. ಬಸವಾದಿ ಶರಣರ ವಚನಗಳು, ಹರಿಹರನ ರಗಳೆಗಳು, ಲಿಂಗಾಯತ ಅರಸುಮನೆತನಗಳ ಇತಿಹಾಸ, ವಚನಗಳ ಸಂಕಲನ–ಸಂಪಾದನ–ಸಂಗ್ರಹ, ವಿಶ್ಲೇಷಣೆಗೆ ಮೀಸಲಾಗಿದ್ದ ಪತ್ರಿಕೆ 'ಶಿವಾನುಭವ'. ಡಾ.ಫ.ಗು. ಹಳಕಟ್ಟಿಯವರು ಈ ಪತ್ರಿಕೆಯ ಮೂಲಕ ಲಿಂಗಾಯತರನ್ನು ಬಹುದೊಡ್ಡ ಗಂಡಾಂತರದಿಂದ ಪಾರು ಮಾಡಿದರು. ಶಿವಾನುಭವ ಪತ್ರಿಕೆ ಇಲ್ಲದಿದ್ದರೆ ಲಿಂಗಾಯತರೆಲ್ಲ ತಮ್ಮ ಮೂಲಧರ್ಮವನ್ನು ಬಿಟ್ಟು ವೈದಿಕ ಸಂಸ್ಕೃತಿಯ ಬೆನ್ನು ಹತ್ತುತ್ತಿದ್ದರು. ಅದಕ್ಕಾಗಿ ನಾವು ಡಾ. ಹಳಕಟ್ಟಿಯವರಿಗೆ ಚಿರಕಾಲ ಋಣಿಗಳಾಗಿರಬೇಕು. ಇವರ ಪತ್ರಿಕಾ ಸಾಹಿತ್ಯವನ್ನು ಕುರಿತು ಕರ್ನಾಟಕ ವಿಶ್ವವಿದ್ಯಾಲಯದ ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ ಡಾ. ಪಂಡಿತ್ ರಾಠೋಡ್ ಅವರು ಸಂಶೋಧನೆಯನ್ನು ಮಾಡಿದ್ದಾರೆ.

**ಶರಣ ಸಂದೇಶ :**

ರಾಷ್ಟ್ರಧರ್ಮದ್ರಷ್ಟಾರ ಹರ್ಡೇಕರ ಮಂಜಪ್ಪನವರು ಲಿಂಗಾಯತ ಸಮಾಜದ ಚೈತನ್ಯಶಕ್ತಿಯಾಗಿ ಬಂದವರು. ಸ್ವಾತಂತ್ರ್ಯ ಚಳುವಳಿ, ರಾಷ್ಟ್ರೀಯ ಪ್ರಜ್ಞೆ ಜಾಗೃತಗೊಳಿಸುವುದರೊಂದಿಗೆ ಹಳ್ಳಿಯ ಯುವಕರ ದುಶ್ಚಟಗಳ ನಿವಾರಣೆಗಾಗಿ ಅವಿರತ ಚರಜಂಗಮರಾಗಿ ಅಡ್ಡಾಡಿ ಕರ್ನಾಟಕ ಗಾಂಧಿ ಎಂದೇ ಖ್ಯಾತರಾದ ಹರ್ಡೇಕರ ಮಂಜಪ್ಪನವರು ಆಯಾ ವಿಷಯಕ್ಕೆ ಸಂಬಂಧಿಸಿದ ಮೂರ್ನಾಲ್ಕು ಪತ್ರಿಕೆಗಳನ್ನು ಏಕಕಾಲಕ್ಕೆ ನಡೆಸಿದ ಧೀಮಂತರು. ಸ್ವಾತಂತ್ರ್ಯ ಆಂದೋಲನಕ್ಕಾಗಿ 'ಧನುರ್ಧಾರಿ', ಯುವಕರಿಗೆ ಉದ್ಯೋಗ-ವ್ಯವಸಾಯ ಕಲಿಸಲು 'ಉದ್ಯೋಗ' ಎಂಬ ಪತ್ರಿಕೆಯ ಜೊತೆಗೆ ಬಸವಾದಿ ಶಿವಶರಣರ ನಿಜ ತತ್ವಗಳ ಪ್ರಸಾರಕ್ಕಾಗಿ 'ಶರಣ ಸಂದೇಶ' ಎಂಬ ಮೌಲಿಕ ವಾರಪತ್ರಿಕೆಯನ್ನು ಅವರು ಪ್ರಕಟಿಸಿದರು. ಶರಣಸಂದೇಶ ಪತ್ರಿಕೆ ನಾಡಿನ ತುಂಬ ಪ್ರಸಾರವಾಗುತ್ತಿತ್ತು. ಯಾವ ಮಠಗಳು ಮಠಾಧೀಶರು ಶ್ರೀಮಂತರು ಮಾಡದ ಕಾರ್ಯವನ್ನು ಡಾ. ಹಳಕಟ್ಟಿಯವರು, ಡಾ. ಹರ್ಡೇಕರ ಮಂಜಪ್ಪನವರು ಮಾಡಿದರು ಎಂಬುದು ಅತ್ಯಂತ ಸೋಜಿಗದ ಸಂಗತಿಯಾಗಿದೆ.

ಡಾ. ಹಳಕಟ್ಟಿಯವರು ಮೂಲತಃ ಧಾರವಾಡದವರು, ಹರ್ಡೇಕರ ಮಂಜಪ್ಪನವರು ಬನವಾಸಿಯವರು. ಉಭಯತರೂ ವಿಜಯಪುರ ಜಿಲ್ಲೆಯನ್ನು ತಮ್ಮ ಕರ್ಮಭೂಮಿಯನ್ನಾಗಿ ಮಾಡಿಕೊಂಡು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಕ್ಷೇತ್ರದಲ್ಲಿ ಮಾಡಿದ ಸಾಧನೆ ಅನೂಹ್ಯವಾದುದು.

**ಸದ್ಧರ್ಮ ದೀಪಿಕೆ :**

ಶಿರಾಳಕೊಪ್ಪದ ಚೆನ್ನಮಲ್ಲಿಕಾರ್ಜುನ ನಮ್ಮ ನಾಡು ಕಂಡ ಶ್ರೇಷ್ಠ ವಿದ್ವಾಂಸರು. ಅವರಿಗೆ ಅಂಗವೈಕಲ್ಯ ಬಾಲ್ಯಾವಸ್ಥೆಯಿಂದಲೂ ಇತ್ತು. ಇಂದು ಕೈ ಮತ್ತು ಒಂದು ಕಣ್ಣು ಸರಿಯಾಗಿ ಕೆಲಸ ನಿರ್ವಹಿಸುತ್ತಿರಲಿಲ್ಲ. ಆದರೂ ಅವರಲ್ಲಿದ್ದ ಅದಮ್ಯ ಚೈತನ್ಯ ಈ ನಾಡಿಗೆ ಅಪರೂಪದ ಕೊಡುಗೆಯನ್ನು ನೀಡಿತು. 'ಸದ್ಧರ್ಮ ದೀಪಿಕೆ' ಎಂಬ ಮಾಸಪತ್ರಿಕೆಯನ್ನು ೧೯೩೦ರಿಂದ ಮೂರು ದಶಕಗಳ ಕಾಲ ಅವರು ಮುನ್ನಡೆಸಿದರು. ಹಾವೇರಿ, ಮೈಸೂರು ಹೀಗೆ ಅವರು ಬೇರೆ ಬೇರೆ ಊರುಗಳಲ್ಲಿ ಪತ್ರಿಕೆ ನಡೆಸಿದ ಪರಿಣಾಮವಾಗಿ ಇಂದು ಅದರ ಸಂಚಿಕೆಗಳು ನೋಡಲೂ ದೊರೆಯುವುದಿಲ್ಲ. ಶಿವಯೋಗಮಂದಿರದಲ್ಲಿ ಅದರ ಎಲ್ಲ ಸಂಚಿಕೆಗಳು ಲಭ್ಯವಿದ್ದವು. ಆದರೆ ನೋಡುವರಿಲ್ಲದೆ ಹುಳು ತಿಂದು ಹಾಳಾಗಿ ಹೋದವು. ಚನ್ನಮಲ್ಲಿಕಾರ್ಜುನರು ಈ ಪತ್ರಿಕೆಯ ಮೂಲಕ ಲಿಂಗಾಯತ ಧರ್ಮದ ಪ್ರಾಚೀನ ಸಾಹಿತ್ಯವನ್ನು ಧಾರಾವಾಹಿಯಾಗಿ ಪ್ರಕಟಿಸಿ, ಸುಮಾರು ೪೦ ಕೃತಿಗಳನ್ನು ಪ್ರಕಟಿಸಿದರು. ಅವರು ಪತ್ರಿಕೆ ಮೂಲಕ ಪ್ರಕಟಿಸಿದ ಪುಸ್ತಕಗಳು ಲಿಂಗಾಯತ ಸಮಾಜದ ಇತಿಹಾಸ ಮತ್ತು ಪರಂಪರೆಯನ್ನು ಶೋಧಿಸಲು ಮಾರ್ಗದರ್ಶಿಯಾದವು. ಅವರು ಬರೆದ ಪಂಚಾಚಾರ್ಯ ಚರಿತ್ರೆ ಮೊದಲ ಭಾಗ, ನಿರಂಜನ

ವಂಶ ರತ್ನಾಕರ ಕೃತಿಗಳು ಲಿಂಗಾಯತರ ಬಹುದೊಡ್ಡ ನಿಜ ಇತಿಹಾಸವನ್ನು ಮೊದಲ ಬಾರಿಗೆ ಬಯಲಿಗೆ ತಂದವು. ಬಡತನದಲ್ಲಿಯೇ ಬಾಳಿ ಬದುಕಿದ ಅವರಿಗೆ ಯಾವ ಮಠಾಧೀಶರು–ಶ್ರೀಮಂತರು ಸಹಾಯ ಮಾಡಲಿಲ್ಲವೆಂಬುದು ವಿಷಾದನೀಯ.

**ಶರಣ ಸಾಹಿತ್ಯ :**

ಕೀರ್ತನಕೇಸರಿ ಎಂದೇ ಖ್ಯಾತರಾಗಿದ್ದ ಬಿ. ಶಿವಮೂರ್ತಿ ಶಾಸ್ತ್ರಿಗಳು ಶರಣ ಸಾಹಿತ್ಯ ಪತ್ರಿಕೆಯನ್ನು ೧೯೪೦ರಿಂದ ೧೯೬೮ರವರೆಗೆ ಪ್ರಕಟಿಸಿದರು. ಕರ್ನಾಟಕ ಏಕೀಕರಣಕ್ಕೆ ಅಭೂತಪೂರ್ವ ಕೊಡುಗೆಯನ್ನು ನೀಡಿದ ಶಾಸ್ತ್ರಿಗಳು ಈ ಪತ್ರಿಕೆಯ ಮೂಲಕ ಅನೇಕ ಮೌಲಿಕ ಲೇಖನಗಳನ್ನು ಪ್ರಕಟಿಸಿದರು. ಶಾಸನ, ಹಳೆಗನ್ನಡ ಸಾಹಿತ್ಯ, ಸಂಸ್ಕೃತ ಸಾಹಿತ್ಯದ ಅನುವಾದ, ಕರ್ನಾಟಕ ಏಕೀಕರಣ ಸಮ್ಮೇಳನಗಳ ಸಂಪೂರ್ಣ ವರದಿ, ಭಾಷಣಗಳು ಮೊದಲಾದ ಹತ್ತು ಹಲವು ವೈವಿಧ್ಯಮಯ ವಿಷಯಗಳು ಈ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

ಮೇಲಿನ ನಾಲ್ಕು ಪತ್ರಿಕೆಗಳು ವೈಯಕ್ತಿಕ ನೆಲೆಯಲ್ಲಿ ಪ್ರಕಟಗೊಂಡ ಪತ್ರಿಕೆಗಳು. ಬಡತನದ ಬಾಳನ್ನು ಬಾಳುತ್ತ, ತೆವಳುತ್ತ ಬದುಕು ಸಾಗಿಸಿದ ಈ ಹಿರಿಯರು ಲಿಂಗಾಯತ ಸಂಸ್ಕೃತಿಯನ್ನು ಮನೆಮನೆಗೆ ತಲುಪಿಸಿದ ಶ್ರೇಯಸ್ಸಿಗೆ ಕಾರಣರಾದವರು.

**ಜ್ಞಾನಪ್ರಸಾದ :**

ಮುರಾರಜಿ ದೇಸಾಯಿ ಮಂತ್ರಿಮಂಡಲದಲ್ಲಿ ಕಂದಾಯ ಮಂತ್ರಿಗಳಾಗಿದ್ದ ಎಂ.ಪಿ. ಪಾಟೀಲರು ಬೆಳಗಾವಿಯಿಂದ ೧೯೬೦ರ ದಶಕದಲ್ಲಿ 'ಜ್ಞಾನ ಪ್ರಸಾದ' ಎಂಬ ಅಮೂಲ್ಯ ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯನ್ನು ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಪ್ರತ್ಯೇಕವಾಗಿ ಪ್ರಕಟಿಸಿ ದಾಖಲೆಯನ್ನು ನಿರ್ಮಿಸಿದರು. ಲಿಂಗಾಯತ ಸಾಹಿತ್ಯವನ್ನು ಕುರಿತು ಆಳವಾಗಿ ಅಧ್ಯಯನ ಮಾಡಿದ್ದ ಎಂ.ಪಿ. ಪಾಟೀಲ ಅವರು ಬಸವಣ್ಣನವರ ಮತ್ತು ಗಾಂಧೀಜಿಯವರ ನಿಷ್ಠಾವಂತ ಭಕ್ತರಾಗಿದ್ದರು. ಸಮನ್ವಯ ದೃಷ್ಟಿ ಅವರಲ್ಲಿ ಎದ್ದು ಕಾಣುತ್ತಿತ್ತು. ಅರವಿಂದರು, ವಿವೇಕಾನಂದರು, ರಮಣ ಮಹರ್ಷಿಗಳು, ಗಾಂಧೀಜಿ, ಟಾಲ್‌ಸ್ಟಾಯ್, ರವೀಂದ್ರರು, ಶರಣರು ಎಲ್ಲರೂ ಅವರಿಗೆ ಬೇಕಾದವರು. ಅವರೆಲ್ಲರ ವಿಚಾರಗಳನ್ನು ಲೇಖನ ರೂಪದಲ್ಲಿ ಪ್ರಕಟಿಸಿದ ಕೀರ್ತಿ ಜ್ಞಾನ ಪ್ರಸಾದಕ್ಕೆ ಸಲ್ಲುತ್ತದೆ. ಇಂದು ಪ್ರವಚನಯೋಗಿ ಎಂದು ಖ್ಯಾತರಾದ ಸಿದ್ಧೇಶ್ವರ ಸ್ವಾಮಿಗಳ ಪ್ರಾರಂಭದ ಲೇಖನಗಳು ಜ್ಞಾನಪ್ರಸಾದ ಪತ್ರಿಕೆಯಲ್ಲಿ ನಿರಂತರ ಪ್ರಕಟವಾಗಿರುವುದನ್ನು ಗಮನಿಸಬಹುದು.

**ಬಸವ ಪಥ :**

ಡಾ. ಬಿ.ಡಿ. ಜತ್ತಿಯವರು ೧೯೬೨ರಲ್ಲಿ ಬಸವ ಸಮಿತಿ ಸ್ಥಾಪಿಸಿದಾಗ ಡಾ. ಸಿದ್ಧಯ್ಯ ಪುರಾಣಿಕರ ನೇತೃತ್ವದಲ್ಲಿ 'ಬಸವಪಥ' ಎಂಬ ಮಾಸಿಕವನ್ನು ಪ್ರಕಟಿಸತೊಡಗಿದರು. ಶರಣಸಾಹಿತ್ಯದಲ್ಲಿ

ಅನನ್ಯವಾದ ಸಾಧನೆ ಮಾಡಿದ್ದ ಸಿದ್ಧಯ್ಯ ಪುರಾಣಿಕರ ಸಮರ್ಥ ನೇತೃತ್ವದಲ್ಲಿ ಪತ್ರಿಕೆ ಒಂಬತ್ತು ವರುಷಗಳ ಕಾಲ ಪ್ರಕಟಗೊಂಡಿತು. ನಂತರದ ದಿನಮಾನದಲ್ಲಿ ಬಿ. ವಿರೂಪಾಕ್ಷಪ್ಪ, ಬೇಲಿಮಠದ ಶಿವರುದ್ರ ಸ್ವಾಮಿಗಳ ಸಂಪಾದಕತ್ವದಲ್ಲಿ ಕಳೆದ ೩೫ ವರುಷಗಳಿಂದ ಪ್ರಕಟವಾಗುತ್ತಿದೆ. ನಮ್ಮ ನಾಡಿನ ಶ್ರೇಷ್ಠ ಪ್ರಜ್ಞಾವಂತ ಪತ್ರಿಕೆಗಳಲ್ಲಿ ಒಂದೆಂಬ ಖ್ಯಾತಿಗೆ ಪಾತ್ರವಾಗಿದೆ. ಈಗ ಅರವಿಂದ ಜತ್ತಿಯವರು ಕನ್ನಡ ಬಸವಪಥ ಪತ್ರಿಕೆ ಜೊತೆಗೆ 'ಬಸವ ಜರ್ನಲ್' (ಇಂಗ್ಲಿಷ್) ಬಸವಮಾರ್ಗ (ಹಿಂದಿ), ಬಸವಪಥ (ಮರಾಠಿ, ತಮಿಳು, ತೆಲಗು, ಮಲೆಯಾಳಿ) ಹೀಗೆ ಒಟ್ಟು ಏಳು ಭಾಷೆಗಳಲ್ಲಿ ಪತ್ರಿಕೆಗಳನ್ನು ಪ್ರಕಟಿಸುತ್ತಿರುವುದು ದೊಡ್ಡ ಸಾಧನೆಯೆಂದೇ ಹೇಳಬೇಕು. ಕರ್ನಾಟಕದೊಂದಿಗೆ ಹೊಂದಿಕೊಂಡಿರುವ ಎಲ್ಲಾ ರಾಜ್ಯಗಳಲ್ಲಿ ಬಸವತತ್ವಪ್ರಸಾರಕ್ಕಾಗಿ ಹುಟ್ಟಿಕೊಂಡ ಈ ಪತ್ರಿಕೆಗಳ ಕಾರ್ಯ ಅವಿಸ್ಮರಣೀಯವಾದುದು.

**ಮಹಾಮನೆ :**

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಮುಖವಾಣಿಯಾದ 'ಮಹಾಮನೆ' ಪತ್ರಿಕೆಯು ದೇಶವಿದೇಶಗಳಲ್ಲಿ ತುಂಬ ಪ್ರಸಾರವಿರುವ ಪತ್ರಿಕೆಯಾಗಿದೆ. ಕಳೆದ ೨೦ ವರುಷಗಳಿಂದ ನಿಯಮಿತವಾಗಿ ಪ್ರಕಟಗೊಳ್ಳುತ್ತಿರುವ ಮಹಾಮನೆ ಪತ್ರಿಕೆಯ ಬೆನ್ನಹಿಂದಿನ ಶಕ್ತಿಯಾಗಿ ಕೆಲಸ ಮಾಡುತ್ತಿರುವ ಗೊ.ರು.ಚ. ಅವರ ಅಧ್ಯಕ್ಷೀಯ ನುಡಿಗಳು ಓದುಗಲೋಕವನ್ನು ಹೆಚ್ಚಿಸಿವೆ. ಆಕರ್ಷಕ ಶೈಲಿಯಲ್ಲಿ ಹೇಳುವ ಅವರ ಕಲೆ ಜನಾನುರಾಗಿಯಾಗಿದೆ. ಇತ್ತೀಚೆಗೆ ಮುಕ್ತಾ ಕಾಗಲಿ ಅವರು ಈ ಪತ್ರಿಕೆಯ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ಮಠಗಳಿಂದ ಪ್ರಕಟವಾದ ಪತ್ರಿಕೆಗಳು :**

ನಮ್ಮ ನಾಡಿನ ಅನೇಕ ಮಠಮಾನ್ಯಗಳು ಇಂದು ತಮ್ಮ ಮಠದ ಪ್ರಚಾರಕ್ಕಾಗಿ ಪತ್ರಿಕೆಗಳನ್ನು ಪ್ರಕಟಿಸಲು ಪೈಪೋಟಿ ನಡೆಸುತ್ತಿದ್ದಾರೆ. ಶ್ರೀಮಂತ ಮಠಗಳು ಎರಡು-ಮೂರು ಪತ್ರಿಕೆಗಳನ್ನು ನಡೆಸುತ್ತಿವೆ. ಮಠಾಧೀಶರನ್ನು ತರಬೇತುಗೊಳಿಸುವ ಸಂಸ್ಥೆ ಶಿವಯೋಗಮಂದಿರದಿಂದ ೧೯೫೦ರಲ್ಲಿ 'ಸುಕುಮಾರ' ಎಂಬ ಪತ್ರಿಕೆ ಪ್ರಕಟವಾಗುತ್ತಿತ್ತು. ಜಾತಿಜಂಗಮರನ್ನು ವೈಭವೀಕರಣಗೊಳಿಸುವ ಏಕೈಕ ಉದ್ದೇಶದಿಂದ ಹುಟ್ಟಿಕೊಂಡ ಈ ಪತ್ರಿಕೆ ಬಹಳ ಕಾಲ ನಡೆಯಲಿಲ್ಲ.

ಸಿದ್ಧಗಂಗಾಮಠದಿಂದ 'ಸಿದ್ಧಗಂಗಾ', ಸಿರಿಗೆರೆ ತರಳಬಾಳು ಬೃಹನ್ಮಠದಿಂದ 'ತರಳಬಾಳು', ಸುತ್ತೂರುಮಠದಿಂದ 'ಪ್ರಸಾದ' ಮತ್ತು 'ಶರಣಪಥ' (ಇಂಗ್ಲಿಷ್), ಜೆ.ಎಸ್.ಎಸ್. ವಾರ್ತಾಪತ್ರ ಎಂಬ ಪತ್ರಿಕೆಗಳು ಪ್ರಕಟವಾಗುತ್ತಿವೆ. ಕನಕಪುರ ದೇಗುಲಮಠದ 'ದೇಗುಲಪ್ರಭೆ' ನಾಲವಾರ ಕೋರಿಸಿದ್ಧೇಶ್ವರಮಠದ 'ತನಾರತಿ', ಕಲಬುರ್ಗಿ ಶರಣಬಸವೇಶ್ವರಮಠದಿಂದ 'ದಾಸೋಹ', ಭಾಲ್ಕಿ ಹಿರೇಮಠ ಸಂಸ್ಥಾನದಿಂದ 'ಶಾಂತಿಕಿರಣ', ಇಳಕಲ್ಲ ವಿಜಯಮಹಾಂತೇಶ್ವರಮಠದಿಂದ 'ಬಸವ ಬೆಳಗು' ಮೊದಲಾದ ಪತ್ರಿಕೆಗಳು ಪ್ರಕಟವಾಗುತ್ತಿವೆ.

ಡಾ. ಎಸ್.ಆರ್. ಗುಂಜಾಳ ಅವರ ಪ್ರಯತ್ನದ ಫಲವಾಗಿ ಡಾ. ಹಳಕಟ್ಟಿಯವರ 'ಶಿವಾನುಭವ ಪತ್ರಿಕೆಯ ಲೇಖನ ಸೂಚಿ', 'ಬಸವಪಥ ಪತ್ರಿಕೆಯ ಲೇಖನ ಸೂಚಿ' 'ಬಸವ ಜರ್ನಲ್ ಪತ್ರಿಕೆಯ ಲೇಖನ ಸೂಚಿ' 'ಪ್ರಸಾದ ಪತ್ರಿಕೆಯ ಲೇಖನ ಸೂಚಿ'ಗಳು ಸಿದ್ಧಗೊಂಡಿವೆ. ಕ.ಚ.ಪಾಟೀಲರು 'ತರಳಬಾಳು ಪತ್ರಿಕೆ ಲೇಖನ ಸೂಚಿ ಮಾಡಿದ್ದಾರೆ', ಡಾ. ಗುಂಜಾಳ ಮತ್ತು ಚಿಲುಮಿ ಅವರು 'ಮಹಾಮನೆ ಪತ್ರಿಕೆ' ಲೇಖನ ಸೂಚಿ ಪ್ರಕಟಿಸಿದ್ದಾರೆ ಈ ನಿಟ್ಟಿನಲ್ಲಿ ವಿಶ್ವಕರ್ಮ ಪತ್ರಿಕೆಗಳ ಲೇಖನ ಸೂಚಿ ಬಗೆಗೆ ಯಾವ ಅಧ್ಯಯನವು ಆಗಿರುವುದಿಲ್ಲ.

**ಇತರ ಪತ್ರಿಕೆಗಳು :**

ಪಿ.ಎಂ. ಗಿರಿರಾಜರ 'ಶರಣ ಸಂತಾನ' ಸಾ.ಶಿ. ಮರುಳಯ್ಯನವರ 'ವೀರಶೈವ ಸಮನ್ವಯ', ಅನ್ನಪೂರ್ಣ ಹುದ್ದಾರ ಅವರ 'ಲಿಂಗನುಡಿ' ಲಿಂಗಣ್ಣ ಸತ್ಯಂಪೇಟೆ ಅವರ 'ಬಸವಮಾರ್ಗ', ಎಸ್. ವಿದ್ಯಾಶಂಕರ ಅವರ 'ಸ್ವಪ್ನಲೋಕ', ಮೊದಲಾದ ಪತ್ರಿಕೆಗಳು ವ್ಯೆಯಕ್ತಿಕ ನೆಲೆಯಲ್ಲಿ ಶರಣಸಾಹಿತ್ಯವನ್ನು ಕುರಿತು ಪ್ರಕಟವಾಗುತ್ತಿದ್ದ ಪತ್ರಿಕೆಗಳು. ಆದರೆ ಅವುಗಳ ಆಯುಷ್ಯ ಕಡಿಮೆಯಾಗಿತ್ತೆಂಬುದು ವಿಷಾದ ಪಡುವ ಸಂಗತಿಯಾಗಿದೆ.

ಬೆಳಗಾವಿಯಿಂದ ಪ್ರಸಾರವಾಗುತ್ತಿರುವ 'ಸಂಕ್ರಮಣ' ಪತ್ರಿಕೆಯನ್ನು ಕುರಿತು ಸಂಶೋಧನೆ ಮಾಡಿರುವುದನ್ನು ಗಮನಿಸಲಾಗಿದೆ. ಆ ಪತ್ರಿಕೆಯ ಬೆಳವಣಿಗೆ ವಿಕಾಸದೊಂದಿಗೆ ಅಂತರಂಗದಲ್ಲಿರುವ ವಿಷಯಗಳನ್ನು ತಿಳಿದುಕೊಳ್ಳಲಾಗಿದೆ. ಅದರಂತೆ ಹಲವು ದಶಕಗಳಿಂದ ಕನ್ನಡದಲ್ಲಿ ಪ್ರಕಟವಾಗುತ್ತಿರುವ 'ಪ್ರಜಾವಾಣಿ' ದಿನಪತ್ರಿಕೆಯ ಮೇಲೆ ಸಂಶೋದನೆಯನ್ನು ಕೈಗೊಂಡಿದ್ದಾರೆ.

ಮುದ್ರಣ ಮಾಧ್ಯಮವಾಗಿರುವ ಪತ್ರಿಕೆಗಳಲ್ಲಿಯ ಜಾಹೀರಾತುಗಳ ಕುರಿತು ಸಂಶೋಧನೆಯನ್ನು ಮಾಡಲಾಗಿದ್ದು, ಅದರಂತೆ ಏಳು ದಶಕಗಳಿಂದ ಕನ್ನಡದಲ್ಲಿ ಪ್ರಕಟವಾಗುತ್ತಿರುವ ವಿಶ್ವಕರ್ಮ ಪತ್ರಿಕೆಗಳ ಕುರಿತು ಸಂಶೋದನೆಯನ್ನು ಕೈಗೊಳ್ಳುವ ಅವಶ್ಯಕತೆಯಿದ್ದ ಕಾರಣ ನನ್ನ ಸಂಶೋಧನೆಗೆ ವಿಶ್ವಕರ್ಮ ಪತ್ರಿಕೆಗಳನ್ನು ಮೂಲ ಆಕರಗಳನ್ನಾಗಿ ಬಳಸಿಕೊಂಡಿದ್ದೇನೆ.

# ಅಧ್ಯಾಯ–ಎರಡು

## ವಿಶ್ವಕರ್ಮ ಪತ್ರಿಕೆಗಳ ಪ್ರಭಾವ ಮತ್ತು ಪ್ರೇರಣೆಗಳು

೨.೧. ಬಾಹ್ಯ ಪ್ರೇರಣೆಗಳು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಆಶಯಗಳು

೨.೨ ಆಂತರಿಕ ಪ್ರೇರಣೆಗಳು ಧಾರ್ಮಿಕ ಸಮಾಜ ಸಂಘಟನೆ,

ಪಂಚಕಲೆಗಳ ಪುನರುಜ್ಜೀವನ, ಶಿಕ್ಷಣ

## ಅಧ್ಯಾಯ–ಎರಡು

# ವಿಶ್ವಕರ್ಮ ಪತ್ರಿಕೆಗಳ ಪ್ರಭಾವ ಮತ್ತು ಪ್ರೇರಣೆಗಳು

ಒಂದು ದೇಶ ಅಥವಾ ಸಮುದಾಯದ ಚರಿತ್ರೆಯನ್ನು ಕಟ್ಟಬೇಕಾದ ಸಂದರ್ಭದಲ್ಲಿ ಪತ್ರಿಕೆಗಳ ಪಾತ್ರ ಅನನ್ಯ. ಉಳಿದ ಪ್ರಸಾರ ಮಾಧ್ಯಮಗಳಿಗಿಂತ ಅತ್ಯಂತ ಸುಲಭವಾಗಿ ಹಾಗೂ ವ್ಯಾಪಕವಾಗಿ ಜನಸಮುದಾಯವನ್ನು ತಲುಪಬಲ್ಲ ಶಕ್ತಿ ಸಾಮರ್ಥ್ಯ ಪತ್ರಿಕೆಗಳಿಗಿದೆ. ಇಂದು ತಂತ್ರಜ್ಞಾನ ಕ್ಷೇತ್ರದಲ್ಲಾದ ಬದಲಾವಣೆಯಿಂದ ಏನೆಲ್ಲಾ ತೀವ್ರತರದ ಸಂದೇಶಗಳನ್ನು ರವಾನಿಸಬಹುದಾದರೂ ಪತ್ರಿಕೆಗಳಲ್ಲಿ ಬರುವ ವಿಷಯಗಳಿಗೆ ಒಂದು ಅಧಿಕೃತ ವಿಶ್ವಾಸವಿರುತ್ತದೆ ಎಂಬ ಮಾತನ್ನು ಯಾರೂ ಅಲ್ಲಗಳೆಯಲಾರರು.

ಪತ್ರಿಕೆಗಳು ನಮ್ಮ ದಿನಮಾನದ ಒಟ್ಟು ಚಿತ್ರಣವನ್ನು ಅತ್ಯಂತ ವಾಸ್ತವ ನೆಲೆಯಲ್ಲಿ ಕಟ್ಟಿಕೊಡುತ್ತವೆ. ಸಮಕಾಲೀನ ಜನಾಂಗದ ವಿದ್ಯಮಾನಗಳನ್ನು, ಸಮಾಜದ ಸ್ಥಿತಿ–ಗತಿಗಳನ್ನು, ಅದರ ದೋಷ ದೌರ್ಬಲ್ಯಗಳನ್ನು, ಶಕ್ತಿ–ಮಿತಿಗಳನ್ನು ಕರಾರುವಕ್ಕಾಗಿ ಹೇಳುವ ತಾಕತ್ತು ಪತ್ರಿಕೆಗಳಿಗೆ ಮಾತ್ರ ಇದೆ. ಪತ್ರಿಕೆಯಲ್ಲಿ ಬಂದ ಒಂದು ಸಣ್ಣ ಸುದ್ದಿ ಹೊಸ ಇತಿಹಾಸಕ್ಕೆ ನಾಂದಿ ಹಾಡಬಹುದು. ಒಂದು ಪತ್ರಿಕೆ ಮನಸ್ಸು ಮಾಡಿದರೆ ಸರ್ಕಾರವನ್ನೇ ಉರುಳಿಸಬಹುದು; ಮಂತ್ರಿಗಳನ್ನು ಮನೆಗೆ ಕಳಿಸಬಹುದು; ಒಂದು ದೊಡ್ಡ ಚಳವಳಿಗೆ ಬುನಾದಿ ಹಾಕಬಹುದು. ಹೀಗಾಗಿ ಪತ್ರಿಕೆಗಳನ್ನು ಭಾರತದ ಸಂವಿಧಾನ ತಳಪಾಯದ ನಾಲ್ಕನೆಯ ಪ್ರಮುಖ ಅಂಗವೆಂದು ಪರಿಗಣಿಸಲಾಗಿದೆ. ಕಾರ್ಯಾಂಗ, ನ್ಯಾಯಾಂಗ, ಶಾಸಕಾಂಗಗಳಂತೆ ಪತ್ರಿಕಾಂಗವೂ ಒಂದಾಗಿ ಪರಿಗಣಿಸಲ್ಪಟ್ಟಿದೆ. ಹೀಗಾಗಿ ಸಮಾಜದ ಶ್ರೇಯೋಭಿವೃದ್ಧಿಯಲ್ಲಿ, ನಾಡಿನ ಪ್ರಗತಿಯಲ್ಲಿ ಪತ್ರಿಕೆಗಳ ಪಾತ್ರ ಅತ್ಯಂತ ಪ್ರಮುಖವಾದುದು.

**೨.೧ ಬಾಹ್ಯ ಪ್ರೇರಣೆಗಳು :**

ಭಾರತದ ಸ್ವಾತಂತ್ರ್ಯ ಆಂದೋಲನದ ಕತೆ ಎಷ್ಟು ವರ್ಣರಂಜಿತವೋ, ಅಷ್ಟೇ ಕುತೂಹಲಭರಿತವಾದುದು ಭಾರತೀಯ ಪತ್ರಿಕಾರಂಗದ ಇತಿಹಾಸ. ಹತ್ತೊಂಭತ್ತನೇ ಶತಮಾನದ

ಹೊತ್ತಿಗೆ ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆ ಭದ್ರವಾಗಿ ತಳವೂರಿದಾಗ ಅನೇಕ ಬದಲಾವಣೆಗಳು ಉಂಟಾದವು. ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಭಾರತೀಯರು ದೌರ್ಜನ್ಯಕ್ಕೆ ಒಳಗಾದರು ನಿಜ. ಆದರೆ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಹಲವಾರು ಇತ್ಯಾತ್ಮಕ ಬದಲಾವಣೆಗಳು ಕಂಡುಬಂದವು. ಅದುವರೆಗೆ ಹೊರ ಜಗತ್ತಿಗೆ ಅಷ್ಟಾಗಿ ತೆರೆದುಕೊಳ್ಳದೇ ಇದ್ದ ಭಾರತೀಯ ಸಮಾಜ ಪಾಶ್ಚಿಮಾತ್ಯ ಸಂಸ್ಕೃತಿಯ ಸಂಪರ್ಕದಿಂದಾಗಿ ಕಲೆ, ಸಾಹಿತ್ಯ, ಭಾಷೆ, ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಹೊಸತನಕ್ಕೆ ಮೈಯೊಡ್ಡಲು ಸಾಧ್ಯವಾಯಿತು. ಈ ಕ್ಷೇತ್ರಗಳಲ್ಲಿ ಹೊಸ ಚಿಂತನೆ ಹುಟ್ಟಿ ಹೊಸ ಪ್ರಯೋಗಗಳಿಗೆ ದಾರಿ ಮಾಡಿ ಕೊಟ್ಟವು. ಯುರೋಪಿನ ಹಲವಾರು ಪ್ರಕಾರಗಳು ಇಲ್ಲಿ ಹೊಸತಾಗಿ ಪರಿಚಯಿಸಲ್ಪಟ್ಟು ಅವುಗಳಲ್ಲಿ ಹೆಚ್ಚಿನವುಗಳನ್ನು ಭಾರತೀಯರು ತಡಮಾಡದೆ ಸ್ವೀಕರಿಸಿದರು. ಹೀಗೆ ಯುರೋಪಿನಿಂದ ಪಡೆದುಕೊಂಡು ಇಲ್ಲಿ ಯಶಸ್ವಿಯಾಗಿ ಪ್ರಯೋಗಿಸಿದ ಪ್ರಕಾರಗಳಲ್ಲಿ ಪತ್ರಿಕೋದ್ಯಮವೂ ಒಂದು.

ಭಾರತೀಯ ಪತ್ರಿಕಾರಂಗದ ಇತಿಹಾಸ ಎಷ್ಟು ದೊಡ್ಡದಾಗಿದೆ ಎಂದರೆ, ವಿವಿಧ ಚಳುವಳಿಗಳಲ್ಲಿ ಅದು ನಿರ್ವಹಿಸಿದ ಪಾತ್ರದ ಕುರಿತು ಸಮಗ್ರ ಎನ್ನಬಹುದಾದ ಅಧ್ಯಯನ ಇನ್ನೂ ಸರಿಯಾಗಿ ನಡೆದಿಲ್ಲ. ಆಧುನಿಕ ಭಾರತದ ಪಿತಾಮಹ ಎಂದೇ ಖ್ಯಾತರಾಗಿರುವ ರಾಜಾರಾಮಮೋಹನ ರಾಯ್ ಅವರಿಂದ ಮೊದಲ್ಗೊಂಡು, ಸ್ವಾಮಿ ವಿವೇಕಾನಂದ, ಅರಬಿಂದೋ, ಬಾಲಗಂಗಾಧರ ತಿಲಕ, ಮಹಾತ್ಮಾ ಗಾಂಧಿ, ಬಿ. ಆರ್. ಅಂಬೇಡ್ಕರ್ ಮೊದಲಾದ ಮಹನೀಯರು ಮುನ್ನಡೆಸಿದ ಸಾಮಾಜಿಕ, ಧಾರ್ಮಿಕ, ರಾಜಕೀಯ ಸುಧಾರಣಾ ಚಳವಳಿಗಳ ಕುರಿತು ನಮ್ಮಲ್ಲಿ ಹೆಚ್ಚಿನವರಿಗೆ ತಿಳಿದೇ ಇದೆ. ಆದರೆ, ಅವರೆಲ್ಲರೂ ಪತ್ರಿಕಾ ಮಾಧ್ಯಮವನ್ನು ತಮ್ಮ ಚಳವಳಿಯ ಪ್ರಧಾನ ಅಂಗವಾಗಿ ಬಳಸಿಕೊಂಡ ರೀತಿ ಅನನ್ಯವಾದದ್ದು. ರಾಜಾರಾಮ ಮೋಹನ ರಾಯರಂತೂ ತನ್ನ ಸಾಮಾಜಿಕ ಸುಧಾರಣಾ ತುಡಿತಗಳಿಗೆ ಲೇಖನಿಯನ್ನೇ ಮುಖ್ಯ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದರು.

ಇನ್ನು ಭಾರತದ ಸ್ವಾತಂತ್ರ್ಯಾಂದೋಲನದ ಕತೆಯೂ ಇಷ್ಟೇ. ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯ ಸಮಯದಲ್ಲಿ ಕಾಲಕಾಲಕ್ಕೆ ಪ್ರಕಟಗೊಂಡು, ಸರಕಾರದ ದಬ್ಬಾಳಿಕೆ ಪ್ರಶ್ನಿಸಿ, ಕಿರುಕುಳ ಎದುರಿಸಿ ಕ್ರಮೇಣ ಅನಿವಾರ್ಯತೆಯಿಂದ ಮುಚ್ಚಿಹೋದ ಅನೇಕಾನೇಕ ಪತ್ರಿಕೆಗಳ ಪೈಕಿ ಹೆಚ್ಚಿನವುಗಳ ಹೆಸರು ಕೂಡ ನಮಗಿಂದು ತಿಳಿದಿಲ್ಲ. ವಿಶ್ವವಿದ್ಯಾಲಯಗಳು ಮತ್ತು ಅಧ್ಯಯನ ಸಂಸ್ಥೆಗಳಲ್ಲಿ ಕೂಡ ನಡೆಯುವ ಹೆಚ್ಚಿನ ಸಂಶೋಧನಾ ಕಾರ್ಯಗಳು ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಪತ್ರಿಕೆಗಳಿಗೆ ಸೀಮಿತವಾಗಿರುತ್ತವೆಯೇ ವಿನಹ ಸ್ಥಳೀಯ ಮಟ್ಟದ ಪತ್ರಿಕೆಗಳು ನಿರ್ವಹಿಸಿದ ಪಾತ್ರದ ಕುರಿತು ಬೆಳಕು ಚೆಲ್ಲಲು ಮಾಡಿರುವ ಪ್ರಯತ್ನಗಳು ಕಡಿಮೆ. ಇಚ್ಛಾಶಕ್ತಿಯ ಕೊರತೆಯ ಜೊತೆಯಲ್ಲಿ ಅಧ್ಯಯನಕ್ಕೆ ಪೂರಕ ಸಾಮಗ್ರಿಗಳು, ಸಂಪನ್ಮೂಲ ಮತ್ತು ಉತ್ತೇಜಕ ವಾತಾವರಣ ಕೂಡ ಲಭ್ಯವಿಲ್ಲದಿರುವುದು ಇದಕ್ಕೆ ಕಾರಣವಿರಬಹುದು.

‘ರಾಷ್ಟ್ರೀಯತೆ’ಯ ಪರಿಕಲ್ಪನೆ ಭಾರತದಲ್ಲಿ ಬೆಳೆದು ಬಂದಿದ್ದು ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಇಲ್ಲಿ ಜಾರಿಗೊಂಡ ಐರೋಪ್ಯ ಮಾದರಿಯ ಆಧುನಿಕ ಶಿಕ್ಷಣ ಪದ್ಧತಿಯ ಮೂಲಕ ಎಂಬ ಸಾಮಾನ್ಯ ಅಭಿಪ್ರಾಯವಿದೆ. ಇದರಲ್ಲಿ ಸತ್ಯಾಂಶ ಇರಬಹುದಾದರೂ, ಇದು ಪೂರ್ತಿ ಸತ್ಯವಲ್ಲ. ಮೇಲಾಗಿ ಈ ದೇಶದಲ್ಲಿ ಯುರೋಪ್ ಮಾದರಿಯ ರಾಷ್ಟ್ರೀಯತೆ ಬೆಳೆದು ಬಂದಿರಲಿಲ್ಲ. ಏಕೆಂದರೆ, ಕೆಲವೊಂದು ನಿರ್ದಿಷ್ಟ ಕಾಲಘಟ್ಟ ಹೊರತುಪಡಿಸಿದರೆ, ಉಪಖಂಡ ಎಂದೇ ಕರೆಯಲ್ಪಡುವ ಈ ಬೃಹತ್ ದೇಶ ಬ್ರಿಟಿಷ್ ಆಳ್ವಿಕೆಯ ಮುನ್ನ ಏಕಚಕ್ರಾಧಿಪತ್ಯಕ್ಕೆ ಮತ್ತು ಒಂದೇ ಆಡಳಿತ ಸೂತ್ರಕ್ಕೆ ಎಂದೂ ಒಳಪಟ್ಟಿರಲಿಲ್ಲ. ಹಾಗಾಗಿ, ಯುರೋಪಿನ ಯಾವುದೇ ದೇಶದಲ್ಲಿ ಕಂಡುಬರುವ ರೀತಿಯ ‘ರಾಷ್ಟ್ರೀಯತೆ’ ಇಲ್ಲಿ ಇರಲಿಲ್ಲ. ಆದರೆ, ಇದರರ್ಥ ಭಾರತೀಯರು ಯಾವತ್ತೂ ರಾಷ್ಟ್ರೀಯತೆಯ ಪರಿಕಲ್ಪನೆಯಿಂದ ಹೊರಗುಳಿದವರು ಎಂದಲ್ಲ. ರಾಷ್ಟ್ರೀಯತೆಯ ಮನೋಭಾವ ಇಲ್ಲಿನ ಜನರಲ್ಲಿ ಇದ್ದೇ ಇತ್ತು. ಅದು ನಮ್ಮ ಪ್ರಾಚೀನ ಸಾಹಿತ್ಯ, ಬರವಣಿಗೆಗಳಲ್ಲೂ ಅಭಿವ್ಯಕ್ತಿಗೊಂಡಿದೆ. ಆದರೆ, ಭಾರತದ ಜನಮಾನಸದಲ್ಲಿ ಬೆಳೆದು ಬಂದ ರಾಷ್ಟ್ರೀಯತೆ ಯುರೋಪ್‌ಗಿಂತ ತೀರಾ ಭಿನ್ನ. ಯುರೋಪ್‌ನಲ್ಲಿ ರಾಷ್ಟ್ರೀಯತೆ ರಾಜಕೀಯ ಸ್ವರೂಪದ್ದಾದರೆ, ಭಾರತದಲ್ಲಿ ಅದು ಸಾಂಸ್ಕೃತಿಕ ಸ್ವರೂಪದ್ದು. ಹಾಗಾಗಿಯೇ, ಅದೆಷ್ಟೋ ಶತಮಾನಗಳ ಕಾಲ ಇಲ್ಲಿ ರಾಜಕೀಯ ಏಕಾಧಿಪತ್ಯ ಇಲ್ಲದಿದ್ದರೂ, ಈ ದೇಶ ಒಂದಾಗಿ ಉಳಿದು ಬಂತು. ಅದಕ್ಕೆ ಪ್ರಮುಖ ಕಾರಣ ಸಾಂಸ್ಕೃತಿಕ ರಾಷ್ಟ್ರೀಯತೆ.

ರಾಜಕೀಯ ಸ್ವರೂಪದ ರಾಷ್ಟ್ರೀಯತೆ ಏನಿದ್ದರೂ ವ್ಯಕ್ತಿ ಅಥವಾ ವ್ಯಕ್ತಿಗಳ ಪ್ರಯತ್ನದಿಂದ ಸಾಧಿಸಲ್ಪಡುವಂತಹದ್ದು ಅಥವಾ ಅಧಿಕಾರ ಬಲದಿಂದ ಹೇರಲ್ಪಡುವಂತಹದ್ದು. ಹಾಗಾಗಿ, ಅದು ದೀರ್ಘಕಾಲ ಬೆಳೆದು ಬರುತ್ತದೆ ಎಂಬ ಖಾತ್ರಿ ಇಲ್ಲ. ಕೆಲವೇ ದಶಕಗಳ ಹಿಂದೆ ನಿರ್ದಿಷ್ಟ ರಾಜಕೀಯ ಅಥವಾ ಸೈದ್ಧಾಂತಿಕ ಕಾರಣಗಳಿಂದ ಒಂದು ದೇಶ ಎಂದು ಮೆರೆದಿದ್ದ ಭೂಭಾಗ ಕ್ರಮೇಣ ಬದಲಾದ ಪರಿಸ್ಥಿತಿಯಲ್ಲಿ ಹಲವು ದೇಶಗಳಾಗಿ ಒಡೆದುಹೋದ ಉದಾಹರಣೆ ನಮ್ಮ ಮುಂದೆಯೇ ಇದೆ. ಆದರೆ, ಸಾಂಸ್ಕೃತಿಕ ಏಕತೆ ಹಾಗಲ್ಲ. ಅದು ಹಲವಾರು ಶತಮಾನಗಳ ಕಾಲ ಹಲವು ಮಜಲುಗಳಲ್ಲಿ ನಡೆಯುವ ಚಿಂತನ-ಮಂಥನಗಳ ಫಲಸ್ವರೂಪವಾಗಿ ಮೂಡಿಬರುವಂತಹದ್ದು. ಹಾಗಾಗಿ, ಅದಕ್ಕೊಂದು ಸ್ವಾಭಾವಿಕ ನೆಲೆಗಟ್ಟು ಇದೆ. ಸಾಂಸ್ಕೃತಿಕ ರಾಷ್ಟ್ರೀಯತೆ ಹೊರನೋಟಕ್ಕೆ ಅಸ್ಪಷ್ಟ. ಆದರೆ ಒಳಗಿನಿಂದ ಬಲು ಗಟ್ಟಿ. ಅದರ ತಳಹದಿ ಕೂಡ ಸದೃಢ. ಅಷ್ಟು ಸುಲಭವಾಗಿ ಅಲುಗಾಡಿಸಲು ಸಾಧ್ಯವಿಲ್ಲ. ಹೆಚ್ಚಾಗಿ, ಗುಪ್ತಗಾಮಿನಿಯಾಗಿಯೇ ಇರುವ ಸಾಂಸ್ಕೃತಿಕ ರಾಷ್ಟ್ರೀಯತೆ ಸಂದರ್ಭ ಬಂದಾಗೆಲ್ಲ ಪ್ರವಾಹ ರೂಪದಲ್ಲಿಯೂ ಭೋರ್ಗರೆದ ಉದಾಹರಣೆಗಳೂ ಇವೆ.

ಹೀಗೆ, ಗುಪ್ತಗಾಮಿನಿಯಾಗಿಯೇ ಇದ್ದ ಭಾರತದ ಸಾಂಸ್ಕೃತಿಕ ರಾಷ್ಟ್ರೀಯತೆ ವಿದೇಶಿ ದಾಳಿಕೋರರು ಲಗ್ಗೆ ಇಟ್ಟಾಗ ಅಥವಾ ದೇಶ ಗುಲಾಮಗಿರಿಗೆ ಒಳಗಾದಾಗ ರಾಜಕೀಯ

ಸ್ವರೂಪವನ್ನು ಪಡೆದುಕೊಂಡು ಹೊಸ ಇತಿಹಾಸ ನಿರ್ಮಿಸಿದೆ. ೧೯ ನೇ ಶತಮಾನದಲ್ಲಿ ದೇಶವು ಐರೋಪ್ಯ ವಸಾಹತುಶಾಹಿ ಆಳ್ವಿಕೆಗೆ ಒಳಪಟ್ಟಾಗ ಕೂಡ ಆಗಿರುವುದು ಇಂತಹದೇ ಬೆಳವಣಿಗೆ. ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ಪ್ರಮುಖ ಪರಿಣಾಮವಾಗಿ ಇಲ್ಲಿ ಯುರೋಪ್ ಮಾದರಿಯ ಆಡಳಿತ ಮಾತ್ರವಲ್ಲದೆ, ಅಲ್ಲಿನ ರೀತಿಯ ಶಿಕ್ಷಣ ಪದ್ಧತಿ ಕೂಡ ಜಾರಿಗೆ ಬಂತು. ಆಡಳಿತಗಾರರಾಗಿ ಬಂದ ಹಲವು ಐರೋಪ್ಯರು ಇಲ್ಲಿನ ಭಾಷೆ, ಸಂಸ್ಕೃತಿ, ಸಾಹಿತ್ಯ ಅಧ್ಯಯನದಲ್ಲಿ ಕೂಡ ಆಸಕ್ತಿ ತೋರಿಸಿದ್ದ ಕಾರಣ ಭಾರತೀಯರು ಮತ್ತು ಐರೋಪ್ಯರ ನಡುವೆ ಬೌದ್ಧಿಕ ಚಿಂತನ-ಮಂಥನ ಕೂಡ ಸಾಧ್ಯವಾಯಿತು. ಇದರಿಂದ ಹೇಗೆ ಭಾರತೀಯ ಧಾರ್ಮಿಕ-ಆಧ್ಯಾತ್ಮಿಕ ಚಿಂತನೆಗಳು ಐರೋಪ್ಯರನ್ನು ಪ್ರಭಾವಿಸಿದವೋ, ಅದೇ ರೀತಿ ಐರೋಪ್ಯ ರಾಜಕೀಯ, ಸಾಮಾಜಿಕ, ಆರ್ಥಿಕ ಚಿಂತನೆಗಳ ಗಾಢ ಪ್ರಭಾವ ಇಲ್ಲಿನ ಜನರು ಅದರಲ್ಲೂ ಮುಖ್ಯವಾಗಿ ಆಧುನಿಕ ಶಿಕ್ಷಣ ಪಡೆದ ಭಾರತೀಯರ ಮೇಲಾಯಿತು. ಇದರಿಂದ ಆದ ಹಲವು ದೂರಗಾಮಿ ಪರಿಣಾಮಗಳ ಪೈಕಿ ಈ ದೇಶದ ಜನಮಾನಸದಲ್ಲಿ ಅದುವರೆಗೆ ಗುಪ್ತಗಾಮಿನಿಯಾಗಿದ್ದ ರಾಷ್ಟ್ರೀಯತೆಯ ಮನೋಭಾವ ಹೊರಹೊಮ್ಮಲು ಸಾಧ್ಯವಾಯಿತು. ಈ ರಾಷ್ಟ್ರೀಯತೆಯ ಜಾಗೃತಿ ಕ್ರಮೇಣ ದೇಶದ ಸ್ವಾತಂತ್ರ್ಯ ಚಳುವಳಿಗೂ ಶ್ರೀಕಾರ ಹಾಕಿತು.

ಐರೋಪ್ಯರ ಪ್ರಭಾವದಿಂದ ಇಲ್ಲಿನ ಬೌದ್ಧಿಕ ಕ್ಷೇತ್ರದಲ್ಲಿ ಕೂಡ ಹತ್ತು ಹಲವು ಸಂಚಲನಗಳು ಉಂಟಾದವು. ಹೊಸತನ ಗರಿಗೆದರಿತು, ಹೊಸ ಪರಿಕಲ್ಪನೆಗಳು, ಚಟುವಟಿಕೆಗಳು ಪರಿಚಯಿಸಲ್ಪಟ್ಟವು. ಇಂತಹ ಹೊಸತನದ ಪೈಕಿ ಒಂದು ಪತ್ರಿಕಾರಂಗದ ಉದಯ ಮತ್ತು ಬೆಳವಣಿಗೆ. ಆರಂಭದಲ್ಲಿ ಪತ್ರಿಕಾರಂಗ ಐರೋಪ್ಯ ವ್ಯಕ್ತಿಗಳು ಮತ್ತು ಕ್ರೈಸ್ತ ಮಿಶನರಿಗಳ ಸ್ವತ್ತಾಗಿದ್ದರೂ, ಕ್ರಮೇಣ ಅದು ಭಾರತೀಯರ ಕೈಗೆ ಬಂದಿತು. ಅದರೊಂದಿಗೆ ರಾಷ್ಟ್ರೀಯ, ಸಾಮಾಜಿಕ, ಧಾರ್ಮಿಕ ಜನಜಾಗೃತಿ ಮೂಡಿಸಲು ಹಾಗೂ ಜನಮಾನಸದ ಚಿಂತನೆಯನ್ನು ಪ್ರಭಾವಿಸಲು ಒಂದು ಪರಿಣಾಮಕಾರಿ ಹಾಗೂ ಪ್ರಭಾವಿ ಅಸ್ತ್ರವಾಗಿ ಬಳಕೆಯಾಯಿತು.

ಭಾರತದ ರಾಷ್ಟ್ರೀಯ ಆಂದೋಲನದ ಇತಿಹಾಸ ಓದುವ ಯಾರಿಗಾದರೂ ಒಂದು ಅಚ್ಚರಿಯ ಸಂಗತಿ ಗಮನಕ್ಕೆ ಬಾರದೇ ಇರದು. ಅದೆಂದರೆ, ರಾಷ್ಟ್ರೀಯ ಚಳವಳಿಗೂ ಪತ್ರಿಕಾರಂಗಕ್ಕೂ ಇರುವ ಬಿಡಿಸಲಾರದ ನಂಟು. ಆಧುನಿಕ ಭಾರತದ ನಿರ್ಮಾಪಕ ಎಂದೇ ಹೆಸರಾಗಿರುವ ರಾಜಾರಾಮ ಮೋಹನ್‌ರಾಯ್ ಅವರಿಂದ ಹಿಡಿದು ಸ್ವಾತಂತ್ರ್ಯ ಚಳವಳಿಗೆ ತಾರ್ಕಿಕ ಕೊನೆಯನ್ನು ಮುಟ್ಟಿಸಿದ ಮಹಾತ್ಮಾ ಗಾಂಧಿಯವರ ತನಕ ನೂರಾರು ರಾಜಕೀಯ, ಧಾರ್ಮಿಕ, ಸಾಮಾಜಿಕ ನೇತಾರರು, ಸುಧಾರಕರು ತಮ್ಮ ತಮ್ಮ ಗುರಿ ಸಾಧನೆಗಾಗಿ ಪತ್ರಿಕಾ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ.

"ಭಾರತೀಯ ರಾಷ್ಟ್ರೀಯ ಆಂದೋಲನ ಅಥವಾ ದೇಶದಲ್ಲಿ ರಾಜಕೀಯ ಜಾಗೃತಿ ವೃದ್ಧಿಸಲು ಕಾರಣವಾದ ಚಳವಳಿಯ ಒಂದು ವಿಶೇಷ ಲಕ್ಷಣವೆಂದರೆ, ಪ್ರತಿಯೊಬ್ಬ ರಾಷ್ಟ್ರೀಯವಾದಿ

ನೇತಾರನೂ ಪತ್ರಿಕಾರಂಗದ ಜೊತೆಯಲ್ಲಿ ಹೊಂದಿರುವ ಗಾಢವಾದ ನಂಟು. ರಾಮಮೋಹನ ರಾಯ್ ಅವರು 'ಸಂಬಾದ ಕೌಮುದಿ' ಸಂಪಾದಿಸಿದ್ದರೆ, ಹೆನ್ರಿ ಡಿರೋಝಿ ಅವರು 'ದ ಕೆಲಿಡೊಸ್ಕೋಪ್', ದ್ವಾರಕಾನಾಥ ಟಾಗೋರ್ ಅವರು 'ದ ರಿಫಾರ್ಮರ್', ಬಾಲಶಾಸ್ತ್ರೀ ಜಾಂಬೇಕರ ಅವರು 'ದ ಬಾಂಬೆ ದರ್ಪಣ್', ಬಾಲಗಂಗಾಧರ ತಿಲಕ ಅವರು 'ಕೇಸರಿ', ಮದನಮೋಹನ ಮಾಲವೀಯ ಅವರು 'ಅಭ್ಯುದಯ' ಮತ್ತು ಆ್ಯನಿ ಬೆಸೆಂಟ್ ಅವರು 'ನ್ಯೂ ಇಂಡಿಯ' ಪತ್ರಿಕೆಗಳನ್ನು ಸಂಪಾದಿಸಿದ್ದರು. ಅದೇ ರೀತಿ ಸರ್ ಸೈಯದ್ ಅಹಮದ್ ಖಾನ್, ಗೋಪಾಲಕೃಷ್ಣ ಗೋಖಲೆ, ಸಿ. ವೈ. ಚಿಂತಾಮಣಿ, ಮೌಲಾನಾ ಆಝಾದ, ಮೋತಿಲಾಲ ನೆಹರು, ಮಹಾತ್ಮಾ ಗಾಂಧಿ, ಜವಹರಲಾಲ ನೆಹರು ಇವರೆಲ್ಲರೂ ಬೇರೆ, ಬೇರೆ ಕಾಲಘಟ್ಟಗಳಲ್ಲಿ ಬೇರೆ, ಬೇರೆ ಪತ್ರಿಕೆಗಳನ್ನು ಸಂಪಾದಿಸಿದ್ದರು. ಆದರೆ, ಈ ಎಲ್ಲ ನಾಯಕರುಗಳು ಪತ್ರಿಕಾ ಕ್ಷೇತ್ರದಲ್ಲಿ ಅಥವಾ ಪತ್ರಕರ್ತರಾಗಿ ನಿರ್ವಹಿಸಿದ ಪಾತ್ರದ ಕುರಿತಾಗಿ ಸರಿಯಾದ ಮೌಲ್ಯಾಂಕನ ಇನ್ನೂ ಆಗದಿರುವುದು ದುರದೃಷ್ಟಕರ".[೧]

ಮೇಲಿನ ಈ ಅಭಿಪ್ರಾಯದಿಂದ ಒಂದು ಸಂಗತಿಯಂತೂ ಸ್ಪಷ್ಟವಾಗುತ್ತದೆ. ಅದೇನೆಂದರೆ, ನಮ್ಮ ರಾಷ್ಟ್ರೀಯ ಆಂದೋಲನದ ಎಲ್ಲ ಮುಂಚೂಣಿ ನಾಯಕರು ಪತ್ರಿಕಾರಂಗದ ಮಹತ್ವವನ್ನು ಚೆನ್ನಾಗಿ ಅರಿತಿದ್ದರು ಮತ್ತು ಜನಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಪತ್ರಿಕೆಯನ್ನು ಪ್ರಬಲ ಹಾಗೂ ಸಫಲ ಅಸ್ತ್ರವನ್ನಾಗಿ ದುಡಿಸಿಕೊಂಡಿದ್ದರು. ಹೀಗೆ, ಅವರೆಲ್ಲ ಸಂಪಾದಿಸಿದ್ದ ಪತ್ರಿಕೆಗಳು ದೇಶದ ಉದ್ದಗಲಕ್ಕೂ ರಾಷ್ಟ್ರೀಯತೆಯ ಮನೋಭಾವ ಹೊರಹೊಮ್ಮಿಸುವ ಮತ್ತು ಗಟ್ಟಿಗೊಳಿಸುವ ನಿಟ್ಟಿನಲ್ಲಿ ತಮ್ಮದೇ ಆದ ಅತೀ ಮಹತ್ವದ ಪಾತ್ರ ವಹಿಸಿದವು. ಅದೇ ರೀತಿ ಆಗಿನ ಕಾಲದಲ್ಲಿ ರಾಷ್ಟ್ರೀಯವಾದಿ ವಿಚಾರಗಳನ್ನೇ ಆದರ್ಶವಾಗಿಟ್ಟುಕೊಂಡು ಪತ್ರಿಕೆಗಳನ್ನು ಹೊರಡಿಸಿದ್ದ, ಈ ಮೂಲಕ ರಾಷ್ಟ್ರೀಯತಾ ಆಂದೋಲನದ ನಾಯಕರುಗಳ ಜೊತೆಯಲ್ಲಿ ಹೆಗಲಿಗೆ ಹೆಗಲು ಕೊಟ್ಟು ದುಡಿದಿದ್ದ ಹಾಗೂ ಅದರ ಪರಿಣಾಮಸ್ವರೂಪವಾಗಿ ಬ್ರಿಟಿಶರ ಕೆಂಗಣ್ಣಿಗೆ ಗುರಿಯಾಗಿ ಅಪಾರ ಕಷ್ಟ, ನಷ್ಟ, ನೋವು ಅನುಭವಿಸಿದ ಪತ್ರಕರ್ತರ ಪಟ್ಟಿ ದೊಡ್ಡದಿದೆ. ಆದರೂ, ಇಂತಹ ಧೀಮಂತ ಪತ್ರಕರ್ತರು ಮತ್ತು ಸ್ವಾತಂತ್ರ್ಯ ಚಳವಳಿಗೆ ವಿಶೇಷ ಇಂಬು ಕೊಟ್ಟ ಪತ್ರಿಕೆಗಳ ಕುರಿತು ಅರಿವಿನ ಕೊರತೆ ಕೂಡ ಸಾಕಷ್ಟು ಇದೆ.

ಸರ್ವರಾಜ್ಯ ವರ್ತಮಾನಗಳಲ್ಲಿ ಇತರ ರಾಜ್ಯಗಳ ಮತ್ತು ವಿದೇಶಿ ಸುದ್ದಿಗಳು ಸೇರಿದ್ದವು. ಪತ್ರಿಕೆಯ ಕಚೇರಿಯು ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ ಮಂಗಳೂರಿನಲ್ಲಿ ಇದ್ದರೂ ಓದುಗರ ಬಳಗ ನೆರೆಯ ಮುಂಬೈ ಪ್ರಾಂತ್ಯದ ಹಾಗೂ ಮೈಸೂರು ಸಂಸ್ಥಾನಗಳ ಪ್ರದೇಶಗಳಲ್ಲಿ ಹರಡಿಕೊಂಡಿತ್ತು. ಹೀಗಾಗಿ ಈ ಎಲ್ಲ ಪ್ರದೇಶಗಳ ಸಮಾಚಾರಗಳ ಜತೆಗೆ ಇತರ ರಾಜ್ಯಗಳು ಮತ್ತು ವಿದೇಶಗಳ ಸುದ್ದಿಗಳೂ ಈ ಪತ್ರಿಕೆಗಳಲ್ಲಿ ಇರುತ್ತಿದ್ದವು. ಉದಾಹರಣೆಗೆ, ಸಿಂಧು ದೇಶ, ಗ್ವಾಲಿಯರ ದೇಶಕ್ಕೆ ಸಂಬಂಧಪಟ್ಟ ಸುದ್ದಿಗಳು, ಮಳೆಯ ವಿವರ ಇತ್ಯಾದಿಗಳನ್ನು ಕಾಣಬಹುದು. ಅಲ್ಲದೆ, ಕಾಬೂಲ್, ಚೀನಾ ಮುಂತಾದ ದೇಶಗಳ ಸುದ್ದಿಗಳು ಕೂಡ ಪ್ರಕಟವಾಗುತ್ತಿದ್ದವು.

ಅದೇ ರೀತಿ ಪತ್ರಿಕೆಯಲ್ಲಿ ನೀತಿಬೋಧಕ ಕಥೆಗಳು, ಉಪನಿಷತ್ತಿನ ಕಥೆಗಳು, ದಾಸರ ಪದಗಳು ಇತ್ಯಾದಿಗಳೂ ಇರುತ್ತಿದ್ದವು. ಕೆಲವೆಡೆ ದಾಸರ ಪದಗಳು ಮತ್ತು ಸಂಸ್ಕೃತ ಶ್ಲೋಕಗಳನ್ನು ಕೊಟ್ಟು ಅವುಗಳಿಗೆ ಸಮನಾದ ಬೈಬಲ್ ಉಕ್ತಿಗಳನ್ನು ಕೊಡಲಾಗಿದೆ. ಕಿಟ್ಟೆಲ್ ಅವರು ಭಾಷೆ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಬರೆಯುತ್ತಿದ್ದರು. ಆದರೆ, ಈ ಪತ್ರಿಕೆಯ ಎಲ್ಲ ಸಂಚಿಕೆಗಳು ಲಭ್ಯವಿಲ್ಲದ ಕಾರಣ ಅವುಗಳ ಕುರಿತು ಹೆಚ್ಚಿನ ವಿವರಗಳು ತಿಳಿದಿಲ್ಲ. ಇಲ್ಲಿನ ಸುದ್ದಿ ವೈವಿಧ್ಯಗಳನ್ನು ಗಮನಿಸಿದಾಗ ಆಧುನಿಕ ಪತ್ರಿಕೆಯೊಂದರ ಎಲ್ಲ ಗುಣಲಕ್ಷಣಗಳನ್ನು 'ಮಂಗಳೂರ ಸಮಾಚಾರ' ಹೊಂದಿತ್ತು ಎಂಬುದರಲ್ಲಿ ಯಾವ ಸಂಶಯವೂ ಉಳಿಯುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಮೊಗ್ಲಿಂಗ್ ಅವರು ತಮ್ಮ ಸುದ್ದಿ ಪತ್ರಿಕೆ ಮಿಶನರಿ ಚಟುವಟಿಕೆಗಳಿಗೆ ಬಳಕೆಯಾಗದಂತೆ ನೋಡಿಕೊಂಡಿದ್ದರು ಮತ್ತು ಅದರ ಸೆಕ್ಯುಲರ್ ಸ್ವರೂಪ ಕಾಯ್ದುಕೊಂಡಿದ್ದರು.

ಆರಂಭಿಕ ದಿನಗಳಲ್ಲಿ ಕನ್ನಡ ಪತ್ರಿಕಾ ರಂಗಕ್ಕೆ ಸಂಘಟಿತ ಸ್ವರೂಪ ಇರಲಿಲ್ಲ. ಹಾಗಾಗಿ, ಅದು ಕುಂಟುತ್ತಲೇ ಸಾಗಿತ್ತು. ಕಲ್ಲಚ್ಚಿನಲ್ಲಿ ಛಾಪಿಸಲ್ಪಡುತ್ತಿದ್ದ ಮೊದಲ ಸುದ್ದಿ ಪತ್ರಿಕೆ 'ಮಂಗಳೂರ ಸಮಾಚಾರ' ಹದಿನೈದು ಸಂಚಿಕೆಗಳ ಬಳಿಕ ಬಳ್ಳಾರಿಗೆ ಸ್ಥಳಾಂತರಗೊಂಡಿತು. ಅಲ್ಲಿಂದ ಅದು ಆಧುನಿಕ ಮೊಳೆ ಅಚ್ಚಿನ ಮುದ್ರಣ ಯಂತ್ರದಲ್ಲಿ 'ಕಂನಡ ಸಮಾಚಾರ' ಎಂಬ ಹೆಸರಿನಿಂದ ಹೊರಬರುತ್ತಿತ್ತು. ಆದರೆ, ಈ ಪತ್ರಿಕೆ ಸುಮಾರು ಎರಡು ವರ್ಷಗಳ ಬಳಿಕ ಪ್ರಕಟಣೆ ನಿಲ್ಲಿಸಿತು. ಅದಾದ ಬಳಿಕ ಹಲವಾರು ವರ್ಷಗಳ ತನಕ ಹೇಳಿಕೊಳ್ಳುವಂತಹ ಪತ್ರಿಕೆ ಕನ್ನಡದಲ್ಲಿ ಇರಲಿಲ್ಲ. 'ಸುಬುದ್ಧಿ ಪ್ರಕಾಶ' ಎಂಬ ಪತ್ರಿಕೆ ಬೆಳಗಾವಿಯಿಂದ ೧೮೪೯ರಲ್ಲಿ ಹೊರಬರುತ್ತಿತ್ತು ಎಂದು ಹಿರಿಯ ಸಂಶೋಧಕ ಶ್ರೀನಿವಾಸ ಹಾವನೂರ ಹೇಳಿದ್ದಾರೆ.

ಮುಂದೆ, ೧೮೫೭ರಲ್ಲಿ ಮೊಗ್ಲಿಂಗ್ ಅವರೇ ಎರಡನೇ ವಾರ್ತಾ ಪತ್ರಿಕೆ 'ಕಂನಡ ವಾರ್ತಿಕ' ವನ್ನು ಆರಂಭಿಸಿದರು. ಇದರಲ್ಲಿ ಮುಖ್ಯವಾಗಿ ೧೮೫೭ ರ ದಂಗೆಯ ವಿವರಗಳನ್ನು ನೀಡಿರುವುದು ವಿಶೇಷ. ಆದರೆ, ಈ ಪತ್ರಿಕೆ ಕೂಡ ಹೆಚ್ಚು ಕಾಲ ಬಾಳಲಿಲ್ಲ. ಮಂಗಳೂರಿನಲ್ಲಿದ್ದ ಮೊಗ್ಲಿಂಗ್ ಅವರು ತಮ್ಮ ಮಹತ್ವಾಕಾಂಕ್ಷಿ ಸಾಹಿತ್ಯಿಕ ಯೋಜನೆಗಳಲ್ಲಿ ಹೆಚ್ಚು ವ್ಯಸ್ತರಾದುದು ಮತ್ತು ಪತ್ರಿಕೆಯ ಜವಾಬ್ದಾರಿ ಹೊರಲು ಸರಿಯಾದ ವ್ಯಕ್ತಿ ಸಿಗದೇ ಹೋದುದು ಈ ಪತ್ರಿಕೆಯ ಅವಸಾನಕ್ಕೆ ಕಾರಣವಾಯಿತು. ಇದಾದ ಬಳಿಕ ಇನ್ನಿತರ ಕೆಲವು ಮಿಶನರಿಗಳ ನೇತೃತ್ವದಲ್ಲಿ ಕೆಲವಾರು ಪತ್ರಿಕೆಗಳು ವಿವಿಧ ಕಾಲಘಟ್ಟದಲ್ಲಿ ಹೊರಬಂದವು. ಇವುಗಳಲ್ಲಿ 'ಅರುಣೋದಯ' (ಸಂಪಾದಕ ಬಿ. ಎಲ್. ರೈಸ್, ೧೮೬೨), 'ವಿಚಿತ್ರ ವರ್ತಮಾನ ಸಂಗ್ರಹ' (ಫರ್ಡಿನೆಂಡ್ ಕಿಟ್ಟೆಲ್ ಮತ್ತ ಮ್ಯಾಕ್ಸ್, ೧೮೬೨), 'ಇಂಡಿಯ ಮತ್ತು ಅನ್ಯದೇಶಿಕ ವಾರ್ತಿಕ' ಹಾಗೂ 'ಸಭಾಪತ್ರ' (೧೮೬೮) ಪ್ರಮುಖವಾದವುಗಳು.

ಹೀಗೆ ಐರೋಪ್ಯರಿಂದ ಆರಂಭಗೊಂಡ ಸುದ್ದಿ ಪತ್ರಿಕೆಗಳು ಭಾರತದಲ್ಲಿ ಬಹುಬೇಗ ಜನಪ್ರಿಯತೆ ಗಳಿಸಿದವು. ಏಕೆಂದರೆ, ವಿವಿಧ ಪ್ರದೇಶಗಳಲ್ಲಿ ನಡೆಯುವ ಘಟನೆಗಳ ಕುರಿತು

ಬರಹರೂಪದಲ್ಲಿ ಕಾಗದದ ಮೇಲೆ ಅಚ್ಚು ಹಾಕಿಸಿ ವಿತರಿಸುವ ಈ ವಿನೂತನ ವಿಧಾನ ಭಾರತೀಯರ ಮಟ್ಟಿಗೆ ಹೊಸದಾಗಿತ್ತು. ಆರಂಭದಲ್ಲಿ ಕೆಲವು ಸೀಮಿತ ಉದ್ದೇಶದಿಂದ ಶುರುವಾದ ಪತ್ರಿಕೆ ಹೊರಡಿಸುವ ಕಾರ್ಯ ಕ್ರಮೇಣ ಸುಶಿಕ್ಷಿತ ಭಾರತೀಯರ ಗಮನ ಸೆಳೆಯಿತು. ಮೂಲತಃ ವಿದೇಶಿ ಪರಿಕಲ್ಪನೆಯಾಗಿದ್ದ ಪತ್ರಿಕಾರಂಗದ ಸ್ವದೇಶೀಕರಣಕ್ಕೆ ಹೆಚ್ಚಿನ ಸಮಯ ತಗುಲಲಿಲ್ಲ.

ಎಲ್ಲಿಂದಲೋ ಬಂದ ಮಿಶನರಿಗಳು ಇಲ್ಲಿನ ಭಾಷೆ ಕಲಿತು ಪತ್ರಿಕೆ ಹೊರಡಿಸಲು ಸಾಧ್ಯ ಎಂದಾದರೆ, ನಾವೇ ಏಕೆ ಈ ಕೆಲಸಕ್ಕೆ ಕೈ ಹಾಕಬಾರದು? ಎಂದು ಹಲವಾರು ಮಂದಿ ಭಾರತೀಯರೂ ಯೋಚಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಮೇಲಾಗಿ ಆಧುನಿಕ ಮುದ್ರಣ ಯಂತ್ರ ಕೂಡ ಅದಾಗಲೇ ಕೆಲವಾರು ಮಂದಿ ಭಾರತೀಯರ ಕೈಗಾದರೂ ಸಿಕ್ಕಿತ್ತು. ಇಂತಹ ಯೋಚನೆ–ಯೋಜನೆಗಳ ಫಲವಾಗಿ ಅಂದಿನ ಕಾಲದ ಸುಶಿಕ್ಷಿತ ಭಾರತೀಯರ ಪೈಕಿ ಕೆಲವಾರು ಮಂದಿಯಾದರೂ ಮುಂದೆ ಬಂದು ದೇಶದ ವಿವಿಧ ಭಾಗಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳಲ್ಲಿ ಪತ್ರಿಕೆ ಹೊರಡಿಸುವ ಕೈಂಕರ್ಯ ಆರಂಭಿಸಿದರು. ಕನ್ನಡಿಗರೂ ಕೂಡ ಇದಕ್ಕೆ ಹೊರತಾಗಿರಲಿಲ್ಲ.

"ಮುಂದೆ ಕೆಲವೇ ವರ್ಷಗಳಲ್ಲಿ ದೇಶೀಯರು ಪತ್ರಿಕಾರಂಗದಲ್ಲಿ ಕಾಲಿರಿಸಿದುದು ಅಚ್ಚರಿಯೆನಿಸುವಂತಿದೆ. ವಿದೇಶದಿಂದ ಬಂದ ಮಿಶನರಿಗಳು ಮುದ್ರಣ ಸೌಲಭ್ಯವನ್ನು ಹೊಂದಿದವರಾಗಿ ಪತ್ರಿಕೆ ಹೊರಡಿಸಿದ್ದರೆ ಅದು ನ್ಯಾಯವೇ ಆಗಿದೆ. ಆದರೆ, ಮರಾಠಿಯ ಪ್ರಭಾವದಲ್ಲಿ ಇದ್ದುಕೊಂಡು ಕನ್ನಡ ಸಾರಸ್ವತವಾಗಲಿ, ವಾಚಕ ವೃಂದವಾಗಲಿ ಸೃಷ್ಟಿಯಾಗಿರದಿದ್ದಾಗ, ದೇಶಿ ಮುದ್ರಣವು ನೆಲೆಗೊಂಡಿರದಿದ್ದಾಗ ಬೆಳಗಾವಿಯಿಂದ ಕನ್ನಡ ಪತ್ರಿಕೆಯೊಂದನ್ನು ಹೊರಡಿಸಲೆಳಸಿದುದು ಸಾಹಸದ ಮಾತೇ ಸರಿ. ಅಷ್ಟೇ ಅಲ್ಲ ಅದನ್ನು ಕನಿಷ್ಟ ೬ ವರ್ಷಗಳ ವರೆಗಾದರೂ ನಡೆಸಿಕೊಂಡು ಬರಲಾಯಿತು".[೨]

ಹೀಗೆ ದೇಶೀಯ ಕನ್ನಡಿಗರೊಬ್ಬರು ಆರಂಭಿಸಿದ ಮೊದಲ ಪತ್ರಿಕೆಯ ಹೆಸರು 'ಸುಬುದ್ಧಿ ಪ್ರಕಾಶ'. ಇದರ ಪ್ರಕಟಣೆ ಆರಂಭವಾದುದು ೧೮೪೯ರಲ್ಲಿ. ಅಂದರೆ, ಬಾಸೆಲ್ ಮಿಶನರಿಗಳು ಕನ್ನಡದ ಮೊದಲ ಪತ್ರಿಕೆ ಆರಂಭಿಸಿದ ಆರು ವರ್ಷಗಳ ನಂತರ ಇದು ಆರಂಭಗೊಂಡಿತು. ಈ ಪತ್ರಿಕೆ ಕೂಡ ಕಲ್ಲಚ್ಚಿನಲ್ಲಿ ಮುದ್ರಣಗೊಳ್ಳುತ್ತಿತ್ತು. ಸಂಚಿಕೆಗೆ ಕೊಟ್ಟ ನಂಬರನ್ನು ಗಮನಿಸಿದರೆ ಪಾಕ್ಷಿಕ ಪತ್ರಿಕೆಯಿರಬೇಕೆಂದು ತೋರುತ್ತದೆ. ಅದರ ಚಂದಾ ಹಣ ಪ್ರತಿ ಸಂವತ್ಸಕ್ಕೆ ೬ ರೂ. ತಿಂಗಳಿಗೆ ೮ ಆಣೆ. ಆಗಿನ ದಿನಮಾನಕ್ಕೆ ಇದು ಹೆಚ್ಚೆನಿಸಬಹುದಾದರೂ, ಮುದ್ರಣದ ಕಷ್ಟಸಾಧ್ಯತೆಯನ್ನು ಗಮನಕ್ಕೆ ತಂದುಕೊಳ್ಳತಕ್ಕುದು.

ಈ ಪತ್ರಿಕೆಯ ಸಂಚಿಕೆಯೊಂದನ್ನು ಶ್ರೀನಿವಾಸ ಹಾವನೂರರು ಪತ್ತೆ ಹಚ್ಚಿದ್ದು, ಆ ಸಂಚಿಕೆಯಲ್ಲಿ ಅಯೋಧ್ಯೆ, ಮನುಷ್ಯನ ದೀರ್ಘಾಯುಷ್ಯ, 'ಏಜಿಣದ ಮಾರ್ಗ' (ರೈಲ್ವೆ), ಮುಲ್ಕಿ ಖಾತೆಯ ವೃತ್ತಾಂತ ಮತ್ತು ಬಿಡಿ ವಿಷಯಗಳಿವೆ. ಇದರ ವಿಷಯ ಶೈಲಿಯ ದೃಷ್ಟಿಯಿಂದ ಈ ಕೆಳಗಿನ ಅವತರಣಿಕೆಗಳನ್ನು ಪರಿಶೀಲಿಸಬೇಕು.

"ಬಂಗಾಲದೊಳಗೆ ನಡೆದ ಸಾಂಥಲ ಜನರ ಬಂಡು ಇನ್ನು ಪರ್ಯಂತಕ್ಕೆ ಹಾಂಗೆ ನಡೆದಿದೆ. ಮತ್ತು ಯೀ ಬಂಡು ಉತ್ಪನ್ನವಾದ ಯಾವ ಕಾರಣವೇನು ಮೊದಲು ಛಾಪಿಸೋಣದರಲ್ಲಿ ಅದು ಮೃಷಾ ಅದೆ, ಹಾಂಗೆ ತಿಳಿದುಬರುತ್ತದೆ..." ಮತ್ತು ೩"ಶ್ರೀಮಂತರಾದ ಶ್ರೀ ದಾಜಿ ಸಾಹೇಬ ಚಂದ್ರಚೂಡ ಇವರು ತಾರೀಖು ೧೪ ನೇ ಸಪಟಂಬರ ದಿವಸಾ ಮರಣ ಹೊಂದಿದರು. ಅವರ ಮಾತೋಶ್ರೀಯವರ ಹೆಸರ್ಲೆ ೩೦ ಸಾವಿರ ರೂಪಾಯಿದ ಜಾಗೀರ ನಡೆದದೆ".[೩]

ಹಾವನೂರರು ಹೇಳುವಂತೆ, ಮಿಶನರಿಗಳು ಆರಂಭಿಸಿದ ಪತ್ರಿಕೆಗಳಲ್ಲಿ ಸ್ಥಳೀಯ, ರಾಜ್ಯ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಸುದ್ದಿಗಳು, ಕೋರ್ಟು ಖಟ್ಲೆ ವಿಚಾರಗಳು ಇದ್ದರೂ, ಸರಕಾರವನ್ನು ಪ್ರಶ್ನಿಸುವ ಅಥವಾ ಟೀಕಿಸುವ ಪರಿಪಾಠ ಇದ್ದಿರಲಿಲ್ಲ. ಅವುಗಳಲ್ಲಿ ಬ್ರಿಟಿಶರು ಕೈಗೊಂಡ ಆಕ್ರಮಣ, ಗಳಿಸಿದ ಜಯ ಮೊದಲಾದ ವಿವರಗಳು ಇರುತ್ತಿದ್ದವು. ಆದರೆ, ದೇಶೀಯರು ಯಾವಾಗ ಈ ಕ್ಷೇತ್ರಕ್ಕೆ ಕಾಲಿರಿಸಿಬಿಟ್ಟರೋ, ಅಂದಿನಿಂದಲೇ ಬದಲಾವಣೆಯ ಗಾಳಿ ಬೀಸತೊಡಗಿತು. ಸುಬುದ್ಧಿ ಪ್ರಕಾಶದ ಉದಾರಣೆಯನ್ನೇ ಕೊಡುವುದಾದರೆ, ಅದರಲ್ಲಿ ಬಂಗಾಲದ ಪ್ರಸಿದ್ಧ ಸಾಂತಲ ಬುಡಕಟ್ಟಿನ ಬಂಡಾಯದ ಕುರಿತು ಪತ್ರಿಕೆಯಲ್ಲಿ ಸುದ್ದಿ ನೀಡಿರುವುದು ಗಮನಿಸಬೇಕಾದ ಸಂಗತಿ. ಬ್ರಿಟಿಶ್ ಸಾಮ್ರಾಜ್ಯಶಾಹಿಯ ವಿರುದ್ಧ ನಡೆದ ಘಟನೆಯೊಂದರ ವಿವರ ದೂರದ ಕರ್ನಾಟಕದಲ್ಲಿ ನೀಡುವ ಮೂಲಕ ಆ ಕುರಿತು ಇಲ್ಲಿನ ಜನರ ನಡುವೆ ಚರ್ಚೆ ನಡೆಯುವಂತೆ ಈ ಪತ್ರಿಕೆ ಮಾಡಿತ್ತು.

ಬ್ರಿಟಿಷರ ವಿರುದ್ಧ ನಡೆಯುತ್ತಿದ್ದ ಇಂತಹ ಬಂಡಾಯಗಳ ಸುದ್ದಿಗಳನ್ನು ಭಾರತೀಯರ ಮಾಲಕತ್ವದ ಪ್ರಕಟಿಸುತ್ತಿದ್ದುದು ಮುಂದೆ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ಪತ್ರಿಕೆಗಳನ್ನು ನಿಯಂತ್ರಿಸಲು ೧೮೬೧ರ ಪ್ರೆಸ್ ಕೌನ್ಸಿಲ್ ಕಾಯ್ದೆ ಜಾರಿಗೆ ಬರಲು ಕಾರಣವಾಗಿತ್ತು. ಹೀಗೆ, ಸೀಮಿತ ವ್ಯಾಪ್ತಿಯಲ್ಲಾದರೂ ಕೂಡ ಕನ್ನಡ ಪತ್ರಿಕೆಗಳ ಇತರ ವಿಚಾರಗಳ ಜೊತೆಯಲ್ಲಿ ರಾಜಕೀಯ ಜಾಗೃತಿ, ರಾಷ್ಟ್ರೀಯತೆಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸಿದ್ದು ಗಮನಾರ್ಹ. ಆದರೆ, ದೇಶೀಯರು ಹೊರತಂದ ಕನ್ನಡದ ಆರಂಭಿಕ ಪತ್ರಿಕೆಗಳು ಹೆಚ್ಚಿನ ಮಹತ್ವ ನೀಡಿದ್ದು ಶಿಕ್ಷಣ, ಜ್ಞಾನ ಪ್ರಸಾರ ಮತ್ತು ಸಾಮಾಜಿಕ ಜಾಗೃತಿಯ ವಿಚಾರಗಳಿಗೆ.

"ಕನ್ನಡ ಪತ್ರಿಕೋದ್ಯಮದ ಆರಂಭಿಕ ಹೆಜ್ಜೆಗಳಿವು. ೧೮೬೦–೧೮೮೦ರ ಈ ಅವಧಿಯ ಯಾವುದೇ ವರ್ಷದಲ್ಲಿ ೩–೪ ಪತ್ರಿಕೆಗಳಿಗಿಂತ ಹೆಚ್ಚು ಪತ್ರಿಕೆಗಳಿರಲಿಲ್ಲ. ಆದರೆ, ಪತ್ರಿಕೆಯ ಮಹತ್ವ, ಪ್ರಯೋಜನಗಳನ್ನು ಆಗಿನ ಕೆಲವರು ಚೆನ್ನಾಗಿ ಮನಗಂಡು ಆ ದಿಶೆಯಲ್ಲಿ ಪ್ರಯತ್ನಪಟ್ಟರು. ಪತ್ರಿಕಾ ವ್ಯವಸಾಯದ ಧ್ಯೇಯ ಧೋರಣೆಗಳನ್ನು ರೂಪಿಸಿದರು. ಮುಂದಿನ ನವೋದಯ ಕಾಲದ ಪತ್ರಿಕೋದ್ಯಮಕ್ಕೆ ಸೂಕ್ತವಾದ ಹಿನ್ನೆಲೆಯನ್ನು ಒದಗಿಸಿದರು."[೪]

ಈ ಕಾಲಘಟ್ಟದಲ್ಲಿ ನಾಡಿನ ವಿವಿಧ ಭಾಗಗಳಿಂದ ವಿವಿಧ ಹಿನ್ನೆಲೆಯ ವ್ಯಕ್ತಿಗಳು ಪತ್ರಿಕೆಗಳನ್ನು ಹೊರಡಿಸಿದರು. ಅವುಗಳ ಪೈಕಿ ಪ್ರಮುಖವಾದವುಗಳೆಂದರೆ, 'ಮೈಸೂರು ವೃತ್ತಾಂತ ಬೋಧಿನಿ', (೧೮೫೯, ಮೈಸೂರು), ಕರ್ನಾಟಕ ಪ್ರಕಾಶಿಕಾ (ಭಾಷ್ಯಂ ತಿರುಮಲಾಚಾರ್ಯ, ಭಾಷ್ಯಾಚಾರ್ಯ, ೧೮೬೫, ಮೈಸೂರು), ಜ್ಞಾನ ಬೋಧಕ (ವೆಂಕಟರಂಗೋ ಕಟ್ಟಿ, ೧೮೬೧, ಧಾರವಾಡ), ಕನ್ನಡ ಶಾಲಾ ಪತ್ರಕ (ಡೆಪ್ಯೂಟಿ ಚೆನ್ನಬಸಪ್ಪ, ೧೮೬೫, ಬೆಳಗಾವಿ), ಮೈಸೂರ ಗಜೆಟ್ (ಸರ್. ಎಲ್. ರೆಕೆಟ್ಸ್, ೧೮೬೬, ಮೈಸೂರು), ನ್ಯಾಯ ಸಂಗ್ರಹ (ಉಭಯ ಗೋಪಾಲಕೃಷ್ಣಯ್ಯ, ಮಂಗಳೂರು), ಶೋಧಕ (ವೆಂಕಟರಂಗೋ ಕಟ್ಟಿ, ೧೮೭೫), ಕರ್ನಾಟಕ ಜ್ಞಾನಮಂಜರಿ (೧೮೭೪, ಬೆಳಗಾವಿ). ಹೀಗೆ ಹತ್ತೊಂಭತ್ತನೇ ಶತಮಾನದ ಉತ್ತರಾರ್ಧದಲ್ಲಿ ಹಲವಾರು ದೇಶೀಯರು ಪತ್ರಿಕೋದ್ಯಮಕ್ಕೆ ಕಾಲಿರಿಸಿದರು. ಈ ಅಂದಿನ ಕಾಲದಲ್ಲಿ ವಿನೂತನ ಎನಿಸಿದ್ದ ಈ ಮಾಧ್ಯಮ ಹೊಸ ರೂಪ ಆದರೆ ದೇಶೀಯ ಸೊಗಡು ಪಡೆದುಕೊಳ್ಳಲು ಕೂಡ ಕಾರಣಕರ್ತರಾದರು.

ಸಮಕಾಲೀನ ರಾಜಕೀಯ-ಸಾಮಾಜಿಕ ಸ್ಥಿತಿಗತಿಗಳ ಕುರಿತು ಪಕ್ಷಿನೋಟ ಬೀರುವುದು ಅವಶ್ಯನಿಸುತ್ತದೆ. ಅದು ಎಲ್ಲ ದೃಷ್ಟಿಯಿಂದ ವಿಶಿಷ್ಟವಾದ ಕಾಲಘಟ್ಟ. ಭಾರತೀಯ ಪತ್ರಿಕಾರಂಗದ ವಿಚಾರವಾಗಿ ಹೇಳುವುದಾದರೆ, ಈ ಕಾಲಾವಧಿ ಸ್ವಾತಂತ್ರ್ಯ ಚಳವಳಿಯ ಹಲವಾರು ಮಂದಿ ಖ್ಯಾತನಾಮರು ಪತ್ರಿಕೆಗಳನ್ನು ಒಂದು ಸಶಕ್ತ ಜನಮಾಧ್ಯಮವಾಗಿ ಬೆಳೆಸಲು ಶ್ರಮಿಸಿ ಯಶಸ್ವಿಯಾದ ಸಮಯ.

'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಎಂಬ ಐತಿಹಾಸಿಕ ಹೇಳಿಕೆಯಿಂದ ಖ್ಯಾತನಾಮರಾದ ಬಾಲ ಗಂಗಾಧರ ತಿಲಕರು ಹೇಗೆ ಕಾಂಗ್ರೆಸ್ಸನ್ನು ಒಂದು ಪ್ರಖರ ರಾಷ್ಟ್ರೀಯವಾದಿ ಸಂಸ್ಥೆಯನ್ನಾಗಿ ಪರಿವರ್ತಿಸಿದರು ಎಂಬುದು ಇತಿಹಾಸ ಬಲ್ಲವರಿಗೆಲ್ಲ ತಿಳಿದಿರುವ ವಿಚಾರವೇ ಆಗಿದೆ. ಅದೇ ರೀತಿ ಪತ್ರಿಕಾ ಮಾಧ್ಯಮವನ್ನು ಕೂಡ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಇತರ ವಿಷಯಗಳ ಕುರಿತಾಗಿ ಜನಜಾಗೃತಿ ಮೂಡಿಸಲು ಚೆನ್ನಾಗಿ ಬಳಸಿಕೊಂಡು ಇದನ್ನು ಒಂದು ಪರಿಣಾಮಕಾರಿ ಜನಮಾಧ್ಯಮವಾಗಿ ಬೆಳೆಸುವುದರಲ್ಲಿ ಕೂಡ ತಿಲಕರು ಪ್ರಮುಖ ಪಾತ್ರ ವಹಿಸಿದ್ದರು. ಅವರು ಆರಂಭಿಸಿದ್ದ 'ಕೇಸರಿ' ಮತ್ತು 'ಮರಾಠಾ' ಪತ್ರಿಕೆಗಳು ಸ್ವಾತಂತ್ರ್ಯ ಚಳವಳಿ ಮತ್ತು ಸಮಾಜ ಸುಧಾರಣಾ ಚಟುವಟಿಕೆಗಳಲ್ಲಿ ವಹಿಸಿದ್ದ ಪಾತ್ರದ ಕುರಿತು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಜನವರಿ ೪, ೧೮೮೧ ರಂದು ಕೇಸರಿ ಪತ್ರಿಕೆಯಲ್ಲಿ ಪ್ರಕಟವಾದ ಅಗ್ರಲೇಖನವೊಂದರಲ್ಲಿ ಬರೆದಿರುವಂತೆ ಪತ್ರಿಕೆ ಎಂದರೆ ಸರಕಾರಿ ಅಧಿಕಾರಿ ವರ್ಗ ಜನಾಭಿಪ್ರಾಯದ ಕುರಿತು ಸದಾ ಹೆದರಿಕೆ ಹೊಂದಿರುವಂತೆ ಮಾಡುವ ರಾತ್ರಿ ವೇಳೆಯ ಕಾವಲು ನಾಯಿಯಂತೆ. ಆದರೆ. ಪತ್ರಿಕೆಗಳು ಕೆಟ್ಟ ಹಾಗೂ ಅನಾರೋಗ್ಯಕರ ಸಂಗತಿಗಳನ್ನು ಬಯಲು ಮಾಡುವ ಮೂಲಕ

ಸಮಾಜ ಸುಧಾರಣೆ ಮತ್ತು ಜನಸಾಮಾನ್ಯರ ಜೀವನವನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ಕೂಡ ಶ್ರಮಿಸಬೇಕು ಎಂದು ತಿಲಕರು ಬಯಸಿದ್ದರು. ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳ ಜೊತೆಯಲ್ಲಿಯೇ ರಾಜಕೀಯ ವಿಮೋಚನೆಯನ್ನು ಕೂಡ ತಿಲಕರು ಪ್ರತಿಪಾದಿಸಿದ್ದರು. ಇದೇ ಕಾರಣಕ್ಕಾಗಿ ೧೯೦೮ರಲ್ಲಿ ಅವರ ಮೇಲೆ ದಂಗೆಯನ್ನು ಪ್ರಚೋದಿಸಿದ್ದಾರೆ ಎಂಬ ಆರೋಪ ಹೊರಿಸಿ ಆರು ವರ್ಷಗಳ ದೀರ್ಘಾವಧಿ ಸೆರೆಮನೆವಾಸದ ಶಿಕ್ಷೆ ವಿಧಿಸಿ ಬರ್ಮಾ (ಇಂದಿನ ಮ್ಯಾನ್‌ಮಾರ್) ದೇಶದ ಮ್ಯಾಂಡ್ಲೆ ಕಾರಾಗೃಹಕ್ಕೆ ಕಳುಹಿಸಲಾಗಿತ್ತು.

ಇದೇ ಕಾಲಾವಧಿಯಲ್ಲಿ ಗೋಪಾಲಕೃಷ್ಣ ಗೋಖಲೆಯವರಂತಹ ರಾಷ್ಟ್ರೀಯವಾದಿ ನಾಯಕರು ಪತ್ರಕರ್ತರಾಗಿಯೂ ಕಾರ್ಯನಿರತರಾಗಿದ್ದರು. ಪತ್ರಿಕೆಯನ್ನು ಸಶಕ್ತ ಮಾಧ್ಯವನ್ನಾಗಿ ಬಳಸಿಕೊಂಡು ಸಾಮಾಜಿಕ ಮತ್ತು ರಾಜಕೀಯ ಜಾಗೃತಿಯನ್ನು ಮಾಡುತ್ತಿದ್ದರು. ಈ ಕಾಲದಲ್ಲೇ ಇದ್ದ ಇತರ ಹಲವಾರು ಮಂದಿ ರಾಷ್ಟ್ರೀಯವಾದಿಗಳು ಪತ್ರಿಕಾರಂಗದಲ್ಲಿಯೂ ಕೈಯಾಡಿಸಿ ಈ ಮಾಧ್ಯಮವನ್ನು ಹೊಸ ದಿಕ್ಕಿನಲ್ಲಿ ಸಾಗಿಸುತ್ತಲಿದ್ದರು. ಇವರೆಲ್ಲರ ಪ್ರಯತ್ನದ ಫಲವಾಗಿ ಸುದ್ದಿ ಪ್ರಕಟಣೆಗಷ್ಟೇ ಸೀಮಿತವಾಗಿದ್ದ ಪತ್ರಿಕೆಗಳು ಜನಸಾಮಾನ್ಯರ ಆಶೋತ್ತರಗಳನ್ನು ಬಿಂಬಿಸುವ ಶಕ್ತಿಯುತ ಮಾಧ್ಯಮವಾಗಿ ಬೆಳೆಯತೊಡಗಿದವು.

ಭಾರತೀಯರು ಪತ್ರಿಕಾರಂಗಕ್ಕೆ ಕಾಲಿಟ್ಟ ಆರಂಭಿಕ ದಿನಗಳಲ್ಲಿ ಹೆಚ್ಚಾಗಿ ಗಮನ ಹರಿಸಿದ್ದು ಸಾಮಾಜಿಕ ಸುಧಾರಣೆಗೆ ಸಂಬಂಧಿಸಿದ ವಿಚಾರಗಳ ಕುರಿತು. ರಾಜಾ ರಾಮಮೋಹನ್ ರಾಯ್ ಸಂಪಾದಿಸಿದ್ದ ಬಂಗಾಲಿ ಪತ್ರಿಕೆ 'ಸಂಬಾದ ಕೌಮುದಿ' ಮತ್ತು ಇತರ ಸಮಕಾಲೀನ ಪತ್ರಿಕೆಗಳಾಗಿದ್ದ 'ಸೋಮಪ್ರಕಾಶ', 'ರಸ್ತ್ ಗೋಫ್ತಾರ್', 'ದ ಹಿಂದೂ ಪೇಟ್ರಿಯಟ್' ಮೊದಲಾದವುಗಳು ಕೂಡ ಇದೇ ಹಾದಿಯನ್ನು ತುಳಿದಿದ್ದವು. ಕರ್ನಾಟಕದಲ್ಲಿ ಕೂಡ ಇಂತಹದೇ ಪ್ರಯೋಗವನ್ನು ವೆಂಕಟರಂಗೋ ಕಟ್ಟಿಯವರು ಧಾರವಾಡದಲ್ಲಿ 'ಜ್ಞಾನ ಬೋಧಕ'ದ ಮೂಲಕ ಮಾಡಿದ್ದರು. ಆದರೆ, ಇಂತಹ ಸಮಕಾಲೀನ ಪತ್ರಿಕೆಗಳ ಪೈಕಿ ಹಲವು ಪ್ರಕಟಣೆಗಳು ಸಾಮಾಜಿಕ ವಿಷಯಗಳನ್ನು ಚರ್ಚಿಸುವ ಜೊತೆಯಲ್ಲಿಯೇ ಸರಕಾರದ ರೀತಿ-ನೀತಿಗಳನ್ನು ಟೀಕಿಸುವ, ಪ್ರಶ್ನಿಸುವ ಧೈರ್ಯ ಕೂಡ ತೋರಿಸಿದ್ದವು. ಉದಾಹರಣೆಗೆ, ಕೆಲವು ಪತ್ರಿಕೆಗಳು ೧೮೬೦ ರ ಇಂಡಿಗೋ ಬಂಡಾಯವನ್ನು ಬೆಂಬಲಿಸಿ, ತನ್ಮೂಲಕ ಹೋರಾಟಗಾರರ ಸ್ಥೈರ್ಯ ಹೆಚ್ಚಿಸುವ ಮತ್ತು ಸರಕಾರಕ್ಕೆ ಬಿಸಿ ಮುಟ್ಟಿಸುವ ಕೆಲಸ ಮಾಡಿದ್ದವು. ಕನ್ನಡ ಪತ್ರಿಕೆಗಳು ಕೂಡ ಈ ನಿಟ್ಟಿನಲ್ಲಿ ಹಿಂದೆ ಬಿದ್ದಿರಲಿಲ್ಲ. ಕರ್ನಾಟಕದಲ್ಲಿ ಅಂದಿನ ಮೈಸೂರು ರಾಜ್ಯದಲ್ಲಿ ಹೊರಬರುತ್ತಿದ್ದ 'ಕರ್ನಾಟಕ ಪ್ರಕಾಶಿಕಾ' ಎಂಬ ಪತ್ರಿಕೆ ಪುರೋಗಾಮಿ ದೃಷ್ಟಿಕೋನ ಹೊಂದಿದ್ದು, ರಾಜ್ಯದ ಆಡಳಿತವನ್ನು ಟೀಕಿಸುವ ಧೈರ್ಯ ಕೂಡ ತೋರಿಸಿತ್ತು. ಆದರೆ ರಾಜಕೀಯ ಧೋರಣೆಯಿಂದಾಗಿಯೇ ಆ ಪತ್ರಿಕೆ ೧೮೯೬ರ ಹೊತ್ತಿಗೆ ಪ್ರಕಟಣೆ ನಿಲ್ಲಿಸಬೇಕಾಯಿತು.

ಪತ್ರಿಕಾರಂಗದಲ್ಲಿ ಇಂತಹ ಪ್ರಯೋಗಗಳು ಸೀಮಿತ ಪರಿಧಿಯೊಳಗೆ ನಡೆದಿದ್ದರೂ, ಅವುಗಳು ಮುಂದೆ ರಾಜಕೀಯ ಪತ್ರಿಕೋದ್ಯಮ ಬೆಳೆಯಲು ಮತ್ತು ಆ ಮೂಲಕ ನಾಡಿನಲ್ಲಿ ರಾಷ್ಟ್ರೀಯ ಪ್ರಜ್ಞೆ ವೃದ್ಧಿಸಲು ಕಾರಣವಾದವು. ಮುಂದಿನ ದಿನಗಳಲ್ಲಿ ಇದು ಎಂತಹ ಬೆಳವಣಿಗೆ–ಬದಲಾವಣೆಗಳಿಗೆ ಕಾರಣವಾಯಿತೆಂದರೆ, ಪತ್ರಿಕೋದ್ಯಮವು ರಾಷ್ಟ್ರೀಯ ಚಳವಳಿಯ ಒಂದು ಅವಿಭಾಜ್ಯ ಅಂಗವಾಗಿಯೇ ಪರಿಣಮಿಸಿತು. ರಾಷ್ಟ್ರೀಯ ಚಳವಳಿಯ ಪ್ರತಿಯೊಬ್ಬ ನೇತಾರ ಒಬ್ಬ ಪತ್ರಕರ್ತ ಹಾಗೂ ಪ್ರತಿಯೊಬ್ಬ ಪತ್ರಕರ್ತ ರಾಷ್ಟ್ರೀಯ ಚಳವಳಿಯ ಕಾರ್ಯಕರ್ತ ಎನ್ನುವಷ್ಟರ ಮಟ್ಟಿಗೆ ಹೋಯಿತು.

ಈ ಕಾಲಘಟ್ಟವನ್ನು ಕನ್ನಡ ಪತ್ರಿಕೋದ್ಯಮದ ಎರಡನೇ ಹಂತ ಎಂದು ಗುರುತಿಸುವ ಶ್ರೀನಿವಾಸ ಹಾವನೂರರು ಈ ಹಂತದಲ್ಲಿ ಅಂದರೆ ಸುಮಾರು ೧೮೮೦ರ ದಶಕದ ಒಳಹೊರಗಿನ ಕಾಲದಲ್ಲಿ ಪ್ರಕಟವಾದ ಪತ್ರಿಕೆಗಳನ್ನು ಜಾಗೃತಿಯ ಕಾಲದ ಪತ್ರಿಕೆಗಳು ಎಂದು ಗುರುತಿಸಿದ್ದಾರೆ. ಈ ಪತ್ರಿಕೆಗಳ ಮೂಲಕ ಕನ್ನಡ ಪತ್ರಿಕಾ ವ್ಯವಸಾಯವು ಹೊಸ ಮಾರ್ಗವನ್ನು ಹಿಡಿಯಿತು. ಆ ಮಾರ್ಗವೆಂದರೆ, ವಿಚಾರ ಜಾಗೃತಿ, ಸ್ವಂತ ಅಭಿಪ್ರಾಯಗಳ ಅಭಿವ್ಯಕ್ತಿ ಮತ್ತು ರಾಷ್ಟ್ರೀಯ ಮನೋವೃತ್ತಿ. ಹೀಗೆ ಕನ್ನಡ ಪತ್ರಿಕೆಗಳು ಹಿಡಿದ ಈ ಹೊಸ ಹಾದಿ ಮುಂದೆ ಹೆದ್ದಾರಿಯಾಗಿ ಬೆಳೆಯಿತು.

"ಸ್ವತಂತ್ರ ಭಾರತವು ಮೂರು ವರ್ಷದಿಂದ ತನ್ನಿಂದ ರಚಿಸಲ್ಪಟ್ಟ ರಾಜ್ಯಾಂಗವನ್ನುಸರಿಸಿ ಆರಿಸಲ್ಪಟ್ಟ ಅಧ್ಯಕ್ಷನನ್ನು ಹೊಂದಿ ಇತರ ವಿಧಿನಿಯಮಗಳನ್ನು ಚಲಾಯಿಸಲು ಆರಂಭಿಸುವುದು. ಈ ರಾಜ್ಯಾಂಗದಿಂದ ಜನರ ಮೂಲಭೂತ ಹಕ್ಕಾದ ವಾಕ್‌ಸ್ವಾತಂತ್ರ್ಯ ಮುಂತಾದ ನಾಗರೀಕ ಸ್ವಾತಂತ್ರ್ಯಗಳನ್ನು ಭಾರತದ ಎಲ್ಲ ಪ್ರಜೆಗಳಿಗೆ ಭದ್ರಪಡಿಸಲ್ಪಟ್ಟಿರುವುದಲ್ಲದೇ ಸಾಮಾನ್ಯ ಪ್ರಜೆಗೂ ಲಭ್ಯವಾಗಿರುವ ಮಹಾಭಾಗ್ಯವೆಂದರೆ ತನ್ನನ್ನಾಳುವವನನ್ನು ತಾನೇ ಆರಿಸುವ ಅಧಿಕಾರವನ್ನು ಪಡೆಯುವುದು. ಇದಿಲ್ಲದೇ ಇಂದು ಅನುಭವಿಸುತ್ತಿರುವ ಆಹಾರಾಭಾವ, ಅದರ ಬೆಲೆಗಳನ್ನು ಲಕ್ಷಿಸಿದರೆ, ಇದನ್ನು ಮಹಾ ಭಾಗ್ಯವೆಂದೇ ಹೇಳಬಹುದು. ಇಂದು ಪ್ರಾರಂಭವಾಗಿರುವ ಪ್ರಜಾರಾಜ್ಯವು ನಿಜವಾಗಿಯೂ ಯಶಸ್ವಿಯಾಗಬೇಕಾದರೆ, ಪ್ರತಿಯೊಬ್ಬ(ಮತದಾರ) ಪ್ರಜೆಯು ತನ್ನ ಹೊಣೆಯನ್ನರಿತು, ಕೂಗುಗಳಿಗೂ, ಸುಳ್ಳು ಭರವಸೆಗಳಿಗೂ ಮನಸೋಲದೆ ತನ್ನ ಪ್ರತಿನಿಧಿಯನ್ನಾರಿಸುವುದು ಮತ್ತು ಅವನು ತನ್ನ ಪರವಾಗಿ ನಡೆಸುತ್ತಿರುವ ಆಡಳಿತದ ಉಕ್ತಾಯುಕ್ತತೆಯನ್ನು ಎಚ್ಚರಿಕೆಯಿಂದ ಪರಿಶೀಲಿಸುವುದು".[೫]

"ಇಂದಿನಿಂದ ನಾವನುಭವಿಸುವ ಸ್ವಾತಂತ್ರ್ಯಕ್ಕೆ ಮೂಲಕಾರಣರೆನ್ನಬಹುದಾದ ಮಹಾತ್ಮ ಗಾಂಧಿಯವರೆಂದು– 'ಸ್ವಾತಂತ್ರ್ಯದ ಸತ್ಯ ಸ್ವರೂಪವೆಂದರೆ ಪ್ರತಿ ವ್ಯಕ್ತಿಯ ಸ್ವವಶತ್ವ' ಎಂದು ಪ್ರತಿಯೊಬ್ಬನು ತನ್ನನ್ನು ತಾನು ಹತೋಟಿಗೆ ತಂದುಕೊಂಡನೆಂದರೆ, ದೇಶದ ಹತೋಟಿಯು, ರಾಷ್ಟ್ರದ ಸ್ವವಶತ್ವವು ಸಾಧ್ಯ. 'ರಾಷ್ಟ್ರದ ಪ್ರತಿ ವ್ಯಕ್ತಿಯೂ ಆ ದೇಶದ ಸ್ವಾತಂತ್ರ್ಯದ ಘಟಕ'ವೆಂದೇ

ಅವರ ಅಭಿಪ್ರಾಯವಾಗಿತ್ತು. ವಿಶ್ವ ಶಾಂತಿಗಾಗಿಯಾದರೂ ಈ ಅಭಿಪ್ರಾಯ ಸಲ್ಲುವುದು. ಪ್ರತಿಯೊಬ್ಬನೂ ತನ್ನ ಕಾಮನೆಗಳನ್ನು ಮಿತಿಗೊಳಿಸಬಲ್ಲನಾದರೆ, ಅನ್ಯಾಯವಾಗಿ ಅಸತ್ಯವಾಗಿ, ತನ್ನ ಉಪಭೋಗಕ್ಕೋಸ್ಕರ ಇನ್ನೊಬ್ಬರ ಬೆವರಿನ ಮೇಲೆ ಮತ್ತೊಬ್ಬರ ಸ್ವತ್ತಿನ ಮೇಲೆ ಆಶಿಸುವುದನ್ನು, ಆದರಿಸುವುದನ್ನು ಬಿಟ್ಟನಾದರೆ ಮಾನವ ಲೋಕದಲ್ಲಿ ಶಾಂತಿ ಸ್ಥಾಪನೆಯು ಖಂಡಿತ ಸಾಧ್ಯವಾದೀತು".[೬]

"ಗಾಂಧೀಯವರು ತೋರಿದ ಈ ಹಾದಿಯಲ್ಲಿ ಸ್ವಾತಂತ್ರ್ಯವನ್ನು ಗಳಿಸಿದ ನಾವು ಈ ಸ್ವಾತಂತ್ರ್ಯವನ್ನು ಅವರದೇ ಕನಸಾದ ವಿಶ್ವಶಾಂತಿಯನ್ನು ಸಾಧಿಸಲು ಉಪಯೋಗಿಸಿಕ್ಕೊಂಡೆವಾದರೆ ಅದಕ್ಕಿಂತ ಮಿಗಿಲಾದ ಕಾಣಿಕೆಯನ್ನು ನಾವು ಗಾಂಧೀಜಿಯವರಿಗೆ ಅರ್ಪಿಸಬೇಕಾದ್ದಿರುವುದಿಲ್ಲ. ಗಾಂಧಿಯವರ ಮೂರ್ತಿಮಂತ ಸ್ವರೂಪವೇ ಈ ರಾಜ್ಯಾಂಗವೆಂದು ಡಾ॥ ರಾಜೇಂದ್ರ ಪ್ರಸಾದರು ಹೇಳಿದ್ದು ಆಗ ಸಾರ್ಥಕವಾಗುವುದು".[೭] ಈ ರೀತಿಯಾಗಿ ವಿಶ್ವಕರ್ಮಾ ಪತ್ರಿಕೆಯ ಸಂಪಾದಕೀಯಗಳ ವಿಷಯಗಳು ಕೇವಲ ವಿಶ್ವಕರ್ಮ ಸಮುದಾಯಕ್ಕೆ ಸೀಮಿತವಾಗಿರದೇ ರಾಷ್ಟ್ರೀಯ ವಿಷಯಗಳಿಗೆ ಆದ್ಯತೆ ನೀಡಿರುವುದನ್ನು ಇಲ್ಲಿ ಕಾಣುತ್ತೇವೆ.

ಭಾರತದಲ್ಲಿ ಪತ್ರಿಕಾ ಮಾಧ್ಯಮ ಪರಿಚಯಿಸಲ್ಪಟ್ಟಿದ್ದು ಐರೋಪ್ಯರ ಮೂಲಕ. ಮೊದಲು ಕೆಲವು ಖಾಸಗಿ ವ್ಯಕ್ತಿಗಳು ಇಲ್ಲಿ ಪತ್ರಿಕೆಗಳನ್ನು ಹೊರಡಿಸುವ ಸಾಹಸಕ್ಕೆ ಕೈ ಹಾಕಿದ್ದರೆ, ಬಳಿಕ ಐರೋಪ್ಯ ಕ್ರೈಸ್ತ ಮಿಶನರಿಗಳು ಈ ಕಾರ್ಯ ಕೈಗೆತ್ತಿಕೊಂಡರು ಮತ್ತು ದೇಶೀಯ ಭಾಷೆಗಳಲ್ಲಿ ಪತ್ರಿಕೆಗಳನ್ನು ಹೊರಡಿಸಲು ಆರಂಭಿಸಿದರು. ಕನ್ನಡ ಪತ್ರಿಕಾರಂಗ ಈ ಮಾತಿಗೆ ಹೊರತಲ್ಲ. ಬಹುತೇಕ ಭಾರತೀಯ ಭಾಷೆಗಳ ಹಾಗೆ ಕನ್ನಡದಲ್ಲೂ ಪತ್ರಿಕೆಗಳನ್ನು ಪರಿಚಯಿಸಿದ ಶ್ರೇಯಸ್ಸು ಐರೋಪ್ಯ ಮಿಶನರಿಗಳಿಗೆ ಸಲ್ಲುತ್ತದೆ. ಜರ್ಮನ್ ಭಾಷಿಕ ಬಾಸೆಲ್ ಇವ್ಯಾಂಜಲಿಕಲ್ ಮಿಶನ್ (ಬಿ.ಇ.ಎಂ.) ಎಂಬ ಕ್ರೈಸ್ತ ಧರ್ಮ ಪ್ರಸಾರ ಮಂಡಳಿಗೆ ಸೇರಿದ್ದ ರೆವರೆಂಡ್ ಹರ್ಮನ್ ಮೊಗ್ಲಿಂಗ್ ಜುಲೈ ೧, ೧೮೪೩ ರಂದು ಮಂಗಳೂರಿನಿಂದ 'ಮಂಗಳೂರ ಸಮಾಚಾರ' ಎಂಬ ಪತ್ರಿಕೆ ಹೊರಡಿಸುವುದರ ಮೂಲಕ ಕನ್ನಡ ಪತ್ರಿಕಾರಂಗಕ್ಕೆ ಚಾಲನೆ ನೀಡಿದರು.

ಕನ್ನಡ ಪತ್ರಿಕಾರಂಗದ ಜನಕ ಹರ್ಮನ್ ಮೊಗ್ಲಿಂಗ್ ಮತ್ತು ಇತರ ಜರ್ಮನ್ ಮಿಶನರಿಗಳು ಇಲ್ಲಿಗೆ ಬಂದಿದ್ದು ಧರ್ಮ ಪ್ರಸಾರದ ಉದ್ದೇಶದಿಂದ ಎಂಬುದು ನಿಜ. ಆದರೆ, ಅವರೆಲ್ಲ ಕ್ರೈಸ್ತ ಧರ್ಮದ ಪಂಡಿತರು ಆಗಿರುವ ಜೊತೆಯಲ್ಲಿ ಅಂದಿನ ಕಾಲದ ಯುರೋಪಿನ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲಿ ಆಧುನಿಕ ಶಿಕ್ಷಣ ಪಡೆದವರೂ ಆಗಿದ್ದರು. ಅದಾಗಲೇ ಯುರೋಪಿನಲ್ಲಿ ಪತ್ರಿಕಾ ರಂಗ ಬೆಳೆದು ಸಮಾಜದಲ್ಲಿ ಜನಾಭಿಪ್ರಾಯ ಮೂಡಿಸುವ ಮತ್ತು ಜನರಲ್ಲಿ ಜಾಗೃತಿ ಉಂಟು ಮಾಡುವ ಒಂದು ಪ್ರಬಲ ಮಾಧ್ಯಮವಾಗಿ ಬೆಳೆದಿತ್ತು. ಹಾಗಾಗಿ, ಪತ್ರಿಕೆಯ ಮಹತ್ವ, ಅದು ಜನಮಾನಸದ ಮೇಲೆ ಬೀರುವ ಪ್ರಭಾವ ಮತ್ತು ಅದರಿಂದ ಉಂಟಾಗುವ ಪರಿಣಾಮಗಳ ಕುರಿತು ಅವರಿಗೆ ಚೆನ್ನಾಗಿ ಅರಿವಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಯುರೋಪ್‌ನಲ್ಲಿ ಆವಿಷ್ಕಾರಗೊಂಡಿದ್ದ ಆಧುನಿಕ ಮುದ್ರಣ ವ್ಯವಸ್ಥೆಯ ಅನುಕೂಲವೂ ಅವರಿಗೆ ಇತ್ತು.

ಮೊಗ್ಲಿಂಗ್ ಆರಂಭಿಸಿದ್ದ ಮೊದಲ ಸುದ್ದಿ ಪತ್ರಿಕೆ ಹದಿನೈದು ದಿನಗಳಿಗೆ ಒಮ್ಮೆ ಹೊರಡುತ್ತಿದ್ದ ಪಾಕ್ಷಿಕವಾಗಿತ್ತು. ಈ ಸುದ್ದಿ ಪತ್ರಿಕೆ ಎಲ್ಲ ದೃಷ್ಟಿಯಿಂದಲೂ ಮಹತ್ವಪೂರ್ಣವಾದುದು. ಮೊದಲನೆಯದಾಗಿ, ಒಂದು ಪತ್ರಿಕೆ ಹೇಗಿರಬೇಕು ಎಂಬ ಕುರಿತು ಮೊಗ್ಲಿಂಗ್ ಸ್ಪಷ್ಟ ಕಲ್ಪನೆ ಹೊಂದಿದ್ದರು ಮತ್ತು ಅದಕ್ಕೆ ಅನುಗುಣವಾಗಿಯೇ ಪತ್ರಿಕೆಯನ್ನು ಹೊರತಂದಿದ್ದರು. ಅವರ ಜನಪರ ಕಾಳಜಿ, ಸಮಾಜಮುಖಿ ಚಿಂತನೆಗಳು ಪ್ರಥಮ ಆವೃತ್ತಿಯಲ್ಲಿಯೇ ವ್ಯಕ್ತವಾಗಿವೆ. ಸಮಾಚಾರ ಪತ್ರಿಕೆಯೊಂದನ್ನು ಪ್ರಕಟಿಸುವ ಉದ್ದೇಶವನ್ನು ಮೊಗ್ಲಿಂಗ್ ಅವರು ಈ ರೀತಿ ಹೇಳಿದ್ದಾರೆ:

"ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂದಿನ ಪರಿಯಂತರ ಹೊರಗಿನ ದೇಶಸ್ಥರ ಸಮಾಚಾರ ಮಾರ್ಗ ಮರ್ಯಾದೆಗಳನ್ನು, ತಿಳಿಯದೆ ಕಿಟಕಿಯಿಲ್ಲದ ಬಿಡಾರದಲ್ಲಿ ಉಳಕೊಳ್ಳುವವರ ಹಾಗೆ ಯಿರುತ್ತಾ ಬಂದರು. ಅದು ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ವೊಳಗೆ ಸ್ವಲ್ಪ ಬೆಳಕು ಬೀರುವ ಹಾಗೆಯೂ ನಾಲ್ಕು ದಿಕ್ಕಿಗೆ ಕಿಟಕಿಗಳನ್ನು ಮಾಡುವ ಈ ಸಮಾಚಾರ ಕಾಗದವನ್ನು ಪಕ್ಷಕ್ಕೆ ವೊಂದು ಸಾರಿ ಸಿದ್ಧ ಮಾಡಿ ಅದನ್ನು ಓದಬೇಕೆಂದಿರುವವರೆಲ್ಲರಿಗೆ ಕೊಟ್ಟರೆ ಕಿಟಕಿಗಳನ್ನು ಮಾಡಿದ ಹಾಗಿರುವುದು".[೮] ಕನ್ನಡ ಪತ್ರಿಕೆಗಳ ಪ್ರಕಟಣೆಯ ಇತಿಹಾಸವನ್ನು ಗಮನಿಸಿದರೆ ಡಾ. ಶ್ರೀನಿವಾಸ ಹಾವನೂರ ಅವರು ತಮ್ಮ ಹೊಸಗನ್ನಡ ಅರುಣೋದಯ ಎಂಬ ಸಂಶೋಧನಾ ಪ್ರಬಂಧದಲ್ಲಿ ಕ್ರಿ.ಶ. ೧೮೫೯ರಲ್ಲಿ ಮೈಸೂರಿನಿಂದ ಪ್ರಕಟವಾದ 'ವೃತ್ತಾಂತ ಬೋಧಿನಿ' ಕರ್ನಾಟಕದ ಮೊಟ್ಟಮೊದಲ ಪತ್ರಿಕೆ ಎಂದು ಹೇಳಿದ್ದಾರೆ. ಆದರೆ ಅವರ ನಿರ್ಣಯ ತಪ್ಪಾದುದು. ಅದಕ್ಕೂ ಒಂಬತ್ತು ವರುಷಗಳ ಮೊದಲೆ ಅಂದರೆ ೧೮೫೦ರಲ್ಲಿ 'ಸುಬುದ್ಧಿ ಪ್ರಕಾಶ' ಎಂಬ ಪತ್ರಿಕೆ ಬೆಳಗಾವಿಯಿಂದ ಪ್ರಕಟವಾಗುತ್ತಿತ್ತು. ಇದು ಬೆಳಗಾವಿಗೆ ಒಂದು ಹೆಮ್ಮೆ. ಕರ್ನಾಟಕದ ಮೊಟ್ಟಮೊದಲ ಕನ್ನಡ ಭಾಷಾ ಪತ್ರಿಕೆಯೊಂದನ್ನು ಬೆಳಗಾವಿಯಲ್ಲಿ ಪ್ರಕಟವಾಗುತ್ತಿತ್ತು ಎಂದರೆ ಅದು ಅಚ್ಚಗನ್ನಡ ಪ್ರದೇಶವಾಗಿತ್ತೆಂಬುದಕ್ಕೆ ನಿಚ್ಚಳ ನಿದರ್ಶನವೆನಿಸಿದೆ.

'ವೃತ್ತಾಂತ ಬೋಧನಿ' 'ಸುಬುದ್ಧಿ ಪ್ರಕಾಶ' ಪತ್ರಿಕೆಗಳ ಸಾಧನೆ ಅಷ್ಟೇನೂ ಪರಿಣಾಮಕಾರಿಯಾಗಿರಲಿಲ್ಲ. ಆದರೆ ೧೮೬೫ರಲ್ಲಿ ಮೊಟ್ಟಮೊದಲು ಲಿಂಗಾಯತ ಸಮುದಾಯದ ಹಿರಿಯ ಮುಖಂಡರಾದ ಡೆಪ್ಯೂಟಿ ಚೆನ್ನಬಸಪ್ಪನವರು ಪ್ರಕಟಿಸಿದ 'ಮಠ' ಪತ್ರಿಕೆ ಇಂದಿಗೂ ಜೀವಂತವಾಗಿರುವುದು ಒಂದು ದೊಡ್ಡ ಇತಿಹಾಸವಾಗಿದೆ. (ಮಠ ಪತ್ರಿಕೆ ಕಾಲಕಾಲಕ್ಕೆ ತನ್ನ ಸ್ವರೂಪ ವಿನ್ಯಾಸ ಹೆಸರಿನೊಂದಿಗೆ ಬದಲಾವಣೆ ಹೊಂದುತ್ತ ಇಂದು ಜೀವನ ಶಿಕ್ಷಣ ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿದೆ)

ಕನ್ನಡ ಕುಲದೀಪಕರಾದ ಡೆಪ್ಯೂಟಿ ಚೆನ್ನಬಸಪ್ಪನವರ ಪೂರ್ವಜರು ಬೆಳಗಾವಿ ಜಿಲ್ಲೆಯ ಗೋಕಾಕದವರು. ಚೆನ್ನಬಸಪ್ಪನವರು ಬೆಳಗಾವಿಗೆ ಎಜ್ಯುಕೇಶನಲ್ ಇನ್ಸಪೆಕ್ಟರ್ ಆಗಿ ಬಂದ

ನಂತರ ಮಾಡಿದ ಮೊಟ್ಟ ಮೊದಲ ಕೆಲಸ ಲಿಂಗಾಯತ ಬಡವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದು ಮತ್ತು ಕನ್ನಡ ಭಾಷಾ ಅಭಿವೃದ್ಧಿಯನ್ನು ಮಾಡುವುದು. ಇವುಗಳಿಗೆ ಪೂರಕವಾಗಿ 'ಮಠ' ಪತ್ರಿಕೆಯನ್ನು ಪ್ರಾರಂಭಿಸಿದರು. ಮಠ ಪತ್ರಿಕೆಯ ಮೊಟ್ಟಮೊದಲ ಸಂಚಿಕೆ೧೮೬೫ ಜೂನ ತಿಂಗಳಲ್ಲಿ ಪ್ರಾರಂಭವಾಯಿತು. ಮೊದಲ ಸಂಚಿಕೆಯಲ್ಲಿ ಅವರು ಹೇಳಿದ ಮಾತುಗಳನ್ನು ಕೇಳಿದರೆ ಮಠ ಪತ್ರಿಕೆಯ ಉದ್ದೇಶದ ವಿವರಗಳು ಸ್ಪಷ್ಟವಾಗಿ ಗೋಚರಿಸುತ್ತವೆ:

'ಈ ಕರ್ನಾಟಕ ಸೀಮೆಯಲ್ಲಿ ಶುದ್ಧವಾದ ಕನ್ನಡ ಭಾಷೆಯ ವಿಸ್ತಾರವು ಆಗತಕ್ಕದೆಂಬುದಾಗಿ ಸಾರಾಸಾರ ವಿಚಾರವುಳ್ಳ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ದೊರೆಗಳು ಆಲೋಚನೆ ಮಾಡುವವರಾಗಿ ಕೆಲವು ಸಂವತ್ಸರಗಳ ಕೆಳಗೆ ಈ ಸೀಮೆಯ ಜನರಿಗಾಗಿ ಕನ್ನಡ ಭಾಷೆಯಲ್ಲಿ 'ಕನ್ನಡ ಜ್ಞಾನಬೋಧಕ'ವೆಂದು ಒಂದು ಮಾಸಿಕ ಪತ್ರಿಕೆಯನ್ನು ಪ್ರಸಿದ್ಧಮಾಡಲು ಅಪ್ಪಣೆಸಿದ್ದ ಪ್ರಕಾರ, ಸನ್ ೧೮೬೨ನೆ ಇಸ್ವಿ ಮೇ ತಿಂಗಳ ವರೆಗೂ ಧಾರವಾಡ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟು ಚೆನ್ನಾಗಿ ಸಾಗುವಂಥದ್ದಾಯಿತು. ಆ ಕ್ರಮವು ಕೆಲವು ಅಡ್ಡಿಗಳುಂಟಾಗಿ ನಷ್ಟವಾದದ್ದರಿಂದ ದೊರೆಗಳು 'ವಿಚಿತ್ರ ವರ್ತಮಾನ ಸಂಗ್ರಹ'ವೆಂದು ಒಂದು ಸಮಾಚಾರ ಪತ್ರಿಕೆಯನ್ನು ತಿಂಗಳಿಗೆರಡಾವರ್ತಿ ಛಾಪಿಸಿ ತರಿಸುವ ಬಗ್ಗೆ ಬೆಂಗಳೂರಿನಲ್ಲಿ ಇರುವ ಅಚ್ಚು ಹಾಕುವವರಿಗೆ ಬರೆದು ಕಳುಹಿಸಲಾಗಿ ಅವರದಕ್ಕೆ ಒಡಂಬಟ್ಟಿದ್ದರಿಂದ ಒಂದೆರಡು ವರ್ಷಗಳ ಮಟ್ಟಿಗೂ ಅಂದರೆ ಅಂದಿನಿಂದ ಸನ್ ೧೮೬೩ನೇ ಇಸವಿ ಡಿಸೆಂಬರ ತಿಂಗಳವರೆಗೂ ಚೆನ್ನಾಗಿ ಸಾಗುವಂಥದ್ದಾಯಿತು. ಅನಂತರದಲ್ಲಿ ಆ ಅಚ್ಚಿನವರು ತಮ್ಮ ಆದಾಯಕ್ಕೂ ವೆಚ್ಚಕ್ಕೂ ಸರಿ ಬೀಳುವುದಿಲ್ಲ ತಂಮಿಂದಾ ಕ್ರಮವು ನಡಿಸಲಾಗದು ಎಂದು ಹೇಳುವಂಥವರಾಗಿ ಬಿಟ್ಟುಬಿಟ್ಟರು. ಆದ್ದರಿಂದ ಬೆಳಗಾವಿಯಲ್ಲಿ ಇತ್ತಲಾಗಿ ನಿರ್ಮಾಣವಾದ 'ಸಮಾಚಾರ' ಅಚ್ಚಿನಲ್ಲಿ ಕೇವಲ ಪೂರ್ವದಲ್ಲಿ ಪ್ರಕಟಿಸುತ್ತಿರುವ 'ಕನ್ನಡ ಜ್ಞಾನಬೋಧಕ'ವು ಮರಳಿ ಪ್ರಕಟಿಸಬೇಕೆಂದು ದೊರೆಗಳು ಅಪ್ಪಣೆ ಮಾಡಿದರು. ಆ ಪ್ರಕಾರ ಇಂದಿನ ಪರಿಯಂತರಕ್ಕೂ ಅನುಕ್ರಮವು ನಡೆಯಿತು. ವರ್ತಮಾನ ಕಾಲದಲ್ಲಿ ಅಚ್ಚಿನ ವೆಚ್ಚಕ್ಕೂ ಆದಾಯಕ್ಕೂ ಬಹಳ ಹೆಚ್ಚು ಕಡಿಮೆಯಾಗಿರುವುದನ್ನು ಕಂಡು ಈ 'ಜ್ಞಾನಬೋಧಕ'ವೆಂಬ ಪತ್ರಿಕೆ ಮುಂದಕ್ಕೆ ಸಾಗಿಸುವುದಕ್ಕೆ ಮಾರ್ಗವಿಲ್ಲ. ಅದಕ್ಕಾಗಿ ಈ ಕ್ರಮವನ್ನು ಬಿಟ್ಟುಕೊಟ್ಟು ಇದಕ್ಕೆ ಬದಲಾಗಿ ಮಠಗಳಿಗೋಸ್ಕರ (ಅಂದರೆ ಶಾಲೆಗಳಿಗೆ) ಒಂದು 'ಮಠ' ಪತ್ರಿಕೆಯನ್ನು ತಿಂಗಳಿಗೊಂದಾವರ್ತಿ ಛಾಪಿಸುವುದು ಲೇಸಾಗಿ ಕಾಣಿಸುತ್ತದೆಂದು, ಮೇ. ಲಿಟಲ್ ಸಾಹೇಬ ಬಹದ್ದೂರ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್‌ರು ಮೇ. ಹರ್ವರ್ಡ ಸಾಹೇಬ ಬಹದ್ದೂರ ಡೈರೆಕ್ಟರ್ ಆಫ್ ಪಬ್ಲಿಕ ಇನ್‌ಸ್ಟ್ರಕ್ಶನ್ ಇವರಿಗೆ ಬರೆದು ಕಳುಹಿಸಿದ್ದರಿಂದ, ಈ ಸಲೆ ಸೊಗಸಾಲೋಚನೆಗೆ ಮೆಚ್ಚಿ, ಅದರಂತೆ ಮಾಡಿ ಎಂದು ಅಪ್ಪಣೆ ಕೊಡುವಂಥವರಾದರು. ಅದಕ್ಕಾಗಿ ಅವರ ಅಪ್ಪಣೆಯ ಪ್ರಕಾರ ಇಗ್ಗೆ ನೂತನವಾಗಿ ಈ ಮಾಸಿಕ 'ಮಠಪತ್ರಿಕೆ'ಯನ್ನು ಪ್ರಸಿದ್ಧಿಯಾಗಿ ಮಾಡಿರುತ್ತದೆ'.

ಚೆನ್ನಬಸಪ್ಪನವರು ಮಠ ಪತ್ರಿಕೆಯ ಮೊಟ್ಟ ಮೊದಲ ಸಂಪಾದಕರು. ಅವರು ಹಾಕಿಕೊಟ್ಟ ಪತ್ರಿಕಾ ಬೀಜಗಳು ವಿಸ್ತಾರ ವಿಸ್ತಾರೋನ್ನತವಾಗಿ ಬೆಳೆಯಿತು ಎಂಬುದು ಇಂದು ಇತಿಹಾಸ.

ಮೊಗ್ಲಿಂಗ್ ಅವರ ಪ್ರಯತ್ನ ಬ್ರಿಟಿಷ್ ಆಡಳಿತ ವ್ಯವಸ್ಥೆಯ ಕುರಿತಾದ ವರದಿಗಳನ್ನು ನೀಡುವುದಾಗಿದ್ದರೆ, ಡೆಪ್ಯೂಟಿಯವರ ಮಠ ಪತ್ರಿಕೆಯು ಶಿಕ್ಷಣಕ್ಕೆ ಸಂಬಂಧಿಸಿದ ಜಾಗೃತಿಯನ್ನುಂಟು ಮಾಡುವುದಾಗಿತ್ತು. ಆದರೆ ಬಲಾಢ್ಯ, ಮುಂದುವರಿದ ಸಮುದಾಯಗಳು ತಮ್ಮ ತಮ್ಮ ಸಮಾಜದ ಅಭಿವೃದ್ಧಿಗಾಗಿ ಪತ್ರಿಕೆಗಳನ್ನು ಪ್ರಾರಂಭಿಸಿದವು. ಅದರಲ್ಲಿ ಲಿಂಗಾಯತ ಸಮುದಾಯದವರು ಪ್ರಥಮಾಧ್ಯರು. ೧೮೭೦ರ ಸುಮಾರಿಗೆ ಧಾರವಾಡದಲ್ಲಿ ಹೊನ್ನಾಪುರಮಠರು ಚಂದ್ರೋದಯ ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು.

ಧಾರವಾಡದ ಧೀಮಂತ ವ್ಯಕ್ತಿಯೆನಿಸಿದ್ದ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ (ಮೊದಲು ಕೆಲವು ಕಾಲ ಅವರ ತಂದೆ ಹುಚ್ಚಯ್ಯ ಸಂಗಪ್ಪಯ್ಯ ವಿಭೂತಿ ಅವರಿಂದ) ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ ಈ ಪ್ರಬುದ್ಧ ಪತ್ರಿಕೆ ಕನ್ನಡ ಪತ್ರಿಕಾರಂಗದಲ್ಲಿ ಹೊಸ ಮನ್ವಂತರದ ಆರಂಭಕ್ಕೆ ಶ್ರೀಕಾರ ಹಾಕಿತು. ಆನೆ ತುಳಿದ್ದೇ ಹಾದಿ ಎಂಬಂತೆ ಚಂದ್ರೋದಯ ಪತ್ರಿಕೆಯ ಮೂಲಕ ಆರಂಭಗೊಂಡ ಈ ಹೊಸ ಸಂಪ್ರದಾಯ ಮುಂದೆ ನಾಡಿನ ಇತರ ಭಾಗಗಳ ಪತ್ರಿಕೆಗಳನ್ನು ಬಹುವಾಗಿ ಪ್ರಭಾವಿಸಿತು ಮತ್ತು ಅವರ ಧ್ಯೇಯ, ಧೋರಣೆಗಳನ್ನು ಬದಲಾಯಿಸಿತು. ಈ ಬದಲಾವಣೆ ಮುಂದೆ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕವೂ ಮುಂದುವರಿಯಿತು. ಈ ಪತ್ರಿಕೆಯಿಂದ ಪ್ರೇರಣೆ ಪಡೆದ ಹಲವಾರು ಸುಶಿಕ್ಷಿತರು ಮುಂದೆ ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯ ಚಳುವಳಿಯನ್ನು ಬೆಂಬಲಿಸುವುದನ್ನೇ ಪರಮ ಧ್ಯೇಯವಾಗಿರಿಸಿ ನಾಡಿನ ವಿವಿಧ ಭಾಗಗಳಲ್ಲಿ ಪತ್ರಿಕೆಗಳನ್ನು ಹೊರಡಿಸಲು ಕಾರಣವಾಯಿತು. ಇದರಿಂದ ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಚಳುವಳಿಯನ್ನು ಇನ್ನಷ್ಟು ಗಟ್ಟಿಗೊಳಿಸಲು ಸಹಾಯಕವಾಯಿತು.

ಸ್ವಾತಂತ್ರ್ಯ ಪೂರ್ವ ಮತ್ತು ನಂತರದ ದಿನಗಳಲ್ಲಿ ಹರಿದು ಹಂಚಿ ಪ್ರಾಂತ್ಯಗಳಾಗಿದ್ದ ಕರ್ನಾಟಕವನ್ನು ಅಖಂಡ ಕರ್ನಾಟಕ ಮಾಡುವ ಸಂಕಲ್ಪವು ವಿಶ್ವಕರ್ಮಾ ಪತ್ರಿಕೆಯು ಎಪ್ಪತ್ತು ದಶಕಗಳ ಹಿಂದೆಯೇ ನಾಡು ನುಡಿಗಾಗಿ ಭಾಷೆ ಮತ್ತು ನೆಲ ಜಲವನ್ನು ಕುರಿತು ಕನ್ನಡಿಗರಲ್ಲಿ ಜಾಗೃತಿ ಮೂಡಿಸಿರುವುದು. "ಕನ್ನಡ ಪ್ರಾಂತ್ಯರಚನೆಯು ಕನ್ನಡಿಗರಿಗೆ ಏಕಮೇವಧ್ಯೇಯ ಮಾತ್ರವಲ್ಲದೇ ಅದು ಕೂಡಲೇ ಅಸ್ತಿತ್ವದಲ್ಲಿ ಬರಬೇಕಾಗಿದೆ. ಹರಿದು ಹಂಚಿ ಹೋಗಿರುವ ಕನ್ನಡ ಜನರು ಪ್ರೀತಿಯಿಂದ ಒಂದಾಗಬೇಕಾದರೆ, ಕೇವಲ ಬಡವರಾಗಿ ದಟ್ಟ ದರಿದ್ರರಾಗಿರುವ ಇವರು ಪುಷ್ಟಿಯುತರಾಗಿ ಬೆಳೆಯ ಬೇಕಾದರೆ, ಈಗಿಗಿಂತ ಹೆಚ್ಚಾಗಿ ಭಾರತ ಸೇವೆಯನ್ನು ಉತ್ಸಾಹದಿಂದ ನಡೆಸಬೇಕಾದರೆ ಕನ್ನಡ ಪ್ರಾಂತ್ಯವು ಕೂಡಲೇ ರಚನೆಯಾಗಲೇ ಬೇಕು. ಈ ಸಮಯದಲ್ಲಿ ಸುಮ್ಮನೆ ಕಣ್ಣು ಮುಚ್ಚಿಕೊಂಡು ಭಾವಾವೇಶದಿಂದ ಮಾತನಾಡದೇ, ಪರಿಸ್ಥಿತಿಯನ್ನು ಪೂರ್ಣ ಮನಗಂಡು ವಿಚಾರಮಾಡಿ ತ್ವರಿತವಾಗಿ ಎಲ್ಲರೂ ಸಹಕರಿಸಿ ಕಾರ್ಯ ಮಾಡಬೇಕು-ಸಂಪಾದಕ".

ಪತ್ರಿಕಾ ರಂಗದಲ್ಲಿ ನಡೆಯುತ್ತಿರುವ ಎಲ್ಲಾ ವಿಚಾರಗಳು ನಾಡಿನ ವಿವಿಧ ಸಮುದಾಯಗಳ ಮೇಲೆ ತನ್ನ ಪ್ರಭಾವ ಮತ್ತು ಪ್ರೇರಣೆಗಳುಂಟು ಮಾಡಿದವು. ಇವುಗಳ ಪ್ರೇರಣೆ ಪ್ರಭಾವಗಳಿಗೆ ಒಳಗಾದ ವಿಶ್ವಕರ್ಮ ಸಮುದಾಯವು ಒಂದಾಗಿದೆ. ೧೯೪೮ ರಲ್ಲಿ ವಿಶ್ವಕರ್ಮ ಸಮುದಾಯವು 'ವಿಶ್ವಕರ್ಮಾ' ಎಂಬ ತನ್ನ ಪತ್ರಿಕೆಯಲ್ಲಿ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸುದ್ಧಿಗಳನ್ನು ಪ್ರಸಾರ ಮಾಡಿರುವುದು ಗಮನಿಸಲಾದೆ. ದೊರತಿರುವ ದಾಖಲೆಗಳ ಪ್ರಕಾರ ಇಂಥ ಸಂಕ್ರಮಣ ಕಾಲದಲ್ಲಿ ನಿಜವಾಗಿಯೂ ಮೂಲತಃ ವೈಶ್ವಕರ್ಮ ಬ್ರಾಹ್ಮಣರೆನಿಸಿಕೊಂಡ ಸಮುದಾಯ ಆಧುನಿಕತೆಯ ಹೊಸಗಾಳಿಗೆ ಮೈಕೊಡವಿ ನಿಂತುಕೊಳ್ಳಲು ಪ್ರಾರಂಭಿಸಿದ್ದು ೧೯ ನೇಶತಮಾನದ ಉತ್ತರಾರ್ಧ ಮತ್ತು ೨೦ನೇ ಶತಮಾನದ ಪೂರ್ವಾರ್ಧ ಕಾಲ ಎಂದು ಗುರುತಿಸಲಾಗಿದೆ.

**೨.೨. ಆಂತರಿಕ ಪ್ರೇರಣೆಗಳು :**

ವಿಶ್ವಕರ್ಮರು ಸಾಂಪ್ರದಾಯಿಕ ಕುಶಲಕರ್ಮಿಗಳು. ಇವರು ಕಮ್ಮಾರ, ಬಡಿಗಿ, ಕಂಚುಗಾರ ಶಿಲ್ಪಿ ಮತ್ತು ಸ್ವರ್ಣಕಾರ(ಪತ್ತಾರ) ಎಂದು ಐದು ವೃತ್ತಿಯಿಂದ ಗುರುತಿಸಲ್ಪಟ್ಟಿದ್ದಾರೆ. ವಿಶ್ವಕರ್ಮ ಸಮಾಜ ಭಾರತದ ತುಂಬೆಲ್ಲ ಇದೆ. ಇಡೀ ದೇಶದ ತುಂಬ ಇರುವ ವಿಶ್ವಕರ್ಮ ಜನಾಂಗವನ್ನು ಹಲವು ಪರಿಭಾಷೆಗಳಲ್ಲಿ ಕರೆಯುತ್ತ ಬಂದಿದ್ದಾರೆ. ದಕ್ಷಿಣ ಭಾರತದಲ್ಲಿ ವಿಶ್ವಕರ್ಮ ಜನಾಂಗವನ್ನು ಕಮ್ಮಲಾರ, ಕಂಸಾಲ, ದೇವಕಮ್ಮಲಾರ, ಆಚಾರ್ಯ, ಆಸಾರಿ, ಶಿಲ್ಪಿ, ಪತ್ತಾರ, ಬಡಿಗೇರ, ಅಕ್ಕಸಾಲೆ, ರಥಕಾರ, ಸೋನಾರ್, ಸ್ಥಪತಿ, ಸ್ವರ್ಣಕಾರ, ದೈವಜ್ಞ, ವಿಶ್ವಬ್ರಾಹ್ಮಣ, ತಚ್ಚನ್, ತಟ್ಟನ್, ಕನ್ನನ್, ಕಲ್ತಚ್ಚನ್, ಕೊಲ್ಲನ್, ಪಾಂಚಾಲ ಮುಂತಾದ ಹೆಸರುಗಳಿಂದ ಗುರುತಿಸುತ್ತಾರೆ. ಉತ್ತರ ಭಾರತದಲ್ಲಿ ವಿಶ್ವಕರ್ಮ ಜನಾಂಗವನ್ನು ಲೋಹರ್, ಸೋನಾರ್, ಪಾಂಚಾಲ, ಧೀಮನ್, ಜಾಂಗೀಡ್, ಬಾದಲ್ ಲೋಕಸಬ್ರಾಹ್ಮಿನ್, ನಾರಶಾಂಸ ಬ್ರಾಹ್ಮಿನ್, ಕರ್ಮಟೀಯ ಬ್ರಾಹ್ಮಣ ಮುಂತಾಗಿ ವೃತ್ತಿಮೂಲ ಹೆಸರುಗಳಿಂದ ಕರೆಯುತ್ತಾರೆ. ಹೀಗೆ ಪ್ರಾದೇಶಿಕವಾಗಿ ವಿವಿಧ ಹೆಸರುಗಳಿಂದ ಕರೆಯಲ್ಪಡುವ ವಿಶ್ವಕರ್ಮ ಜನಾಂಗದ ವಿವಿಧ ಪಂಗಡಗಳು ಭಾರತದ ಎಲ್ಲ ರಾಜ್ಯಗಳಲ್ಲಿ ವಾಸಿಸುತ್ತಿದ್ದಾರೆ. ಸಾಂಪ್ರದಾಯಿಕ ಕುಶಲಕರ್ಮಿಗಳು, ಅಲ್ಪಸಂಖ್ಯಾತರಾಗಿದ್ದರೂ ಇವರು ಕಲೆ, ವಾಸ್ತುಶಿಲ್ಪ, ಗೃಹಕೈಗಾರಿಕೆಗಳ ಉನ್ನತೀಕರಣಕ್ಕಾಗಿ ಶ್ರಮಿಸುವಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ.

ವಿಶ್ವಕರ್ಮ ಸಮುದಾಯದ ಮೂಲ ಕುರಿತು ಅನೇಕ ಸಂಶೋಧನೆಗಳು ಜರುಗಿವೆ. ತಾಮ್ರಯುಗ, ಶಿಲಾಯುಗ, ಲೋಹಯುಗಗಳ ಕಾಲದಷ್ಟು ಪ್ರಾಚೀನತೆಗೆ ಇದೆ. ಆ ಕಾಲದಲ್ಲಿಯೇ ಇವರು ತಾಮ್ರ, ಕಂಚು, ಕಬ್ಬಿಣ, ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಕಂಡು ಹಿಡಿದು, ಆ ಲೋಹಗಳನ್ನು ಕರಗಿಸಿ ಆಯುಧ, ಆಭರಣ, ಉಪಕರಣ, ಸಲಕರಣೆ, ಚಕ್ಕಡಿ, ರಥಗಳನ್ನು ನಿರ್ಮಿಸುತ್ತಿದ್ದರು. ಹೀಗೆ ಇವರು ಮನುಷ್ಯ ನಾಗರೀಕತೆ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜ ದೊಡ್ಡ ಸಮುದಾಯವಾಗಿದೆ. ಧಾರ್ಮಿಕವಾಗಿ ಈ ಸಮಾಜದ ಇತಿಹಾಸ ಇನ್ನೂ ದೊಡ್ಡದಾಗಿದೆ. "ವಿಶ್ವಕರ್ಮ ಎಂಬ ಪದವನ್ನು ಹೀಗೆ ವ್ಯಾಖ್ಯಾನಿಸಲಾಗಿದೆ. 'ವಿಶ್ವಂ ಕೃತ್ಸ್ನಂ ಕರ್ಮ ಕ್ರಿಯಾ ವ್ಯಾಪರೋ ಯಸ್ಯಸಃ ವಿಶ್ವಕರ್ಮಾಃ' ವಿಶ್ವದ ಸೃಜನ, ರಕ್ಷಣೆ, ಕ್ರಿಯೆ, ಆಗು ಹೋಗುಗಳು ಯಾವನಿಂದ ಆಗುವವೋ ಅವನೇ ವಿಶ್ವಕರ್ಮನು. ತನ್ನ ಸಂಕಲ್ಪ ಮಾತ್ರದಿಂದಲೇ ಸಕಲವನ್ನು ಸೃಷ್ಟಿಸಿದವನು. ಈತನಿಗೆ ಐದು ಮುಖಗಳು ಸದ್ಯೋಜಾತ, ವಾಮದೇವ, ಆಘೋರ, ತತ್ಪುರುಷ, ಈಶಾನ ಇಂತಹ ವಿಶ್ವಕರ್ಮ ಪರಬ್ರಹ್ಮನನ್ನು ಆರಾಧಿಸಿಕೊಂಡು ಬಂದವರು ವಿಶ್ವಕರ್ಮರು. ಅವರು ಆಚರಿಸಿಕೊಂಡು ಬಂದ ಧರ್ಮವೇ ವಿಶ್ವಕರ್ಮ ಧರ್ಮ. ಮೂಲತಃ ವಿಶ್ವಕರ್ಮರು ಜ್ಞಾನ ಮತ್ತು ಕರ್ಮ ಸಾಧನೆಗಳಲ್ಲಿ ತೊಡಗಿದವರು. ವೇದ, ಉಪನಿಷತ್ತು, ಅರ್ಥಶಾಸ್ತ್ರ, ಶಿಲ್ಪಶಾಸ್ತ್ರ, ಖಗೋಲಶಾಸ್ತ್ರ ಮುಂತಾದವುಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವರು; ವಿಶ್ವಕ್ಕಾಗಿ ಬದುಕನ್ನು ನಡೆಸಿದವರು".[೧೧]

ಶಿಲ್ಪಶಾಸ್ತ್ರದಲ್ಲಿ ವಿಶ್ವಬ್ರಾಹ್ಮಣರ ಕುರಿತಾದ ಉಲ್ಲೇಖಗಳಿವೆ. ಆ ಪ್ರಕಾರ ವಿಶ್ವಬ್ರಾಹ್ಮಣನು ವೇದಾಧ್ಯಯನ ಪರಾಯಣನು, ಸಾಮುದ್ರಿಕಶಾಸ್ತ್ರ, ಜ್ಯೋತಿಷ್ಯಶಾಸ್ತ್ರ ಪಂಡಿತನು, ಲೋಹ ಕಾಷ್ಠ ಪಾಷಾಣಾದಿ ಪಂಚಶಿಲ್ಪಗಳಲ್ಲಿ ಪರಿಣತನು. ಅಗ್ನಿಷ್ಟೋಮಗಳನ್ನು ನಡೆಸಿದವನು. ೬೪ ಕಲೆಗಳಲ್ಲಿ ಪಾರಂಗತನು. ವಾಸ್ತುವಿದ್ಯಾಕೋವಿದನು, ಧರ್ಮನಿಷ್ಠನು, ಅಸಿಕರ್ಮ, ಲಿಪಿಕರ್ಮ, ಕೃಷಿಕರ್ಮ, ಶಾಸ್ತ್ರ ಜೀವನ, ವಾಣಿಜ್ಯ ಕರ್ಮಗಳೆಂಬ ಷಟ್ಕರ್ಮಗಳಲ್ಲಿ ನಿರತನಾದವನು. ವಿಶ್ವಕರ್ಮ ಧರ್ಮದ ತಿರುಳು ಕರ್ಮ. ಕರ್ಮವು ಶ್ರದ್ಧೆಯ ಪೂಜೆಯಾಗಿದೆ. ಇವರ ಕರ್ಮದಲ್ಲಿ ಅದ್ಭುತ ದೈವೀಶಕ್ತೀಯು ಅಡಕವಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಅವರಲ್ಲಿ ಶುದ್ಧ ಆದಾರ, ಗಾಯತ್ರೀ ಜಪ, ಪೂಜೆ ಇತ್ಯಾದಿಗಳಿವೆ. ಕರ್ಮವೇ ಅವರ ಯೋಗ. ಕರ್ಮದ ಮೂಲಕವೇ ಜ್ಞಾನ ಕರ್ಮಗಳ ಸಮನ್ವಯ ರೂಪವೇ ವಿಶ್ವಕರ್ಮರು.

ವಿಶ್ವಬ್ರಾಹ್ಮಣ ಸಂಸ್ಕೃತಿಯು ಬಹಳ ಪ್ರಾಚೀನವಾದುದು. ಇವರಲ್ಲಿ ಬ್ರಹ್ಮಚರ್ಯ ಗೃಹಸ್ಥಾದಿ ಚತುರಾಶ್ರಮಗಳ ಪಾಲನೆಯಿತ್ತು. ಷೋಡಶ ಸಂಸ್ಕಾರಗಳನ್ನು ತಪ್ಪದೆ ಮಾಡುತ್ತ ಬಂದವರು. ಸದಾಚಾರ, ಸದ್ವರ್ತನೆ, ಪರೋಪಕಾರ, ಭೂತದಯೆ, ಕರ್ತವ್ಯನಿಷ್ಠೆ, ವಚನಪಾಲನೆ, ಧರ್ಮಸಹಿಷ್ಣುತೆ ಮುಂತಾದವುಗಳಿಗೆ ಇವರಲ್ಲಿ ಪ್ರಾಶಸ್ತ್ಯವಿತ್ತು. ಇವುಗಳಲ್ಲಿ ನಿಸ್ವಾರ್ಥ ಕರ್ಮ ಮುಖ್ಯವಾದುದು. ಕರ್ಮಯೋಗವೇ ಇವರ ಸಂಸ್ಕೃತಿಯ ಜೀವಾಳ. ಪಂಚವೃತ್ತಿಗಳಿಲ್ಲದೆ ಚಿತ್ರ, ಸಂಗೀತ, ನೃತ್ಯ, ಕಾವ್ಯ ನಾಟಕ ಮೊದಲಾದವುಗಳಲ್ಲಿಯೂ ಪರಿಣಿತರಾಗಿದ್ದರು. ಜ್ಞಾನೋಪಾಸನೆಯಿಂದ ಸಿದ್ಧಿ ಪಡೆದು ಕಲೆಯ ಆರಾಧನೆ ಮಾಡುತ್ತ ಅದಕ್ಕಾಗಿ ಬದುಕನ್ನು ಸವೆಸಿ, ಲೋಕ ಕಲ್ಯಾಣವನ್ನೇ ಮಾಡುತ್ತ ಬಂದಿರುವುದರಿಂದ ಈ ಸಂಸ್ಕೃತಿಯು ಇಂದಿಗೂ ಉಳಿದಿದೆ. ಗ್ರಾಮ ನಗರಗಳಲ್ಲಿ ಅವರವರ ವೃತ್ತಿಗಳ ಜೊತೆಗೆ ಲಲಿತಕಲೆಗಳಿಂದ ರಂಜಿಸಿ ವಿಶ್ವಕರ್ಮರು ಸರ್ವರ ಆದರಕ್ಕೆ ಪಾತ್ರರಾಗಿದ್ದಾರೆ. ಆಧ್ಯಾತ್ಮವಿದ್ಯೆ, ಶಿಲ್ಪಕಲೆ ಭಾರತದಲ್ಲಿ ಇಂದೂ ಶಾಶ್ವತವಾಗಿ ಉಳಿದಮ್ಮು ಬಹುಪಾಲು ವಿಶ್ವಕರ್ಮರಿಂದಲೇ. ಅವರೇ ಈ ಭೂಮಿಯನ್ನು ದೇವಭೂಮಿಯನ್ನಾಗಿ ಮಾಡಿದವರು.

ಇಂಥ ದೊಡ್ಡ ಸಮುದಾಯದ ಕೆಲವು ಪ್ರಜ್ಞಾವಂತ ಜನರು ಪತ್ರಿಕೆಗಳ ಮೂಲಕ ವಿಶ್ವಕರ್ಮ ಧರ್ಮ, ಸಂಸ್ಕೃತಿ, ಸಮಾಜ, ಇತಿಹಾಸ ಮತ್ತು ಸಾಹಿತ್ಯ ಕುರಿತು ಶೋಧಿಸಬೇಕೆಂಬ ಕಾರಣಕ್ಕಾಗಿ ಪತ್ರಿಕೆಗಳನ್ನು ಪ್ರಕಟಿಸಲು ಮನಸ್ಸು ಮಾಡಿದರು. ಈ ಪತ್ರಿಕೆಗಳನ್ನು ಪ್ರಕಟಿಸಲು ಅವರಿಗಿದ್ದ ಸಾಮಾಜಿಕ–ಧಾರ್ಮಿಕ ಒತ್ತಡಗಳೇನು? ಎಂಬುದನ್ನು ಕುರಿತು ಆಲೋಚಿಸಿದರೆ, ಕೆಲವು ಮಹತ್ವದ ಸಂಗತಿಗಳು ತಿಳಿದುಬರುತ್ತವೆ. ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ ಮತ್ತು ರಾಜಕೀಯ ಹಿನ್ನೆಲೆಯಿಂದ ಇದನ್ನು ಅವಲೋಕಿಸಿದರೆ, ಬಹುದೊಡ್ಡ ನಾಗರಿಕ ಸಂಸ್ಕೃತಿಯ ವಾರಸುದಾರರಾದ ವಿಶ್ವಕರ್ಮ ಸಮುದಾಯ ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಿರ್ಲಕ್ಷಿಸಲ್ಪಟ್ಟರು, ಕಡೆಗಣಿಸಲ್ಪಟ್ಟಿದ್ದರು. ತಮ್ಮ ಗತವೈಭವವನ್ನು ಮರಳಿ ಪಡೆಯಬೇಕಾದರೆ ವಿಶ್ವಕರ್ಮರಲ್ಲಿ ಸ್ವಪ್ರಜ್ಞೆಗಳು ಮೂಡಿಬರಬೇಕು, ಯೋಗ್ಯ ಶಿಕ್ಷಣವನ್ನು ಪ್ರತಿಯೊಬ್ಬರೂ ಪಡೆಯುವಂತಾಗಬೇಕು. 'ಉದ್ಧರೇದಾತ್ಮ ನಾತ್ಮಾನಂ' ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಬೇಕು. ಈ ಪ್ರಜ್ಞೆ ಪ್ರತಿಯೊಬ್ಬರಲ್ಲಿ ಮೂಡಿಬರಬೇಕು. ಮತ್ತೊಮ್ಮೆ ವೈಭವೋಪೇತ ಜೀವನವನ್ನು ವಿಶ್ವಕರ್ಮರು ನಡೆಸುವಂತಾಗಬೇಕೆಂಬ ಕಾಳಜಿಯಿಂದ, ಕಳಕಳಿಯಿಂದ ವಿಶ್ವಕರ್ಮ ಸಮಾಜವು ಭಾರತದಾದ್ಯಂತ ಮುಂದಾಗಿದ್ದು ಚಾರಿತ್ರಿಕ ಸಂಗತಿಯಾಗಿದೆ. ಒಂದು ಸಮೀಕ್ಷೆಯ ಪ್ರಕಾರ ಭಾರತ ಬೇರೆ ಬೇರೆ ರಾಜ್ಯಗಳ ಬೇರೆ ಬೇರೆ ಭಾಷೆಯಲ್ಲಿ ಸುಮಾರು ೫೪ ಪತ್ರಿಕೆಗಳು ಪ್ರಕಟವಾಗುತ್ತಿದ್ದು ಮಾಹಿತಿಯಿದೆ.

**ಭಾರತದಲ್ಲಿ ವಿಶ್ವಕರ್ಮ ಹೆಸರಿನಲ್ಲಿ ಪ್ರಕಟವಾಗುತ್ತಿರುವ ಕೆಲವು ಪತ್ರಿಕೆಗಳ ವಿವರ**

| ಸಂ. | ಹೆಸರು | ಪ್ರಕಾರ | ಭಾಷೆ | ಊರು | ರಾಜ್ಯ |
|---|---|---|---|---|---|
| ೧. | ವಿಶ್ವಕರ್ಮವಾಣಿ | ಮಾಸಿಕ | ತೆಲುಗು | ಕರೀಂನಗರ | ಆಂಧ್ರಪ್ರದೇಶ |
| ೨. | ಓಂನಮೋ ವಿಶ್ವಕರ್ಮ | ಮಾಸಿಕ | ತೆಲುಗು | ನಿಜಾಂಬಾದ | ಆಂಧ್ರಪ್ರದೇಶ |
| ೩. | ವಿಶ್ವಕರ್ಮ ಬ್ರಾಹ್ಮಣ | ಮಾಸಿಕ | ಹಿಂದಿ | ಗಯಾ | ಬಿಹಾರ |
| ೪. | ವಿಶ್ವಕರ್ಮಜೋತ | ಪಾಕ್ಷಿಕ | ಗುಜರಾತಿ | ಅಮದಬಾದ | ಗುಜರಾತ |
| ೫. | ವಿಶ್ವಕರ್ಮ ಸಂಕೇತ | ಮಾಸಿಕ | ಹಿಂದಿ | ದೆಹಲಿ | ದೆಹಲಿ |
| ೬. | ವಿಶ್ವಕರ್ಮ ಗೆಜೆಟ್ | ಮಾಸಿಕ | ಹಿಂದಿ | ದೆಹಲಿ | ದೆಹಲಿ |
| ೭. | ವಿಶ್ವಕರ್ಮ ಚೇತನ | ಮಾಸಿಕ | ಹಿಂದಿ | ದೆಹಲಿ | ದೆಹಲಿ |
| ೮. | ವಿಶ್ವಕರ್ಮ ಆಶೀಸ | ಮಾಸಿಕ | ಗುಜರಾತಿ | ರಾಜಕೋಟ | ಗುಜರಾತ |
| ೯. | ವಿಶ್ವಕರ್ಮಲುಹಾರಧರ್ಮ | ಮಾಸಿಕ | ಗುಜರಾತಿ | ರಾಜಕೋಟ | ಗುಜರಾತ |
| ೧೦. | ವಿಶ್ವಕರ್ಮ ಜಗತ್ | ಮಾಸಿಕ | ಗುಜರಾತಿ | ಅಮದಾಬಾದ | ಗುಜರಾತ |

| | | | | | |
|---|---|---|---|---|---|
| ೧೧. | ವಿಶ್ವಕರ್ಮ ವಿಶ್ವ | ಮಾಸಿಕ | ಗುಜರಾತಿ | ರಾಜಕೋಟ | ಗುಜರಾತ |
| ೧೨. | ಶ್ರೀ ವಿಶ್ವಕರ್ಮ ವಂಸಗ | ಮಾಸಿಕ | ಗುಜರಾತಿ | ಅಮದಾಬಾದ | ಗುಜರಾತ |
| ೧೩. | ಶ್ರೀ ವಿಶ್ವಕರ್ಮ ಶಾಸನ | ಮಾಸಿಕ | ಗುಜರಾತಿ | ಅಮದಾಬಾದ | ಗುಜರಾತ |
| ೧೪. | ವಿಶ್ವಕರ್ಮ ಟುಡೆ | ಮಾಸಿಕ | ಗುಜರಾತಿ | ಭಾವನಗರ | ಗುಜರಾತ |
| ೧೫. | ವಿಶ್ವಕರ್ಮ ಜ್ಯೋತಿ | ಮಾಸಿಕ | ಹಿಂದಿ | ರೋಹತಕ | ಹರಿಯಾಣ |
| ೧೬. | ವಿಶ್ವಕರ್ಮ ಸಂಘ | ತ್ರೈಮಾಸಿ | ಹಿಂದಿ | ಪರೀದಾಬಾದ | ಹರಿಯಾಣ |
| ೧೭. | ವಿಶ್ವಕರ್ಮ ದೂತ | ಪಾಕ್ಷಿಕ | ಹಿಂದಿ | ಅಂಬಾಲಾ | ಹರಿಯಾಣ |
| ೧೮. | ವಿಶ್ವಕರ್ಮ ರಿಪೋರ್ಟರ | ಮಾಸಿಕ | ದ್ವಿಭಾಷಾ | ಜಮ್ಮು | ಜಮ್ಮು ಕಾಶ್ಮೀರ |
| ೧೯. | ವಿರಾಟ್ ವಿಶ್ವಕರ್ಮ | ಮಾಸಿಕ | ಕನ್ನಡ | ಬೆಳಗಾವಿ | ಕರ್ನಾಟಕ |
| ೨೦. | ವಿಶ್ವಕರ್ಮ | ಮಾಸಿಕ | ಕನ್ನಡ | ಮಂಗಳೂರು | ಕರ್ನಾಟಕ |
| ೨೧. | ಸೃಜನಶೀಲ ವಿಶ್ವಕರ್ಮ | ಪಾಕ್ಷಿಕ | ಕನ್ನಡ | ಬೆಂಗಳೂರು | ಕರ್ನಾಟಕ |
| ೨೨. | ಉದಯ ವಿಶ್ವಕರ್ಮ | ಮಾಸಿಕ | ಕನ್ನಡ | ಬೆಂಗಳೂರು | ಕರ್ನಾಟಕ |
| ೨೩. | ವಿಶ್ವಕರ್ಮ ನುಡಿ | ಮಾಸಿಕ | ಕನ್ನಡ | ಬೆಂಗಳೂರು | ಉತ್ತರಕರ್ನಾಟಕ |
| ೨೪. | ಹಮಾರಾ ವಿಶ್ವಕರ್ಮ ಸಮಾಜ | ಮಾಸಿಕ | ಹಿಂದಿ | ಮುಂಬೈ | ಮಹಾರಾಷ್ಟ್ರ |
| ೨೫. | ವಿರಾಟ್ ವಿಶ್ವಕರ್ಮ | ಮಾಸಿಕ | ಹಿಂದಿ | ಮುಂಬೈ | ಮಹಾರಾಷ್ಟ್ರ |
| ೨೬. | ಹಿತಕಾರಿ ವಿಶ್ವಕರ್ಮ | ಪಾಕ್ಷಿಕ | ಹಿಂದಿ | ಠಾಣೆ | ಮಹಾರಾಷ್ಟ್ರ |
| ೨೭. | ವಿಶ್ವಕರ್ಮ ಪರಿವಾರ | ವಾರ | ಮರಾಠಿ | ಜಲಗಾಂವ | ಮಹಾರಾಷ್ಟ್ರ |
| ೨೮. | ವಿಶ್ವಕರ್ಮ ವೃತ್ತ | ಮಾಸಿಕ | ಮರಾಠಿ | ಅಮರಾವತಿ | ಮಹಾರಾಷ್ಟ್ರ |
| ೨೯. | ವಿಶ್ವಕರ್ಮ ಪ್ರಸಾದ | ಮಾಸಿಕ | ಮರಾಠಿ | ನಾಸಿಕ | ಮಹಾರಾಷ್ಟ್ರ |
| ೩೦. | ವಿಶ್ವಕರ್ಮಪ್ರಗತಿದರ್ಪಣ | ವಾರ್ಷಿಕ | ಹಿಂದಿ | ಜಬಲ್‌ಪುರ | ಮಧ್ಯಪ್ರದೇಶ |
| ೩೧. | ವಿಶ್ವಕರ್ಮ ದರ್ಪಣ | ತ್ರೈ.ಕ. | ಹಿಂದಿ | ಜಬಲ್‌ಪುರ | ಮಧ್ಯಪ್ರದೇಶ |
| ೩೨. | ವಿಶ್ವಕರ್ಮ ಐನಾ | ಪಾಕ್ಷಿಕ | ಹಿಂದಿ | ಇಂದೋರ್ | ಮಧ್ಯಪ್ರದೇಶ |
| ೩೩. | ವಿಶ್ವಕರ್ಮ ಸಂಸಾರ | ಮಾಸಿಕ | ಹಿಂದಿ | ಉಜ್ಜೈನಿ | ಮಧ್ಯಪ್ರದೇಶ |
| ೩೪. | ವಿಶ್ವಕರ್ಮ ವಾಹಕ | ಮಾಸಿಕ | ಹಿಂದಿ | ಉಜ್ಜೈನಿ | ಮಧ್ಯಪ್ರದೇಶ |

| | | | | |
|---|---|---|---|---|
| ೩೫. | ವಿಶ್ವಕರ್ಮರಾಮ | ವಾರ ದ್ವಿಭಾಷೆ | ಜಲಂಧರ್ | ಪಂಜಾಬ |
| ೩೬. | ನಮ್ಮದು ವಿಶ್ವಕರ್ಮ | ಮಾಸಿಕ ತಮಿಳು | ಚೈನ್ನೈ | ತಮಿಳುನಾಡು |
| ೩೭. | ವಿಶ್ವಕರ್ಮ ತೇಜಸ್ವಿನಿ | ತ್ರೈ.ಕ. ತಮಿಳು | ನಲಗೊಂಡ | ತೆಲಂಗಾಣ |
| ೩೮. | ಜೈ ವಿಶ್ವಕರ್ಮ | ಪಾಕ್ಷಿಕ ಹಿಂದಿ | ಜೈಪುರ | ರಾಜಸ್ತಾನ |
| ೩೯. | ತರುಣ ವಿಶ್ವಕರ್ಮ | ಮಾಸಿಕ ಹಿಂದಿ | ಜೈಪುರ | ರಾಜಸ್ತಾನ |
| ೪೦. | ವಿಶ್ವಕರ್ಮ ಜಗತ್ | ಮಾಸಿಕ ಹಿಂದಿ | ವಾರಾಣಾಸಿ | ಉತ್ತರಪ್ರದೇಶ |
| ೪೧. | ವಿಶ್ವಕರ್ಮ ಪುತ್ರ | ಮಾಸಿಕ ಹಿಂದಿ | ಬಿಲಾವರ | ರಾಜಸ್ತಾನ |
| ೪೨. | ವಿಶ್ವಕರ್ಮ ವಂಶಪ್ರಭಾ | ತ್ರೈ.ಕ. ಹಿಂದಿ | ಶಿರೋಹಿ | ರಾಜಸ್ತಾನ |
| ೪೩. | ವಿಶ್ವಕರ್ಮ ಕಿ ಪುಕಾರ | ಪಾಕ್ಷಿಕ ಹಿಂದಿ | ಹನುಮಾನಗೃಹ | ರಾಜಸ್ತಾನ |
| ೪೪. | ವಿಶ್ವಕರ್ಮ ಪೋಸ್ಟ್ | ಪಾಕ್ಷಿಕ ಹಿಂದಿ | ಜೈಪುರ | ರಾಜಸ್ತಾನ |
| ೪೫. | ವಿಶ್ವಕರ್ಮ ಗೌರವ | ಪಾಕ್ಷಿಕ ಹಿಂದಿ | ಜೈಪುರ | ರಾಜಸ್ತಾನ |
| ೪೬. | ವಿಶ್ವಕರ್ಮ ಪ್ರಭಾ | ಮಾಸಿಕ ತೆಲುಗು | ಹೈದರಾಬಾದ | ತೆಲಂಗಾಣ |
| ೪೭. | ವಿಶ್ವಕರ್ಮ ಸ್ಥಂಭ | ವಾರ ಹಿಂದಿ | ಖೇರಿ | ಉತ್ತರ ಪ್ರದೇಶ |
| ೪೮. | ವಿಶ್ವಕರ್ಮ ಕಿರಣ | ವಾರ ಹಿಂದಿ | ಜೈನಪುರ | ಉತ್ತರಪ್ರದೇಶ |
| ೪೯. | ವಿಶ್ವಕರ್ಮ ಶ್ರೇಷ್ಠ | ವಾರ್ಷಿಕ ಹಿಂದಿ | ಲಖ್ನೋ | ಉತ್ತರಪ್ರದೇಶ |
| ೫೦. | ವಿಶ್ವಕರ್ಮ ನ್ಯೂಸ್ | ದಿನಪತ್ರಿಕೆ ಹಿಂದಿ | ಕಾನ್ಪುರ ನಗರ | ಉತ್ತರ ಪ್ರದೇಶ |
| ೫೧. | ಶಿವಾಲಿಕ ವಿಶ್ವಕರ್ಮ | ವಾರ ಹಿಂದಿ | ಹರಿದ್ವಾರ | ಉತ್ತರಾಕಾಂಡ |
| ೫೨. | ವಿಶ್ವಕರ್ಮ ಏಕೀಕರಣ | ತ್ರೈ.ಕ. ಹಿಂದಿ | ಶಾಹಜನಪುರ | ಉತ್ತರ ಪ್ರದೇಶ |
| ೫೩. | ವಿಶ್ವಕರ್ಮ ವೈದಿಕ | ಮಾಸಿಕ ದ್ವಿಭಾಷೆ | ಹರಿದ್ವಾರ | ಉತ್ತರಾಕಾಂಡ |
| ೫೪. | ವಿಶ್ವಕರ್ಮ ಟೈಮ್ಸ್ | ಪಾಕ್ಷಿಕ ಹಿಂದಿ | ಡೆಹರಾಡೂನ | ಉತ್ತರಾಕಾಂಡ |

ಮೇಲ್ಕಾಣಿಸಿದ ಪತ್ರಿಕೆಗಳ ಪಟ್ಟಿಯ ಹೊರತಾಗಿ ದೇಶದ ತುಂಬ ಪ್ರಸಾರದಲ್ಲಿರುವ ಕೆಲವು ವಿಶ್ವಕರ್ಮ ಪತ್ರಿಕೆಗಳ ವಿವರ ಹೀಗಿದೆ:

| ನಂ. | ಹೆಸರು | ಭಾಷೆ | ಸ್ಥಳ | ರಾಜ್ಯ |
|---|---|---|---|---|
| ೧. | ವಿಶ್ವಬ್ರಾಹ್ಮಣ | ಕನ್ನಡ | ಪುಣೆ | ಮಹಾರಾಷ್ಟ್ರ |
| ೨. | ವಿಶ್ವಕರ್ಮ | ಕನ್ನಡ | ಮೈಸೂರು | ಕರ್ನಾಟಕ |

| | | | | |
|---|---|---|---|---|
| ೩. | ವಿಶ್ವಬ್ರಾಹ್ಮಣ ವಿಜಯ | ಕನ್ನಡ | ಬೆಂಗಳೂರು | ಕರ್ನಾಟಕ |
| ೪. | ವಿಶ್ವಕರ್ಮ ಪ್ರಕಾಶ | ಕನ್ನಡ | ತುಮಕೂರು | ಕರ್ನಾಟಕ |
| ೫. | ವಿಶ್ವಕರ್ಮ | ಕನ್ನಡ | ಮಂಗಳೂರು | ಕರ್ನಾಟಕ |
| ೬. | ಜಾಂಗಿದ್ ಬ್ರಾಹ್ಮಿನ್ | ಹಿಂದಿ | ದೆಹಲಿ | ದೆಹಲಿ |
| ೭. | ದ ಪಂಚತಂತ್ರ | ಹಿಂದಿ | ಸಿಕಾರ್ | ರಾಜಸ್ಥಾನ |
| ೮. | ದ ಪಾಂಚಾಳಸಮಾಚಾರ | ಹಿಂದಿ | ಮುಂಬೈ | ಮಹಾರಾಷ್ಟ್ರ |
| ೯. | ದ ವಿಶ್ವಬ್ರಾಹ್ಮಣ | ಹಿಂದಿ | ಗಯಾ | ಬಿಹಾರ |
| ೧೦. | ವಿಶ್ವಶಿಲ್ಪಿ | ಹಿಂದಿ–ಇಂ | ಪಾಟಲಿಪುತ್ರ | ಬಿಹಾರ |
| ೧೧. | ಆರ್ಟಿಸಾನ್ | ಇಂಗ್ಲಿಷ್ | ದೆಹಲಿ | ದೆಹಲಿ |
| ೧೨. | ವಿಶ್ವಶಿಲ್ಪಿ | ತೆಲುಗು | ಗುಂಟೂರು | ಆಂಧ್ರಪ್ರದೇಶ |
| ೧೩. | ವಿರಾಟ್ ವಿಶ್ವಕರ್ಮ | ಕನ್ನಡ | ಶಹಾಪುರ,ಬೆಳಗಾವಿ | ಕರ್ನಾಟಕ |
| ೧೪. | ರಾಮಘಾರಿಯಾ | ಹಿಂದಿ | ಸಿಮ್ಲಾ | ಹಿಮಾಚಲ ಪ್ರದೇಶ |
| ೧೫. | ಜೈ ವಿಶ್ವಕರ್ಮ | ಹಿಂದಿ | ಜೈಪುರ | ರಾಜಸ್ಥಾನ |
| ೧೬. | ವಿಶ್ವಬ್ರಾಹ್ಮಣ | ತಮಿಳು | ಮಧುರೈ | ತಮಿಳುನಾಡು |
| ೧೭. | ವಿಶ್ವಬ್ರಾಹ್ಮಣ | ಕನ್ನಡ | ಶಿವಮೊಗ್ಗ | ಕರ್ನಾಟಕ |
| ೧೮. | ವಿಶ್ವಕರ್ಮೋದಯ | ಕನ್ನಡ | ಚಿತ್ರದುರ್ಗ | ಕರ್ನಾಟಕ |
| ೧೯. | ವಿಶ್ವಕರ್ಮಕಲಾ | ಕನ್ನಡ | ಬೆಂಗಳೂರು | ಕರ್ನಾಟಕ |
| ೨೦. | ಜಗತ್ ಕಲ್ಯಾಣ | ಕನ್ನಡ | ಬೆಂಗಳೂರು | ಕರ್ನಾಟಕ |
| ೨೧. | ವಿಶ್ವಕರ್ಮ ಶ್ರೇಷ್ಠ | ಹಿಂದಿ | ಲಖ್ನೋ | ಉತ್ತರ ಪ್ರದೇಶ |
| ೨೨. | ವಿಶ್ವಕರ್ಮ ದೂತ್ | ಹಿಂದಿ | ಅಂಬಾಲ | ಉತ್ತರ ಪ್ರದೇಶ |

ಭಾರತ ಪತ್ರಿಕಾ ಮಾಧ್ಯಮದಲ್ಲಿ ಇದುವರೆಗೂ ಸಮುದಾಯ ಪತ್ರಿಕೆಗಳು ಬೆಳೆದು ಬಂದಿರುವುದನ್ನು ನೋಡುತ್ತೇವೆ. ಅಧೀಕೃತವಾಗಿ ಆರ್.ಎನ್.ಐ. (Registrar of Newspapers for India) ವೆಬ್‌ಸೈಟ್‌ನಲ್ಲಿ ವಿಶ್ವಕರ್ಮ ಸಮುದಾಯದ ಪತ್ರಿಕೆಗಳನ್ನು ಹುಡುಕಿದಾಗ ನನಗೆ ದೊರೆತ ಮಾಹಿತಿ ಆರ್.ಎನ್.ಐ. ಪ್ರಕಾರ ನಿಯಮಾನುಸಾರ ನೋಂದಣಿಯಾಗಿ, ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ಪ್ರಸಾರವಾಗುತ್ತ ಬಂದಿರುವದನ್ನು ಕಂಡುಕೊಳ್ಳಲಾಗಿದೆ.

"ಈ ಪತ್ರಿಕೆಗಳ ಸಂಚಿಕೆಗಳು ಸಮುದಾಯದವರ ಭಾವನೆ ಮತ್ತು ಚಿತ್ತವೃತ್ತಿಗಳನ್ನು ಲೇಖನಗಳ ಮೂಲಕ ಸಂಪಾದಕರನ್ನು ಸಂಬೋಧಿಸಿ ಬರೆದ ಪತ್ರಗಳ ಮೂಲಕ ಮತ್ತು ಸಂಪಾದಕೀಯಗಳ ಮೂಲಕ ಅಭಿವ್ಯಕ್ತಗೊಳಿಸಲು ಸಹಕಾರಿಯಾಗಿವೆ. ಈ ಎಲ್ಲ ವಿಷಯಗಳ ವಿಶ್ಲೇಷಣೆಯು ವಿಶ್ವಕರ್ಮರು ತಾವು ಬ್ರಾಹ್ಮಣ ವರ್ಗಕ್ಕೆ ಸೇರಿದವರು ಎಂಬುದನ್ನು ಪುನರ್ ದೃಢೀಕರಿಸಿಕೊಳ್ಳುವ ಬಗೆಗಿನ ನಿಲುವನ್ನು ಪ್ರಕಾಶಪಡಿಸುತ್ತದೆ".[೧೨]

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಇಡೀ ದೇಶದಲ್ಲಿ ವಿಶ್ವಕರ್ಮ ಸಮಾಜದ ಪತ್ರಿಕೆಗಳಲ್ಲಿ ಕನ್ನಡ ಭಾಷೆಯಲ್ಲಿಯೇ ವಿಪುಲವಾಗಿ ಪ್ರಕಟವಾಗುತ್ತಿವೆ ಎಂಬ ಅಂಶ ತಿಳಿಯುತ್ತದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಾನಮಾನಗಳ ಕುರಿತು ಕನ್ನಡ ಪತ್ರಿಕೆಗಳು ತುಂಬ ಅರ್ಥಪೂರ್ಣ ವಿಚಾರಗಳನ್ನು ಪ್ರತಿಪಾದಿಸಿದವು.

"ವಿಶ್ವಕರ್ಮ" ಎನ್ನುವ ಪದವನ್ನು ಪತ್ರಿಕೆಯ ಶೀರ್ಷಿಕೆಯಲ್ಲಿ ಪೂರ್ವಪದ ಇಲ್ಲವೆ ಉತ್ತರ ಪದವಾಗಿ ಬಳಿಸುವುದರಲ್ಲಿಯೇ ಸ್ವಧರ್ಮ, ಸ್ವಸಾಹಿತ್ಯ ಹಾಗೂ ಸ್ವಸಂಸ್ಕೃತಿ ಕಟ್ಟಿಕೊಳ್ಳಬೇಕಾದ ತೀವ್ರ ತುಡಿತವನ್ನು ಕಾಣಬಹುದು. ತನ್ನನ್ನು "ಅನ್ಯವೆಂದು" ಅಥವಾ "ಕೀಳೆಂದು" ಉಪೇಕ್ಷಿಸಿದ ಜಾತಿ ರಾಜಕಾರಣದ ಎದುರಿಗೆ ತನ್ನೆಲ್ಲ ಪೂರ್ವಕಾಲದ ಸ್ಮೃತಿಗಳೊಂದಿಗೆ ಸೆಟೆದು ನಿಲ್ಲಬೇಕೆನ್ನುವ ಛಲ ಶೀರ್ಷಿಕೆಗಳಲ್ಲಿ ಮತ್ತು ಒಟ್ಟು ಪತ್ರಿಕೆಯ ವಿಷಯ ವಿನ್ಯಾಸದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಅದಕ್ಕಾಗಿ ತನಗೆ ಬೇಕಾದ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಗಟ್ಟಿತನವನ್ನು ತನ್ನ ಪತ್ರಿಕೆ ಮತ್ತು ಸಾಹಿತ್ಯ ವಾಙ್ಮಯದ ಮೂಲಕ ಭಾರತದಾದ್ಯಂತ ಸಂಘಟನಾತ್ಮಕವಾಗಿ ಹಾಗೂ ವೈವಿಧ್ಯವಾಗಿ ಕಟ್ಟಿಕೊಂಡು ತನ್ನ ಹಕ್ಕು ಬಾಧ್ಯತೆಗಳನ್ನು ಪ್ರತಿಪಾದಿಸುತ್ತಾರೆ.

ಧರ್ಮ ಮತ್ತು ಜಾತಿಗಳ ಸಮೀಕರಣ ಕಾರಣವಾಗಿ ಇಂದು ದೇಶದಲ್ಲಿ ಜಾತೀಯ ಸಂಖ್ಯೆ ಹೆಚ್ಚಾಗಿದೆ. ಭಾರತೀಯ ಸಮಾಜವು ವಿವಿಧ ಜಾತಿ-ಉಪಜಾತಿಗಳಿಂದ ಕೂಡಿದೆ. ಅದರಲ್ಲೂ ಹಿಂದೂ ಪದ್ಧತಿಯ ಶ್ರೇಣೀಕರಣ ಹಂದರವನ್ನು ರೂಪಿಸಿಕೊಂಡಿದೆ. ಬ್ರಾಹ್ಮಣರು ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಶ್ರೇಷ್ಠರೆಂದು ಪರಿಗಣಿತರಾಗಿ ಉಳಿದ ಅನ್ಯಜಾತಿಯವರೆಲ್ಲ ಕನಿಷ್ಠರೆಂದೂ ಕೆಳಸ್ಥಾನದವರೆಂದೂ ಪರಿಗಣಿತರಾಗಿದ್ದಾರೆ. ಜಾತಿಯು ಹುಟ್ಟಿನಿಂದ ನಿರ್ಧಾರವಾಗುತ್ತದಾಗಲಿ, ಒಂದು ಜಾತಿಗೆ ಬದಲುಗೊಳ್ಳುತ್ತಿವುದರಿಂದ ಅಲ್ಲ. ಹೀಗಾಗಿ ಹಿಂದೂ ಸಮಾಜವು ಮುಚ್ಚಿದ ಜಾತಿ ಪದ್ಧತಿಯ ಲಕ್ಷಣದಾಗಿದ್ದು, ಜಾತಿ ಶ್ರೇಣಿಗಳು ಪೂರ್ವನಿರ್ಧರಿತವಾಗುತ್ತವೆ. ಪ್ರಾಚೀನ ಕಾಲಕ್ಕಿಂತಲೂ ೧೮-೧೯ನೇ ಶತಮಾನದಲ್ಲಿ ಜಾತಿ-ಧರ್ಮಗಳ ವಿಷಯವಾಗಿ ನಡೆದ ಚರ್ಚೆ-ಹೋರಾಟಗಳು ತುಂಬ ಮಹತ್ವದ ದಾಖಲೆಗಳಾಗಿವೆ. ಈ ಹಿನ್ನೆಲೆಯಲ್ಲಿ ವಿಶ್ವಕರ್ಮ ಸಮಾಜದ ಪತ್ರಿಕಾ ಹೋರಾಟವನ್ನು ನಾವು ನೋಡಬೇಕು.

ಭಾರತೀಯ ಧಾರ್ಮಿಕ-ಸಾಮಾಜಿಕ ವಿನ್ಯಾಸದಲ್ಲಿ, ಜಾತಿ ಶ್ರೇಣಿಯಲ್ಲಿ ತಮ್ಮ ಉನ್ನತ ಸ್ಥಾನದ ಬೇಡಿಕೆಗಾಗಿ ವಿಶ್ವಕರ್ಮ ಸಮಾಜದವರು ನಿರಂತರವಾಗಿ ಹೋರಾಡುತ್ತಲೇ ಬಂದಿದ್ದಾರೆ.

“ಭಾರತದ ಎಲ್ಲ ಭಾಗಗಳಲ್ಲಿ ಸಾಮಾಜಿಕ ಜಾತಿಶ್ರೇಣಿಯ ಯೋಜನೆಯಲ್ಲಿ ಎಲ್ಲ ಜಾತಿಗಳಿಗೂ ಮಿಗಿಲಾಗಿ, ಬ್ರಾಹ್ಮಣ ಜಾತಿಯ ಪ್ರಾಧಾನ್ಯತೆ ನಿರ್ದಿಷ್ಟವಾಗಿದೆ. ದಕ್ಷಿಣ ಭಾರತದಲ್ಲಿ ಮಾತ್ರ, ಸಾಂಪ್ರದಾಯಿಕ ಕುಶಲಕರ್ಮಿಜಾತಿಗಳು, ಬ್ರಾಹ್ಮಣ ಸತ್ತೆಯು, ಸಾಮಾಜಿಕ ಜಾತಿ ಶ್ರೇಣಿಯಲ್ಲಿ ತಮಗೆ ಕೊಡಮಾಡಿರುವ ಶ್ರೇಣಿಗೆ ಬದಲಾಗಿ, ಉನ್ನತ ಸ್ಥಾನಕ್ಕಾಗಿ ನಡೆಸುತ್ತಿರುವ ಹೋರಾಟವನ್ನು ಮುಂದುವರೆಸಿಯೇ ಇದ್ದಾರೆ. ಈ ಮಹತ್ವದ ಜಾತಿಗಳವರು, ಬ್ರಾಹ್ಮಣರು, ಜಾತಿಶ್ರೇಣಿಯಲ್ಲಿ ತಾವೇ ಉನ್ನತರು ಎಂದು ಹೇಳಿಕೊಳ್ಳುವುದನ್ನು ಪ್ರಶ್ನಿಸಿ, ಅದು ಹಾಗಲ್ಲ, ಜಾತಿಶ್ರೇಣಿಯಲ್ಲಿ ತಾವು ಬ್ರಾಹ್ಮಣರಿಗೆ ಸರಿಸಮಾನರು ಎಂದು ಹೇಳಿಕೊಳ್ಳುವುದು ನಿಸ್ಸಂದೇಹವಾಗಿ ಒಪ್ಪತಕ್ಕ ವಿಷಯ”[೧೩] ಎಂದು ಜಿ.ಎಸ್. ಘುರ್ರೆ ಎಂಬ ಖ್ಯಾತ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಮಹಾರಾಷ್ಟ್ರದಲ್ಲಿ, ತಮಿಳುನಾಡಿನಲ್ಲಿ ಕೆಲಸ ಮಾಡುತ್ತಿದ್ದ ಸ್ವರ್ಣಕಾರರು (ವಿಶ್ವಕರ್ಮರು) ತಮ್ಮ ಜಾತಿಯವರನ್ನೇ ತಮ್ಮ ಪುರೋಹಿತರನ್ನಾಗಿ ನಿಯುಕ್ತಗೊಳಿಸಿಕೊಂಡಿದ್ದರು. ಪೇಶ್ವೆಗಳ ಆಡಳಿತ ಕಾಲದಲ್ಲಿಯೂ ಪಾಂಚಾಳರು ತಮ್ಮ ಜಾತಿಯವರನ್ನೇ ತಮ್ಮ ಪುರೋಹಿತರನ್ನಾಗಿ ಮಾಡಿಕೊಳ್ಳುವ ಹಕ್ಕು ಹೊಂದಿದ್ದರು. ೧೯ನೇ ಶತಮಾನದ ಪ್ರಾರಂಭದಲ್ಲಿ ಬ್ರಾಹ್ಮಣರ ಪ್ರಾಮುಖ್ಯತೆಯನ್ನು ನಿರಾಕರಿಸಿದ ಘಟನೆಗಳೂ ನಡೆದವು. ಬ್ರಾಹ್ಮಣರನ್ನೇ ವಿಶ್ವಕರ್ಮರು ತಮ್ಮ ಪುರೋಹಿತರನ್ನಾಗಿ ನಿಯುಕ್ತಗೊಳಿಸಿಕೊಳ್ಳಬೇಕು ಎಂದು ಬ್ರಾಹ್ಮಣರು ಹೇಳುವುದನ್ನು ವಿರೋಧಿಸುವ ಮತ್ತು ವಿಶ್ವಕರ್ಮರು ತಾವು ಸಹ ಬ್ರಾಹ್ಮಣ ವರ್ಣದವರೇ ಆದುದರಿಂದ, ತಮ್ಮ ಜಾತಿಯ ಪೌರೋಹಿತ್ಯದ ಹಕ್ಕು ತಮ್ಮದೇ ವಿನಾ ಬ್ರಾಹ್ಮಣರದ್ದಲ್ಲ ಎಂದು ಪ್ರತಿಪಾದಿಸುತ್ತಾ ಬಂದಿದ್ದಾರೆ.

“ವಿಶ್ವಕರ್ಮರು ನಿಜವಾದ ಬ್ರಾಹ್ಮಣರು. ಪ್ರೊ. ಎಂ. ಎನ್. ಶ್ರೀನಿವಾಸ್ ತಮ್ಮ ಸಂಸ್ಕೃತಾನುಕರಣ ಸಿದ್ಧಾಂತದ ಮೇರೆಗೆ ಅವಲೋಕಿಸುವಂತೆ, ಸಂಸ್ಕೃತಾನುಕರಣಗೊಂಡ ಬ್ರಾಹ್ಮಣರಲ್ಲ ಎಂದು ನಿರೂಪಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ. ೧೭ನೇ ಶತಮಾನದಿಂದ ಇಂದಿನವರೆಗೆ ವಿಶ್ವಕರ್ಮರು ತಮ್ಮ ನೈಜ ಬ್ರಾಹ್ಮಣತ್ವ ಸಾಬೀತಿನ ಬಗೆಗೆ ನಡೆಸಿದ ಎಲ್ಲ ಪ್ರಯತ್ನಗಳೂ ಮುಖ್ಯವಾಗಿ ಪಂಚಾಯತು ಮತ್ತು ನ್ಯಾಯಾಂಗದ ಪ್ರಕ್ರಿಯೆಗಳಿಂದ ಸಿಂಧುತ್ವವನ್ನು ಪಡೆದಿವೆ. ಇತಿಹಾಸ ಕಾಲಾನುಗತಿಯಲ್ಲಿ, ವಿಶ್ವಕರ್ಮರು ಬ್ರಾಹ್ಮಣರಿಂದಾಗಿ ಅನುಭವಿಸಿದ, ಅನುಭವಿಸಬೇಕಾಗಿ ಬಂದ ತೊಂದರೆಗಳು, ಯಾತನೆಗಳು ಮತ್ತು ಅಪಮಾನಗಳು ಮತ್ತು ಆ ಕಾರಣ ವಿಶ್ವಕರ್ಮರು ಎದುರಿಸಬೇಕಾಗಿ ಬಂದ ಸಾಮಾಜಿಕ ತೊಡಕುಗಳು, ಅವುಗಳನ್ನು ನಿಭಾಯಿಸಿಕೊಳ್ಳಲಾಗದೆ ವಿಶ್ವಕರ್ಮರು ದೀನಸ್ಥಿತಿಗಿಳಿಯಬೇಕಾಗಿ ಬಂದ ಅನಿವಾರ್ಯ ಪ್ರಸಂಗಗಳನ್ನು ಸಾಬೀತುಪಡಿಸುತ್ತವೆ”.[೧೪]

ವಿಶ್ವಕರ್ಮ ಸಮಾಜದ ಧಾರ್ಮಿಕ ಆಚರಣೆಗಳ ಕುರಿತಾಗಿ ನಡೆದ ವಾಗ್ವಾದಗಳನ್ನು ಗಮನಿಸಿದರೆ ಮೇಲಿನ ಮಾತುಗಳಿಗೆ ಸಾಕ್ಷಿ ದೊರೆಯುತ್ತದೆ. ವಿಶ್ವಕರ್ಮರ ವಿವಾಹ ವಿಧಿಗಳು ಮತ್ತು ಅವರು ಕೆಲವು ಬೀದಿಗಳಲ್ಲಿ ಮದುವೆ ಮೆರವಣಿಗೆ ಮಾಡುವ ಬಗೆಗಿನ ನಿಷೇಧ, ‘ಆಚಾರ್ಯ’ ಪದದ ಬಳಕೆ ಬಗೆಗೆ ನಿರ್ಬಂಧ, ಬ್ರಾಹ್ಮಣ ಪದದ ಬಳಕೆ ಬಗೆಗೆ ನಿರ್ಬಂಧ,

ವೈದಿಕ ಪದ್ಧತಿ ಆಚರಣೆಗಳ ಬಗೆಗೆ ನಿರ್ಬಂಧ, ತಮ್ಮ ಜಾತಿ ಪುರೋಹಿತರನ್ನೇ ತಮ್ಮ ಮನೆ ಕಾರ್ಯಗಳಿಗೆ ಇವರು ಆಹ್ವಾನಿಸುವ ಬಗೆಗೆ ವಿರೋಧ ಮುಂತಾದ ವಿಷಯಗಳ ಕುರಿತು ನೀಡಿರುವ ತೀರ್ಪುಗಳಲ್ಲಿ ವಿಶ್ವಕರ್ಮ ಸಮುದಾಯದವರು ಜಯ ಸಾಧಿಸುತ್ತಲೇ ಬಂದಿದ್ದಾರೆ.

ಉತ್ಕೃಷ್ಟ ಸ್ಥಾನಮಾನ ಹೊಂದಿದ್ದ ವಿಶ್ವಕರ್ಮರು ಹೇಗೆ ಅವನತಿ ಪಟ್ಟರೆಂಬುದು ಸೋಜಿಗವಾಗುತ್ತದೆ. ಮುಸ್ಲಿಂರ ಆಳ್ವಿಕೆಯ ಕಾಲಕ್ಕಿಂತ ಶಿವಾಜಿಯ ಆಡಳಿತದ ನಂತರದ ಅವಧಿಯಲ್ಲಿಯೇ ವಿಶ್ವಕರ್ಮರು ನೇಪಥ್ಯಕ್ಕೆ ಸರಿಯುವಂತಾಯಿತು ಎಂದು ಕೆ.ವಿ.ಕೃಷ್ಣಮೂರ್ತಿ ಅಭಿಪ್ರಾಯ ಪಡುತ್ತಾರೆ. ಅವರ ಮಾತುಗಳಲ್ಲಿಯೇ ಹೇಳುವುದಾದರೆ– “ಶಿವಾಜಿಯ ಆಳ್ವಿಕೆಯ ಕಾಲದಲ್ಲಿ ವಿಶ್ವಬ್ರಾಹ್ಮಣರಿಗೆ ಯಾವ ರೀತಿಯ ಪ್ರತಿರೋಧಗಳೂ ಇರಲಿಲ್ಲ ಮತ್ತು ಇವರನ್ನು ಕುಲಕರ್ಣಿಗಳನ್ನಾಗಿ ಪುರೋಹಿತರನ್ನಾಗಿ ನಿಯುಕ್ತಿಗೊಳಿಸಿಕೊಳ್ಳಲಾಗಿತ್ತು. ಸಕಲ ವಿದ್ಯಾಪಾರಂಗತರೂ ವಿಶ್ವಬ್ರಾಹ್ಮಣ ಜಾತಿಯವರೂ ಆಗಿದ್ದ ತುಕಾಬ್ರಹ್ಮಾನಂದ ಸ್ವಾಮೀಜಿಯವರು ಶಿವಾಜಿಯ ಗುರುಗಳಾಗಿದ್ದರು. ವಿಶ್ವಬ್ರಾಹ್ಮಣರು ನಡೆಸುತ್ತಿದ್ದ ವೇದೋಕ್ತ ಸಂಪ್ರದಾಯ ರೀತಿಯ ಜೀವನ ವಿಧಾನವನ್ನು ಯಾರೊಬ್ಬರೂ ಪ್ರಶ್ನಿಸುತ್ತಿರಲಿಲ್ಲ ಎಂಬುದು ತುಕಾರಾಮರ ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ. ಆದರೆ ಸಪ್ತಾರ್ಷೆಯ ಬ್ರಾಹ್ಮಣರು ರಾಜ್ಯಾಡಳಿತ ಮತ್ತು ಧಾರ್ಮಿಕ ವಿಷಯಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಒಳನುಸುಳಲಾರಂಭಿಸಿ, ಕ್ರಮೇಣ ಅಧಿಕಾರಗಳನ್ನು ಪಡೆದು, ಆರ್ಥಿಕವಾಗಿಯೂ ಸದೃಢರಾದರು. ಆರ್ಥಿಕ ಪುರೋಗತಿಯು ಸಪ್ತಾರ್ಷೆಯರನ್ನು ಸಾಮಾಜಿಕವಾಗಿ ಅತ್ಯುನ್ನತ ಸ್ಥಾನಕ್ಕೇರಿಸಿತು. ಪೇಶ್ವೆಗಳ ಆಡಳಿತ ಕಾಲದಲ್ಲಿ, ಶಿಲ್ಪಿಗಳನ್ನು ಎಲ್ಲ ರೀತಿಯ ವ್ಯವಹಾರಗಳಿಂದ ಹೊರಗಿಟ್ಟು ಏನೇನೋ ನಿಷೇಧಗಳನ್ನು ಹೇರಿ, ಬಹುವಾಗಿ ಕಾಡಿಸಲಾಯಿತು. ಪವಿತ್ರ ಗ್ರಂಥಗಳನ್ನು ಸಪ್ತಾರ್ಷೆಯರ ಪರವಾಗಿ ಮರುಲಿಖಿಸಲಾಯಿತು. ವಿಶ್ವಬ್ರಾಹ್ಮಣರನ್ನು ಶೂದ್ರರ ಸ್ಥಾನಕ್ಕೆ ಇಳಿಸಲಾಯಿತು. ಈ ಎಲ್ಲ ಕೃತ್ಯಗಳ ಸಂಬಂಧವಾಗಿ ವಿಶ್ವಬ್ರಾಹ್ಮಣರು ವಿರೋಧ ವ್ಯಕ್ತಪಡಿಸಲಾರಂಭಿಸಿದರು. ಮತ್ತು ತಮ್ಮ ಧಾರ್ಮಿಕ ಸ್ಥಾನದ ಹಕ್ಕನ್ನು ಸ್ಥಾಪಿಸಿಕೊಳ್ಳಲು ಪಂಚಾಯತಿ ಮತ್ತು ನ್ಯಾಯಾಲಯಗಳ ಮೊರೆಹೋದರು”.[೧೫]

“ಕೆ.ಸಿ.ಥ್ಯಾಕರೆ ಎಂಬ ಮರಾಠಿ ವಿದ್ವಾಂಸರು ‘ಗ್ರಾಮಣ್ಯದ ಚರಿತ್ರೆ’ ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯನ್ನು ಆಧರಿಸಿ ಕ್ಷೀರಸಾಗರ ಬಾಳಾಶಾಸ್ತ್ರಿ ರಾಮೋಜಿಶಾಸ್ತ್ರಿ ಅವರು ‘ವಿಶ್ವಬ್ರಹ್ಮಕುಲೋತ್ಸಾಹ’ ಎಂಬ ಗ್ರಂಥದಲ್ಲಿ ಕೆಲವು ವಿವರಗಳನ್ನು ದಾಖಲಿಸಿದ್ದಾರೆ. ಕ್ರಿ.ಶ. ೧೭೩೦ರಲ್ಲಿ ಬಾಜೀರಾವ್ ಬಲ್ಲಾಳನ ಆಳ್ವಿಕೆಯಲ್ಲಿ ನಡೆದ ಘಟನೆಯನ್ನು ಉಲ್ಲೇಖಿಸುತ್ತಾರೆ. ವಿಶ್ವಕರ್ಮ ಪತ್ತಾರ ಶಿಲ್ಪಿಗಳು ತಮ್ಮ ಜಾತಿಯ ಧಾರ್ಮಿಕ ಆಚರಣೆಗಳನ್ನು ನಡೆಸಲು ತಮ್ಮ ಜಾತಿಯ ಪುರೋಹಿತರನ್ನು ಗೊತ್ತುಮಾಡಿಕೊಳ್ಳದೆ, ಜೋಷಿ ಬ್ರಾಹ್ಮಣ ಪುರೋಹಿತರನ್ನೇ ಆಯ್ಕೆಮಾಡಿಕೊಳ್ಳಬೇಕೆಂದು ತಿಳಿಸಿ, ವಿನಾಕಾರಣ ಅನ್ಯಾಯವಾಗಿ ದೋಷಾರೋಪಕ್ಕೆ ಗುರಿ ಮಾಡಲಾಯಿತು. ಈ ಪರಿಣಾಮವಾಗಿ ಪಾಂಡುರಂಗ ಜೋಶಿ ಎಂಬುವನು ಪುಣೆಯ

ರಾಮಕೃಷ್ಣಾಚಾರ್ಯರಿಂದ ತಪ್ಪೊಪ್ಪಿಗೆ ಬರೆಯಿಸಿಕೊಂಡು, ಅದಕ್ಕೆ ಬಾಜೀರಾವ್ ಬಲ್ಲಾಳ ಪೇಶ್ವೆಯ ಹಸ್ತಾಕ್ಷರ ರುಜು ಹಾಕಿಸಿಕೊಂಡು ಆ ತಪ್ಪೊಪ್ಪಿಗೆ ಪತ್ರಕ್ಕೆ ಉಳಿದ ವಿಶ್ವಬ್ರಾಹ್ಮಣರ ಒಪ್ಪಿಗೆ ರುಜು ಹಾಕಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ವಿಶ್ವಕರ್ಮರು ಆ ಪತ್ರವನ್ನು ಒಪ್ಪಿಕೊಳ್ಳಲು ವಿರೋಧಿಸಿ ಅದಕ್ಕೆ ರುಜು ಹಾಕಲು ನಿರಾಕರಿಸಿದರು. ಆಗ ಪೇಶ್ವೆ ಸರಕಾರವು ವಿಶ್ವಕರ್ಮರನ್ನು ಎಲ್ಲ ರೀತಿಯ ವ್ಯವಹಾರಗಳಿಂದ ಹೊರಗಿಟ್ಟು, ಅವರಿಗೆ ಉಗ್ರಯಾತನೆ ನೀಡಲು ಆದೇಶಿಸಿತು. ಇದು ವಿಶ್ವಕರ್ಮರ ವಿರುದ್ಧದ ಮೊದಲ ಪಂಚಾಯತ ತೀರ್ಪು. ಇಂಥದೇ ಒಂದು ಘಟನೆ ಕ್ರಿ.ಶ. ೧೭೭೦ರಲ್ಲಿ ನಾನಾ ಫಡ್ನವೀಸನ ಆಳ್ವಿಕೆಯ ಸಂದರ್ಭದಲ್ಲಿ ಘಟಿಸಿತು. ಅಯ್ಯಾಶಾಸ್ತ್ರಿ ಎಂಬ ಪಂಡಿತನು ವಿಶ್ವಕರ್ಮರ ವಿರುದ್ಧ ನಾನಾ ಫಡ್ನವೀಸನ ಬಳಿ ದೂರು ಕೊಟ್ಟನು. ಪ್ರಾಚೀನ ಗ್ರಂಥಗಳನ್ನು ಸಾಕ್ಷಿಯಾಗಿಸಿ ವಿಶ್ವಕರ್ಮರನ್ನು ಅವಮಾನ ಮಾಡಬೇಕೆಂದು ಬಯಸಿದನು. ಆದರೆ ನಾನಾ ಫಡ್ನಿವೀಸನು ಕೂಲಂಕಷವಾಗಿ ಆಲೋಚಿಸಿ ವಿಶ್ವಕರ್ಮರು ಬ್ರಾಹ್ಮಣರೆಂದೂ, ಅವರಿಗೆ ಪೌರೋಹಿತ್ಯದ ಹಕ್ಕುಂಟೆಂದೂ ದೃಢೀಕರಿಸಿದನು. ಇದರಿಂದ ಸಿಟ್ಟಾದ ಅಯ್ಯಾ ಶಾಸ್ತ್ರಿ- ವಿಶ್ವಕರ್ಮರು ತಮ್ಮ ಪೌರೋಹಿತ್ಯದ ಹಕ್ಕನ್ನು ಆಧಾರಗಳ ಮೂಲಕ ರುಜುವಾತು ಮಾಡಿ ತೋರಿಸಿದರೆ ತಾನು ತನ್ನ ಯಜ್ಞೋಪವೀತವನ್ನೇ ತ್ಯಜಿಸುವುದಾಗಿ ಪಂಥಾಹ್ವಾನ ನೀಡಿದನು. ತೈತ್ತಿರೀಯ ಬ್ರಾಹ್ಮಣ ಭಾಷ್ಯ, ಆಪಸ್ತಂಭ ಸೂತ್ರ, ಕಾತ್ಯಾಯಿನಿ ಸೂತ್ರ, ಗೋವಿಂದವರ್ಣನ, ಶಿಲ್ಪಶಾಸ್ತ್ರ ಮುಂತಾದ ಲಿಖಿತ ಗ್ರಂಥಗಳಲ್ಲಿನ ಆಧಾರಗಳನ್ನು ಮಂಡಿಸಿ, ವಿಶ್ವಕರ್ಮರ ಬ್ರಾಹ್ಮಣ್ಯ ಮತ್ತು ಪೌರೋಹಿತ್ಯದ ಹಕ್ಕನ್ನು ಮಂಡಿಸಲಾಯಿತು. ಇದನ್ನು ಒಪ್ಪಿದ ನಾನಾ ಫಡ್ನಿವೀಸನು ಅಯ್ಯಾಶಾಸ್ತ್ರಿಗಳಿಗೆ ಯಜ್ಞೋಪವೀತ ತ್ಯಜಿಸುವಂತೆ ಸೂಚಿಸಿದನು. ಮಹಾರಾಷ್ಟ್ರದಲ್ಲಿ ನಡೆದಂತೆ ಕರ್ನಾಟಕದಲ್ಲಿಯೂ ಇಂಥ ಅಮಾನುಷ್ಯ ಕೆಲವು ಘಟನೆಗಳು ಜರುಗಿದವು".[೧೬]

ಕ್ರಿ.ಶ. ೧೭೯೫ರಲ್ಲಿ ನಡೆದ ಘಟನೆಯಿದು. ಕೃಷ್ಣಾನದಿ ತೀರದಲ್ಲಿದ್ದ ಭುವನೇಶ್ವರಿ ದೇವಾಲಯಕ್ಕೆ ದೇವಿಯ ದರ್ಶನಾರ್ಥ ಪರಶುರಾಮ ಬಾಹು ಪಟವರ್ಧನನು ಹೋದನು. ಅಲ್ಲಿ ಪಾಂಚಾಳ ಬ್ರಾಹ್ಮಣರು ಕೆಲವು ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದರು. ಆಚರಣೆಯಲ್ಲಿ ತಲ್ಲೀನರಾಗಿದ್ದ ಅವರು, ಪಟವರ್ಧನನ ಆಗಮನವನ್ನು ಗಮನಿಸಲಿಲ್ಲ. ಅದನ್ನು ವಿಶ್ವಕರ್ಮರು ತನ್ನ ಬಗ್ಗೆ ತೋರಿದ ಉಪೇಕ್ಷೆಯೆಂದು ಭಾವಿಸಿದ ಪಟವರ್ಧನನು ತನ್ನ ಸೈನಿಕರಿಂದ ವಿಶ್ವಕರ್ಮರನ್ನು ಹೊಡಿಸಿ, ಬಡಿಸಿ ಕೆಲವರನ್ನು ಕೊಲ್ಲಿಸಿಯೂ ಬಿಟ್ಟನು. ವಿನಾಕಾರಣ ಬಾಹು ಪಟವರ್ಧನನು ನಡೆಸಿದ ಈ ಬ್ರಹ್ಮ ಹತ್ಯಾ ಪಾಪಕರ್ಮದಿಂದಾಗಿ ಆತನ ಕುಟುಂಬವು ಬಹು ಕಷ್ಟ ನಷ್ಟ ದುಃಖಗಳನ್ನು ಅನುಭವಿಸಿತು. ತನ್ನ ಈ ಪಾಪಕೃತ್ಯದ ತಪ್ಪನ್ನು ಒಪ್ಪಿಕೊಂಡ ಪಟವರ್ಧನ ಪ್ರಾಯಶ್ಚಿತ್ತಕ್ಕಾಗಿ ವಿಶ್ವಕರ್ಮರು ವೇದೋಕ್ತ ಧಾರ್ಮಿಕ ಆಚರಣೆಗಳನ್ನು ನಡೆಸಲು ಹಕ್ಕುಳ್ಳುವರೆಂದು ಆದೇಶ ಹೊರಡಿಸಿದನು. ಅಷ್ಟೇ ಅಲ್ಲದೆ ಬಾಗಲಕೋಟ ಜಿಲ್ಲೆಯ ಜಮಖಂಡಿಯಲ್ಲಿ ಪರಶುರಾಮ ದೇವಾಲಯವನ್ನು ನಿರ್ಮಿಸಿದನು.

ಧಾರ್ಮಿಕವಾಗಿ ಒಂದು ಅಸ್ತಿತ್ವವನ್ನು ಉಳಿಸಿಕೊಳ್ಳಬೇಕೆಂಬ ಕಾರಣಕ್ಕಾಗಿ ವಿಶ್ವಕರ್ಮ ಸಮಾಜದವರು ನಿರಂತರ ಹೋರಾಟ ಮಾಡುತ್ತ ಬಂದರು. ಧಾರ್ಮಿಕ ಜಾಗೃತಿಯ ಜೊತೆಗೆ ಸಾಮಾಜಿಕ ಹಿನ್ನೆಲೆಯನ್ನು ಗಮನಿಸಿದರೆ, ವಿಶ್ವಕರ್ಮ ಪತ್ರಿಕೆಗಳ ಉಗಮ ವಿಕಾಸದ ಇತಿಹಾಸವನ್ನು ಅರಿತುಕೊಳ್ಳಬಹುದು.

ನಾ.ಭಾ. ಚಂದ್ರಶೇಖರಾಚಾರ್ಯರು ಕನ್ನಡದಲ್ಲಿ ವಿಶ್ವಕರ್ಮ ಸಾಹಿತ್ಯ ಪ್ರಕಟಿಸಿದ ಆದ್ಯರು. ಅವರು ತಮ್ಮ ಪತ್ರಿಕೆಯ ಪ್ರಾರಂಭದಲ್ಲಿಯೇ–

"ನಮ್ಮ ಎಲ್ಲ ಪಾರಂಪರಿಕ ಕಸಬುಗಳನ್ನು ಜಾಗತೀಕರಣಗೊಳಿಸಲಾಗಿದೆ. ಈ ಕಸಬುಗಳನ್ನು ಅನೇಕ ಮಂದಿ ಅನ್ಯಜಾತಿಯವರೂ ರೂಢಿಸಿಕೊಂಡಿದ್ದಾರೆ. ಹಾಗೆಂದು ಆಯಾ ಕಸಬುಗಳನ್ನು ರೂಢಿಸಿಕೊಂಡಿರುವ ಆ ಅನ್ಯಜಾತಿಯವರೆಲ್ಲರನ್ನೂ ವಿಶ್ವಕರ್ಮರೆಂದೇ ಕರೆಯಬಹುದೇ?"[೧೭] ಎಂದು ಪ್ರಶ್ನಿಸಿದರು.

"ಹಿಂದೂ ಸಮಾಜದ ಚಾತುರ್ವರ್ಣ ವರ್ಗೀಕರಣದಲ್ಲಿ, ವಿಶ್ವಕರ್ಮರು ಬ್ರಾಹ್ಮಣ ವರ್ಣಕ್ಕೆ ಸೇರಿದವರು. ಆದರೆ ಇವರನ್ನು ಶೂದ್ರವರ್ಣದವರೆಂದು ವರ್ಗೀಕರಿಸಲಾಗಿದೆ. ಬಹುಮಂದಿ ವಿಶ್ವಕರ್ಮರಿಗೆ ತಮ್ಮ ಗೋತ್ರ ಪ್ರವರ ಮತ್ತು ವೇದಾಂಗಗಳ ತಿಳಿವಳಿಕೆಯೇ ಇಲ್ಲ. ಪ್ರಸ್ತುತದಲ್ಲಿ ಆಗಬೇಕಾದುದು, ವಿಶ್ವ ಸಾಹಿತ್ಯವನ್ನು ಪ್ರಸಾರ ಮಾಡುವುದು, ಮತ್ತು ಸಂಶೋಧನೆಯನ್ನು ಕೈಗೊಂಡು ವಿಶ್ವಕರ್ಮ ಪಾರಮ್ಯವನ್ನು ಉನ್ನತೀಕರಿಸುವುದು".[೧೮]

ವಿಶ್ವಕರ್ಮ ಸಾಹಿತ್ಯವನ್ನು ಪ್ರಸಾರ ಮಾಡಲು ಪತ್ರಿಕೆಗಳ ಪಾತ್ರ ಮುಖ್ಯ ಎಂಬುದನ್ನು ಗಮನಿಸಿದ ವಿದ್ವಾಂಸರು, ನೂರಾರು ಲೇಖನಗಳನ್ನು ಬರೆದು ಪ್ರಕಟಿಸಿದರು. ತಮ್ಮ ಸಮಾಜ ಸಂಸ್ಕೃತಿಗಳು ಉನ್ನತ ಸ್ಥಾನಮಾನ ಪಡೆಯಬೇಕೆಂಬ ಹಂಬಲ ತುಡಿತ ಅವರನ್ನು ಕಾಡಿದೆ. ಅದಕ್ಕಾಗಿ ಮೇಲಿಂದ ಮೇಲೆ ಈ ಕುರಿತು ಅವರು ಜಾಗೃತಿಯ ಮಾತುಗಳನ್ನು ಬರೆಯುತ್ತ ಬಂದಿದ್ದಾರೆ.

"ವಿಶ್ವಕರ್ಮರು ತಮ್ಮ ಸಂಸ್ಕೃತಿಯನ್ನು ತಮ್ಮ ಗತ ಸ್ಥಾನಮಾನಗಳನ್ನು ಮರೆತೇ ಬಿಟ್ಟಿದ್ದಾರೆ. ಹಾಗಾಗಿ ನಾವು ಅವರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸ್ಥಾನಮಾನಗಳನ್ನು ಪುನರುಜ್ಜೀವನಗೊಳಿಸಬೇಕು. ವಿಶ್ವಕರ್ಮರು ಬಹು ಶ್ರದ್ಧೆಯಿಂದ ತಮ್ಮ ಹೆಸರುಗಳಿಗೆ ಆಚಾರ್ಯರು ಎಂಬ ಅಂತ್ಯಪ್ರತ್ಯಯವನ್ನು ಸೇರಿಸಿಕೊಳ್ಳುತ್ತಾರೆ. ಆದರೆ ಪ್ರಸ್ತುತದಲ್ಲಿ ಇವರನ್ನು ಎಲ್ಲ ಜನರೂ, ಆಚಾರಿ, ಬಡಗಿ, ಪತ್ತಾರ ಮುಂತಾಗಿ ಕರೆಯುತ್ತಿದ್ದಾರೆ. ವಿಶ್ವಕರ್ಮರು ತಮ್ಮ ಶಿಲ್ಪ ಮತ್ತು ವೈದಿಕ ಸಂಪ್ರದಾಯಗಳನ್ನು ರಕ್ಷಿಸಿಕೊಳ್ಳಬೇಕಾದರೆ, ನಮ್ಮ ಸಂಸ್ಕೃತಿಯ ರಕ್ಷಣೆಗೆ ವ್ಯಾಪಕ ಪ್ರಚಾರವನ್ನು ಕೊಡಬೇಕು". ಶ್ರೇಣೀಕೃತ ಸಮಾಜದಲ್ಲಿ ವಿಶ್ವಕರ್ಮರು ಉನ್ನತೀಕರಣಗೊಳ್ಳಬೇಕೆಂಬ ಅದಮ್ಯ ಅಭೀಪ್ಸೆ ಇರುವುದನ್ನು ಮೇಲಿನ ಉಲ್ಲೇಖದಲ್ಲಿ ಕಾಣುತ್ತೇವೆ.

“ನಮ್ಮ ಪೂರ್ವಿಕರು ಅನುವಂಶಿಕ (ಪಾರಂಪರಿಕ) ಐದು ಕಸಬುಗಳ ಕರೆಗೆ ಓಗೊಟ್ಟರು ಹಾಗೂ ವೇದಾಧ್ಯಯನ ಮತ್ತು ಶಿಲ್ಪಶಾಸ್ತ್ರಗಳ ಅಧ್ಯಯನವನ್ನೂ ಮುಂದುವರೆಸಿದರು. ಕ್ರಮೇಣ ಕಸಬುಗಳ ಕಡೆಗೆ ಹೆಚ್ಚು ಗಮನಕೊಡುತ್ತ ಹೋಗಿ ವೇದಾಧ್ಯಯನವನ್ನು ಕಡೆಗಣಿಸಿದರು. ಹೀಗೆ ಬ್ರಾಹ್ಮಣ್ಯದ ಮೂಲವಾದ ವೇದಾಧ್ಯಯನ ಮತ್ತು ಬ್ರಾಹ್ಮಣ್ಯಗಳನ್ನು ಅವಜ್ಞೆ ಮಾಡುತ್ತ ಹೋದುದರ ಪರಿಣಾಮವಾಗಿ ನಾವು ನಮ್ಮ ಸ್ಥಾನಮಾನಗಳನ್ನು ಕಳೆದುಕೊಂಡೆವು. ಆದುದರಿಂದ ನಾವು ಸ್ವಪ್ರೇರಿತರಾಗಿ ಬ್ರಾಹ್ಮಣತ್ವವನ್ನು ಉಳಿಸಿಕೊಳ್ಳಬೇಕು ಮತ್ತು ಅವುಗಳನ್ನು ರಕ್ಷಿಸಿಕೊಳ್ಳಬೇಕು ಹಾಗೂ ಅವುಗಳನ್ನು ಪುನಃ ಗಳಿಸಿಕೊಳ್ಳಲೇಬೇಕು” ಎಂದು ತಮ್ಮ ಸಮಾಜ ಬಾಂಧವರಿಗೆ ತಿಳಿಸುಕೊಡುವ ಪ್ರಯತ್ನ ಮಾಡಿದ್ದಾರೆ.

ವಿಶ್ವಕರ್ಮರು ಬ್ರಾಹ್ಮಣರಿಗಿಂತಲೂ ಮೇಲ್ವರ್ಗದವರು. ಇವರು ತಮ್ಮ ಜಾತಿಯವರೇ ಆದು ಪುರೋಹಿತರನ್ನು ಹೊಂದಿದ್ದಾರೆ ಎಂಬ ಅಂಶವನ್ನು ವಿಶ್ವಶಿಲ್ಪಿ ಪತ್ರಿಕೆಯಲ್ಲಿ ೧೯೭೩ ಪ್ರಕಟಿಸಿದ್ದಾರೆ.

ವಿಶ್ವಕರ್ಮರು ಧಾರ್ಮಿಕವಾಗಿ ಜಾಗೃತಿಯಾಗುವುದರೊಂದಿಗೆ ಆರ್ಥಿಕವಾಗಿಯೂ ಸದೃಢ ವಾಗಬೇಕೆಂಬ ಕಳಕಳಿ ವಿಶ್ವಕರ್ಮ ಪತ್ರಿಕೆ ಮತ್ತು ಅದರ ಸಂಪಾದಕರಲ್ಲಿರುವುದನ್ನು ನೋಡುತ್ತೇವೆ.

“ವಿಶ್ವಕರ್ಮರು ತಮ್ಮ ಆರ್ಥಿಕ ಸ್ಥಿತಿಯನ್ನು ದೃಢಗೊಳಿಸಿಕೊಳ್ಳಬೇಕು. ವಿಶ್ವಕರ್ಮರ ಆರ್ಥಿಕ ದುಸ್ಥಿತಿ ತಿಳಿದಿರುವ ವಿಷಯವೇ. ವಿಶ್ವಕರ್ಮರು ತಾಂತ್ರೀಕೃತ ಕೈಗಾರೀಕೀಕರಣದಿಂದಾಗಿ ತಮ್ಮ ತಮ್ಮ ಪಾರಂಪರಿಕ ಕಸಬುಗಳಿಂದಲೂ ಹೊರಗೆಸೆಯಲ್ಪಟ್ಟಿದ್ದಾರೆ.” ಎಂದು ಆತಂಕವ್ಯಕ್ತಪಡಿಸಿದ್ದಾರೆ. ಇಡೀ ವಿಶ್ವವೇ ಪ್ರಗತಿಪಥದಲ್ಲಿ ದಾಪುಗಾಲಿಡುತ್ತಿರುವಾಗ ನಾವು ನಮ್ಮ ಆರ್ಥಿಕ ಸ್ಥಿತಿಯ ದೃಢತೆಯನ್ನು ಸಾಧಿಸಿಕೊಳ್ಳುವ ಮಾರ್ಗಗಳನ್ನು ನಾವಾಗಿ ಹುಡುಕಿಕೊಳ್ಳದೆ ಮಂಕರಂತೆ ಕುಂಟುತ್ತ ಸಾಗಿದ್ದೇವೆ ಎಂಬ ಬುದ್ಧಿಮಾತನ್ನು ಇಲ್ಲಿ ಹೇಳಿದ್ದಾರೆ.

೧೫ನೇ ಶತಮಾನದಿಂದ ವಿಶ್ವಕರ್ಮರು ಅನೇಕ ಕಿರುಕುಳಗಳನ್ನು ಅನುಭವಿಸುತ್ತಾ ಬಂದಿದ್ದಾರೆ. ತಮ್ಮ ಹಕ್ಕು ಬಾಧ್ಯಗಳಿಗಾಗಿ ಹೋರಾಟ ಮಾಡುತ್ತ ಬಂದಿದ್ದಾರೆ. ೧೯ನೇ ಶತಮಾನದಲ್ಲಿ ಬ್ರಿಟಿಷ್ ಆಡಳಿತದಲ್ಲಿ ಜನಗಣತಿ ಪ್ರಾರಂಭವಾದ ನಂತರ ಜಾತಿಯ ಸಂಘಟನೆಗಳು ಜಾಗೃತವಾಗ ತೊಡಗಿದವು.

ಕ್ರಿ.ಶ. ೧೮೭೨ರ ಪ್ರಥಮ ಜನಗಣತಿಯ ನಂತರ, ಪ್ರತಿ ಹತ್ತು ವರ್ಷಗಳಿಗೊಮ್ಮೆ ಕೈಗೊಳ್ಳಲಾಗುವ ಜನಗಣತಿಯು ಹೆಣ್ಣು ಗಂಡುಗಳ ತಲೆ ಎಣಿಸುವುದಕ್ಕಷ್ಟೆ ಸೀಮಿತವಾಗಿಲ್ಲ; ಜನತೆಯ ಆರ್ಥಿಕ ಚಟುವಟಿಕೆ, ಸಾಕ್ಷರತೆ, ವಸತಿ ಹಾಗು ಇತರ ನಾಗರಿಕ ಸೌಲಭ್ಯಗಳಿಂದ ವಂಚಿತವಾದ ಮಹತ್ವದ ವಿಷಯಗಳ ಕುರಿತ ಸಮಗ್ರ ಮಾಹಿತಿ ಸಂಗ್ರಹಿಸುವದು ಜನಗಣತಿಯ ಉದ್ದೇಶವಾಗಿದೆ. ಜನರ ಸಾಮಾಜಿಕ ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತಿಗತಿಯ ವೈವಿಧ್ಯಮಯ ಬದುಕನ್ನು ಜನಗಣತಿ ಪರಿಚಯಿಸುತ್ತದೆ. ದೇಶದ ಜನತೆ ಸಾಮಾಜಿಕವಾಗಿ, ಪರಿಶಿಷ್ಟ ಜಾತಿ.

ಪರಿಶಿಷ್ಟ ಪಂಗಡಗಳಾಗಿ, ಇತರೆ ಹಿಂದುಳಿದ ವರ್ಗಗಳಾಗಿ ಮತ್ತು ಇವೆಲ್ಲವುಗಳಿಗೆ ಹೊರತಾದ ಸಾಮಾನ್ಯ ವರ್ಗದವರಾಗಿ ವಿಭಜಿಸಲ್ಪಟ್ಟದ್ದನ್ನು ಕಾಣುತ್ತೇವೆ. ಜನಗಣತಿಯಿಂದ ಸಂವಿಧಾನಾತ್ಮಕವಾಗಿ ಮನ್ನಣೆ ಪಡೆದ ಅಲ್ಪಸಂಖ್ಯಾತ ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧ, ಜೈನ, ಸಿಖ್ಖ, ಪಾರ್ಸಿ, ಆಂಗ್ಲೋಇಂಡಿಯನ್ಸ ಸಮುದಾಯಗಳ ಜನಸಂಖ್ಯೆಯ ವಿವರಗಳು ನಿಖರವಾಗಿ ಲಭ್ಯವಾಗುತ್ತವೆ. ಸರ್ಕಾರದಿಂದ ಯಾವುದೆ ವಿಶೇಷ ಸೌಲಭ್ಯಗಳನ್ನು ಪಡೆಯದ ಸಾಮಾನ್ಯ ಜನತೆಯನ್ನು ಹೊರತು ಪಡಿಸಿ, ಇತರ ಎಲ್ಲ ವರ್ಗಗಳು, ಕೇಂದ್ರ ಇಲ್ಲವೆ ರಾಜ್ಯ ಸರ್ಕಾರಗಳ ಮೀಸಲಾತಿ ಪರಿಧಿಯಲ್ಲಿ ಸೇರಿವೆ. ಶೈಕ್ಷಣಿಕ ಕ್ಷೇತ್ರವೆ ಆಗಿರಲಿ, ನೇಮಕಾತಿಯೆ ಇರಲಿ, ಜಾತಿಯೇ ಮೀಸಲಾತಿಗೆ ಆಧಾರವಾಗಿರುವದು ಸ್ಪಷ್ಟವಾಗಿದೆ. ಬರಲಿರುವ ಕ್ರಿ.ಶ. ೨೦೧೧ರಲ್ಲಿ ಜಾತಿ ಆಧಾರಿತ ಜನಗಣತಿ ಕೈಕೊಳ್ಳಬೇಕೆಂಬ ಕೂಗು ಕೇಳಿ ಬರುತ್ತಲಿದೆ. ವಿಶೇಷವಾಗಿ ಹಿಂದುಳಿದ ವರ್ಗಗಳ ಸಂಘಟನೆಗಳು ಜಾತ್ಯಾಧಾರಿತ ಜನಗಣತಿ ಅನಿವಾರ್ಯ ಎಂಬಂತೆ ವಾತಾವರಣ ಸೃಷ್ಟಿಸಿವೆ. ಕೆಲವೊಂದು ರಾಜಕೀಯ ಪಕ್ಷಗಳು ಕೂಡ ಜಾತಿವಾರು ಜನಗಣತಿಯ ಬೇಡಿಕೆಗೆ ಬೆಂಬಲ ಸೂಚಿಸಿವೆ. ಈ ಮಧ್ಯೆ ಸಾರ್ವಜನಿಕ ಹಿತಾಸಕ್ತಿ ಅರ್ಜಿಯೊಂದನ್ನು ಅಂಗೀಕರಿಸಿದ ಚೆನ್ನೈ (ಮದ್ರಾಸ) ಉಚ್ಚನ್ಯಾಯಾಲಯ ಜಾತಿ ಆಧಾರಿತ ಜನಗಣತಿಯನ್ನು ಪುರಸ್ಕರಿಸಿದೆ. ಈ ಕುರಿತು ಕೇಂದ್ರ ಸರ್ಕಾರಕ್ಕೆ ನಿರ್ದೇಶನ ಕೂಡ ನೀಡಿದೆ. ಈ ಹಿಂದೆ ಜಾತಿವಾರು ಜನಗಣತಿಯನ್ನು ಕ್ರಿ.ಶ. ೧೯೩೧ರಲ್ಲಿ ಲಾರ್ಡ ಅಯರ್ವಿನ್ ಎಂಬವರು ಭಾರತದ ವ್ಹಾಯಿಸರಾಯ ಆಗಿದ್ದ ಸಮಯದಲ್ಲಿ ಒಮ್ಮೆ ಮಾತ್ರ ನಡೆಸಲಾಗಿತ್ತು. ಆದರೆ ಅಂಥ ಕ್ರಮ ಸಮಾಜದ ಒಡಕಿಗೆ ಕಾರಣವಾಗಬಹುದೆಂಬ ಭೀತಿಯಿಂದ ಸ್ವಾತಂತ್ರ್ಯಾನಂತರ ಜಾತಿವಾರು ಜನಗಣತಿಯನ್ನು ಕೈಬಿಡಲಾಯಿತು. ಶ್ರೀ ವ್ಹಿ.ಪಿ.ಸಿಂಗ ಅವರು ಭಾರತದ ಪ್ರಧಾನಿಯಾಗಿದ್ದ ಕಾಲದಲ್ಲಿ, ಹಿಂದುಳಿದ ವರ್ಗಗಳ ಸಾಮಾಜಿಕ ಸ್ಥಿತಿಗತಿಯ ಸಮೀಕ್ಷೆ ನಡೆಸಿದ ಮಂಡಳ ಆಯೋಗ, ಶೈಕ್ಷಣಿಕ ಸಂಸ್ಥೆಗಳಲ್ಲಿ ಪ್ರವೇಶ ಹಾಗೂ ಸರಕಾರಿ ನೇಮಕಾತಿಯಲ್ಲಿ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಮಾಡಿದ ಶೇ. ೨೭ರಷ್ಟು ಮೀಸಲಾತಿಯ ಶಿಫಾರಸು ಬಹಳಷ್ಟು ಗೊಂದಲ ಸೃಷ್ಟಿಗೆ ಕಾರಣವಾಯಿತು. ಕೆಲವು ವರ್ಗಗಳ ಅಸಂತುಷ್ಟಿಗೆ ಕಾರಣವಾದ ಆಯೋಗದ ವರದಿಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಮೊಕದ್ದಮೆಗೆ ಸಂಬಂಧಿಸಿದಂತೆ ನೀಡಿದ ತೀರ್ಪಿನ ಭಾಗವಾಗಿ ಸರ್ವೋಚ್ಚ ನ್ಯಾಯಾಲಯ ಹಿಂದುಳಿದ ವರ್ಗಗಳ ಹಿತರಕ್ಷಣೆ ಕಾಪಾಡಲು ಅನುಕೂಲವಾಗುವಂತೆ ಕೇಂದ್ರ ಹಾಗೂ ಎಲ್ಲ ರಾಜ್ಯಗಳಲ್ಲಿ ಪ್ರತ್ಯೇಕ ಹಿಂದುಳಿದ ವರ್ಗಗಳ ಆಯೋಗಗಳನ್ನು ರಚಿಸಬೇಕೆಂಬ ಆದೇಶ ನೀಡಿತು. ನ್ಯಾಯಾಲಯದ ನಿರ್ದೇಶನದ ಅನುಸಾರ ಕರ್ನಾಟಕ ರಾಜ್ಯಸರ್ಕಾರ ಹಿಂದುಳಿದ ವರ್ಗಗಳ ಆಯೋಗ ಕ್ರಿ.ಶ. ೧೯೭೭ರಿಂದ ಕಾರ್ಯಪ್ರವೃತ್ತವಾಗಿದೆ. ಮಂಡಳ ಆಯೋಗದ ಹಾಗೂ ಅದರಂತೆ ಕರ್ನಾಟಕ ರಾಜ್ಯದಲ್ಲಿ ಹಾವನೂರ ಮತ್ತು ಚಿನ್ನಪ್ಪರೆಡ್ಡಿ ಆಯೋಗಗಳ ವರದಿಗಳ ಕೆಲವೊಂದು ಶಿಫಾರಸುಗಳು ತೀವ್ರ ವಿರೋಧಕ್ಕೆ ಗುರಿಯಾಗಿ ಜಾರಿಯಾಗದೆ ಉಳಿದವು.

ಸಾವಿರಾರು ವರ್ಷಗಳಿಂದ ಜಾರಿಯಲ್ಲಿರುವ ಜಾತಿ-ಪದ್ಧತಿಯನ್ನು ಅಳಿಸಿ ಹಾಕುವದು ಈವರೆಗೆ ಸಾಧ್ಯವಾಗಿಲ್ಲ. ವ್ಯತಿರಿಕ್ತವಾಗಿ, ರಾಜಕೀಯ ಕಾರಣಗಳಿಗಾಗಿ ಮತ್ತು ಮೀಸಲಾತಿ ಸೌಲಭ್ಯಗಳ ಆಮಿಷಕ್ಕೆ ಒಳಗಾಗಿ ಪ್ರಸಕ್ತ ಸಮಯದಲ್ಲಿ ಜಾತಿಪದ್ಧತಿಯನ್ನು ಪೋಷಿಸಿಕೊಂಡು ಹೋಗುವಂಥ ಕಾರ್ಯ ನಡೆದಿದೆ. ಪರಿಣಾಮವಾಗಿ, ಮಧ್ಯಕಾಲೀನ ಅಮಾನವೀಯ ಸಂಪ್ರದಾಯಗಳು, ಅನಾಗರಿಕ ಆಚರಣೆಗಳು ಪುನರುಜ್ಜೀವನಗೊಂಡಿವೆ. ಅಂತರ್ಜಾತೀಯ ವಿವಾಹಬಂಧನಕ್ಕೊಳಗಾದ ತರುಣತರುಣಿಯರ ಅಮಾನುಷ ಕೊಲೆಯಾಗುತ್ತಿರುವದನ್ನು ಕಾಣುತ್ತೇವೆ. ಭಾರತದ ಸಂವಿಧಾನ ಜಾತ್ಯಾತೀತ ಸಮಾಜ ನಿರ್ಮಾಣವನ್ನು ಬೋಧಿಸುತ್ತದೆ. ಜಾತಿ, ಮತ, ಪಂಥಗಳೆನ್ನದೆ ಇಲ್ಲಿ ಎಲ್ಲರೂ ಸಮಾನರು; ಎಲ್ಲರಿಗೂ ಸಮಾನ ಅವಕಾಶ ನೀಡುವದಾಗಿ ಸಂವಿಧಾನ ಭರವಸೆ ನಿಡಿದೆ. ಅದು ಕಾನೂನುಬದ್ಧವಾಗಿ ಜಾರಿಗೆ ಬರಬೇಕಾಗಿದೆ.

ಯುಗ-ಯುಗಾಂತರಗಳಿಂದ ಶೋಷಣೆಗೆ ಒಳಗಾಗಿದ್ದ ಹರಿಜನ-ಗಿರಿಜನರ ಅಸಹಾಯಕತೆಗೆ ಸ್ಪಂದಿಸಿದ ಸಂವಿಧಾನಕರ್ತರು, ಶೋಷಿತರಿಗೆ ಹತ್ತು ವರ್ಷಗಳ ಅವಧಿಗೆ ವಿಶೇಷ ಮೀಸಲಾತಿ ಕಲ್ಪಿಸಿದರು. ಕೆಳಸ್ತರದವರು ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆಯುವಂತೆ ಅನುವು ಮಾಡಿಕೊಟ್ಟ ಘಟನಾ ಸಮಿತಿಯ ಸದಸ್ಯರ ಅದ್ಭುತ ಪರಿಕಲ್ಪನೆ ಇದಾಗಿತ್ತು. ಆದರೆ, ಸಂವಿಧಾನ ಜಾರಿಯಾಗಿ ಸುಮಾರು ಆರು ದಶಕಗಳೆ ಕಳೆದರೂ ಅನುಸೂಚಿತ ಜಾತಿ-ಜನಾಂಗಗಳ ಮೀಸಲಾತಿ ಸೌಲಭ್ಯಗಳ ಮುಂದುವರಿಕೆಯನ್ನು ಗಮನಿಸಿದರೆ, ಬಹುಶ: ಶೋಷಿತ ವರ್ಗದವರನ್ನು ಉದ್ಧರಿಸುವ ಕನಸು, ರಾಜಕೀಯ ಕಾರಣಗಳಿಗಾಗಿ, ಕನಸಾಗಿಯೆ ಉಳಿದಿರುವದು ದುರ್ದೈವ.

ಇತ್ತೀಚಿನ ವರ್ಷಗಳಲ್ಲಿ ರಾಜಕೀಯ ಕಾರಣಗಳಿಗಾಗಿ ಜಾತಿಗೆ ಎಲ್ಲಿಲ್ಲದ ಮಹತ್ವ ಪ್ರಾಪ್ತವಾಗಿದೆ. ರಾಜಕೀಯ, ಶೈಕ್ಷಣಿಕ ಕ್ಷೇತ್ರಗಳಲ್ಲಿ, ಸರಕಾರಿ ಸೇವೆಯಲ್ಲಿ ನೇಮಕಾತಿಗಾಗಿ, ಸಂಪನ್ಮೂಲಗಳ ಹಂಚುವಿಕೆಯಲ್ಲಿ, ಚುನಾವಣೆಗಳಲ್ಲಿ ಜಾತಿ ನಿರ್ಣಾಯಕವಾಗುತ್ತಿದೆ. ಜಾತಿ, ವರ್ಗ, ಅಂತಸ್ತು, ಅಧಿಕಾರ ಮುಂತಾದವು ಮೇಲ್ವರ್ಗಗಳ ಏಕಸ್ವಾಮ್ಯದಲ್ಲಿವೆ ಎಂಬ ದೂರು ಕೇಳಿಬರುತ್ತಿದೆ. ಜಾತಿ ವಾಸ್ತವ ಸಂಗತಿಯಾಗಿದ್ದು, ಅದು ಅಕಸ್ಮಾತ್ತಾಗಿ ಉದ್ಭವಿಸಿದ್ದಲ್ಲ. ವರ್ಣವ್ಯವಸ್ಥೆಯಡಿ ಸಾವಿರಾರು ವರ್ಷಗಳಿಂದ ಜಾತಿಪದ್ಧತಿ ನೆಲೆಗೊಂಡು ಮುಂದುವರೆದಿದೆ. ಜಾತಿ ಮತ ಪಂಥಗಳ ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಲಾಗಿದ್ದು, ಸಮಾಜದ ಆಂತರಿಕ ಸಾಮರಸ್ಯಕ್ಕೆ ಜಾತಿ ಭಂಗ ಉಂಟುಮಾಡಿಲ್ಲ ಎಂಬುದು ಜಾತ್ಯಾಧಾರಿತ ಜನಗಣತಿಯ ಪ್ರತಿಪಾದಕರ ವಾದ. ಜಾತಿವಾರು ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸುವ ವ್ಯವಸ್ಥೆಯಲ್ಲಿ ಜಾತಿ ಆಧಾರಿತ ಜನಗಣತಿಯಿಂದ ಮಾತ್ರ ನ್ಯಾಯದೊರಕಿಸಿ ಕೊಡಲು ಸಾಧ್ಯ ಎಂಬುದು ಅವರ ಅಭಿಪ್ರಾಯ. ಕಳೆದ ಕೆಲ ದಶಕಗಳಲ್ಲಿ ಹಿಂದುಳಿದ ವರ್ಗಗಳ ಜನಸಂಖ್ಯೆ ಅಪಾರ ಪ್ರಮಾಣದಲ್ಲಿ ಹೆಚ್ಚಾಗಿದ್ದು, ಜಾತಿವಾರು ಜನಗಣತಿಯಿಂದ ಮಾತ್ರ ಜನಸಂಖ್ಯೆಯನ್ನು ನಿಖರವಾಗಿ ತಿಳಿಯಲು ಸಾಧ್ಯ ಎಂಬುದು ಕೆಲ ರಾಜಕೀಯ ಪಕ್ಷಗಳ ಅಭಿಪ್ರಾಯ ಕೂಡ.

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ರಾಜ್ಯದ ಪರಿಶಿಷ್ಟ ಜಾತಿ–ಜನಾಂಗ ಮತ್ತು ಇತರ ಹಿಂದುಳಿದ ವರ್ಗಗಳು ಸೇರಿದಂತೆ ಎಲ್ಲ ಜಾತಿ, ಉಪಜಾತಿ ಪಂಗಡ ಉಪಪಂಗಡಗಳ ಸಮೀಕ್ಷೆ ನಡೆಸಲು ಸನ್ನದ್ಧವಾಗಿದೆ. ಸಮಾಜದ ಎಲ್ಲ ಸ್ತರದ ಜನರ ಆರ್ಥಿಕ ಸಾಮಾಜಿಕ ಸ್ಥಿತಿಗತಿ, ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಲು ಸಮೀಕ್ಷೆ ನೆರವಾಗಬಹುದು. ಸ್ವತಂತ್ರ ಭಾರತದ ಸಂವಿಧಾನಕರ್ತರು, ಧಾರ್ಮಿಕ ಸ್ವಾತಂತ್ರ್ಯದೊಂದಿಗೆ ಜಾತ್ಯಾತೀತ ಸಮಾಜ ನಿರ್ಮಾಣದ ಕನಸು ಕಂಡಿದ್ದರು. ಆದರೆ, ಸ್ವಾತಂತ್ರ್ಯಾನಂತರ ಅರವತ್ತು ಸಂವತ್ಸರಗಳು ಗತಿಸಿ ಹೋದರೂ, ಜನತೆ ಜಾತಿಯ ಭ್ರಾಂತಿಯಿಂದ ಹೊರಗೆ ಬಂದಿಲ್ಲ. ಪ್ರಸಕ್ತ ಜಾಗತಿಕರಣ ಔದ್ಯೋಗಿಕರಣಗಳಂಥ ಹೊಸ ಆವಿಷ್ಕಾರಗಳ ಮೂಲಕ ಉದ್ಭವಿಸಲಿರುವ ವಿಪುಲ ಅವಕಾಶಗಳನ್ನು ಯುವಪೀಳಿಗೆ ಬಾಚಿಕೊಳ್ಳಲು ಜಾತಿಯ ಅನಿವಾರ್ಯತೆ ಇಲ್ಲ. ಕೇವಲ ಕನಿಷ್ಠ ಮೀಸಲಾತಿಗಾಗಿ ಜಾತಿಯ ಭೂತವನ್ನು ಜೀವಂತವಾಗಿಡಬೇಕೆ ಎಂಬುದು ಇಂದಿನ ಜ್ವಲಂತ ಪ್ರಶ್ನೆ.

ಬ್ರಿಟಿಷರು ಹೀಗೆ ಪ್ರಾರಂಭಿಸಿದ ಗಣತಿಯ ವಿಷಯವನ್ನು ತಿಳಿದ ವಿವಿಧ ಜಾತಿಗಳ ಜನರು, ಜಾಗೃತರಾಗಿ ತಮ್ಮ ತಮ್ಮ ಜಾತಿಗಳನ್ನು ಜಾತಿಶ್ರೇಣಿಯಲ್ಲಿ ಉನ್ನತೀಕರಿಸಿಕೊಳ್ಳುವ ಹಕ್ಕು ಸಾಧಿಸಿಕೊಳ್ಳಲು ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲಾರಂಭಿಸಿದರು. ವಿಶ್ವಕರ್ಮರು ತಮ್ಮ ನೈಜ ಸ್ಥಾನಮಾನಗಳನ್ನು ಸ್ಪಷ್ಟವಾಗಿ ಗುರುತಿಸಿಕೊಂಡಿದ್ದರೂ ತಮ್ಮ ಸಾಂಪ್ರದಾಯಿಕ ಕುಲಕಸಬುಗಳನ್ನು ಮಾಡಲು ಒಳನುಸುಳಿದ್ದ ವಿವಿಧ ಅನ್ಯ ಜನಾಂಗ ಜಾತಿಯವರನ್ನು ಗುರುತಿಸುವಲ್ಲಿ ಗೊಂದಲ ಉಂಟಾಗಿ 'ವಿಶ್ವಕರ್ಮರು' ಮತ್ತು 'ವಿಶ್ವಕರ್ಮರಲ್ಲದವರು' ಯಾರು ಯಾರು ಎಂದು ಸ್ಪಷ್ಟೀಕರಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆದ್ದರಿಂದ ನಿರ್ದಿಷ್ಟವಾಗಿ ಬ್ರಾಹ್ಮಣ ವರ್ಣಕ್ಕೆ ಸೇರಿದ ನೈಜ ವಿಶ್ವಕರ್ಮ ಸಂಪ್ರದಾಯಸ್ಥರು ಯಾರು ಎಂಬುದನ್ನು ಗುರುತಿಸಿಕೊಳ್ಳುವ ಅವಶ್ಯಕತೆ ಉಂಟಾಯಿತು. ನೈಜ ವಿಶ್ವಕರ್ಮ ಸಂಪ್ರದಾಯದ ವಿದ್ವಾಂಸರು ಐದೂ ಪಾರಂಪರಿಕ ಕುಲಕಸಬುದಾರರನ್ನೊಳಗೊಳ್ಳುವ ಒಂದು ಸೂಕ್ತ ಜಾತಿ ಪರಿಭಾಷಾ ಪದಕ್ಕಾಗಿ ಹುಡುಕಾಡಿದರು. ಅಂತಿಮವಾಗಿ ಈ ವಿದ್ವಾಂಸರು, ಆರ್ಷೇಯ ಕಾಲದಿಂದಲೂ ವಿಶ್ವಕರ್ಮಸಾಹಿತ್ಯದಲ್ಲಿ ಬಹುವ್ಯಾಪಕವಾಗಿ ಬಳಕೆಯಾಗಿರುವ 'ವಿಶ್ವಕರ್ಮ ಬ್ರಾಹ್ಮಣ' ಅಥವಾ 'ವಿಶ್ವಬ್ರಾಹ್ಮಣ' ಎಂಬ ಪದವನ್ನು ಆಯ್ಕೆ ಮಾಡಿಕೊಂಡರು. ಸಪ್ತಾರ್ಷೇಯ ಬ್ರಾಹ್ಮಣರು, ವೈದಿಕ ಬ್ರಾಹ್ಮಣ, ನಿಯೋಗಿ ಬ್ರಾಹ್ಮಣ, ವೈಷ್ಣವ ಬ್ರಾಹ್ಮಣ, ಸಾರಸ್ವತಬ್ರಾಹ್ಮಣ, ಕಾಯಸ್ಥಬ್ರಾಹ್ಮಣ, ದ್ರಾವಿಡ ಬ್ರಾಹ್ಮಣ, ಗೌಡಬ್ರಾಹ್ಮಣ ಎಂದು ವಿವಿಧ ಜಾತಿ ಪರಿಭಾಷಾ ಪದಗಳಿಂದ ಕರೆದುಕೊಂಡಂತೆ ವಿಶ್ವಕರ್ಮರೂ ಕೂಡ ವಿಶ್ವಕರ್ಮಬ್ರಾಹ್ಮಣ, ದೇವಬ್ರಾಹ್ಮಣ, ವಿಶ್ವಬ್ರಾಹ್ಮಣ, ಪಾಂಚಾಳಬ್ರಾಹ್ಮಣ, ಜಾಂಗೀಡ ಬ್ರಾಹ್ಮಣ, ಶಿಲ್ಪಬ್ರಾಹ್ಮಣ ಎಂದು ವಿವಿಧ ಜಾತಿ ಪರಿಭಾಷಾ ಪದಗಳಿಂದ ಕರೆದುಕೊಂಡರು. ವಿಶ್ವಕರ್ಮರು ಸರ್ಕಾರಿ ದಾಖಲೆಗಳಲ್ಲಿ ತಮ್ಮ ಹೆಸರುಗಳನ್ನು ದಾಖಲು ಮಾಡಿಸುವಾಗ ಆ ಬಗ್ಗೆ ತಮ್ಮ ನಿಲುವನ್ನು ಪ್ರತಿಪಾದಿಸಿ ಗಣತಿ ಅಧಿಕಾರಿಗಳಿಗೆ ಮನವರಿಕೆ ಮಾಡಿಕೊಟ್ಟು ತಮ್ಮ ಜಾತಿಯ ಹೆಸರನ್ನು ತಮಿಳುನಾಡು, ಆಂಧ್ರಪ್ರದೇಶ

ಮತ್ತು ಕರ್ನಾಟಕಗಳಲ್ಲಿ 'ವಿಶ್ವಬ್ರಾಹ್ಮಣ' ಎಂದೇ ದಾಖಲಿಸುವಂತೆ ಹೊರಡಿಸಿರುವ ಸರ್ಕಾರದ ಆದೇಶವನ್ನೂ ಪಡೆದಿದ್ದಾರೆ.

ವಿಶ್ವಕರ್ಮರು ತಮ್ಮ ಸ್ಥಾನಮಾನಗಳ ಪುನರುಜ್ಜೀವನಕ್ಕಾಗಿ ಹೋರಾಟದ ಸ್ಫೂರ್ತಿಯ ಸೆಲೆಯಾಗಿ ಜಾತಿಯ ಸಂಘಗಳನ್ನು ಅಸ್ತಿತ್ವಕ್ಕೆ ತಂದರು. ಸಾಮಾನ್ಯವಾಗಿ ಸಂಘಗಳ ಸ್ಥಾಪನೆಯ ಉದ್ದೇಶ ಸಾಮಾಜಿಕವಾಗಿ ರಾಜಕೀಯವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಗೌರವ ಸ್ಥಾನಮಾನ ಹೊಂದಬೇಕೆಂಬ ಆಶಯದಿಂದ ಕೂಡಿವೆ. ಈ ಕಾರಣಕ್ಕಾಗಿ ಜಿಲ್ಲೆ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸಂಘಟನೆಗೊಳ್ಳಲು ಪ್ರಾರಂಭಿಸಿದರು. ಹಾಗೆ ನೋಡಿದರೆ ವಿಶ್ವಕರ್ಮರು ೧೭ನೇ ಶತಮಾನದಷ್ಟು ಹಿಂದೆಯೇ ಸಂಘಟಿತರಾಗಲು ಪ್ರಾರಂಭಿಸಿದರು ಎಂಬುದನ್ನು ವಿಶ್ವಕರ್ಮ ಸಾಹಿತ್ಯದ ಅಧ್ಯಯನದಿಂದ ತಿಳುದುಕೊಳ್ಳುತ್ತೇವೆ.

"ವಿಶ್ವಕರ್ಮರು ಭಾರತದಲ್ಲಿ ಬಹು ವಿರಳವಾಗಿ ಹರಡಿಕೊಂಡಿರುವುದರಿಂದ ಅವರನ್ನು ಸಂಘಟಿಸುವುದು ನಿಧಾನಗತಿಯ ಶ್ರಮದಾಯಕ ಕೆಲಸ. ಪ್ರಾರಂಭಿಕ ಕಾಲದ ಸಂಘಗಳು, ಪಂಗಡ ಭಾಷೆ ವೃತ್ತಿ ಮತ್ತು ಪ್ರದೇಶಗಳೆಂಬ ಸಂಕುಚಿತ ನಿಷ್ಠೆಯ ಸಂಘಗಳು ಮಾತ್ರವಾಗಿದ್ದವು. ಈ ರೀತಿಯ ನಿಷ್ಠೆಯು ವಿಶ್ವಕರ್ಮರಲ್ಲಿ ಹಲವು ರೀತಿಯ ಅನೈಕ್ಯತೆ ಬೆಳೆಯಲು ಕಾರಣವಾಯಿತು. ರಾಷ್ಟ್ರಮಟ್ಟದ ಸಂಘಗಳು ೧೯೧೭ರ ನಂತರ ರೂಪುಗೊಂಡಿದ್ದನ್ನು ನಾವು ಕಾಣುತ್ತೇವೆ. ಉದಾ: 'ಅಖಿಲ ಭಾರತ ವಿಶ್ವಕರ್ಮ ಮುಕ್ತ ಒಕ್ಕೂಟ'ವು ನೋಂದಣಿಗೊಂಡದ್ದು ೧೯೧೭ರಲ್ಲಿ. 'ದ ಮದ್ರಾಸ್ ವಿಶ್ವಕರ್ಮ ಲೇಬರ್ ಯೂನಿಯನ್', 'ಅಖಿಲ ಕೇರಳ ವಿಶ್ವಕರ್ಮ ಮಹಾಸಭಾ', 'ತಮಿಳುನಾಡು ವಿಶ್ವಕರ್ಮ ಆರ್ಟಿಸಾನ್ಸ್ ಸಂಘಂ', 'ಕರ್ನಾಟಕ ರಾಜ್ಯ ವಿಶ್ವಕರ್ಮ ಮಹಾಸಭಾ' ಮತ್ತು ಈ ರೀತಿಯ ಇತರ ಸಂಘಗಳು ಸ್ವಾತಂತ್ರ್ಯಪೂರ್ವವೇ ಅಸ್ತಿತ್ವಕ್ಕೆ ಬಂದವು".[೧೯]

ಇಂಥ ಸಂಘಗಳನ್ನು ಅಸ್ತಿತ್ವಕ್ಕೆ ತರುವ ಮೂಲಕ ವಿಶ್ವಕರ್ಮ ಸಮಾಜದವರು ತಮ್ಮ ಸಮಾಜದ ಕಾರ್ಯಚಟುವಟಿಕೆಗಳು ಸಾಮೂಹಿಕ ಉಪನಯನ, ವಧು ವರ ಅನ್ವೇಷಣೆ ಸಮಾವೇಶ, ಸಾಹಿತ್ಯ ಸಮಾವೇಶ ಮೊದಲಾದವುಗಳನ್ನು ಮಾಡತೊಡಗಿದರು. ತಮ್ಮ ಮತ ಬಾಂಧವರಿಗೆ ಸಾಮಾಜಿಕ-ಧಾರ್ಮಿಕ ಸಂಗತಿಗಳನ್ನು ಅತಿಶೀಘ್ರವಾಗಿ ತಿಳಿಸಬೇಕೆಂಬ ಕಾರಣಕ್ಕಾಗಿ ದೇಶದ ವಿವಿಧ ಕಡೆಗಳಲ್ಲಿ ವಿಶ್ವಕರ್ಮ ಸಮಾಜದ ಪತ್ರಿಕೆಗಳನ್ನು ಪ್ರಾರಂಭಿಸಿದರು. ಪತ್ರಿಕಾ ಮಾಧ್ಯಮವನ್ನು ಬಳಸಿಕೊಂಡು ಅವರು ತಮ್ಮ ಧರ್ಮ, ಸಮಾಜ, ಇತಿಹಾಸವನ್ನು ಅರಿತುಕೊಳ್ಳುವ ಪ್ರಯತ್ನ ಮಾಡಿದರು. ವಿಶ್ವಕರ್ಮರು ತಾವು ಬ್ರಾಹ್ಮಣವರ್ಗಕ್ಕೆ ಸೇರಿದವರು ಎಂಬುದನ್ನು ಸಾಬೀತುಪಡಿಸಲು ಲೇಖನಗಳನ್ನು ಬರೆದರು. ಈ ಎಲ್ಲ ವಿಷಯಗಳನ್ನು ಭಾರತದ ವಿವಿಧ ವಿಶ್ವಕರ್ಮ ಪತ್ರಿಕೆಗಳು ಪ್ರಕಟಿಸಿದವು.

ಜೀವಣ್ಣ ಮಸಳಿ ಅವರು ಬಾಗಲಕೋಟೆಯಿಂದ 'ವಿಶ್ವದರ್ಶನ' ಎಂಬ ವಾರಪತ್ರಿಕೆಯನ್ನು ಕೆಲವು ವರ್ಷ ಪ್ರಕಟಿಸಿದ್ದಾರೆ. ವಿಶ್ವದರ್ಶನ ಪತ್ರಿಕೆಯ ಸಂಪಾದಕ ಜೀವಣ್ಣ ಮಸಳಿ ಪತ್ರಕರ್ತರಿಗೆಲ್ಲ

ಮಾದರಿಯಾದವರು. ವಿಶ್ವದರ್ಶನ ಪತ್ರಿಕೆ ಕೇವಲ ವಿಶ್ವಕರ್ಮ ಸಮಾಜಕ್ಕೆ ಮೀಸಲಾದ ಪತ್ರಿಕೆ ಮಾತ್ರವಾಗಿರಲಿಲ್ಲ. ಸಮಕಾಲೀನ ರಾಜಕೀಯ, ಸಾಹಿತ್ಯಿಕ, ಸಾಮಾಜಿಕ ಸುದ್ದಿಗಳನ್ನು ಪ್ರಕಟಿಸುವ ಒಂದು ಮಹತ್ವದ ಪತ್ರಿಕೆಯಾಗಿತ್ತು. ಪ್ರಾರಂಭದಲ್ಲಿ 'ವಿಶ್ವದರ್ಶನ' ದಿನಪತ್ರಿಕೆಯಾಗಿ ಪ್ರಕಟವಾಗುತ್ತಿತ್ತು. ಆದರೆ ಮಸಳಿ ಅವರ ಕಾರ್ಯಬಾಹುಳ್ಯ ಕಾರಣವಾಗಿ, ಅದು ವಾರಪತ್ರಿಕೆಯಾಗಿ ಬದಲಾವಣೆ ಹೊಂದಿತು. ೬ ಪುಟಗಳ ಟ್ಯಾಬ್ಲಾಯ್ಡ್ ಆಕಾರದ ಈ ಪತ್ರಿಕೆ ಬಾಗಲಕೋಟ ಜಿಲ್ಲೆಯಲ್ಲಿ ಜನಪ್ರಿಯವಾಗಿತ್ತು. ಮಸಳಿ ಅವರ ಪತ್ರಿಕಾ ಬದುಕನ್ನು ಕುರಿತು ಖ್ಯಾತ ಪತ್ರಕರ್ತ ಡಾ. ಪಾಟೀಲ ಪುಟ್ಟಪ್ಪ ಅವರು ತಮ್ಮ ಪ್ರಪಂಚ ಪತ್ರಿಕೆಯಲ್ಲಿ ತುಂಬ ಅರ್ಥಪೂರ್ಣವಾಗಿ ದಾಖಲಿಸಿದ್ದಾರೆ.

"ಜೀವಣ್ಣ ಮಸಳಿ ಅವರು ಥೋರೋ ಮಾದರಿಯ ವಿಚಾರ ಪ್ರವರ್ತಕರು; ಹೊರೇಸ್ ಗ್ರೀಲಿ ಮಾದರಿಯ ಪತ್ರಿಕಾಕರ್ತರು. ಸಮಾಜ ಸುಧಾರಣೆಯೇ ಅವರ ಕಾರ್ಯಕ್ಷೇತ್ರ, ವ್ಯಕ್ತಿ ಪರಿವರ್ತನೆಯೇ ಅವರ ವೃತ್ತಿ. ಅವರು ಲಾಭ ಹಾನಿಗಳ ಲೆಕ್ಕ ಹಾಕಿದವರಲ್ಲ. ಜನರನ್ನು ಮನುಷ್ಯರನ್ನಾಗಿ ಮಾಡುವ ವಿಚಾರಗಳ ವ್ಯವಹಾರವನ್ನು ಅವರು ಮಾಡಿಕೊಂಡು ಬಂದವರು. ಸಾರ್ವಜನಿಕಕ್ಕೆ ಅವರಂತೆ ತಮ್ಮನ್ನು ಸಮಗ್ರವಾಗಿ ಅರ್ಪಿಸಿಕೊಂಡವರು ಯಾವ ನಾಡಿನಲ್ಲಾದರೂ ಕ್ವಚಿತ್ತಾಗಿ ಸಿಕ್ಕುತ್ತಾರೆ. ಹೊರೇಸ್ ಗ್ರೀಲಿ ಅಮೇರಿಕೆಯಲ್ಲಿ ತನ್ನ ಶರ್ಟಿನಲ್ಲಿ ಒಂದಿಷ್ಟು ಅಚ್ಚಿನ ಮೊಳೆಗಳನ್ನು ಕಟ್ಟಿಕೊಂಡು ಕೈಯಲ್ಲಿ ಒಂದು ಹ್ಯಾಂಡ್‌ಪ್ರೆಸ್ ಹಿಡಿದುಕೊಂಡು ಊರಿಂದೂರಿಗೆ ಹೋಗಿ ಜನರಿಗೆ ಸುದ್ದಿಯನ್ನು ತಿಳಿವಳಿಕೆಯನ್ನು ಒದಗಿಸಿಕೊಡುತ್ತಿದ್ದ ಹೋಲಿಕೆಯನ್ನು ನಾವು ಜೀವಣ್ಣ ಮಸಳಿ ಅವರಲ್ಲಿ ಕಾಣುತ್ತೇವೆ. ಸೂರ್ಯನಿಗೆ ಬೆಳಗುವುದೇ ಸ್ವಭಾವ; ಜೀವಣ್ಣ ಮಸಳಿ ಅವರಿಗೆ ತಿಳಿಸುವುದೇ ಸ್ವಭಾವ. ಗಾಳಿ ಬೀಸುವುದನ್ನು ಬಿಡಲಾರದು, ಹಾಗೇ ಜೀವಣ್ಣ ಮಸಳಿ ಅವರು ಹೇಳುವುದನ್ನು ಬಿಡಲಿಲ್ಲ.

ಪತ್ರಿಕೆಗಳ ಮೂಲಕ ಜಗತ್ತಿನ ವಿದ್ಯಮಾನಗಳನ್ನು, ಪತ್ರಿಕಾಧರ್ಮದ ಜ್ಞಾನವನ್ನು ತಿಳಿದುಕೊಂಡು ತಮ್ಮ ಲೋಕದೃಷ್ಟಿಯನ್ನು ವಿಸ್ತರಿಸಿಕೊಂಡರು. ಜೀವಣ್ಣ ಮಸಳಿ ಅವರಲ್ಲಿ ಹಣ ಇರಲಿಲ್ಲ, ಮುದ್ರಣಾಲಯ ಇರಲಿಲ್ಲ; ಆದರೆ ವಾರಪತ್ರಿಕೆಯೊಂದನ್ನು ಮಾಡಬೇಕೆನ್ನುವ ಅದಮನೀಯ ಹುಮ್ಮಸ್ಸು ಮಾತ್ರ ಇದ್ದಿತು. ಸ್ವತಂತ್ರವಾದ ವಿಶ್ವದರ್ಶನ ಪತ್ರಿಕೆಯನ್ನು ಆರಂಭಿಸಿಯೇ ಬಿಟ್ಟರು. ಆ ದಿನಗಳಲ್ಲಿ ಪತ್ರಿಕೆ ಓದುವವರು ಕಡಿಮೆ, ಕೊಳ್ಳುವವರು ಇನ್ನೂ ಕಡಿಮೆ. ಬೇರೆ ಮುದ್ರಣಾಲಯದಲ್ಲಿ ಪತ್ರಿಕೆ ಪ್ರಕಟವಾಗತೊಡಗಿತು. ಮಸಳಿ ಅವರು ಸರ್ವಾರ್ಥದಲ್ಲಿಯೂ ಸಂಪೂರ್ಣ ಪತ್ರಿಕೋದ್ಯಮಿ. ಅವರು ಬರೆಯುತ್ತಿದ್ದರು, ಮೊಳೆ ಜೋಡಿಸುತ್ತಿದ್ದರು, ಮುದ್ರಿಸುತ್ತಿದ್ದರು, ವಿಳಾಸ ಬರೆದು ಪತ್ರಿಕೆಗಳನ್ನು ಅಂಚೆಗೆ ಹಾಕಿ ಬರುತ್ತಿದ್ದರು. ಇಷ್ಟೆಲ್ಲ ಮಾಡಿಯೂ ಅವರ ಹೊಟ್ಟೆಯ ತಗ್ಗು ತುಂಬುವಂತಿರಲಿಲ್ಲ. ಅವರ ಅವಶ್ಯಕತೆಗಳಾದರೂ ಏನು? ಅವರ ಊಟದ ಅಭಿರುಚಿ ಸಾಮಾನ್ಯ. ಬೆಣ್ಣೆ ತುಪ್ಪ ಅವರಿಗೆ ಯಾವುದೂ ಬೇಡ. ವಿಕಾರಜನ್ಯ ವಸ್ತುಗಳೆಂದರೆ ಅವರಿಗೆ ಅಪಥ್ಯ. ಅವರಿಗೆ ಏಕಾಂತ ಬೇಕು. ಹೌದು, ಅವರು ಲೋಕಾಂತದಲ್ಲಿಯೇ ಏಕಾಂತವನ್ನು ಹುಡುಕಿಕೊಳ್ಳುತ್ತಿದ್ದರು.

ಅವರು ಜನರಲ್ಲಿ ಒಬ್ಬರು, ಆದರೆ ಜನರಿಂದ ಬೇರೆ. ಹತ್ತು ಸಾವಿರ ಮಂದಿ ಒಂದಾದರೆ, ಮಸಳಿಯವರ ದಾರಿ ಭಿನ್ನ. ತಮಗೆ ಸರಿ ಎಂದು ಕಂಡುದುದನ್ನು ಅವರು ಜನಪ್ರಿಯ ಅಭಿಪ್ರಾಯ ಬೇರೆ ಇದೆಯೆಂದು ಬದಲಿಸತಕ್ಕವರಲ್ಲ. ವಿವೇಕ ಒಪ್ಪದೇ ಇದ್ದುದೇನನ್ನೂ ಅವರು ಒಪ್ಪಲಿಲ್ಲ. ಜನ ಮೆಚ್ಚಿ ನಡೆದರೇನುಂಟು ಮನಮೆಚ್ಚಿ ನಡೆಯುವುದೇ ಚಂದವು ಎನ್ನುವ ಸರ್ಪಭೂಷಣ ಶಿವಯೋಗಿಗಳ ಮಾತನ್ನು ಅವರು ತಮ್ಮ ಬದುಕಿನಲ್ಲಿ ಬರೆದುಕೊಂಡಿದ್ದರು.

ಹೆಚ್ಚು ನಿರೀಕ್ಷಣೆ ಮಾಡುತ್ತ ಅವರು ಜಗತ್ತನ್ನು ಹೆಚ್ಚು ತಿಳಿದುಕೊಂಡರು. ಅವರ ಮನಸ್ಸು ಯಾವಾಗಲೂ ಹೊಸ ಸಂಗತಿಗಳ ಅನ್ವೇಷಣೆಯಲ್ಲಿ ತೊಡಗಿದ್ದಿತು. ಹೆಚ್ಚು ತಿಳಿದುಕೊಳ್ಳಬೇಕೆನ್ನುವ ಪತ್ರಿಕೋದ್ಯಮಿಯ ಕುತೂಹಲ ಅವರನ್ನು ಹಿಡಿದುಕೊಂಡಿದ್ದಿತು. ಅವರಿಗೆ ಹೇಳುವುದು ಗೊತ್ತು ಹೇಗೆ ಹೇಳಬೇಕೆನ್ನುವುದೂ ಗೊತ್ತು. ಹೆಚ್ಚು ಮನನ ಮಾಡಿ ಅವರ ಮನಸ್ಸು ತಿಳಿಯಾಗಿದ್ದಿತು. ತಿಳಿದವನು ತಾನು ತಿಳಿದುದನ್ನು ಹೆಚ್ಚು ತಿಳಿಮಾಡಿ ಹೇಳಬಲ್ಲ. ಹೇಳುವುದು ನಿನ್ನಲ್ಲಿ ಇದ್ದರೆ, ಹೇಳುವುದಕ್ಕೂ ಬಂದೇ ಬರುತ್ತದೆ ಎನ್ನುವ ಒಂದು ಮಾತು ಇಂಗ್ಲಿಷಿನಲ್ಲಿದೆ. ಜೀವಣ್ಣ ಮಸಳಿ ಅವರಲ್ಲಿ ಹೇಳುವುದಕ್ಕೆ ಬೇಕಾದಷ್ಟಿದ್ದಿತು. ಅದನ್ನು ಹೇಳುವಂಥ ತಿಳಿಯಾದ ಶೈಲಿಯನ್ನು ಅವರು ರೂಢಿಸಿಕೊಂಡಿದ್ದರು".[೨೦]

ಪತ್ರಿಕೆಯ ಒಟ್ಟು ವಿನ್ಯಾಸವನ್ನು ಕುರಿತು ಜೀವಣ್ಣ ಮಸಳಿ ಅವರು 'ವಿಶ್ವದರ್ಶನ' ಪತ್ರಿಕೆಯ ಪ್ರಥಮ ಸಂಚಿಕೆಯಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ: "ಇಂಥ ಒಂದು ಪತ್ರಿಕೆಯನ್ನು ಪ್ರಕಟ ಮಾಡಬೇಕೆಂಬ ಬಯಕೆ ನನ್ನಲ್ಲಿ ಬಹುದಿನಗಳಿಂದಲೂ ಇತ್ತು. ಆ ಬಯಕೆಯು ಪರಿಣಾಮಕಾರಿಯಾದ ನಿರ್ಧಾರವಾಗಿ ಪರಿಣಮಿಸಲು ಹೆಚ್ಚು ಕಾಲವೇ ಹಿಡಿಯಿತು. ಆದರೆ ಒಮ್ಮೆ ನಿರ್ಧಾರವಾದ ಮೇಲೆ ತಡೆದು ನಿಲ್ಲಲಿಲ್ಲ. ನನ್ನ ನಿರ್ಧಾರವು ಕಾರ್ಯರೂಪಕ್ಕೆ ಬರಲು ಅನೇಕ ಜನ ಹಿರಿಯರು ಹಾಗೂ ಸ್ನೇಹಿತರು ಅನೇಕ ಬಗೆಯಿಂದ ನನಗೆ ನೆರವಾಗಿದ್ದಾರೆ. ಅವರ ಕರುಣೆ, ಪ್ರೋತ್ಸಾಹ ನನ್ನ ಕೈ ಹಿಡಿದು ನಡೆಸದಿದ್ದರೆ, ಈ ಕೆಲಸ ಕೈಗೂಡುವುದು ಅಸಾಧ್ಯವೇ ಇತ್ತು. ಇಡಿಯ 'ವಿಶ್ವದರ್ಶನ'ವನ್ನು ಸಾರವತ್ತಾಗಿ ಸಂಗ್ರಹಿಸಿ ಜನತೆಯಲ್ಲಿ ಉತ್ತಮ ಸಂಸ್ಕಾರ ಮತ್ತು ಅಭಿರುಚಿಯನ್ನು ತುಂಬಿ ಒಳ್ಳೆಯದಾದುದರ ಬೆಲೆಯನ್ನು ಎತ್ತಿ ತೋರಿಸುವ ಶ್ರೇಷ್ಠಮಾದರಿಯ ಒಂದು ಸಾಪ್ತಾಹಿಕ ಪತ್ರಿಕೆಯ ಅಗತ್ಯ ಕನ್ನಡದಲ್ಲಿ ಎಂದಿನಿಂದಲೂ ಇದೆ. ಅಲ್ಲದೆ ಶಾಶ್ವತ ಬೆಲೆಗಳನ್ನು ವಾರಪತ್ರಿಕೆಯಷ್ಟು ಸಮರ್ಪಕವಾಗಿ ಬೇರೆ ಯಾವ ಪ್ರಸಾರ ಸಾಧನವೂ ಪ್ರಕಟಿಸಲಾರದು. ಈ ತಿಳುವಳಿಕೆ ನನ್ನ ಮನಸ್ಸಿನಲ್ಲಿ ಆಳವಾಗಿ ಬೇರೂರಿತ್ತು. ಇದೇ ಸಂದರ್ಭದಲ್ಲಿ ನಾನು ಲೋಕವಿಖ್ಯಾತವಾದ 'ಟಾಯಿಮ್' ಪತ್ರಿಕೆಯ ಕಾರ್ಯಾಲಯಕ್ಕೆ ಹೋಗಿ ಅದರ ಪ್ರಕಾಶಕರಾದ ಹೆನ್ರಿ ಲೂಸ್ ಅವರೊಂದಿಗೆ ಮಾತನಾಡಿದಾಗ ಅಂಥದೇ ಉತ್ತಮ ದರ್ಜೆಯ ಪತ್ರಿಕೆಯನ್ನು ಕನ್ನಡದಲ್ಲೂ ಪ್ರಕಟಿಸಬೇಕೆನ್ನುವ ಆಕಾಂಕ್ಷೆ ನನ್ನ ಮನಸ್ಸಿನಲ್ಲಿ ಮೂಡಿತು. ಅದೇ ಅಂದಿನ ಬಯಕೆ ಇಂದು ಪಕ್ವವಾಗಿ 'ವಿಶ್ವದರ್ಶನ'ದ ರೂಪ ತಳೆದು ಬಂದಿದೆ. ಮನಸ್ಸಿನ ಆಕಾಂಕ್ಷೆಯ ಎತ್ತರಕ್ಕೆ

ಕೈಯೊಳಗಿನ ಸಲಕರಣೆಗಳು ಹೋಗಲಾರೆನ್ನುವ ಕಾರಣದಿಂದ ನನ್ನ ಮನಸ್ಸಿಗೆ ಇನ್ನೂ ಪೂರ್ಣ ಸಮಾಧಾನವೆನಿಸಲಿಲ್ಲ. ಹೆಚ್ಚಿನ ಕಾರ್ಯಸಾಧನೆಗೆ ಅತೃಪ್ತಿಯು ಪ್ರೇರಕ ಶಕ್ತಿಯೆಂದು ನಾನು ಬಗೆದಿದ್ದೇನೆ. ಈ ವಿಶ್ವದಲ್ಲಿ ಜನ ತಿಳಿಯಬೇಕಾದ ಒಳ್ಳೆಯ ಅಂಶ ಏನಿದೆಯೋ, ಅದೆಲ್ಲವನ್ನು ಪ್ರಕಟಿಸಿ ತೋರಿಸುವ ಉದ್ದೇಶದಿಂದ 'ವಿಶ್ವದರ್ಶನ' ಪತ್ರಿಕೆ ಈಗ ಪ್ರಕಟವಾಗಿದೆ. ವಿಸ್ತಾರವಾದ ವಿಷಯ ಪ್ರಕಾರದ ಮೇಲೆ ಅದನ್ನು ಆರಂಭ ಮಾಡಿದ್ದೇನೆ. ಒಳ್ಳೆಯ ಅಭಿರುಚಿಯುಳ್ಳ ಓದುಗರು ಮೆಚ್ಚಿ ಅಹುದೆನ್ನುವ ರೀತಿಯಲ್ಲಿ ಈ ಪತ್ರಿಕೆ ಪ್ರಕಟವಾಗಿದೆಯೆನ್ನುವ ವಿಶ್ವಾಸ ನನಗಿದೆ. ಇಲ್ಲಿ ಮಾರ್ಗದರ್ಶಕ ವ್ಯಕ್ತಿಗಳಿದ್ದಾರೆ. ಕತ್ತಲೆಯಲ್ಲಿರುವ ಜನರಿಗೆ ಅವರ ಜೀವನವು ಕೈದೀವಟಿಗೆಯಾಗಿದೆ. ಇಲ್ಲಿ ರಾಜಕಾರಣ ತಜ್ಞರಿದ್ದಾರೆ. ಅವರ ವಿವರಣೆಯಿಂದ ಸಮಸ್ಯೆಗಳ ಪರಿಹಾರಕ್ಕೆ ದಾರಿ ಗೋಚರವಾಗಬಹುದು. ಇಲ್ಲಿ ಹಿರಿಯರ ಲೋಕಜ್ಞಾನವಿದೆ. ಅದರ ಮನನದಿಂದ ಬಾಳು ಉದ್ದೀಪನಗೊಳ್ಳಬಹುದು. ಇಲ್ಲಿ ಮನರಂಜನೆಯಿದೆ. ನೃತ್ಯದ ವಿವಿಧ ಭಂಗಿಯ ಪದವಿನ್ಯಾಸವಿದೆ. ಪುರಾತನ ಸಂಸ್ಕೃತಿಯ ಪುಣ್ಯ ಸ್ಮರಣೆಯಿದೆ. ಇಲ್ಲಿ ಶಿಕ್ಷಣವಿದೆ, ಅನ್ನವಿದೆ, ಹಾಸ್ಯವಿದೆ, ಕಸೂತಿ ಕಲೆಯಿದೆ. ಇಲ್ಲಿ ಚಿತ್ರಗಳಿವೆ, ಅಲಂಕಾರವಿದೆ. ಉಪಯುಕ್ತ ಸೂಚನೆಗಳ ಸಂಗ್ರಹವಿದೆ. ರಾಶಿ ಭವಿಷ್ಯದಲ್ಲಿ ನಂಬಿಕೆಯುಳ್ಳವರಿಗೆ ಯೋಗ್ಯ ಸಮಾಧಾನವೂ ಇದೆ. ಅವರವರ ರುಚಿಗೆ ತಕ್ಕ ಇನ್ನೂ ಅನೇಕ ಸಂಗತಿಗಳು ಇಲ್ಲಿ ಇವೆ. ಈಗ ಪ್ರಕಟವಾಗಿರುವ ಎಲ್ಲ ಶೀರ್ಷಿಕೆಗಳನ್ನು ತಾವು ಮೆಚ್ಚುತ್ತಿರೆನ್ನುವ ವಿಶ್ವಾಸ ನನಗಿದೆ. ಇನ್ನು ಭವ್ಯವಾಗಿ ಪ್ರಕಟವಾಗುವ ವ್ಯಾಪಕ ಸ್ವರೂಪದ ಈ ಸಾಪ್ತಾಹಿಕ ಬೃಹದ್ದರ್ಶನ ಸಂಕ್ಷಿಪ್ತ ಸೂಚನೆ ಈ ಸಂಚಿಕೆಯ ಮೂಲಕ ನಿಮಗೆ ಆಗಬಹುದೆಂದು ನಾನು ನಂಬಿದ್ದೇನೆ".[೨೧]

ಹೀಗೆ ಹತ್ತು ಹಲವು ಮಹತ್ವಾಕಾಂಕ್ಷೆಗಳನ್ನು ಒಳಗೊಂಡ ಜೀವಣ್ಣ ಮಸಳಿ ಅವರ 'ವಿಶ್ವದರ್ಶನ' ಪತ್ರಿಕೆಯನ್ನು ೧೪ ವರುಷಗಳ ಕಾಲ ಪ್ರಕಟಿಸಿ ದಾಖಲೆಯನ್ನೇ ಬರೆದರು. ಶಿಕ್ಷಕವೃತ್ತಿಯಲ್ಲಿ ಅವರು ತಮ್ಮ ಸ್ವಂತ ಶ್ರಮದಿಂದ ಹಣ ಹಾಕಿ ಈ ಪತ್ರಿಕೆಯನ್ನು ಪ್ರಕಟಿಸಿದರು. ಸತತ ೧೪ ವರುಷಗಳ ಕಾಲ ಪತ್ರಿಕೆ ನಡೆಸಿದರೂ ಸಮಾಜದವರಿಂದ ಸಿಗಬೇಕಾದ ಬೆಂಬಲ ದೊರೆಯದ ಕಾರಣ ಪತ್ರಿಕೆಯನ್ನು ನಿಲ್ಲಿಸಿದರು. ಈ ಕುರಿತು ಜಗತ್ ಕಲ್ಯಾಣ ಸಂಪಾದಕರು ಒಂದೆಡೆ ಹೀಗೆ ಬರೆಯುತ್ತಾರೆ: "ಜೀವಣ್ಣ ಮಸಳಿ ಅವರು ಸುಮಾರು ೧೨ ವರ್ಷಗಳ ಹಿಂದೆ ವಿಶ್ವದರ್ಶನ ಎಂಬ ವಾರಪತ್ರಿಕೆಯಿಂದ ತಮ್ಮ ಪತ್ರಿಕೋದ್ಯಮ ಪ್ರಾರಂಭಿಸಿದರು. ಇವರು ಮೂಲತಃ ಶಾಲಾಶಿಕ್ಷಕರು. ನಂತರ ಶಿಕ್ಷಕ ವೃತ್ತಿಗೆ ರಾಜೀನಾಮೆ ನೀಡಿ ಇದಕ್ಕೇ ನಿಂತುಕೊಂಡರು. ಆದರೆ ಈ ಸಮಾಜ ಬಾಂಧವರಿಂದ ಸಾಕಷ್ಟು ಪ್ರೋತ್ಸಾಹ ಬೆಂಬಲ ದೊರೆಯದ ಕಾರಣ ಸದ್ಯ ಪತ್ರಿಕೆಯನ್ನು ನಿಲ್ಲಿಸಿರುತ್ತಾರೆ. ಅವರು ಪತ್ರಿಕೆಯನ್ನು ನಿಲ್ಲಿಸಿದ್ದು ಒಂದು ಬಗೆಯಿಂದ ಒಳ್ಳೆಯದೇ ಆಗಿದೆ. ಅದೆಂದರೆ ಅವರು ಪತ್ರಿಕೋದ್ಯಮಕ್ಕೆ ಅಂಟಿಕೊಂಡಿದ್ದರೆ ಅವರ 'ಮಹಾಮನು' ಎಂಬ ಚರಿತಾರ್ಹ ಕಾದಂಬರಿ ಹೊರಬರುತ್ತಿತ್ತೋ ಇಲ್ಲವೋ ಹೇಳಲಾಗುತ್ತಿರಲಿಲ್ಲ".[೨೨]

ಸಮಾಜದ ಏಳ್ಗೆಗಾಗಿಯೇ ಈ ಪತ್ರಿಕೆಯನ್ನು ಪ್ರಕಟಿಸಲು ಜೀವಣ್ಣ ಮಸಳಿ ಅವರು ತುಂಬ ಶ್ರಮಪಟ್ಟರು. ಸಮಾಜ ಮುಂದೆ ಬರಬೇಕೆಂಬ ಏಕೈಕ ಕಾಳಜಿ ಅವರಿಗಿದ್ದ ಕಾರಣಕ್ಕಾಗಿ ಇಂಥ ಕಾರ್ಯಕ್ಕೆ ಅವರು ಮುಂದಾದರು.

ಪತ್ರಿಕಾ ಮಾಧ್ಯಮ ಬೆಳಳೆಯುವ ದಿನಮಾನದಲ್ಲಿ ಸಮುದಾಯದ ಪತ್ರಿಕೆಗಳ ಅವಶ್ಯಕತೆಯನ್ನು ಮನಗಂಡ ವಿಶ್ವಕರ್ಮ ಸಮುದಾಯದ ವಿವಿಧ ವಿದ್ವಾಂಸರು, ಸಾಹಿತಿಗಳು ತಮ್ಮ ಸಮಾಜದ ಸಂಘಟನೆ, ಶಿಕ್ಷಣ ಮತ್ತು ತಮ್ಮ ಪಂಚಕಲೆಗಳ ಕುರಿತಾದ ಬರವಣಿಗಳು ಬೆಳಕಿಗೆ ತರುವ ನಿಟ್ಟಿನಲ್ಲಿ ಅನೇಕರು ಪತ್ರಿಕಾ ಪ್ರೇರಣೆಯಿಂದಾಗಿ ಸಮುದಾಯದ ಪತ್ರಿಕೆಗಳನ್ನು ಪ್ರಾರಂಭಿಸಿದರು. ಆ ಮೂಲಕ ಪ್ರಾದೇಶಿಕ ವಿಭಾಗಗಳಲ್ಲಿ ವಿಶ್ವಕರ್ಮ ಪತ್ರಿಕೆಗಳು ಹುಟ್ಟಿಕೊಂಡದ್ದು, ಅವುಗಳಿಗೆ ಪ್ರೇರಣೆಯಾಗುವಂತೆ ಲೇಖನಗಳನ್ನು ನೀಡಿದ್ದಾರೆ. 

ಸಂಘಟನೆ ದೃಷ್ಟಿಯಿಂದಲೂ ವಿಶ್ವಕರ್ಮ ಪತ್ರಿಕೆಗಳು ಬಹುದೊಡ್ಡ ಕೆಲಸ ಮಾಡಿವೆ. ಎ.ಎಂ. ರಂಗನಾಥರಾಯ ಎಂಬುವರು ಹರಿಹರದಿಂದ ೧೯೭೬ ಅಕ್ಟೋಬರ್ ೧೨ ರಂದು ಜಗತ್‌ಕಲ್ಯಾಣ ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. 'ರಾಜ್ಯದಾದ್ಯಂತ ಪ್ರಸಾರವುಳ್ಳ ಧಾರ್ಮಿಕ ತಾತ್ವಿಕ ಸಾಹಿತ್ಯಿಕ ಸರ್ವಧರ್ಮ ಸಮನ್ವಯ ಸರ್ವೋದಯ ಪಕ್ಷ ಪತ್ರಿಕೆ' ಎಂಬ ಟ್ಯಾಗಲೈನ್ ಹೊಂದಿದ್ದ ಈ ಪತ್ರಿಕೆ ಇಂದಿಗೂ ಪ್ರಕಟವಾಗುತ್ತಿದೆ.

ಮುಂಬೈಯಲ್ಲಿ ಮೂವತ್ತು ವರ್ಷಗಳ ಕಾಲ ಕ್ಲಾರ್ಕ್ ಸ್ಟೆನೊ ಆಗಿ ಕಾರ್ಯನಿರ್ವಹಿಸಿ ನಿವೃತ್ತಿಯಾಗಿ ಬಂದಿದ್ದ ರಂಗನಾಥರಾಯರು ಹರಿಹರದಿಂದ ಮೊಟ್ಟ ಮೊದಲು ಈ ಪತ್ರಿಕೆಯನ್ನು ಪ್ರಾರಂಭಿಸಿದ ಹೆಗ್ಗಳಿಕೆಗೆ ಪಾತ್ರರಾದರು. ಪ್ರಾರಂಭದಲ್ಲಿ 'ಪ್ರಾಂತವಾಣಿ' ಎಂಬ ದಿನಪತ್ರಿಕೆಯನ್ನು ಪ್ರಕಟಿಸಿದರು. ಅದು ಕಾಲಾಂತರದಲ್ಲಿ 'ಅಮರನುಡಿ' ನಂತರ 'ಅಮರ ವಾರ್ತೆ' ಎಂಬ ಹೆಸರಿನಲ್ಲಿ ಮರುರೂಪ ಪಡೆಯಿತು. ೧೯೭೬ರಲ್ಲಿ 'ಜಗತ್‌ಕಲ್ಯಾಣ' ಪಾಕ್ಷಿಕ ಪತ್ರಿಕೆ ಕರ್ನಾಟಕದ ವಿಶ್ವಕರ್ಮ ಜನಾಂಗದ ಧಾರ್ಮಿಕ ಸಾಮಾಜಿಕ ಪತ್ರಿಕೆಯಾಗಿ ನಡೆಯುತ್ತಿದೆ. ಈ ಜನಾಂಗವನ್ನು ಒಂದುಗೂಡಿಸುವಲ್ಲಿ ಯಶಸ್ವಿಯಾಗಿದೆ. ರಾಜಕೀಯದಲ್ಲಿಯೂ ಆಸಕ್ತಿ ಹೊಂದಿದ್ದ ಇವರು ರಾಜಕಾರಣದಲ್ಲಿ ನೇರವಾಗಿ ಭಾಗವಹಿಸದಿದ್ದರೂ ದೇಶದ ಆಗು ಹೋಗುಗಳ ಬಗ್ಗೆ ಕಳಕಳಿಯಿಂದ ಬರೆಯುವ ಸಂಪಾದಕೀಯಗಳು ರಾಜಕಾರಣಿಗಳಿಗೆ ಮಾರ್ಗದರ್ಶಿಯಾಗಿದ್ದವು.

ತಮ್ಮ ಸಮಾಜದ ಏಳ್ಗೆಗಾಗಿ ಮಾನವೀಯ ಚಿಂತನೆಗಳ ಮೌಲ್ಯಗಳನ್ನು ಚಿತ್ತರಿಸುವ ಮೌಲಿಕ ಪತ್ರಿಕೆಯನ್ನು ಪ್ರಕಟಿಸಿದರೂ ತಮ್ಮ ಜನರ ಮನೋಭಾವ ಹೇಗಿದೆ ಎಂಬುದನ್ನು ಜಗತ್ ಕಲ್ಯಾಣದ ಸಂಪಾದಕರು ೧೯-೮-೧೯೯೦ರ ಸಂಚಿಕೆಯಲ್ಲಿ ಹೀಗೆ ನಿವೇದಿಸಿಕೊಂಡಿದ್ದಾರೆ:

"ನಮ್ಮ ಸಮಾಜ ಬಾಂಧವರ ಮೆಂಟಾಲಿಟಿ ಕುರಿತು ಹೇಳಲೇಬೇಕು. ನಿನ್ನ ಪತ್ರಿಕೆಯಲ್ಲಿ ಏನಿದೆ? ಇದು ಹಲವರ ಪ್ರಶ್ನೆ. ಹಾಗಾದರೆ ನಿಮಗೆ ಏನು ಬೇಕು? ನನ್ನ ಮರು ಪ್ರಶ್ನೆ.

ಸಿನಿಮಾ ಜಗತ್ತು ಬ್ಲಾಕ್ ಮೇಲೆ ವಿಷಯ ಮೇಲೆ ಸೆಕ್ಸಿ ಲೈಂಗಿಕ ಕಥೆಗಳನ್ನು ಓದುವ ಜನರಿಗೆ ನಮ್ಮ ಪತ್ರಿಕೆಗಳಲ್ಲಿ ನಿಜಕ್ಕೂ ಏನೂ ಇರುವುದಿಲ್ಲ. ಎಲ್ಲಿಂದ ತರೋಣ ಆ ಸುದ್ದಿಸಂಗತಿಗಳನ್ನು ಮತ್ತು ಅವರ ಭಾವಚಿತ್ರಗಳನ್ನು? ಆ ಮೇಲೆ ಪ್ರಕಟಿಸಲು ಪುಟಗಳೆಲ್ಲಿವೆ? ಇನ್ನು ಲಂಕೇಶರ ಹಾಗೆ ಯಾರನ್ನು ಬ್ಲಾಕ್‌ಮೇಲ್ (ಅಪಪ್ರಚಾರ) ಮಾಡೋಣ? ಮಾಡಿ ಸುರಿದುಕೊಳ್ಳುವುದಾದರೂ ಏನಿದೆ ಅದೂ ಈ ಸಮಾಜದಲ್ಲಿ? ಆದರೂ ಬೇಕಾಗಿರುವವರಿಗೆ ಮತ್ತು ತಿಳಿದುಕೊಳ್ಳುವವರಿಗೆ ಈ ಗೇಣು ಪತ್ರಿಕೆಯಲ್ಲಿ ಸಾಕಷ್ಟು ಅಡಗಿರುತ್ತದೆ. ಕಟ್ಟ ಕಡೆಗೆ ಈ ಪತ್ರಿಕೆಯ ಬೆಲೆಯಾದರೂ ಎಷ್ಟು? ಇದೊಂದು ಮಾಹಿತಿ ನೀಡುವ ಕರಪತ್ರ ಎಂದು ಎಂದೋ ಸ್ಪಷ್ಟಪಡಿಸಿದ್ದೇನೆ. ಏನೋ ಜತೆಯಲ್ಲಿ ಅಷ್ಟಿಷ್ಟು ವಿಷಯಗಳಿರುತ್ತವೆ. ಆದರೂ ಮಹತ್ವದವು. ಆದರೂ ವಾಚಕರು ಅದಕ್ಕೆ ತೆರುವ ಬೆಲೆಗಿಂತ ಅದರಲ್ಲಿ ಬರುವ ವಿಷಯಗಳು ಅಧಿಕ ಮೌಲ್ಯವಾದವುಗಳು ಎಂಬುದು ನಮ್ಮ ವಾದ. ಈಗ ಇನ್ನೂ ಒಂದು ಹೆಜ್ಜೆ ಮುಂದೆ ಬನ್ನಿ ನಮ್ಮವರ ಜಾಣತನ–ಶಾಣೆತನ ನೋಡಿ! ಇಪ್ಪತ್ತು ಸಾವಿರ ರೂಪಾಯಿ ಖರ್ಚು ಮಾಡಿ ಒಂದು ಮದುವೆ ಮಾಡುತ್ತಾರೆ, ಅದನ್ನು ಪತ್ರಿಕೆಯಲ್ಲಿ ಪ್ರಕಟಿಸಲು ೨೦ ರೂ. ಕೊಡಲು ನಿರಾಕರಿಸುತ್ತಾರೆ. ಮೂರು ಮೂರು ಸಾವಿರ ಖರ್ಚು ಮಾಡಿ ವಿಡಿಯೋಕರಣ ಮಾಡಿಸುತ್ತಾರೆ. ಕೇವಲ ಮನೆಯವರು ಮಾತ್ರ ನೋಡಿಕೊಳ್ಳಬಹುದು. ಅದೂ ಹತ್ತು ಸಾವಿರ ಬೆಲೆಯ ವಿಸಿಆರ್ ಇದ್ದರೆ, ಇಲ್ಲದಿದ್ದರೆ ಅದನ್ನೂ ನೂರು ರೂಪಾಯಿ ಬಾಡಿಗೆ ಕೊಟ್ಟು ತಂದು ನೋಡಿ ಹಿಂದುರಿಗಿಸಬೇಕು. ಆದರೆ ನಾಡಿಗೇ ತೋರ್ಪಡಿಸುವ ಪತ್ರಿಕೆಯಲ್ಲಿ ವಧೂವರರ ಭಾವಚಿತ್ರ ಹಾಕಿಸಲು ನೂರು ರೂಪಾಯಿ ಕೊಡಲು ಇವರಿಗೆ ಮನಸ್ಸು ಬರುವುದಿಲ್ಲ. ಬರೀ ಫೋಟೋಗಳಿಗೂ ಸಾವಿರಗಟ್ಟಲೆ ಖರ್ಚು ಮಾಡುತ್ತಾರೆ. ಒಟ್ಟಿನಲ್ಲಿ ಯಾವ ರೂಪದಲ್ಲಾದರೂ ಪತ್ರಿಕೆಗೆ ಒಂದು ಸಹಾಯ ಮಾಡೋಣ ಎಂಬುವ ಉದಾರ ಮನೋಭಾವ ನಮ್ಮವರಲ್ಲಿ ಕಡಿಮೆ".[೨೩]

ಪತ್ರಿಕೆಯನ್ನು ನಡೆಸುವುದು ತುಂಬ ಕಷ್ಟದ ಕೆಲಸ. ಪತ್ರಿಕೆಗಳಿಗೆ ಸುದ್ದಿ ಸಂಗ್ರಹಿಸಿ, ಸಂಪಾದಿಸಿ ಮುದ್ರಿಸುವುದು ಒಂದು ಕಷ್ಟವಾದರೆ, ಅದನ್ನು ಚಂದಾದಾರಿಗೆ ತಲುಪಿಸುವುದು ಇನ್ನೂ ಕಷ್ಟದ ಕೆಲಸ. ಆದರೂ ಇದರಿಂದ ವೈಯಕ್ತಿಕವಾದ ಯಾವ ಸಂಪಾದನೆಯೂ ಆಗುವುದಿಲ್ಲ. ಜಗತ್ ಕಲ್ಯಾಣ ಸಂಪಾದಕರು ಸಮಾಜದ ಮನಸ್ಥಿತಿ ಈ ಕುರಿತು ತುಂಬ ಮಾರ್ಮಿಕವಾಗಿ ಹೇಳುತ್ತಾರೆ.

"ಈಗ ಈ ಸಂಪಾದಕನ ಸಂಪಾದನೆ ಕುರಿತು ತಮಗೆ ಹೇಳಬೇಕು. ಊರಿಗೊಂದು ಮನೆ ಕೇರಿಗೊಬ್ಬ ಪರಿಚಿತ, ಇದೇ ಇವನ ಸಂಪಾದನೆ. ಆದರೂ ನಮಗೆ ಸಹಾಯ ಮಾಡುವ ಕೆಲವರು ಧಾರಾಳವಾಗಿ ಸಹಾಯ ಮಾಡುತ್ತಿದ್ದಾರೆ. ಅವರಿಂದಾಗಿಯೇ ಈ ಪತ್ರಿಕೆ ನಡೆಯುತ್ತಿದೆ ಎನ್ನಲೂ ಬಹುದು. ಹಲವಾರು ಮಠಾಧೀಶರೂ ಇದ್ದಾರೆ. ಎಲ್ಲರೂ ಮಠಾಧೀಶರಿಗೆ ನೀಡಿದರೆ ನಾವು ಅವರಿಂದಲೂ ಪಡೆಯುತ್ತೇವೆ. ಹೀಗೆ ಈ ಜೀವನ ಋಣಭಾರದಿಂದ ಜರ್ಜರಿತವಾಗಿದೆ.

ಇಂತಹ ಸರ್ವ ಮಹನೀಯರಿಗೆ ನಮ್ಮ ಪ್ರಣಾಮಗಳು. ಈ ಪತ್ರಿಕೋದ್ಯಮದಿಂದ ಹೇಳಿಕೊಳ್ಳುವಂತಹದೇನನ್ನೂ ಸಂಪಾದಿಸದಿದ್ದರೂ ದೂರ ದೂರದವರೆಗೆ ಪರಿಚಯ-ಅದರಲ್ಲಿ ಬಹಳಷ್ಟು ಜನಗಳ ಪ್ರೇಮ, ಆದರ, ವಿಶ್ವಾಸ ಸಂಪಾದನೆ ಅವಶ್ಯ ಆಗಿದೆ. ಕೊನೆಗೆ ಈ ಸಂಪಾದಕನ ಅವಸಾನ ಕಾಲದಲ್ಲಿ ದೂರದಿಂದ ಆದರೂ ನಾಲ್ಕು ಕಣ್ಣೀರು ಮಿಡಿಯುವಷ್ಟು ಬಾಂಧವರು ಅವಶ್ಯ ಆಗಿದ್ದಾರೆ. ಇದೇ ಈ ಸಂಪಾದಕನ ಇಡೀ ಜೀವನದ ಸಂಪಾದನೆ".[೨೪]

ಅಂತಃಕರಣ ಕದಡುವ ಮಾತುಗಳನ್ನು ಹೇಳುವ ಮೂಲಕ ಪತ್ರಿಕೆಯನ್ನು ನಡೆಸುವ ಕಷ್ಟ ನಷ್ಟಗಳನ್ನು ಸೂಕ್ಷ್ಮವಾಗಿ ಸಂಪಾದಕರು ಇಲ್ಲಿ ಪ್ರತಿಪಾದಿಸಿದ್ದಾರೆ. ಪತ್ರಿಕೆ ನಡೆಸಲು ಮೇಲಿಂದ ಮೇಲೆ ತಮ್ಮ ಸಮಾಜದ ಮುಂದೆ ಹಣಕ್ಕಾಗಿ ಅವರು ಸೆರಗೊಡ್ಡಿ ಬೇಡಿದ ಅನೇಕ ಬರಹಗಳು ಜಗತ್ ಕಲ್ಯಾಣ ಪತ್ರಿಕೆಯಲ್ಲಿ ಪ್ರಕಟವಾಗಿವೆ.

"ಹೆರಿಗೆ ನೋವನ್ನು ಹೇಗೆ ವರ್ಣಿಸಿ ಬಿಡಿಸಿ ಹೇಳಲು ಬರುವುದಿಲ್ಲವೋ ಹಾಗೆ ಪತ್ರಿಕೋದ್ಯಮಿಗಳ ನೋವು! ಪತ್ರಕರ್ತರಲ್ಲಿ ಕೆಲವರು ನಿಜಕ್ಕೂ ಭಾಗ್ಯಶಾಲಿಗಳು. ಆದರೆ ಒಂದು ಸಮಾಜಕ್ಕೆ ಮೀಸಲಾಗಿರುವ ಪತ್ರಿಕೆಗಳು ಬೆಳೆಯುವುದು ವಿರಳ. ಕೆಲವು ಶ್ರೀಮಂತ ಸಮಾಜಗಳು ಪತ್ರಿಕೆಗಳ ಚಂದಾದಾರರ ಮೇಲೆ ಅವಲಂಬಿಸದೆ ಕೆಲ ಧನಿಕ ಸಮಾಜ ಬಾಂಧವರ ಹಾಗೂ ಮಠಮಾನ್ಯಗಳ ಬೆಂಬಲದಿಂದ ಮುನ್ನಡೆಯುತ್ತಿವೆ. ಅದೇ ಈ ನಮ್ಮ ಸಮಾಜದಲ್ಲಿ ಒಂದು ಪತ್ರಿಕೆ ಅನವರತ ನಡೆಯಬೇಕೆಂದರೆ ಅದೊಂದು ಪವಾಡವೇ ಸರಿ. ಹಾಗೆ ನಮ್ಮ ಸಮಾಜ ಬಾಂಧವರು ಆಸಕ್ತಿ ತೋರಿಸಿದರೆ ಜಿಲ್ಲೆಗೊಂದು ಪತ್ರಿಕೆ ನಡೆಸಬಹುದು. ಹೀಗಿದ್ದು ಈಗ ರಾಜ್ಯಕ್ಕೊಂದು ಪತ್ರಿಕೆ ನಡೆಸುವುದೇ ಕಷ್ಟವಾಗಿದೆ. ನಮ್ಮ ಹೇಳಿಕೆ-ನಮ್ಮ ಸಮಾಜದಲ್ಲಿ ಇಡೀ ರಾಜ್ಯದಲ್ಲಿ ವರ್ಷಕ್ಕೆ ಒಂದು ಸಾವಿರ ಮದುವೆಗಳಾದರೂ ನಡೆಯುತ್ತವೆ. ಇವರೆಲ್ಲರೂ ಮದುವೆಗಳನ್ನು ಪತ್ರಿಕೆಯ ಮಂಗಳ ಮಿಲನ ವಿಭಾಗದಲ್ಲಿ ಪ್ರಕಟಿಸಲು ಕಳಿಸಿದರೆ ಒಂದಕ್ಕೆ ೧೦ ರೂಪಾಯಿಗಳಂತೆ ಅದೇ ವರ್ಷಕ್ಕೆ ೧೦ ಸಾವಿರ ರೂಪಾಯಿ ಆಗುತ್ತದೆ. ಅದೇ ಅವರಲ್ಲಿ ಇನ್ನು ಕೆಲವರಾದರೂ ವಧೂವರರ ಭಾವಚಿತ್ರ ಹಾಕಿದರೆ ಇನ್ನೂ ಹೆಚ್ಚಿಗೆ ಆದಾಯವಿದೆ. ಆದ್ದರಿಂದ ಸಮಾಜ ಬಾಂಧವರು ಇತ್ತ ಗಮನ ಹರಿಸಬೇಕು".[೨೫]

ಜಗತ್ ಕಲ್ಯಾಣ ಪತ್ರಿಕೆಯಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ ವಿಷಯಕ್ಕೆ ಸಂಬಂಧಿಸಿದ ಅನೇಕ ಮಹತ್ವದ ವಿಚಾರಗಳು ಪ್ರಕಟಗೊಂಡಿವೆ. ೯ ಮೇ ೧೯೯೩ರ ಪತ್ರಿಕೆಯ ಮುಖಪುಟದಲ್ಲಿ 'ಬೆಂಗಳೂರಿನ ಕಾಳಿಕಮಠೇಶ್ವರ ದೇವಾಲಯ ವಿಶ್ವಕರ್ಮರ ವಶವಾಗಲೇಬೇಕು- ಪೂಜ್ಯ ಶ್ರೀ ರೂಢಸ್ವಾಮಿಗಳು' ಎಂಬ ವರದಿ ಪ್ರಕಟವಾಗಿದೆ. ಬೆಂಗಳೂರಿನ ನಗರ್ತ ಪೇಟೆಯಲ್ಲಿರುವ ಕಾಳಿ ಕಮಠೇಶ್ವರ ದೇವಾಲಯ ಕಾರಣಾಂತರಗಳಿಂದ ವಿಶ್ವಕರ್ಮರ ಕೈವಶದಿಂದ ಬಿಟ್ಟುಹೋಗಿತ್ತು. ವಿಶ್ವಕರ್ಮ ಸಮಾಜ ಬಾಂಧವರು ನೈವೇದ್ಯ ಇತ್ಯಾದಿ ಕೊಂಡೊಯ್ದರೆ ನಿರಾಕರಿಸಲಾಗುತ್ತಿತ್ತು.

ಈ ವಿಷಯಕ್ಕಾಗಿ ರೂಢಸ್ವಾಮಿಗಳು ವಿಶ್ವಕರ್ಮರೆಲ್ಲ ಒಗ್ಗಟ್ಟಾಗಿ ಹೋರಾಟ ಮಾಡಿ, ಈ ದೇವಾಲಯವನ್ನು ವಿಶ್ವಕರ್ಮ ಸಮಾಜದ ವಶ ಮಾಡಿಕೊಳ್ಳಬೇಕೆಂದು ಕರೆಕೊಟ್ಟಿದ್ದಾರೆ.

ಅಕ್ಕಸಾಲಿಗ ಸಮಾಜಕ್ಕೆ ಅವಮಾನವಾಗುವ ಯಾವುದೇ ವಿಷಯವಿದ್ದರೂ ಅದನ್ನು ಪ್ರತಿಭಟಿಸುವ ಕಾರ್ಯವನ್ನು ಸಂಪಾದಕರು ಮಾಡಿದ್ದಾರೆ. ದಿನಾಂಕ ೬-೧೦-೧೯೯೮ರಂದು ಪ್ರಜಾವಾಣಿ ಪತ್ರಿಕೆಯಲ್ಲಿ ಒಂದು ಜಾಹೀರಾತು ಪ್ರಕಟವಾಯಿತು. ಶ್ರೀಮತಿ ಮೀನಾ ಅಗರ್‌ವಾಲ್ ಎಂಬ ಮಹಿಳೆ ಮೋಸಹೋದ ಘಟನೆ ಮತ್ತು ಟನಿಷ್ಕ ಜ್ಯುವೆಲರ್‌ನವರು ಹಾಕಿದ ಜಾಹೀರಾತಿನಲ್ಲಿ ಅಕ್ಕಸಾಲಿಗರು ಮೋಸಗಾರರು ಎಂಬ ಅಂಶವಿರುವುದನ್ನು ಜಗತ್ ಕಲ್ಯಾಣ ಸಂಪಾದಕರು ಉಗ್ರವಾಗಿ ಪ್ರತಿಭಟಿಸಿದ್ದಾರೆ. ಇಂಥ ಜಾಹೀರಾತಿನಿಂದ ಲಕ್ಷಾಂತರ ಅಕ್ಕಸಾಲಿಗರ ಹೊಟ್ಟೆಗೆ ಬರೆ ಬೀಳುವ ಪ್ರಸಂಗ ಬರಬಹುದೆಂದು ಎಚ್ಚರಿಸಿದ್ದಾರೆ. ಅದಕ್ಕಾಗಿ ಹೋರಾಟ ಮಾಡಬೇಕೆಂದು ಹೀಗೆ ಹೇಳುತ್ತಾರೆ: "ಮೊದಲೇ ಪೋಲಿಸರ ಕಿರುಕುಳದಿಂದ ಬೇಸತ್ತು ತತ್ತರಿಸುತ್ತಿದ್ದ ಅಕ್ಕಸಾಲಿಗರ ಮೇಲೆ ಈಗ ಅಪನಂಬಿಕೆ ಹುಟ್ಟಿಸುವಂತಹ ಇಂತಹ ಕುತಂತ್ರಗಳಿಂದ ಗಾಯದ ಮೇಲೆ ಬರೆ ಎಳೆದಂತಾಗಿ ಕಂಗಾಲಾಗುವಂತೆ ಮಾಡಿದೆ. ಇದು ಬರಿ ಅಕ್ಕಸಾಲಿಗರಿಗೆ ಅಷ್ಟೇ ಅಲ್ಲ ಇಡೀ ವಿಶ್ವಬ್ರಾಹ್ಮಣ ಸಮಾಜದವರ ಮೇಲೆ ಮಾಡಿದ ನೇರ ಪ್ರಹಾರ. ಇನ್ನು ಎಷ್ಟು ದಿನ ಅಂತ ಇಂತಹ ಅಪಚಾರವನ್ನು ಅನುಭವಿಸುವುದು. ಇನ್ನಾದರೂ ಒಗ್ಗಟ್ಟಾಗಿ ಸಂಘಟನೆ ಮಾಡಿ ನ್ಯಾಯೋಚಿತವಾಗಿ ಹೋರಾಟವನ್ನು ಮಾಡಲು ಮುಂದಾಗಬೇಕು"[೨೬] ಎಂದು ಕರೆಕೊಟ್ಟಿದ್ದಾರೆ.

ನಾಗರಾಜ ಮಾನಪ್ಪ ಗುಂಜಳ ಎಂಬುವರು ಗದಗದಿಂದ ೧೯೯೮ರಲ್ಲಿ 'ವಿಶ್ವಕರ್ಮ ಜ್ಞಾನ ವಾಹಿನಿ' ಎಂಬ ಪತ್ರಿಕೆಯನ್ನು ಪ್ರಕಟಿಸಲು ಪ್ರಾರಂಭಿಸಿದರು. ವಿಶ್ವಕರ್ಮ ಸಮಾಜವನ್ನು ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಮೇಲೆತ್ತಬೇಕೆಂಬ ಉದ್ದೇಶದಿಂದಲೇ ಈ ಪತ್ರಿಕೆಯನ್ನು ಪ್ರಕಟಿಸಲಾಗುತ್ತಿತ್ತು. ಪತ್ರಿಕೆಯ ಮೊದಲ ಸಂಚಿಕೆಯ ಸಂಪಾದಕೀಯದಲ್ಲಿ ಸಮಾಜವನ್ನು ಕಟ್ಟುವ ಕಾರ್ಯವನ್ನು ಈ ಪತ್ರಿಕೆ ಮೂಲಕ ಮಾಡುವ ಹಂಬಲವನ್ನು ಸಂಪಾದಕರು ವ್ಯಕ್ತಪಡಿಸಿದ್ದು ಹೀಗೆ: "ತನ್ನ ಅರಿವೇ ತನಗೆ ಗುರು ಎಂಬುದು ನಾಡ ಮಾತಾದರೆ ಜಗದ್ಗುರು ಮೌನೇಶ್ವರರು ತಮ್ಮ ವಚನದಲ್ಲಿ 'ಅರಿವಿಡಿದು ವರವಿಗೆ ಬನ್ನಿ' ಎಂದು ಆದೇಶ ನೀಡಿದ್ದಾರೆ. ಆ ವಾಕ್ಯವನ್ನು ನಾವು ಇಂದು ಸಮಾಜದ ಮಂತ್ರವನ್ನಾಗಿ ಪಠಿಸುವುದು ಅನಿವಾರ್ಯವಾಗಿದೆ. ತನ್ನ ಅರಿವೇ ತನಗೆ ಗುರು ಎಂಬ ವಾಕ್ಯ ನಮ್ಮ ಹೃದಯದಲ್ಲಿ ನೆಲೆ ನಿಲ್ಲಲಿ. ತಾನು ಸಮಾಜಕ್ಕಾಗಿ ದುಡಿದಾಗ ಸಮಾಜವು ತನ್ನನ್ನು ಮರೆಯುವುದಿಲ್ಲ; ಪ್ರತಿಫಲ ನೀಡಿಯೇ ನೀಡುತ್ತದೆ. ಸಮಾಜದ ಋಣ ಬಹಳ ದೊಡ್ಡದು. ನಾನು ಯಾರು? ನನ್ನ ಕರ್ತವ್ಯವೇನು? ನಾನು ಏತಕ್ಕಾಗಿ ಇಲ್ಲಿಗೆ ಬಂದೆ? ಎಂಬುದು ಆಧ್ಯಾತ್ಮಿಕ ನಿಲುವಾದರೆ ಅದನ್ನು ಸಮಾಜ ತತ್ವವನ್ನಾಗಿ ಮಾರ್ಪಡಿಸಿ ನಾನು ವಿಶ್ವಕರ್ಮ, ನನ್ನ ಕರ್ತವ್ಯ ಸಮಾಜಕ್ಕೆ. ನಾನು ಸಮಾಜಕ್ಕೆ ದುಡಿಯಲು ಮುಂದೆ ಬರುವೆ ಎಂಬುದಾಗಲಿ ನಾನು ಸಮಾಜಕ್ಕಾಗಿ ಏನು ಮಾಡಿದೆ? ಸಮಾಜ ನನ್ನಿಂದ ಏನು ನಿರೀಕ್ಷಿಸುತ್ತಿದೆ

ಎಂಬುದು ಇಂದಿನ ಪ್ರಶ್ನೆಯಾಗಲಿ, ನಾವು ಸಾಂಘಿಕವಾಗಿ ದುಡಿದಲ್ಲಿ ಮಾತ್ರ ನಮ್ಮ ಏಳ್ಗೆ ಸಾಧ್ಯ. ಹಿಂದೆ ವೀರಶೈವ ಸಮಾಜದಲ್ಲಿ ಆಗಿ ಹೋದ ಒಬ್ಬ ಮಹಾನ್‌ಪುರುಷ ಹಾನಗಲ್ಲ ಕುಮಾರ ಸ್ವಾಮಿಗಳು ಮಾಡಿದಂಥ ಘನಕಾರ್ಯ ವೀರಶೈವ ಸಂಘಟನೆ, ಮಠಗಳ ಉನ್ನತೀಕರಣ ಸಂಸ್ಕೃತಿ ಬೆಳವಣಿಗೆ ಮಾಡಿದ ಮಹಾನ್ ಪುರುಷರು. ಅವರು ಒಮ್ಮೆ ಅನಾರೋಗ್ಯಕ್ಕೀಡಾದಾಗ ಓರ್ವ ಮಠಾಧೀಶರು 'ಏನ್ರಪಾ ಆರೋಗ್ಯ ಹೇಗಿದೆ' ಎಂದು ವಿಚಾರಿಸಿದರಂತೆ. ಆಗ ಹಾನಗಲ್ಲ ಶ್ರೀಗಳು 'ಬುದ್ಧಿ ನಾನು ಹೇಗೆ ಇದ್ದಿನಿ ಎಂದು ಕೇಳುವುದರ ಬದಲು ಸಮಾಜ ಹೇಗೆ ಇದೆ' ಎಂದು ಕೇಳಿದ್ದರೆ ನನಗೆ ಚೈತನ್ಯ ಬರುತ್ತಿತ್ತು; ಸಂತೋಷವಾಗುತ್ತಿತ್ತು ಎಂದರಂತೆ. ಹಾಗೆ ಸಮಾಜದ ಚಿಂತೆ ಪ್ರತಿಯೊಬ್ಬ ವಿಶ್ವಕರ್ಮನಲ್ಲಿ ಇಂದು ಮೂಡಬೇಕಿದೆ. ನಮ್ಮ ಉದರ ಚಿಂತೆಯಲ್ಲಿಯೂ ಸಹ ಕೆಲ ಗಳಿಗೆಯನ್ನಾದರೂ ಸಮಾಜದ ಚಿಂತೆಗೆ ಮುಡುಪಾಗಲಿ ಎನ್ನುವ ಪರಿಪಾಠ ಬೆಳೆಯಲಿ ಸಮಾಜಕ್ಕೆ ನಮ್ಮಿಂದ ಕೈಲಾದ ಮಟ್ಟಿಗೆ ದುಡಿದಲ್ಲಿ ಸಮಾಜದ ಋಣವನ್ನು ತೀರಿಸಿದಂತಾಗುತ್ತದೆ. ಮುಂದಿನ ದಿನಗಳಲ್ಲಿ ನಮ್ಮ ಸಮಾಜ ಉನ್ನತ ಸ್ಥಿತಿಯನ್ನು ತಲುಪಲಿ ಎಂಬುದು ನಮ್ಮೆಲ್ಲರ ಗುರಿಯಾಗಿರಲಿ. 'ಸಮಾಜವೇ ನಮ್ಮ ಉಸಿರು' ಎಂಬ ಮಂತ್ರ ನಮ್ಮದಾಗಲಿ. ಒಂದು ಕೈಯಿಂದ ಚಪ್ಪಾಳೆಯಾಗಲು ಸಾಧ್ಯವಿಲ್ಲ. ಅದಕ್ಕೆಂದು ಮೌನೇಶ್ವರರು ನಮ್ಮೈವರನ್ನು ಒಂದುಗೂಡಿಸಲು ಪ್ರಯತ್ನಿಸಿ, ಆಸೆ ಫಲಿಸದೆ ಶಾಪ ಕೊಟ್ಟರು. ಆ ಶಾಪವನ್ನು ನಾವು ಒಂದು ಉಶ್ಶಾಪವನ್ನಾಗಿ ಮಾಡಲು ಒಟ್ಟುಗೂಡೋಣ, ನಮ ಸಮಾಜ ನಿರ್ಮಾಣ ಮಾಡೋಣ".[೨೭]

"ವಿಶ್ವಕರ್ಮ ಜ್ಞಾನವಾಹಿನಿ' ಎಂಬ ಮಾಸಪತ್ರಿಕೆಯನ್ನು ತಮ್ಮ ಗದಗ ಕಾರ್ಯಾಲಯದಿಂದ ಹೊರಡಿಸಿರುವುದನ್ನು ನೋಡಿ ಬಹಳ ಸಂತೋಷವಾಯಿತು. ನಮಗೆ ಇಲ್ಲಿಯವರೆಗೂ ನಮ್ಮ ಉತ್ತರ ಕರ್ನಾಟಕದ ಭಾಗದಿಂದ ಯಾವುದೇ ನಮ್ಮ ಸಮಾಜದ ಮಾಸ ಪತ್ರಿಕೆಗಳು ಇರಲಿಲ್ಲ. ಈಗ ಇದು ಪ್ರಕಟವಾಗುತ್ತಿರುವುದು ಸಂತೋಷ ತಂದಿದೆ. ನಮಗೆ ಜ್ಞಾನೋದಯವಾಗಬೇಕಾದರೆ, ನಮ್ಮ ಅಜ್ಞಾನ ಅಂಧಕಾರಗಳು ಅಳಿಯಬೇಕಾದರೆ ನಮಗೆ ಬಹು ಅಮೂಲ್ಯವಾದ ನಮ್ಮ ವಿಶ್ವಕರ್ಮ ಜ್ಞಾನವಾಹಿನಿ ಈ ಪತ್ರಿಕೆ ಬಹು ಉಪಯೋಗ. ಈ ಪತ್ರಿಕೆಯು ನಮ್ಮ ಭವ್ಯ ಪರಂಪರೆ, ಕಲೆ, ಸಾಹಿತ್ಯ ಅನೇಕ ವಚನಗಳು ಇನ್ನೂ ಅನೇಕ ವಿಷಯಗಳು ತಿಳಿಯಲು ಬಹು ಉಪಯೋಗವಾಗಿದೆ." ಎಂದು ವಿಶ್ವಕರ್ಮ ಏಕದಂಡಗಿಮಠದ ಪೂಜ್ಯ ಗುರುನಾಥ ಸ್ವಾಮಿಗಳು ಪತ್ರಿಕೆಗೆ ಶುಭ ಹಾರೈಸಿದ್ದಾರೆ.

ಸಮಾಜ ಸಂಘಟನೆಗಾಗಿ ಈ ಪತ್ರಿಕೆಯಲ್ಲಿ ಗುರುಶಿವಸುಜ್ಞಾನಮೂರ್ತಿ ಸ್ವಾಮಿಗಳು 'ವಿಶ್ವಬ್ರಾಹ್ಮಣ ಜನಾಂಗದ ಪ್ರಸ್ತುತ ಸ್ಥಿತಿ ಮತ್ತು ಸುಧಾರಣೆ' ಎಂಬ ವಿಷಯ ಕುರಿತು ಲೇಖನ ಬರೆದು, ಪ್ರಾಚೀನ ಪರಂಪರೆ ಹೊಂದಿದ ವಿಶ್ವಬ್ರಾಹ್ಮಣ ಸಮಾಜ ಸಂಘಟಿತವಾಗಬೇಕೆಂದು ಬಯಸಿದ್ದಾರೆ.

"ಸರಕಾರಿ ಗೆಜೆಟ್ಟಿನಲ್ಲಿರುವ ವಿಶ್ವಕರ್ಮ ಅಥವಾ ವಿಶ್ವಬ್ರಾಹ್ಮಣ ಎಂಬ ಗುಂಪು ಇನ್ನೂ ಹತ್ತಾರು ಉಪನಾಮಗಳನ್ನು ಅಂದರೆ ಕಮ್ಮಾರ, ಬಡಿಗೇರ, ಪತ್ತಾರ, ಸೋನಾರ ಇತ್ಯಾದಿಯಾಗಿ ಹೊಂದಿದ್ದರೂ ಸಹ ಇವೆಲ್ಲ ವಿಶ್ವಬ್ರಾಹ್ಮಣ ಪರಂಪರೆಯನ್ನೇ ಹೊಂದಿವೆ. ಆದ್ದರಿಂದ ಯಾರಾದರೂ ಈ ಸಮಾಜದ ಬಗ್ಗೆ ಇಂದಿನವರಿಗೆ ಮತ್ತಾವುದೇ ರೀತಿಯ ಅನ್ಯಕಲ್ಪನೆಯನ್ನು ಹೊಂದಿದ್ದರೂ ಸಹ ಅವೆಲ್ಲ ನೈಜ ಸಂಗತಿಯಲ್ಲ. ಇಂದು ವಿಶ್ವಬ್ರಾಹ್ಮಣ್ಯಕ್ಕೆ ಅನೇಕ ವಿಧವಾದ ಅಡಚಣೆಗಳಿವೆ. ಆದ್ದರಿಂದ ವಿಶ್ವಬ್ರಾಹ್ಮಣರು ತಮ್ಮ ವೈದಿಕ ಪರಂಪರೆಯನ್ನು ಜಾಗರೂಕವಾಗಿ ಪಾಲಿಸಿಕೊಂಡು ಪ್ರತಿಯೊಬ್ಬರಿಗೂ ಹಿತಕಾರಿಯಾಗುವಂತಹ ಸೇವೆಯನ್ನು ಸಲ್ಲಿಸುತ್ತ ಈ ಭಾರತೀಯ ಸನಾತನ ಸಂಸ್ಕೃತಿಯ ಉಳಿವಿಗೆ ಕಾರಣರಾಗುತ್ತಾರೆಂದು ಆಶಿಸುತ್ತೇವೆ".[೨೮]

ಸಮಾಜ ಸಂಘಟನೆ, ವಿಶ್ವಕರ್ಮ ಧಾರ್ಮಿಕ ಪರಿಕಲ್ಪನೆ, ವಿಶ್ವಕರ್ಮ ಸಾಹಿತ್ಯದ ಪರಿಚಯ, ವಿಶ್ವಕರ್ಮ ಸಮಾಜದ ಬಹುಮುಖ ಪ್ರತಿಭೆಯ ಸಾಧಕರ ಪರಿಚಯ ಈ ವಿಷಯಗಳನ್ನು ಮುಖ್ಯವಾಗಿಟ್ಟುಕೊಂಡು 'ವಿಶ್ವಕರ್ಮಜ್ಞಾನ ವಾಹಿನಿ' ಪತ್ರಿಕೆ ಕೆಲಸ ಮಾಡಿದೆ.

ಬಿ.ಎ. ಆಚಾರ್ಯ ಅವರ ಗೌರವ ಪ್ರಧಾನ ಸಂಪಾದಕತ್ವದಲ್ಲಿ ಬಿ. ಪ್ರಕಾಶ ಕಾರ್ಕಳ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ಸಹಚಿಂತನ' ಪತ್ರಿಕೆಯು ಕೂಡ ಸಮಾಜದ ಮುಖವಾಣಿಯಾಗಿ ಕಾರ್ಯ ಮಾಡಬೇಕೆಂಬ ಉದ್ದೇಶದಿಂದಲೇ ಇಂದಿಗೂ ಪ್ರಕಟವಾಗುತ್ತಿದೆ. 'ಸಾಹಿತ್ಯ ಸಂಜೀವಿನಿ' ಎಂಬ ಮಾತಿದೆ. 'ಯಾವ ಸಮಾಜದಲ್ಲಿ ಸಾಹಿತ್ಯದ ಬಗ್ಗೆ ಕಾಳಜಿ ಇಲ್ಲವೋ ಆ ಸಮಾಜಕ್ಕೆ ಭವಿಷ್ಯವಿಲ್ಲ' ಎಂದರೆ ತಪ್ಪಾಗಲಾರದು. ವಿಶ್ವಕರ್ಮ ಸಮಾಜ ಹಿಂದುಳಿಯಲು ಸಮಾಜದಲ್ಲಿರುವ ಸಾಹಿತ್ಯದ ಕುರಿತಾದ ಅನಾಸಕ್ತಿಯು ಮುಖ್ಯ ಕಾರಣವೆಂದು ಅನೇಕ ಪ್ರಾಜ್ಞರು ಹೇಳುತ್ತ ಬಂದಿದ್ದಾರೆ. ಶಿಲ್ಪಿಗಳು ತಮ್ಮ ಸಂಪಾದನೆಯ ಒಂದು ಅಂಶವನ್ನು ಶಿಲ್ಪಶಾಸ್ತ್ರ ಗ್ರಂಥಗಳಿಗಾಗಿ ವಿನಿಯೋಗಿಸಿದ್ದರೆ ಭಾರತದಲ್ಲಿ ಅವರು ಶಿಲ್ಪದ ಹಕ್ಕುದಾರರಾಗಿ ಅಧಿಕಾರವಾಣಿಯಿಂದ ಮಾತನಾಡಲು ಶಕ್ತರಾಗಿದ್ದರು. ಭಾರತದಲ್ಲಿರುವುದು ಜಾತ್ಯಿವ್ಯವಸ್ಥೆಯಿಂದ ಕೂಡಿದ ಸಮಾಜ. ಪ್ರತಿ ಸಮಾಜದಲ್ಲಿಯೂ ಚಿಂತಕರ ಅವಶ್ಯಕತೆ ಇದೆ. ಅವರನ್ನು ಗುರುತಿಸುವುದು ಮುಖ್ಯ. ಚಿಂತಕರ ಚಿಂತನೆಗಳನ್ನು ಮುಂದಿನ ತಲೆಮಾರಿಗೆ ವರ್ಗಾಯಿಸುವುದು ಬಹಳ ಅವಶ್ಯಕ. ಇದು ಸಾಹಿತ್ಯ ಮತ್ತು ಪತ್ರಿಕೆಗಳಿಂದ ಮಾತ್ರ ಸಾಧ್ಯ. ವಿಶ್ವಕರ್ಮ ಸಮಾಜ ಮೂಲತಃ ಕೌಶಲ್ಯಭರಿತ ಸಮಾಜ. ಕರಕುಶಲತೆ ಈ ಸಮಾಜಕ್ಕೆ ಪಾರಂಪರಿಕವಾಗಿ ಬಂದಿದೆ. ಸಮಾಜದಲ್ಲಿ ಚಿಂತನೆಗಳು ಕಡಿಮೆಯಾಗುತ್ತಿರುವುದನ್ನು ಗಮನಿಸಿ 'ಸಹಚಿಂತನ' ಪತ್ರಿಕೆಯ ಚಾರಿತ್ರಿಕ ಘಟನೆಯನ್ನು ಸಂಪಾದಕರು ಹೇಳುತ್ತಾರೆ. ತಮ್ಮ ಈ ಪತ್ರಿಕೆಯ ಮುಂದುವರಿಕೆಗೆ ಖ್ಯಾತ ವಿದ್ವಾಂಸರಾದ ಡಾ. ವೀರೇಶ ಬಡಿಗೇರ ಅವರ ಮಾತುಗಳು ಪ್ರೇರಣೆ ನೀಡಿದವು ಎಂಬುದನ್ನು ಬಿ.ಎ. ಆಚಾರ್ಯ ಅವರು ಒಂದು ಸಂಪಾದಕೀಯದಲ್ಲಿ ಹೀಗೆ ವಿವರಿಸಿದ್ದಾರೆ.

“ಕಳೆದ ಸೆಪ್ಟಂಬರ್ ೨೧, ೨೨ರಂದು ಹಂಪೆಯ ಬಳಿಯ ಕಮಲಾಪುರದಲ್ಲಿ ಜರುಗಿದ ಉತ್ತರ ಕರ್ನಾಟಕ ವಿಶ್ವಕರ್ಮ ಯುವ ಬರಹಗಾರರ ಮತ್ತು ಸಂಶೋಧಕರ ಸಮಾವೇಶದ ರೂವಾರಿ ಡಾ. ವೀರೇಶ ಬಡಿಗೇರ್ ಅವರು ಆಶಯದ ಮಾತುಗಳನ್ನು ಆಡುತ್ತಾ ಸಾಹಿತ್ಯದ ಮಹತ್ವವನ್ನು ವಿವರಿಸಿ, ಯುವ ಬರಹಗಾರರು ಸಮಾಜದ ಪತ್ರಿಕೆಗಳನ್ನು ಬಳಸಿಕೊಳ್ಳಬೇಕೆಂದು ಕರೆ ನೀಡಿದರು. ಶ್ರೀಯುತರು ತಮ್ಮ ‘ಪಾಂಚಾಲ ಸಾಹಿತ್ಯ ಮತ್ತು ಸಂಸ್ಕೃತಿ’ ಗ್ರಂಥದಲ್ಲಿ ‘ಆಚಾರದ ಜೊತೆಯಲ್ಲಿ ವಿಚಾರವೂ ತೀವ್ರವಾಗಿ ಬೆಳೆಯಬೇಕಿದೆ. ಸಮುದಾಯವು ಗಂಭೀರ ಓದು ಮತ್ತು ತಿಳುವಿನ ಕಡೆಗೆ ತನ್ನನ್ನು ತಿರುಗಿಸಿಕೊಳ್ಳಬೇಕು. ಸಮುದಾಯದಲ್ಲಿ ಪ್ರಕಟವಾಗುತ್ತಿರುವ ವಿವಿಧ ಪತ್ರಿಕೆಗಳಿಗೆ ಜೀವ ತುಂಬಬೇಕಿದೆ. ಯಾಕೆಂದರೆ ನಮ್ಮ ಪತ್ರಿಕೆಗಳು ಸಮಾಜದ ಮುಖವಾಣಿ. ಅವುಗಳ ಮೂಲಕ ಜಗತ್ತಿಗೆ ಗಂಭೀರ ಸಂದೇಶ ನೀಡಬೇಕಾಗಿದೆ’ ಎಂದು ಮಾರ್ಮಿಕವಾಗಿ ಬರೆದಿದ್ದಾರೆ. ಸಮಾಜದಲ್ಲಿ ಚಿಂತಕರನ್ನು ಕಡೆಗಣಿಸಲಾಗುತ್ತಿದೆ. ಪತ್ರಿಕೆಗಳಿಗೆ ಪ್ರೋತ್ಸಾಹ ಸಿಗುತ್ತಿಲ್ಲ. ಸಮಾಜದ ಹಿತಚಿಂತನೆಗಳೊಂದಿಗೆ ಕಾರ್ಯನಿರ್ವಹಿಸುತ್ತಿದ್ದ ‘ವಿಶ್ವಕರ್ಮೋದಯ’ ಹಾಗೂ ‘ಜಗತ್‌ಕಲ್ಯಾಣ’ ಪತ್ರಿಕೆಗಳು ಸ್ಥಗಿತಗೊಂಡಿರುವುದು ಸಮಾಜಕ್ಕಾದ ನಷ್ಟವೇ ಸರಿ. ಇದೀಗ ಬೆಂಗಳೂರಿನ ಛಾಯಾಪತಿಯವರು ತಾವು ಕಳೆದ ಹತ್ತು ವರ್ಷಗಳಿಂದ ನಡೆಸುತ್ತಿದ್ದ ‘ವಿಧಾತೃ’ ಪತ್ರಿಕೆಯನ್ನು ನಿಲ್ಲಿಸುವುದಾಗಿ ಹೇಳಿಕೊಂಡಿದ್ದಾರೆ. ಇನ್ನಾದರೂ ಸಮಾಜದಲ್ಲಿ ಪತ್ರಿಕೆಗಳ ಬಗ್ಗೆ ಕಾಳಜಿ ಮೂಡಿಬರಲಿ. ಸಮಾಜದ ಸ್ವಾಸ್ಥ್ಯ ಕಾಪಾಡುವಲ್ಲಿ ಪತ್ರಿಕೆಗಳ ಪಾತ್ರ ಹಿರಿದೆಂದು ಸಂಘ-ಸಂಸ್ಥೆಗಳು, ದೇವಸ್ಥಾನಗಳು ಹಾಗೂ ಗುರುಪೀಠಗಳು ತಿಳಿದುಕೊಳ್ಳುವುದು ಸಮಂಜಸ. ಕಷ್ಟ ನಷ್ಟಗಳ ನಡುವೆ ಉಸಿರಾಡುತ್ತಿರುವ ಪತ್ರಿಕೆಗಳಿಗೆ ಸಮಾಜದ ಬಂಧುಗಳು ಸಹಾಯ ಮಾಡಬೇಕು”.[೨೯]

ವಿಶ್ವಕರ್ಮ ಸಮಾಜದ ಏಳ್ಗೆಯನ್ನು ಕುರಿತು ಅನೇಕ ಜನ ಲೇಖಕರು ತಮ್ಮ ಮೌಲಿಕ ವಿಚಾರಗಳನ್ನು ಲೇಖನಗಳಲ್ಲಿ ಪ್ರಕಟಿಸಿದ್ದಾರೆ. ಅಂಥ ಕೆಲವು ಲೇಖನಗಳನ್ನು ನೋಡುವುದಾದರೆ, ಕೆ. ಮುರುಳಿಧರ ಅವರು ‘ವಿಶ್ವಕರ್ಮ ಸಮುದಾಯ-ಒಂದು ಚಿಂತನೆ’, ಆಚಾರ್ಯ ಮಹಾಬಳೇಶ್ವರ ಅವರು ‘ಪ್ರಥಮ ಅಖಿಲ ಭಾರತ ವಿಶ್ವಕರ್ಮ ಸಾಧು-ಸಂತ ಸಮಾವೇಶ’ದ ಅವಲೋಕನ ಮಾಡಿ, ಸಮಾಜ ಜಾಗೃತಿಗಾಗಿ ಸಂತರು ಮಾಡಿದ ಭಾಷಣಗಳನ್ನು ಅವಲೋಕಿಸಿದ್ದಾರೆ. ಎ.ಬಿ. ಬಡಿಗೇರ ಅವರು ‘ವಿಶ್ವಕರ್ಮ ಸ್ಥಿತಿಗತಿ’ ಎಂಬ ಲೇಖನದಲ್ಲಿ ಇಂದಿನ ಯುವ ಜನಾಂಗ ವಿಶ್ವಕರ್ಮ ಧರ್ಮ ಸಂಸ್ಕೃತಿಗಳಿಂದ ವಿಮುಖರಾಗುತ್ತಿರುವುದರ ಕುರಿತು ವಿಷಾದ ವ್ಯಕ್ತಪಡಿಸಿದ್ದಾರೆ. ಪದ್ಮತನಯ ಅವರು ‘ನಮ್ಮ ಇಂದಿನ ಕರ್ತವ್ಯ’ ಎಂಬ ಲೇಖನದಲ್ಲಿ ಏಳು ದಶಕಗಳ ಹಿಂದೆ ವಿಶ್ವಕರ್ಮ ಸಮಾಜವನ್ನು ಶ್ರೇಣೀಕೃತ ಸಮಾಜದಲ್ಲಿ ಮೇಲೆ ಬರಲು ಯಾವ ಯೋಜನೆಗಳನ್ನು ಕೈಕೊಳ್ಳಬೇಕೆಂಬ ಒಂದು ಸ್ಥೂಲ ನೋಟವನ್ನು ಒದಗಿಸಿದ್ದಾರೆ. ಇಂಥದೇ ವಿಷಯವನ್ನು ಕುರಿತು ಉಮಾಪತಿದೇವಿ ಎಂಬ ಹೆಣ್ಣುಮಗಳು ‘ಇಂದಿನ ವಿಶ್ವಕರ್ಮ ಸಮಾಜದ ಪರಿಸ್ಥಿತಿ’ ಎಂಬ ಲೇಖನ ಬರೆದು, ಮಹಿಳೆಯರಲ್ಲಿಯೂ ಜಾಗೃತಿಯನ್ನುಂಟು ಮಾಡುವ ವಿಚಾರಗಳನ್ನು

ಪ್ರತಿಪಾದಿಸಿದ್ದಾರೆ. ಇದೇ ಕಾಲಘಟ್ಟದಲ್ಲಿದ್ದ ಗುರುನಾಥರಾವ ಎಂಬ ಲೇಖಕರು 'ನಮ್ಮ ಜನಾಂಗದ ನಮ್ಮ ದೇಶದ ಪ್ರಗತಿ ಸಾಧನೆಗೆ ನಮ್ಮನ್ನು ನಾವು ಸಿದ್ಧಪಡಿಸಿಕೊಳ್ಳುವುದು ಹೇಗೆ?'[೩೦] ಎಂಬ ಸುದೀರ್ಘ ಲೇಖನ ಬರೆದಿದ್ದಾರೆ. ವಿಶ್ವಕರ್ಮರು ಸ್ವಾತಂತ್ರ್ಯಾನಂತರ ಭಾರತದ ಏಳ್ಗೆಯಲ್ಲಿ ಯಾವ ರೀತಿ ಸಹಕರಿಸಬೇಕು ಎಂಬ ಮೌಲಿಕ ವಿಚಾರಗಳು ಇಲ್ಲಿವೆ.

ವಿಶ್ವಕರ್ಮ ಸಮಾಜವನ್ನು ಸಂಘಟಿಸುವ ಕುರಿತು ಅನೇಕ ವಿಚಾರಪರ ಲೇಖನಗಳು ಆಯಾ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಹೇಮನೂರ ನರಸಿಂಗರಾವ್ ಅವರು 'ಸಮಾಜ ಸಂಘಟನೆ'[೩೧] ಎಂಬ ಲೇಖನ ಮಾಲಿಕೆಯನ್ನೇ ಕಾಳಿಕಾ ಸಂದೇಶ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಕೆ.ವಿ. ಆಚಾರ್ಯ ಎಂಬುವರು 'ಎಚ್ಚರವಾಗದ ಸಮಾಜ'[೩೨] ಎಂಬ ಲೇಖನವನ್ನು ಬರೆದು, ಜಗತ್ತು ಜಾಗತೀಕರಣದ ಸುಳಿಗಾಳಿಯಲ್ಲಿ ಬದಲಾಗುತ್ತಿದೆ. ಅದಕ್ಕೆ ತಕ್ಕಂತೆ ಸಮಾಜವು ಬದಲಾಗಬೇಕೆಂಬ ಕಳಕಳಿ ಈ ಲೇಖನದಲ್ಲಿದೆ. ಎಚ್.ಬಿ. ದೊರೆಸ್ವಾಮಿ 'ವಿಶ್ವಕರ್ಮ ಸಮಾಜದ ಈಗಿನ ಶೋಚನೀಯ ಪರಿಸ್ಥಿತಿ'[೩೩] ಎಂಬ ಲೇಖನದಲ್ಲಿ ಇನ್ನೂ ವಿಶ್ವಕರ್ಮ ಸಮಾಜ ಬಾಂಧವರು ಅಜ್ಞಾನ, ಅನಕ್ಷರತೆಯಿಂದ ಬಳಲುತ್ತಿರುವ ಸಂಗತಿಯನ್ನು ದಾಖಲಿಸಿದ್ದಾರೆ. ಆಚಾರ್ಯ ಪುರುಷೋತ್ತಮ ಅವರು 'ವಿಶ್ವಕರ್ಮರೇ ಎದ್ದೇಳಿ' ಎಂಬ ಲೇಖನದಲ್ಲಿಯೂ ಸಮಾಜ ಸಂಘಟನೆಯ ಮೂಲಸೂತ್ರಗಳನ್ನು ನಿರೂಪಿಸಿದ್ದಾರೆ. ಸುಜ್ಞಾನಮೂರ್ತಿ ಅವರು 'ವಿಶ್ವಕರ್ಮ ಸಮಾಜ ಎಚ್ಚರಗೊಳ್ಳಬೇಕು'[೩೪] ಎಂಬ ಲೇಖನ ಸಂಘಟನೆಯ ದೃಷ್ಟಿಯಿಂದ ಕೆಲವು ವಿಚಾರಗಳನ್ನು ತಿಳಿಸುತ್ತದೆ.

ನಲ್ಕ ಗೋಪಾಲಕೃಷ್ಣ ಆಚಾರ್ ಅವರು 'ಸಮೃದ್ಧವಾದ ವಿಶ್ವಬ್ರಾಹ್ಮಣ ಸಮಾಜ ಆದರೆ...'[೩೫] ಲೇಖನ ಮಾಲೆಯನ್ನು ಬರೆಯುವ ಮೂಲಕ ಸಮೃದ್ಧ ಪ್ರಾಚೀನ ಪರಂಪರೆಯನ್ನು ಹೊಂದಿದ ವಿಶ್ವಕರ್ಮ ಸಮಾಜವು ಇಂದು ತನ್ನ ಅಸ್ತಿತ್ವ ಮತ್ತು ಅಸ್ಮಿತೆಗಾಗಿ ಪರದಾಡುತ್ತಿದೆ ಎಂಬುದರತ್ತ ಗಮನ ಸೆಳೆದಿದ್ದಾರೆ.

ಎಚ್.ಬಿ. ದೊರೆಸ್ವಾಮಿ ಅವರು 'ವಿಶ್ವಕರ್ಮ ಸಮಾಜದ ಅಭಿವೃದ್ಧಿಗೆ ಮಧ್ಯಮ ವರ್ಗದ ಕೊಡುಗೆ' ಎಂಬ ಲೇಖನದಲ್ಲಿ ಜನಸಾಮಾನ್ಯರು ವಿಶ್ವಕರ್ಮ ಸಮಾಜದ ಏಳ್ಗೆಗೆ ನೀಡಿದ ಅಪರೂಪದ ಕಾಣಿಕೆಯನ್ನು ವಿವರಿಸಿದ್ದಾರೆ. ಸಮೃದ್ಧ ಪರಂಪರೆ, ಚಾಣಾಕ್ಷತೆ, ಕಲೆಗಳ ಬಗೆಗಿನ ಅರಿವು ಇದ್ದ ವಿಶ್ವಕರ್ಮ ಸಮಾಜ ಇನ್ನೂ ಏಕೆ ಅಭಿವೃದ್ಧಿಯಾಗಿಲ್ಲ ಎಂಬ ಆಲೋಚನೆಯನ್ನು ಮುಂದಿಟ್ಟುಕೊಂಡು ದೊರೆಸ್ವಾಮಿ ಅವರು 'ವಿಶ್ವಬ್ರಾಹ್ಮಣ ಸಮಾಜಕ್ಕೆ ಏನಾದರೂ ಶಾಪ ಉಂಟೆ?'[೩೬] ಎಂಬ ಲೇಖನ ಬರೆದಿದ್ದಾರೆ.

ಹಿರಣ್ಯ ಎನ್ನುವವರು 'ನೀವೇನಂತೀರಿ?' ಎಂಬ ಅಂಕಣ ಬರಹವನ್ನು ಪ್ರಾರಂಭಿಸಿ, ಆ ಮೂಲಕ ವಿಶ್ವಕರ್ಮ ಸಮಾಜದ ಸ್ಥಿತಿಗತಿಗಳ ಮೇಲೆ ಕ್ಷಕಿರಣ ಬೀರುವ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ. 'ಸಾಮಾಜಿಕ ನ್ಯಾಯ ಎತ್ತ ಸಾಗುತ್ತಿದೆ? ಚಿಂತನೆ ಮಾಡುವುದು ವಿಹಿತವಲ್ಲವೇ?'.[೩೭]

'ವಿಶ್ವಕರ್ಮ ಒಕ್ಕೂಟ',[೩೮] 'ಸಾಮಾಜಿಕ ಆರ್ಥಿಕ ವ್ಯವಸ್ಥೆಗಳಲ್ಲಿ ಪರಿವರ್ತನೆ ಎತ್ತ ಸಾಗುತ್ತಿದೆ?' ಈ ಮೂರೂ ಲೇಖನಗಳು ವಿಶ್ವಕರ್ಮ ಸಮಾಜದ ಅಜಾಗೃತಿ ಮತ್ತು ಜಾಗೃತಿಯಿಂದ ಹೊರಬರಬೇಕು ಆಶಯ ಹೊಂದಿದೆ.

ಯಾವುದೋ ಒಂದು ಸಂದರ್ಭದಲ್ಲಿ, ಸಮಾಜದಿಂದ ದೂರಾಗಿರುವವರನ್ನು ಮತ್ತೆ ವಿಶ್ವಕರ್ಮ ಸಮಾಜದ ಒಳಗೆ ಕರೆದುಕೊಳ್ಳಬೇಕೆಂಬ ಹಂಬಲ ವಿಶ್ವಕರ್ಮ ಪತ್ರಿಕೆಗಳದ್ದು. ಆನೆಗುಂದಿ ಪೂಜ್ಯ ಶ್ರೀಗಳು ಈ ಕುರಿತು 'ಸಮಾಜದಿಂದ ದೂರವಾಗಿರುವವರು ಮುಖ್ಯವಾಹಿನಿಗೆ ಸೇರ್ಪಡೆಯಾಗಬೇಕು'[೩೯] ಎಂಬ ಮನವಿಯನ್ನು ಮಾಡಿದ್ದಾರೆ.

ಆಚಾರ್ಯ ರಾಮಕೃಷ್ಣ ಜಿ. ಅವರ 'ವಿಶ್ವಕರ್ಮ ಸಮಾಜ ಎದುರಿಸುತ್ತಿರುವ ಆಧುನಿಕ ಸವಾಲುಗಳು',[೪೦] ಚಿಕ್ಕಂಗಳ ನಾಗಭೂಷಣ ಸ್ವಾಮಿ ಅವರ 'ವಿಶ್ವಕರ್ಮ ಸಮಾಜದಲ್ಲಿ ಪೌರೋಹಿತ್ಯ ನಿರ್ವಹಣೆ'[೪೧] ಎಂಬ ಲೇಖನಗಳು ವಿಶ್ವಕರ್ಮ ಯುವಜನಾಂಗ ಧಾರ್ಮಿಕ ಸಾಮಾಜಿಕ ಹೊಣೆಗಾರಿಕೆಗಳನ್ನು ಅರ್ಥ ಮಾಡಿಕೊಳ್ಳಬೇಕೆಂಬ ಕಳಕಳಿ ವ್ಯಕ್ತಪಡಿಸಿವೆ.

ದಿನೇಶಕುಮಾರ ಎಂಬ ಸಮಾಜ ಚಿಂತಕರು 'ವಿಶ್ವಕರ್ಮ ಸಮುದಾಯವನ್ನು ಪರಿಶಿಷ್ಟ ವರ್ಗಕ್ಕೆ ಸೇರ್ಪಡೆ ಬೇಡಿಕೆ ಬೇಡವೇ ಬೇಡ'[೪೨] ಎಂಬ ಲೇಖನ ಬರೆದು, ಪ್ರಾಚೀನ ಕಾಲದಿಂದಲೂ ವಿಶ್ವಕರ್ಮ ಬ್ರಾಹ್ಮಣರೆಂದು ಕರೆಸಿಕೊಂಡು ಬಂದ ನಾವು, ಸರಕಾರದ ಸವಲತ್ತಿನ ಆಶೆಗಾಗಿ ಪರಿಶಿಷ್ಟರಾಗುವುದು ಬೇಡ ಎಂಬ ಆಲೋಚನೆ ಇಲ್ಲಿದೆ. ಆದರೆ ಇದಕ್ಕೆ ಪ್ರತಿಕ್ರಿಯೆ ಎನ್ನುವಂತೆ ಕಾಂತಾವರ ಶಿವಾನಂದ ಶೆಣೈ ಅವರು 'ತಾರತಮ್ಯದಿಂದ ಸಮಾಜಕ್ಕೆ ನಷ್ಟ'[೪೩] ಎಂಬ ಲೇಖನ ಬರೆದಿದ್ದಾರೆ. ನಮ್ಮ ಸಮಾಜಕ್ಕೆ ಯಾವುದೇ ರೀತಿಯ ಸರಕಾರಿ ಸವಲತ್ತುಗಳು ಸಿಗುತ್ತಿಲ್ಲ ಎಂಬ ಕೊರಗು ಇಲ್ಲಿದೆ.

ರಾವ ಜ.ಮ. ಎನ್ನುವ ಚಿಂತಕರು 'ವಿಶ್ವಕರ್ಮ ಬ್ರಾಹ್ಮಣ ಜಾತೀಯ ವಾದ-ವಿವಾದಗಳು'[೪೪] ಎಂಬ ಲೇಖನದಲ್ಲಿ ವಿಶ್ವಕರ್ಮರಿಗೆ ಜಾತೀಯ ಅನುಶ್ರೇಣಿಯಲ್ಲಿ ಆಗುತ್ತ ಬಂದ ಅನ್ಯಾಯಗಳನ್ನು ಕುರಿತು ವಿವರಿಸಲಾಗಿದೆ.

ಹೀಗೆ ನೂರಾರು ಲೇಖನಗಳಲ್ಲಿ ವಿಶ್ವಕರ್ಮ ಸಮಾಜದ ಸಂಘಟನೆ, ಇತಿಹಾಸ ಸಾರುವ ಮಹತ್ವದ ವಿಷಯಗಳನ್ನು ಒಳಗೊಂಡಿವೆ.

ವಿಶ್ವಕರ್ಮ ಸಮಾಜದ ಸಾಹಿತ್ಯ ಅಪಾರವಾಗಿದೆ. ಪ್ರಾಚೀನ ಕಾಲದಿಂದಲೂ ಸಾಹಿತ್ಯಿಕವಾಗಿ ಈ ಸಮಾಜದ ಕಾಣಿಕೆ ಅನನ್ಯವಾಗಿದೆ. ಇಡೀ ಭಾರತದಲ್ಲಿ ವಿಶ್ವಕರ್ಮ ಸಾಹಿತ್ಯ ಕುರಿತು ಸಾವಿರಾರು ಕೃತಿಗಳು ಪ್ರಕಟಗೊಂಡಿವೆ. ಪ್ರಾಚೀನ ಕಾಲದಲ್ಲಿಯೇ ೩೬೦ಕ್ಕೂ ಹೆಚ್ಚು ವಿಶ್ವಕರ್ಮ ಸಾಹಿತ್ಯ ಶಿಲ್ಪ ಕೃತಿಗಳು ನಿರ್ಮಾಣವಾಗಿರುವುದು ಅವುಗಳ ಸತ್ವ ಮತ್ತು ಗಾತ್ರಕ್ಕೆ ಸಾಕ್ಷಿಯಾಗಿದೆ. ವಿಶ್ವಕರ್ಮ ಸಮಾಜದ ಆಧುನಿಕ ಬರಹಗಾರರ ಸಂಖ್ಯೆಯೂ ಹೆಚ್ಚಾಗಿದೆ. ಆದರೆ ಅವರಿಗೆ ಸೂಕ್ತ

ಅವಕಾಶಗಳು ದೊರೆಯುತ್ತಿರಲಿಲ್ಲ. ಅದಕ್ಕಾಗಿ ವಿಶ್ವಕರ್ಮ ಸಮಾಜದ ಪತ್ರಿಕೆಗಳು ಅವರಿಗೆ ಅವಕಾಶಗಳನ್ನು ನೀಡುವ ಮೂಲಕ ಅನೇಕ ಹೊಸ ಲೇಖಕರನ್ನು ಬೆಳಕಿಗೆ ತಂದ ಶ್ರೇಯಸ್ಸಿಗೆ ಪಾತ್ರವಾಗಿವೆ.

ವಾರ್ತಾ ಮತ್ತು ಪ್ರಚಾರ ಇಲಾಖೆಯ ವಿಶ್ರಾಂತ ಅಧಿಕಾರಿಗಳಾದುದು ಸಿ.ಪಿ. ಮಾಯಾಚಾರಿ ಅವರ ಸಂಪಾದಕತ್ವದಲ್ಲಿ ಸಿರಸಂಗಿಯ ಶ್ರೀ ವಿಶ್ವಕರ್ಮ ಸಮಾಜದ ವಿಕಾಸ ಸಂಸ್ಥೆಯಿಂದ ವಿಶ್ವಕರ್ಮ ವಿಕಾಸವಾಣಿ ಪತ್ರಿಕೆ ಮಾರ್ಚ ೨೦೧೭ರಿಂದ ಪ್ರಕಟವಾಗುತ್ತಿದೆ. ಪತ್ರಿಕೆಯ ಆಶೋತ್ತರಗಳನ್ನು ಕುರಿತು ಪ್ರಥಮ ಸಂಪಾದಕೀಯದಲ್ಲಿ ಹೀಗೆ ವಿವರಿಸಿದ್ದಾರೆ.

"ಪ್ರತಿಯೊಬ್ಬ ವಿಶ್ವಕರ್ಮನು ಇಂದು ವ್ಯಕ್ತಿಗತ ಹಿತದ ಜತೆಜತೆಗೆ ಸಮಾಜದ ಸಮಷ್ಟಿ ಹಿತದ ಆಲೋಚನೆಯನ್ನು ಮಾಡಬೇಕಾದ ಕಾಲ ಸನ್ನಿಹಿತವಾಗಿದೆ. 'ಸರ್ವಂ ಹಿತಾಯ ಲೋಕಂ ಸುಖಾಯ' ಎಂದು ಮುಂದೆ ಸಾಗುವಾಗ ನಾವು ಕೇವಲ ನಮ್ಮ ಜನಾಂಗದ ಶ್ರೀಮಂತ ಪರಂಪರೆಯನ್ನು ನೆನೆಯುತ್ತ ಕೂಡ್ರದೆ, ಮರೆತು ಹೋಗುತ್ತಿರುವ ನಮ್ಮ ವೈದಿಕ ಪರಂಪರೆ ಹಾಗೂ ಷೋಡಶಕರ್ಮಾದಿಗಳನ್ನು ಜೀವನದಲ್ಲಿ ರೂಢಿಸಿಕೊಂಡು, ನಮ್ಮ ಮುಂದಿನ ಪೀಳಿಗೆಯನ್ನು ಮುನ್ನಡೆಸಬೇಕಾಗಿದೆ. ಇದರ ಜತೆಗೆ, ಬದಲಾದ ಕಾಲಘಟ್ಟದಲ್ಲಿ ನಮ್ಮ ಯುವಜನರಲ್ಲಿ ವೈಶ್ವಕರ್ಮಣ ಪ್ರಜ್ಞೆ ಸ್ಥಾಯಿಭಾವವಾಗಿ ಉಳಿಯುವಂತೆ ಮಾಡುವುದು ಮತ್ತು ಅವರಿಗೆ ಶೈಕ್ಷಣಿಕ ಹಾಗೂ ವೃತ್ತಿ ಸಂಬಂಧದ ಮಾರ್ಗದರ್ಶನ ಮಾಡುವುದು ಸಹ ಮುಖ್ಯವಾಗಿದ್ದು, ಈ ಪತ್ರಿಕೆ ಅತ್ತ ತನ್ನ ದೃಷ್ಟಿ ನೆಟ್ಟಿದೆ. ಈ ಶ್ರೀಮಂತ ಸಮಾಜದ ಕಲೆ, ಸಾಹಿತ್ಯ ಹಾಗೂ ಸಂಸ್ಕೃತಿ ಪ್ರಸಾರದ ಜತೆಜತೆಗೆ ನಾಡಿನ ಮೂಲೆಮೂಲೆಯಲ್ಲಿರುವ ಹಿರಿಯ ಮತ್ತು ಯುವ ಲೇಖಕರ ವೈಚಾರಿಕ ಬರಹಗಳಿಗೆ ಈ ಪತ್ರಿಕೆ ವೇದಿಕೆಯಾಗುವಂತೆ ಪತ್ರಿಕೆಯನ್ನು ರೂಪಿಸುವುದು ಸಂಸ್ಥೆಯ ಉದ್ದೇಶವಾಗಿದೆ. ವಿಶ್ವಕರ್ಮ ಸಂತತಿಯಾದ ನಾವು, ಈ ದೇಶದ ಕಲೆ, ಸಂಸ್ಕೃತಿ ಹಾಗೂ ಪರಂಪರೆಯ ಹಾದಿಯಲ್ಲಿ ನಿರ್ಮಿಸಿರುವ ಭೌತಿಕ ಹಾಗೂ ಆಧ್ಯಾತ್ಮಿಕ ಆಸ್ತಿ ಬಲು ದೊಡ್ಡದಾಗಿ. ಇದು, ಭಾರತದ ಇಂದಿನ ಸುಸ್ಥಿತಿ ಹಾಗೂ ಶ್ರೇಯಸ್ಸಿಗೆ ಕಾರಣವಾಗಿದೆಯೆಂಬುದು ಬಹಳ ಜನಕ್ಕೆ ಸರಿಯಾಗಿ ತಿಳಿದಿಲ್ಲ. ಹಿಂತಿರುಗಿ ನೋಡಿದರೆ, ಧರ್ಮಶಾಸ್ತ್ರ, ಜ್ಯೋತಿಷ್ಯ ಶಾಸ್ತ್ರ, ಶಿಲ್ಪ, ಗಣಿತ ಹಾಗೂ ವಿವಿಧ ವಿಜ್ಞಾನ ಶಾಸ್ತ್ರಗ್ರಂಥಗಳನ್ನು ವಿಶ್ವಬ್ರಾಹ್ಮಣ ಋಷಿಗಳೇ ಬರೆದಿದ್ದಾರೆ. ಪೌರಾಣಿಕ ನಗರಗಳ ನಿರ್ಮಾಣ, ದೇವಾಲಯ, ರಥ, ಚಿನ್ನ-ಬೆಳ್ಳಿ, ಕಾಷ್ಠ ಹಾಗೂ ಕಂಚಿನ ಕೆಲಸ, ಆಯುಧ, ಹಡಗು ಹೀಗೆ ಹತ್ತಾರು ಉಪಕರಣಗಳ ಮೂಲಕರ್ತೃಗಳು ನಾವು. ಈ ಸಾಧನೆ ನಮ್ಮ ಕರ್ಮಸಿದ್ಧಾಂತದ ಫಲ. ಇಂದು ಈ ಸಿದ್ಧಾಂತ ವಿಜ್ಞಾನದೊಂದಿಗೆ ಸಮನ್ವಯಗೊಂಡು ಲೋಕದ ಹಿತಕ್ಕೆ ಹಲವು ಮುಖಗಳಲ್ಲಿ ಬಳಕೆಯಾಗುತ್ತಿದೆ. ಆದರೆ ಈ ಸಾಧನೆಗೆ ಮೂಲವಾದ ಜನಾಂಗ ಇಂದು ಒಂದು ರೀತಿಯಲ್ಲಿ ನೇಪಥ್ಯಕ್ಕೆ ಸರಿದಂತಾಗಿದೆ. ಈ ಚಿಂತನೆಯ ಹಿನ್ನೆಲೆಯಲ್ಲಿ ನಾವು ಈ ಶ್ರೀಮಂತ ಪರಂಪರೆಯ ವಾರಸುದಾರರಾಗಿ, ನಮ್ಮ ಸಾಂಸ್ಕೃತಿಕ ಅಸ್ಮಿತೆಯನ್ನು ಉಳಿಸಿಕೊಂಡು, ಸಮಾಜದ ಏಳಿಗೆ ಹಾಗೂ ಒಗ್ಗಟ್ಟನ್ನು ಸಾಧಿಸಬೇಕಾಗಿದೆ".[೨೫]

ವಿಶ್ವಕರ್ಮ ಸಂಸ್ಕೃತಿಗೆ ಸಾವಿರಾರು ವರ್ಷಗಳ ಪ್ರಾಚೀನ ಇತಿಹಾಸವಿದೆ. ಈ ಸಮಾಜದ ಸಾಂಸ್ಕೃತಿಕ ವಿಶ್ವವೈಭವ ಅಪಾರವಾದುದು. ವಿಶ್ವಕರ್ಮನ ಆಜ್ಞೆಯಿಂದ ಮನುಬ್ರಹ್ಮ, ಅವನ ಸಂತತಿಯವರು ಧರ್ಮಶಾಸ್ತ್ರಗಳನ್ನೂ, ಮಯಬ್ರಹ್ಮ, ಅವನ ಸಂತತಿಯವರು ವಾಸ್ತು ಶಾಸ್ತ್ರಾದಿಗಳನ್ನೂ ತ್ವಷ್ಟ ಬ್ರಹ್ಮ ಹಾಗೂ ಅವನ ಸಂತತಿಯವರು ಶ್ರೌತಸ್ಮಾರ್ತಾದಿ ಶಾಸ್ತ್ರಗಳನ್ನು, ಶಿಲ್ಪಬ್ರಹ್ಮ ಹಾಗೂ ಅವನ ಸಂತತಿಯವರು ಶಿಲ್ಪಶಾಸ್ತ್ರಗಳನ್ನು, ವಿಶ್ವಜ್ಞ ಬ್ರಹ್ಮ ಹಾಗೂ ಅವನ ಸಂತತಿಯವರು ಜ್ಯೋತಿಷ್ಯ ಶಾಸ್ತ್ರಗಳನ್ನೂ, ಗಣಿತ ಗ್ರಂಥಗಳನ್ನು ಬರೆದರು. ಈ ಶಾಸ್ತ್ರ ನಿಯಮಗಳಿಗನುಸಾರವಾಗಿ ದೇವಲೋಕದಲ್ಲಿ ಅಮರಾವತಿ, ಅಲಕಾವತಿ, ವೈಕುಂಠ ಮೊದಲಾದ ದುಹಾ ಪಟ್ಟಣಗಳನ್ನು, ಮಾನವ ಲೋಕದಲ್ಲಿ ಮಥುರಾ, ಆಯೋಧ್ಯಾ, ಕಿಷ್ಕಿಂದೆ, ಲಂಕೆ, ದ್ವಾರಕಾ ಕಂಚಿ ಮೊದಲಾದ ಸುಂದರ ನಗರಗಳನ್ನು ಅಸಂಖ್ಯ ರಾಜಭವನಗಳನ್ನು ಕೋಟೆ ಕೊತ್ತಲಗಳನ್ನು ಕೆರೆ ತಟಾಕಗಳನ್ನು, ಮನೆ ಮಠಗಳನ್ನು ದೇವಾಲಯಗಳನ್ನು ಮಾನವನು ಹುಟ್ಟಿ ಸಾಯುವವರೆಗೆ ಮಾಡುವ ಸಂಸ್ಕಾರಗಳಿಗೆ ಬೇಕಾಗುವ ಉಪಕರಣಗಳನ್ನು ಕೃಷಿ ಸಾಧನಗಳನ್ನು ಗೃಹೋಪಕರಣಗಳನ್ನು ಸಮಸ್ತ ವಸ್ತುಗಳನ್ನು ತಯಾರಿಸಿ ಈ ವಿಶ್ವಕರ್ಮದ ಸಂತತಿಯವರು ಲೋಕೋಪಕಾರ ಮಾಡಿ ಪ್ರಖ್ಯಾತರಾಗಿದ್ದಾರೆ.

ಪಂಚಬ್ರಹ್ಮರಿಂದಾದ ಈ ಪಂಚಾಳ ಸಮಾಜವು ಐದು ಗೋತ್ರಗಳಿಂದ ಬೆಳೆದು ೧೨೫ ಗೋತ್ರಗಳು ಆಯಾ ಗೋತ್ರ್ ಋಷಿಯಿಂದ ಸಾವಿರಾರು ವರ್ಷಗಳಿಂದ ಕಾಶ್ಮೀರದಿಂದ ಸಿಲೋನದವರೆಗೆ ಸಿಂಧಪ್ರಾಂತದಿಂದ ಬಂಗಾಲದವರೆಗೆ ಇಂದಿಗೂ ಬೆಳೆದು ಬಂದಿದೆ. ವಿಶ್ವಕರ್ಮರು ಪಂಚಶಿಲ್ಪಗಳನ್ನು ನಿರ್ಮಿಸಿ ಲೋಕಪೂಜಿತರಾದರು. ಶಿಲ್ಪದಲ್ಲಿ ದೇವಶಿಲ್ಪವೆಂದೂ ಮಾನುಷ್ಯ ಶಿಲ್ಪವೆಂದೂ ಎರಡು ಪ್ರಕಾರಗಳಿರುತ್ತವೆ. ದೇವರಮೂರ್ತಿಗಳೂ, ದೇವಾಲಯಗಳೂ, ಯಜ್ಞವೇದಿಕೆ ಮಂಟಪಗಳೂ ಪೂಜಾಸಾಮಗ್ರಿಗಳೂ ಹೀಗೆ ದೇವರಿಗೆ ಸಂಬಂಧಿಸಿದ ವಸ್ತುಗಳು ದೇವಶಿಲ್ಪ ಕೃತಿಗಳೆಂದು ಕರೆಯಲ್ಪಡುವವು. ಮಾನವನ ಉಪಯೋಗಕ್ಕಾಗಿ ಇರುವ ಒಕ್ಕಲುತನದ ಉಪಕರಣಗಳೂ ಮನೆ ಮಹಲುಗಳೂ ಆಭರಣಗಳೂ ಇತರ ನಿತ್ಯೋಪಯೋಗಿ ಸಾಧನ ಸಲಕರಣೆಗಳು ಮಾನುಷ ಶಿಲ್ಪಗಳೆಂದು ಕರೆಯಲ್ಪಡುವವು. ಶಿಲ್ಪಶಾಸ್ತ್ರದಲ್ಲಿ ವಾಸ್ತುಶಿಲ್ಪ, ಮೂರ್ತಿ ಶಿಲ್ಪ ಎಂಬ ಎರಡು ಭಾಗಗಳನ್ನು ಮಾಡುವರು. ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ವಿಶ್ವಕರ್ಮರೇ ಶಿಲ್ಪಿಗಳನ್ನು ನಿರ್ಮಿಸಿದರು. ಆದರೆ ಕಲಿಯುಗದಲ್ಲಿ ಇತ್ತೀಚೆಗೆ ನೂರಾರು ವರ್ಷಗಳಿಂದ ವಿಶ್ವಕರ್ಮರು ಶಿಲ್ಪವನ್ನು ಅಲಕ್ಷಿಸುತ್ತ ಬಂದಿದ್ದರಿಂದ ಅಧೋಗತಿಗಿಳಿಯುತ್ತಿದ್ದಾರೆ. ಈ ೨೦ನೇ ಶತಮಾನದಲ್ಲಂತೂ ವಿಶ್ವಕರ್ಮರು ತಮ್ಮ ಶಿಲ್ಪವಿದ್ಯೆಯನ್ನು ಮರೆತು, ಸಕಲ ವಿದ್ಯೆಗಳಿಂದ ಬಡತನದಿಂದ ವಂಚಿತರಾಗಿ, ಅನ್ಯರ ಕಸುಬುಗಳನ್ನು ಮಾಡುತ್ತ ಹೊಟ್ಟೆ ತುಂಬಿಕೊಳ್ಳುತ್ತಿದ್ದರು. ತಮ್ಮ ಪುರಾತನ ಭವ್ಯ ಪರಂಪರೆಯನ್ನು ತಿಳಿಯದೆ ಇದರ ಎಲ್ಲ ವಿದ್ಯೆಗಳು ಬೇರೆಯವರ ಕೈವಶವಾಗಿ ಅವರು ಕೂಲಿಕಾರರಂತೆ ನಿರ್ವೀರ್ಯರಾಗಿ ಬಾಳುತ್ತಿದ್ದಾರೆ. ದಾರಿದ್ರ್ಯ ಅಜ್ಞಾನಗಳಿಂದ ಪೀಡಿತರಾಗಿರುವರು.

ತಮ್ಮ ಮೂಲ ಧರ್ಮ ಸಂಸ್ಕೃತಿ ಇತಿಹಾಸದ ಬಗ್ಗೆ ಅವರಿಗೇ ತಿಳಿದಿರಲಿಲ್ಲ. ವಿಶ್ವಬ್ರಾಹ್ಮಣ ಸಂಸ್ಕೃತಿಯು ಭಾರತದಲ್ಲಿ ಅತ್ಯಂತ ಪ್ರಾಚೀನವಾದುದು. ಇದಕ್ಕೆ ವೇದಕ್ಕಿಂತಲೂ ಮೊದಲು ಇದ್ದ ಮೊಹೆಂಜೋದಾರೋ ಸಂಸ್ಕೃತಿಯಲ್ಲಿಯೂ ಇದರ ಹಿರಿಮೆ ತಿಳಿದುಬಂದಿದೆ.

ಸಾನಗ, ಸನಾತನ, ಅಹಭೂನ, ಶಿಲ್ಪಿ, ದೈವಜ್ಞ ಎಂಬ ಪಂಚಗೋತ್ರಗಳ ಜನರಾದ ಕಮ್ಮಾರ, ಬಡಿಗ, ಕಂಚುಗಾರ, ಶಿಲ್ಪಿ, ಅರ್ಕಸಾಲಿ ಸಮಾಜಗಳು ಭಾರತದ ತುಂಬ ಇವೆ. ವೇದಪೂರ್ವ ಕಾಲ, ಉಪನಿಷತ್ತು, ಮಹಾಕಾವ್ಯಗಳ ಕಾಲ, ಬೌದ್ಧರ ಕಾಲ, ಮೌರ್ಯ, ಶಾತವಾಹನರ ಕಾಲ, ಗುಪ್ತ, ಚಾಲುಕ್ಯ ರಾಷ್ಟ್ರಕೂಟರ ಕಾಲ, ಮಧ್ಯಯುಗದಲ್ಲಿ ರಜಪೂತ, ಮುಸ್ಲಿಂ, ಮರಾಠಾ ಪೇಶ್ವೆಗಳ ಕಾಲ, ಇಂಗ್ಲಿಷ್‌ರ ಕಾಲ ಹೀಗೆ ಎಲ್ಲ ಕಾಲಘಟ್ಟದಲ್ಲಿಯೂ ವಿಶ್ವಕರ್ಮ ಸಮಾಜ ತನ್ನ ಅಸ್ತಿತ್ವ ಮತ್ತು ಅಸ್ಮಿತೆ ಉಳಿಸಿಕೊಳ್ಳುವ ಸಲುವಾಗಿ ಹೋರಾಟ ಮಾಡುತ್ತಲೇ ಬಂದಿದೆ.

ಖ್ಯಾತ ಸಂಶೋಧಕ ಡಾ. ಎಂ. ಚಿದಾನಂದಮೂರ್ತಿ ಅವರು ತಮ್ಮ ಸಂಶೋಧನ ಮಹಾಪ್ರಬಂಧ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ ಅಲ್ಲಲ್ಲಿ ವಿಶ್ವಕರ್ಮರ ಜೀವನದ ಸೊಗಸನ್ನು ವರ್ಣಿಸಿ, ಒಂದೆಡೆ ಇವರ ರಕ್ತದಲ್ಲಿಯೇ ಕಲೆಯ ಬೀಜಗಳು ಹುದುಗಿರುವಂತಿದೆ ಎಂದಿದ್ದಾರೆ. ವಿಶ್ವದಲ್ಲೇ ವಿಶ್ವಬ್ರಾಹ್ಮಣರ ಇತಿಹಾಸದಷ್ಟು ಸುದೀರ್ಘ ಜೀವ ಇತಿಹಾಸ ಮತ್ತಾವ ಜನಾಂಗದ್ದು ಲಭ್ಯವಿಲ್ಲ. ಆದರೆ ಈ ಸಮಾಜದ ಇತಿಹಾಸ, ಧರ್ಮ, ಸಂಸ್ಕೃತಿ, ಕಲೆ, ಮಹಾಪುರುಷರ ಬಗ್ಗೆ ಸಾಕಷ್ಟು ಸಂಶೋಧನೆ ಅಧ್ಯಯನ ನಡೆದಿಲ್ಲ, ಗ್ರಂಥ ಸೃಷ್ಟಿಯಾಗಿಲ್ಲ. ಇನ್ನಾದರೂ ವಿಶ್ವಬ್ರಾಹ್ಮಣ ಸಮಾಜದ ವಿದ್ವಾಂಸರು ಈ ಕಡೆಗೆ ದೃಷ್ಟಿಹರಿಸಿ, ಸಾಂಸ್ಕೃತಿಕ ದೃಷ್ಟಿಯಿಂದ ವಿಶ್ವಬ್ರಾಹ್ಮಣರ ಸಮಗ್ರ ವಿಶಿಷ್ಟ ಸಂಸ್ಕೃತಿ ಜೀವನದ ವೈಭವವನ್ನು ವಿಶ್ವದ ಮುಂದಿರಿಸಬೇಕು. ವಿಶ್ವಬ್ರಾಹ್ಮಣರು ತಮ್ಮ ವಿಶಿಷ್ಟ ಪ್ರತಿಭೆಯನ್ನು ವಿಶ್ವಕ್ಕೆ ಧಾರೆಯೆರೆದು ಸಿಂಧೂ ಕೊಳ್ಳದಿಂದ ಕನ್ಯಾಕುಮಾರಿ ವಿವೇಕಾನಂದ ದೇವಾಲಯದ ತನಕ ಭಾರತ, ಸಿಂಹಳ, ಅಮೇರಿಕಾ, ಜಾವಾ ಮತ್ತು ಸುಮಾತ್ರಾ ಹೀಗೆ ಹಲವು ರಾಷ್ಟ್ರಗಳಲ್ಲಿ ದೇವಾಲಯ, ಬೇಲೂರು ಹಳೇಬೀಡಿನಂತಹ ಅದ್ಭುತ ದೇವಾಲಯಗಳು, ಅರಮನೆಗಳನ್ನೆಲ್ಲ ರಚಿಸಿದ್ದು ಅಜಂತಾ, ಎಲ್ಲೋರ, ಸೈಗೀರಿಯಗಳಲ್ಲಿ ದೇವಾಲಯಗಳಲ್ಲಿ ಚಿತ್ರಗಳನ್ನೂ ರಚಿಸಿದ್ದು ಧರ್ಮ ಸಂಸ್ಕೃತಿಯನ್ನು ಅಜರಾಮರಗೊಳಿಸಿ ಸತ್ಯವನ್ನು ವಿಶ್ವ ಮನಗಾಣುವಂತಾಗಬೇಕೆಂಬ ಕಳಕಳಿಯಿಂದ ವಿಶ್ವಕರ್ಮ ಸಮಾಜದ ಬಹುತೇಕ ಪತ್ರಿಕೆಗಳು ಪರಿಶ್ರಮಪಟ್ಟಿರುವುದನ್ನು ಕಾಣುತ್ತೇವೆ.

ವಿಶ್ವಕರ್ಮ ಸಮಾಜ ಭಾರತೀಯ ರಾಷ್ಟ್ರಪ್ರವಾಹದ ಒಂದು ಭಾಗವಾಗಿದೆ. ಕಲೆ ಮತ್ತು ಸಂಸ್ಕೃತಿಗೆ ಬಹಳಷ್ಟು ಕೊಡುಗೆಯನ್ನು ನೀಡಿದ, ಜೀವ ತೇದ ಈ ಸಮಾಜ ಸ್ವಾತಂತ್ರ್ಯ ದೊರಕಿ ಏಳು ದಶಕಗಳೇ ಕಳೆದರೂ ಇನ್ನೂ ರಾಜಕೀಯವಾಗಿ ಒಂದಿಷ್ಟು ಹಿಂದುಳಿದಿದೆ. ಕುಶಲಕರ್ಮಿಗಳಿಗೆ ಹಾಗೂ ಆರ್ಥಿಕವಾಗಿ ಹಿಂದುಳಿದವರಿಗೆ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು

ಹೆಚ್ಚಿಸಿಕೊಳ್ಳುವುದಕ್ಕೆ ಪೂರಕವಾದ ಯೋಜನೆಗಳು ಸರಕಾರದ ಬಳಿಯಲ್ಲಿವೆ. ಆದರೆ ಆ ಯೋಜನೆಗಳ ಸದುಪಯೋಗವನ್ನು ವಿಶ್ವಕರ್ಮ ಜನಾಂಗದವರು ಪಡೆಯುತ್ತಿಲ್ಲ. ಪಡೆದುಕೊಂಡರೂ ಯೋಜನೆಯ ಮೂಲ ಉದ್ದೇಶಕ್ಕೆ ಪೂರಕವಾಗಿ ಬಳಸುತ್ತಿಲ್ಲ. ಮಾರ್ಗದರ್ಶನದ ಕೊರತೆ, ನಿರಕ್ಷರತೆ, ಮಹಾತ್ವಾಕಾಂಕ್ಷೆಯ ಅಭಾವಗಳೇ ಇವುಗಳಿಗೆ ಕಾರಣ. ತಾನು ಪ್ರಗತಿ ಸಾಧಿಸಬೇಕು ಎನ್ನುವ ಆಂತರಿಕ ಒತ್ತಡ, ಜೀವನೋತ್ಸಾಹಗಳು ಇಲ್ಲದಿದ್ದಾಗ ಹೊರಗಿನ ಒತ್ತಡ, ಮಾರ್ಗದರ್ಶನ, ಸಹಾಯಗಳು ಪ್ರಯೋಜನಕ್ಕೆ ಬಾರವು.

ನಮ್ಮ ದೇಶದಲ್ಲಿ ಎಲ್ಲಾ ಶಕ್ತಿಗಳನ್ನು ರಾಜಕೀಯ ಶಕ್ತಿಯು ನಿಯಂತ್ರಿಸುತ್ತದೆ. ರಾಜಕೀಯ ಶಕ್ತಿಯನ್ನು ಗಳಿಸಿಕೊಳ್ಳದ ಯಾವುದೇ ಸಮಾಜ ಪ್ರಗತಿ ಸಾಧಿಸುವುದು ಕಷ್ಟ. ಹಿಂದುಳಿದ ವಿಶ್ವಕರ್ಮ ಸಮಾಜವನ್ನು ಮುಂದೆ ತರುವುದಕ್ಕೆ ಎಲ್ಲಾ ಕಾರ್ಯಗಳು ತಳಮಟ್ಟದಿಂದಲೇ ಪ್ರಯತ್ನ ಸಾಗಬೇಕೆಂಬ ಉದ್ದೇಶದ ಸಾಧನೆಗಾಗಿ ವಿಶ್ವಕರ್ಮ ಪತ್ರಿಕೆಗಳು ಪ್ರಯತ್ನಿಸಿವೆ. ಜಗತ್ ಕಲ್ಯಾಣ, ಆತ್ಮೀಯ ಬೋಧಕ, ವಿಶ್ವಕರ್ಮ, ರೂವಾರಿ ಮೊದಲಾದ ಪತ್ರಿಕೆಗಳಲ್ಲಿ ಆಗಾಗ ವಿಶ್ವಕರ್ಮ ಸಮಾಜದಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸುವ ವಿಚಾರಗಳು ಪ್ರಕಟಗೊಂಡಿವೆ.

ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜ ಸಾಮಾಜಿಕ ಹಾಗೂ ರಾಜಕೀಯ ಜಾಗೃತಿಯ ಕೆಲಸ ೧೯೪೮ರಲ್ಲಿ ಶ್ರೀರಂಗಪಟ್ಟಣದಲ್ಲಿ ಜರುಗಿದ ಮಹಾಯಾಗದ ಸಂದರ್ಭದಲ್ಲಿಯೇ ಪ್ರಾರಂಭವಾಯಿತು. ೧೯೫೮ರಲ್ಲಿ ದಾವಣಗೆರೆಯಲ್ಲಿ ಜರುಗಿದ ಅಖಿಲ ಕರ್ನಾಟಕ ವಿಶ್ವಕರ್ಮ ಸಮ್ಮೇಳನ ರಾಜ್ಯಮಟ್ಟದಲ್ಲಿ ಸಮಾಜ ಬಾಂಧವರು ಬಂದು ಸೇರುವ ಅವಕಾಶ ಒದಗಿಸಿತು. ೧೯೭೨ರಲ್ಲಿ ಮಂಗಳೂರಿನಲ್ಲಿ ಜರುಗಿದ ಸಮ್ಮೇಳನ ರಾಜ್ಯಮಟ್ಟದಲ್ಲಿ ನಮ್ಮ ಸಮಾಜದ ಆರ್ಥಿಕ ಸ್ಥಿತಿಗತಿಗಳನ್ನು ಸರಕಾರದ ಮುಂದಿಟ್ಟು, ಹಾವನೂರ ಆಯೋಗ ವಿಶ್ವಕರ್ಮರನ್ನು ಹಿಂದುಳಿದವರ ಪಟ್ಟಿಯಲ್ಲಿ ಸೇರಿಸುವುದಕ್ಕೆ ಸಾಧ್ಯವಾಯಿತು. ೧೯೭೫ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಅಖಿಲ ಭಾರತ ಸಮ್ಮೇಳನದಲ್ಲಿ ರಾಷ್ಟ್ರಮಟ್ಟದ ನಮ್ಮ ಸಮಸ್ಯೆಗಳನ್ನು ಕ್ರೋಢೀಕರಿಸಿ ಚರ್ಚಿಸುವಂತಾಯಿತು. ಮೇಲಿನ ಎಲ್ಲಾ ಸಮ್ಮೇಳನಗಳಲ್ಲಿ ರಾಜಕೀಯ ಗೋಷ್ಠಿಗಳು ಜರುಗಿ ಅನೇಕ ಗೊತ್ತುವಳಿಗಳನ್ನು ಅಂಗೀಕರಿಸಲಾಯಿತು. ಆದರೆ ನಿರೀಕ್ಷಿಸಿದ ಪ್ರಯೋಜನ, ರಾಜಕೀಯ ಜಾಗೃತಿ ವಿಶ್ವಕರ್ಮ ಸಮಾಜದಲ್ಲಿ ಆಗಲಿಲ್ಲ. ಸಕ್ರಿಯ ರಾಜಕೀಯವನ್ನು ಪ್ರವೇಶಿಸಿ ದುಡಿದು ಮೇಲಕ್ಕೇರಿ ವಿಧಾನ ಸಭೆ, ವಿಧಾನ ಪರಿಷತ್ತುಗಳನ್ನು ಪ್ರವೇಶಿಸಿದವರು ಬೆರಳಣಿಕೆಯಷ್ಟು ಜನರು ಮಾತ್ರ. ಎಲ್.ಸಿ. ಮಾನಾಚಾರ್, ವಿ.ವಿ. ಪತ್ತಾರ್, ಸೂರಾಚಾರ್, ಶ್ರೀಮತಿ ಜಿಂಬಾರಾಯಕರ್ ಇವರ ಹೆಸರು ಮಾತ್ರ ಕಂಡುಬರುತ್ತದೆ.

ವಿಶ್ವಕರ್ಮ ಸಮಾಜವು ರಾಜಕೀಯವಾಗಿ ಹಿಂದುಳಿದಿರಲು ಕಾರಣವೇನು? ವಿಶ್ವಕರ್ಮ ಸಮಾಜದವರು ನಡೆಸಿದ ಸಮ್ಮೇಳನಗಳು, ವಿಚಾರ ಸಂಕಿರಣಗಳು, ರಾಜಕೀಯ ಸಮಾವೇಶಗಳ ಸಮಗ್ರ ವಿವರಗಳು ಆಯಾ ಕಾಲ ಘಟ್ಟದ ವಿಶ್ವಕರ್ಮ ಪತ್ರಿಕೆಗಳಲ್ಲಿ ಸವಿಸ್ತಾರವಾಗಿ ಪ್ರಕಟಗೊಂಡಿವೆ.

೧೯೫೧ರ ಏಪ್ರಿಲ್ ವಿಶ್ವಕರ್ಮ ಪತ್ರಿಕೆಯಲ್ಲಿ ಮೌನೇಶ ಹಳೇಮನಿ ಅವರು 'ನಮ್ಮಲ್ಲಿಯ ಕಾಂಗ್ರೆಸ್ ಸೇವಕರು' ಎಂಬ ಮಹತ್ವದ ಲೇಖನ ಬರೆದಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ವಿಶ್ವಕರ್ಮ ಸಮಾಜ ಬಾಂಧವರ ವಿವರಣೆಯನ್ನು ಇಲ್ಲಿ ನೀಡಿದ್ದಾರೆ. ಇಲ್ಲಿಂದಲೇ ವಿಶ್ವಕರ್ಮ ಜನಾಂಗದವರ ರಾಜಕೀಯ ನಂಟು ಪ್ರಾರಂಭವಾಯಿತು.

ಕೆ.ಎಸ್.ಬಡಿಗೇರ ಅವರು 'ರಾಜಕೀಯ ಧೃವೀಕರಣ ಅನಿವಾರ್ಯ'[೪೬] ಎಂಬ ಲೇಖನ ವಿಶ್ವಕರ್ಮ ಸಮಾಜದವರ ರಾಜಕೀಯ ನಿಲುವನ್ನು ಸ್ಪಷ್ಟಪಡಿಸುತ್ತದೆ. ಕೆ. ಆರ್. ದತ್ತಾತ್ರಿ ಅವರು 'ರಾಜಕೀಯದಲ್ಲಿ ವಿಶ್ವಕರ್ಮ ಸಮಾಜ ಅಂದು–ಇಂದು–ಮುಂದು'[೪೭] ಎಂಬ ಲೇಖನ ಏಳು ದಶಕಗಳ ಕಾಲಾವಧಿಯಲ್ಲಿ ವಿಶ್ವಕರ್ಮ ಸಮಾಜದ ರಾಜಕೀಯ ಇತಿಹಾಸವನ್ನು ತಿಳಿಸುವ ಮಹತ್ವದ ಲೇಖನವಾಗಿದೆ.

ವಿಶ್ವಕರ್ಮ ಸಮಾಜವು ರಾಜಕೀಯವಾಗಿ ಪ್ರಬಲವಾಗಬೇಕೆಂಬ ಕಾರಣಕ್ಕಾಗಿ ಸಮಾಜದ ಹಿರಿಯರೆಲ್ಲ ಕೂಡಿ 'ಕರ್ನಾಟಕ ವಿಶ್ವಬ್ರಾಹ್ಮಣ ಒಕ್ಕೂಟ ಸ್ಥಾಪನೆ' ಮಾಡಬೇಕೆಂಬ ಆಶಯವನ್ನು ಹೊಂದಿದ ವಿಷಯವನ್ನು ಕುರಿತು ಬಿ. ಎಚ್. ಕೇಶವ ಅವರು 'ಕರ್ನಾಟಕ ವಿಶ್ವಬ್ರಾಹ್ಮಣ ಒಕ್ಕೂಟ ಸ್ಥಾಪನೆಗೆ ಕ್ಷಣಗಣನೆ'[೪೮] ಎಂಬ ಲೇಖನ ಬರೆದಿದ್ದಾರೆ.

ಎಸ್.ಪಿ. ಶಂಕರಾಚಾರ್ಯ ಅವರು 'ವಿಶ್ವಕರ್ಮ ಜನಾಂಗ ರಾಜಕೀಯ ಪ್ರಜ್ಞೆ'[೪೯] ಎಂಬ ಮತ್ತೊಂದು ಮಹತ್ವದ ಲೇಖನ ಪ್ರಕಟಿಸಿದ್ದಾರೆ. ೨೦೧೪ರಲ್ಲಿ ಕರ್ನಾಟಕ ಸರಕಾರ ವಿಶ್ವಕರ್ಮ ಸಮಾಜಕ್ಕಾಗಿ ಒಂದು ನಿಗಮ ಮಂಡಳಿ ಸ್ಥಾಪನೆ ಮಾಡಲು ಮುಂದಾದಾಗ ಕುಮಾರ ದಿನೇಶ ಎನ್ನುವವರು 'ವಿಶ್ವಕರ್ಮ ನಿಗಮವೋ ಕರಕುಶಲ ನಿಗಮವೋ?'[೫೦] ಎಂಬ ಜಿಜ್ಞಾಸೆಯ ಲೇಖನ ಬರೆದಿದ್ದಾರೆ.

ಕಳೆದ ಹತ್ತು ಹದಿನೈದು ವರ್ಷಗಳ ಅವಧಿಯಲ್ಲಿ ವಿಶ್ವಕರ್ಮ ಸಮಾಜದ ಕೆ.ಪಿ. ನಂಜುಂಡಿ ಅವರು ರಾಜಕೀಯ ಕ್ಷೇತ್ರದಲ್ಲಿ ಪ್ರವೇಶ ಮಾಡಲು ಮಾಡಿದ ಪ್ರಯತ್ನಗಳನ್ನು ವಿಶ್ವಕರ್ಮ ಪತ್ರಿಕೆಗಳು ಹಾರ್ದಿಕವಾಗಿ ಸ್ವಾಗತಿಸಿವೆ. ನಾ. ಭಾ. ಚಂದ್ರಶೇಖರಾಚಾರ್ಯ ಅವರು 'ಭೋ! ನಂಜುಂಡಿ ಬಲವಾದ ದಾರಿ ತೋರಿಸಿ'[೫೧] ಎಂಬ ಲೇಖನ ಮತ್ತು 'ನಂಜುಂಡಿಯವರ ನಾಯಕತ್ವದಲ್ಲಿ ಎಂತಹ ತ್ಯಾಗಕ್ಕೂ ಸಿದ್ಧರಾಗಿರಿ'[೫೨] ಎಂಬ ಎರಡು ಮಹತ್ವದ ಲೇಖನಗಳನ್ನು ಬರೆದು ಸಮಾಜ ಬಾಂಧವರ ಮುಂದಿಟ್ಟಿದ್ದಾರೆ.

ಸಮಾಜ ಬಾಂಧವರಲ್ಲಿ ರಾಜಕೀಯ ಪ್ರಜ್ಞೆಯನ್ನು ಹೇಗೆ ಹೆಚ್ಚಿಸಬಹುದು? ಅದಕ್ಕಾಗಿ ಎಲ್ಲ ಭೇದಭಾವಗಳನ್ನು ಮರೆತು ಸಂಘಟಿತರಾಗುವ, ಸಾಮಾಜಿಕ ಜಾಗೃತಿಯನ್ನು ಮೂಡಿಸುವ ಲೇಖನಗಳನ್ನು ಪ್ರಕಟಿಸುತ್ತ ಬಂದಿವೆ.

ನನಗೆ ದೊರತಿರುವ ಕ್ಷೇತ್ರ ಮಾಹಿತಿ ಪ್ರಕಾರ ನವೆಂಬರ್ ೧೯೪೪ರಂದು 'ವಿಶ್ವಕರ್ಮ' ಎಂಬ ಮಾಸಪತ್ರಿಕೆಯು ಮೈಸೂರಿನ ಮ. ಗಂಗಾಧರಮೂರ್ತಿ ಅವರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳತೊಡಗಿತು. ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ವಿಶ್ವಕರ್ಮ ಜನಾಂಗವನ್ನು ಕುರಿತು ಪ್ರಾರಂಭವಾದ ಮೊಟ್ಟ ಮೊದಲ ಪತ್ರಿಕೆಯಾಗಿದೆ. ವಾರ್ಷಿಕ ಚಂದಾ ನಾಲ್ಕು ರೂ. ಬಿಡಿ ಪ್ರತಿಯ ಬೆಲೆ ೬ ಆಣೆ ಇತ್ತು. ೧/೮ ಡೆಮಿ ಸೈಜಿನಲ್ಲಿ ೪೦ ಪುಟಗಳಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆಯಲ್ಲಿ ಕೆಲವು ಪ್ರಮುಖ ಕೃತಿಗಳು ಪ್ರಕಟಗೊಳ್ಳುತ್ತಿದ್ದವು. ಹೀಗಾಗಿ ಆಯಾ ಕೃತಿಗಳ ಪುಟ ಸಂಖ್ಯೆಗಳು ಪ್ರತಿ ಸಂಚಿಕೆಯಲ್ಲಿ ಮುಂದುವರಿದಿರುವುದರಿಂದ ನಿರ್ದಿಷ್ಟ ಪುಟಗಳನ್ನು ಇಲ್ಲಿ ನಿರೀಕ್ಷಿಸುವಂತಿಲ್ಲ. ಮ. ಗಂಗಾಧರ ಮೂರ್ತಿ ಅವರು ಮೈಸೂರು ಮಹಾರಾಜರ ಕೃಪಾಶೀರ್ವಾದಕ್ಕೆ ಪಾತ್ರರಾದವರು. ಹೀಗಾಗಿ 'ವಿಶ್ವಕರ್ಮ ಹಿತೈಷಿಣೀ ಗ್ರಂಥಮಾಲೆ'ಯನ್ನು ಮೈಸೂರಿನಲ್ಲಿ ಅಸ್ತಿತ್ವಕ್ಕೆ ತಂದರು. ಮಹಾರಾಜರ ಆಸಕ್ತಿ, ವಿಶ್ವಕರ್ಮ ಜನಾಂಗದವರ ಪ್ರೀತಿ ಕಾರಣವಾಗಿ ಪತ್ರಿಕೆ ನಿಯಮಿತವಾಗಿ ಪ್ರಕಟಗೊಂಡು ಸರ್ವಜನಾದರಣೀಯವಾಗಿತ್ತು. ಹೆಸರಿಗೆ 'ವಿಶ್ವಕರ್ಮ' ಎಂದು ಪತ್ರಿಕೆಯಿದ್ದರೂ ಅದು ಸರ್ವಮಾಹಿತಿಗಳ ಭಂಡಾರವಾಗಿತ್ತು. ಸಂಪಾದಕೀಯಗಳು ತುಂಬ ದೀರ್ಘವಾಗಿದ್ದವು. ಅದರಲ್ಲೂ ಅದೇ ಆಗ ಭಾರತ ಸ್ವಾತಂತ್ರ್ಯ ಪಡೆದ ಕಾರಣ ಭಾರತ ಸ್ವಾವಲಂಬಿಯಾಗಬೇಕು, ಕರ್ನಾಟಕ ಏಕೀಕರಣವಾಗಬೇಕು ಎಂಬ ಹತ್ತು ಹಲವು ಸಾರ್ವತ್ರಿಕ ಸಮಸ್ಯೆಗಳ ಕುರಿತು ಸಂಪಾದಕೀಯದಲ್ಲಿ ಚರ್ಚಿಸಿದ್ದಾರೆ.

'ಭಾರತವು ಒಗ್ಗಟ್ಟಿನಿಂದ ಸ್ವಾವಲಂಬಿಯಾಗಬೇಕು', 'ವಿಶ್ವಕರ್ಮ ವಾಚಕರಲ್ಲಿ ಪ್ರಾರ್ಥನೆ', 'ಕನ್ನಡ ಪ್ರಾಂತ ರಚನೆ', 'ಕನ್ನಡ ಸಾಹಿತ್ಯ ಸಮ್ಮೇಳನ', 'ಅಲ್ಪಸಂಖ್ಯಾಕರ ಪ್ರಾತಿನಿಧ್ಯವೂ ಪಾಕಿಸ್ತಾನದ ಪಾಠವೂ', 'ದೆಹಲಿ ಒಪ್ಪಂದ', 'ಶಾಲೆಗಳಲ್ಲಿ ಖಾದಿ ಶಿಕ್ಷಣ',, 'ವಿಶ್ವಕರ್ಮ ವಿದ್ಯಾರ್ಥಿಗಳು ದುರ್ದೈವಿಗಳೆನ್ನಿಸುವಿರಾ?', 'ಮುಂಬೈಯಲ್ಲಿ ವಿಶ್ವಕರ್ಮ ಸಮ್ಮೇಳನ' 'ಇದ್ಯಾವ ಸೆನ್ಸಸ್ಸೋ ಅರ್ಥವಾಗಲಿಲ್ಲ!', 'ಸ್ವಾತಂತ್ರ್ಯದ ಹುಯಿಲಿನಲ್ಲಿ ಹಿಂದುಳಿದವರ ತಿರಸ್ಕಾರವೇ?' (ದಿವಾಕರ ಸಮಿತಿಯ ಶಿಫಾರಸುಗಳು ಮತ್ತು ಇತರ ವಿದ್ಯಮಾನಗಳು), 'ಶಾಂತಿ ಸಮಸ್ಯೆ' (ಉತ್ತರ ಕೋರಿಯಾದ ಅಂತರ್ಯುದ್ಧ ಕುರಿತು), 'ಚುನಾವಣೆಯು ಮುಂದುವರೆದ ಬಗ್ಗೆ', 'ಮೈಸೂರಿನಲ್ಲಿಯೇ ಕನ್ನಡಕ್ಕೆ ಧಕ್ಕೆ ಬರಬೇಕೇ?', 'ಸರದಾರರು ಕಣ್ಮರೆಯಾದರು', 'ಮುಂಬೈಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ', 'ನಮ್ಮ ಆಮದು ನೀತಿ', 'ಮ,, ಸ್ವಾತಂತ್ರ್ಯದ ಸಾರ್ಥಕತೆ', 'ದುಡ್ಡಪ್ಪಗಳ ಚಿಂತೆ', 'ಸೋಮನಾಥ ದೇವಾಲಯದ ಪುನರುದ್ಧಾರ', 'ಸಾಮಾಜಿಕ ಅನ್ಯಾಯಕ್ಕೆ ಸರಕಾರದ ಬೆಂಬಲವೇ?' ಹೀಗೆ ಮೂವತ್ತಕ್ಕೂ ಹೆಚ್ಚು ಸಂಪಾದಕೀಯಗಳನ್ನು ನಾನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಟಿಪ್ಪಣಿ ಮಾಡಿಕೊಂಡೆ. ಈ ಸಂಪಾದಕೀಯಗಳ ತಲೆಬರೆಹ ನೋಡಿದರೆ, ಆ ಕಾಲಘಟ್ಟದ ಸಾಮಾಜಿಕ-ರಾಜಕೀಯ-ಧಾರ್ಮಿಕ ಸಾಂಸ್ಕೃತಿಕ ವಲಯಗಳ ಸ್ವರೂಪ ನಮಗೆ ತಿಳಿದುಬರುತ್ತದೆ. 'ಮಹಿಳಾ ಲೋಕ' ಎಂಬ ವಿಭಾಗದಲ್ಲಿ

ಮಹಿಳೆಯರು ಬರೆದ ಲೇಖನಗಳು ಮತ್ತು ಮಹಿಳಾ ಸಮಸ್ಯೆಗಳ ಕುರಿತ ಬರೆದ ಲೇಖನಗಳನ್ನು ಪ್ರಕಟಿಸಿದ್ದಾರೆ. ಮಹಿಳೆಯರ ಆರೋಗ್ಯ ಸಮಸ್ಯೆ, ಔದ್ಯೋಗಿಕ ಸಮಸ್ಯೆ, ಕೌಟುಂಬಿಕ ಸಮಸ್ಯೆಗಳ ಬಗ್ಗೆ ಇಲ್ಲಿ ಲೇಖನಗಳು ಮೂಡಿವೆ. 'ವೈಶ್ವಕರ್ಮಣ ಮತ ಸಾಹಿತ್ಯ' ವಿಭಾಗದಲ್ಲಿ ವಿಶ್ವಕರ್ಮರ ಪ್ರಾಚೀನ ಸಾಹಿತ್ಯವನ್ನು ಪರಿಚಯಿಸುವ ಮೌಲಿಕ ಲೇಖನ ಮಾಲೆ ಪ್ರಕಟಗೊಂಡಿದೆ. ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ೧೯೫೦ರ ದಶಕದವರೆಗೆ ರಚಿಸಲ್ಪಟ್ಟ ಒಟ್ಟು ವಿಶ್ವಕರ್ಮ ಸಾಹಿತ್ಯದ ಒಂದು ಸ್ಥೂಲನೋಟ ಇಲ್ಲಿ ದೊರೆಯುತ್ತದೆ. 'ಸಣ್ಣಕತೆ' ಎಂಬ ವಿಭಾಗದಲ್ಲಿ ವಿಶ್ವಕರ್ಮ ಸಮಾಜದ ಯುವ ಪ್ರತಿಭಾವಂತರ ಅನೇಕ ಕತೆಗಳು ಪ್ರತಿ ಸಂಚಿಕೆಯಲ್ಲೂ ಪ್ರಕಟಗೊಂಡಿವೆ. ಈ ಕತೆಗಳ ರಚನೆಯಲ್ಲಿ ಮಹಿಳಾ ಯುವ ಸಾಹಿತಿಗಳು ಭಾಗವಹಿಸಿದ್ದು ಗಮನಾರ್ಹವಾದ ಅಂಶವಾಗಿದೆ. ಪ್ರತಿ ಸಂಚಿಕೆಯಲ್ಲಿಯೂ ನಾಲ್ಕಾರು 'ಕವನಗಳು' ಪ್ರಕಟಗೊಂಡಿವೆ. ವಿಶ್ವಕರ್ಮ ಜನಾಂಗದ ಸಾಹಿತ್ಯಾಸಕ್ತಿಯುಳ್ಳವರು ತಮ್ಮ ಅನುಭಾವದ ಅಭಿವ್ಯಕ್ತಿಗಾಗಿ ಈ ಕವನ ಮಾಧ್ಯಮ ಆರಿಸಿಕೊಂಡಿದ್ದಾರೆ. ಈ ಕವನಗಳಲ್ಲಿ ನವೋದಯಪ್ರಜ್ಞೆ ಅಡಕಗೊಂಡಿರುವುದನ್ನು ಗುರುತಿಸಬಹುದು. ಇಲ್ಲಿಯ ಕವನಗಳಲ್ಲಿ ಪ್ರೀತಿ ಪ್ರೇಮದ ಆಶಯದ ಜೊತೆಗೆ ನಾಡು ನುಡಿಯ ಏಳ್ಗೆಯ ಕನಸುಗಳು ತುಂಬಿಕೊಂಡಿವೆ.

ಪತ್ರಿಕೆಯಲ್ಲಿ ಪತ್ರ ವ್ಯವಹಾರಗಳು–ವಿದ್ಯಾರ್ಥಿನಿಲಯಗಳ ಕುರಿತ ಮಾಹಿತಿ, ಸ್ಪರ್ಧಾತ್ಮ ಪರೀಕ್ಷೆಗಳ ಮಾಹಿತಿಗಳು ತುಂಬಿತುಳುಕಿವೆ. ವಿಶ್ವಕರ್ಮ ಸಮಾಜದ ಕುರಿತಾದ ತಮ್ಮ ಸಂದೇಹಗಳಿಗೆ ಅನೇಕರು ಪತ್ರ ಬರೆದು, ತಮ್ಮ ಸಂದೇಹಗಳನ್ನು ಇಲ್ಲಿಯ ಉತ್ತರಗಳಿಂದ ನಿವಾರಿಸಿಕೊಂಡಿದ್ದಾರೆ. ವಿಶ್ವಕರ್ಮ ಸಮಾಜದ ಬಡ ವಿದ್ಯಾರ್ಥಿಗಳಿಗೆ ದೊರೆಯುವ ಶೈಕ್ಷಣಿಕ ಸೌಲಭ್ಯ, ಉಚಿತ ವಿದ್ಯಾರ್ಥಿ ನಿಲಯಗಳ ಮಾಹಿತಿ ಶಾಲಾ ಅಕಾಡೆಮಿ ವರ್ಷದ ಪ್ರಾರಂಭದ ಸಂಚಿಕೆಗಳಲ್ಲಿ ಪ್ರಕಟಗೊಂಡಿವೆ.

'ಶಿಲ್ಪಶಾಸ್ತ್ರ ಪರಿಚಯ' ಕುರಿತು ಒಂದು ವಿಭಾಗ ಕೆಲವು ಸಂಚಿಕೆಗಳಲ್ಲಿ ಪ್ರಕಟಗೊಂಡಿವೆ. ವಿಶ್ವಕರ್ಮ ಜನಾಂಗದ ಪ್ರಾಚೀನ ಶಿಲ್ಪಕಲೆಗಳ ಪರಿಚಯದ ಜೊತೆಗೆ, ಅನೇಕ ಕಲಾವಿದರ ಪರಿಚಯವನ್ನೂ ಇಲ್ಲಿ ನೀಡಿದ್ದಾರೆ. ವಿಶ್ವಕರ್ಮ ಜನಾಂಗದ ಧಾರ್ಮಿಕ ಪವಿತ್ರ ಕ್ಷೇತ್ರಗಳ ವಾರ್ತೆಗಳು–ಜಾತ್ರೆ–ಉತ್ಸವ ಸಮಾರಂಭಗಳ ಸುದೀರ್ಘ ವರದಿಗಳು ಇಲ್ಲಿ ಎಡೆ ಪಡೆದಿವೆ. ತಿಂಥಣಿ ಮೌನೇಶ್ವರ, ಶಿರಸಂಗಿ ಕಾಳಮ್ಮ ಮೊದಲಾದ ಶ್ರದ್ಧಾ ಕೇಂದ್ರಗಳಲ್ಲಿ ಜರುಗುವ ಜಾತ್ರೆ ಉತ್ಸವಗಳ ಸಮಗ್ರ ವಿವರಗಳು ಇಲ್ಲಿ ದೊರಕುತ್ತವೆ.

ಜನರ ಮನಸ್ಸನ್ನು ಸಂಚಿಕೆಯ ಮೂಲಕ ಆಳುವ ಒಂದು ವಿಷಯವೆಂದರೆ 'ಭವಿಷ್ಯ'. ಮನುಷ್ಯ ತಾನು ವರ್ತಮಾನದಲ್ಲಿ ಬದುಕುತ್ತಿದ್ದರೂ ಭವಿಷ್ಯ ಜೀವನದ ಬಗ್ಗೆ ತುಂಬ ಕಾತರವುಳ್ಳವನಾಗಿರುತ್ತಾನೆ. ಹೀಗಾಗಿ ಪ್ರತಿ ಸಂಚಿಕೆಯಲ್ಲಿಯೂ 'ಮಾಸ ಭವಿಷ್ಯ' ಎಂಬ ಅಂಕಣವಿದೆ. ೧೨ ರಾಶಿಗಳ ಭವಿಷ್ಯವನ್ನು ಸಂಕ್ಷಿಪ್ತವಾಗಿ ಎರಡು ಮೂರು ಪುಟಗಳಲ್ಲಿ ಪ್ರಕಟಿಸುತ್ತ ಬಂದಿದ್ದಾರೆ.

ಆ ಕಾಲದಲ್ಲಿ ಪುಸ್ತಕ ಪ್ರಕಟಣೆ ತುಂಬಾ ದುಬಾರಿಯಾಗಿತ್ತು. ಪುಸ್ತಕ ಪ್ರಕಟಣೆಗೆ ಬೇಕಾದ ಹಾಳೆಗಳು ದೊರೆಯುವುದು ಕಷ್ಟವಾಗಿದ್ದ ಕಾಲವದು. ಹೀಗಾಗಿ 'ವಿಶ್ವಕರ್ಮಾ' ಪತ್ರಿಕೆಯಲ್ಲಿ ಕೆಲವು ಪುಸ್ತಕಗಳು ಧಾರಾವಾಹಿಯಾಗಿ ಪ್ರಕಟಗೊಂಡಿವೆ. 'ಶ್ರಾದ್ಧ ತರ್ಪಣ ವಿಧಿಃ' ಎಂಬ ಧಾರ್ಮಿಕ ಆಚಾರದ ಕೃತಿಯನ್ನು ಧಾರಾವಾಹಿಯಾಗಿ ಸುದೀರ್ಘ ಸಂಚಿಕೆಗಳಲ್ಲಿ ಪ್ರಕಟಿಸುತ್ತ ಬಂದಿದ್ದಾರೆ.

ಸಂಪಾದಕರು ಕಾಲಕಾಲಕ್ಕೆ ಸಮಾಜ ಬಾಂಧವರಿಗೆ ಸೂಚನೆಗಳನ್ನು ಪ್ರಕಟಿಸುತ್ತ ಬಂದಿದ್ದಾರೆ. ಈ ಪತ್ರಿಕೆಯ ಉಪಯೋಗ ಮತ್ತು ಇಲ್ಲಿಯ ಲೇಖನಗಳ ಪುನರ್‌ಮುದ್ರಣಕ್ಕೆ ನೀಡುವ ಅವಕಾಶ ಕುರಿತು ಒಂದು ಸಂಕ್ಷಿಪ್ತ ಸೂಚನೆಯನ್ನು ಹೀಗೆ ಪ್ರಕಟಿಸಿದ್ದಾರೆ 'ವಿಶ್ವಕರ್ಮಾ'ದಲ್ಲಿಯ ಲೇಖನಗಳನ್ನು ಪುನರ್ಮುದ್ರಿಸಲು ಯಾವುದೇ ನಿರ್ಬಂಧವಿಲ್ಲ. ಆದರೆ ಮೂಲವನ್ನು ನಿರ್ದೇಶಿಸಲು ಮಾತ್ರ ಮರೆಯಬಾರದು. ಓದಿದೊಡನೆ 'ವಿಶ್ವಕರ್ಮಾ'ವನ್ನು ಎಲ್ಲಿಯಾದರೂ ಇಡುವ ಬದಲು ಬೇರೊಬ್ಬರಗೆ ಓದಲು ಕೊಡಿರಿ. ಓದು ಬಾರದವರಿಗೆ ಓದಿ ಹೇಳಿರಿ' 'ವಿಶ್ವಕರ್ಮಾ'ದ ಯಾವ ಸಂಚಿಕೆಯೂ ಹಳೆಯದೆಂದು ಬಿಸಾಡದಿರಿ. ಇದರಲ್ಲಿಯ ಲೇಖನಗಳು ಇಂದಿಲ್ಲ ನಾಳೆಯಾದರೂ ಉಪಯೋಗಕ್ಕೆ ಬರುವುದು'.[೫೩]

ವಿಶ್ವಕರ್ಮಾ ಪತ್ರಿಕೆಯ ಮೂರನೆಯ ವರ್ಷದ ಪ್ರಾರಂಭದ ಸಂಚಿಕೆಯಲ್ಲಿ ಸಂಪಾದಕೀಯ ಬರೆಯುತ್ತ 'ಈ ಪತ್ರಿಕೆಯ ಇದುವರೆಗಿನ ಸೇವೆ'ಯನ್ನು ದಾಖಲಿಸಿದ್ದಾರೆ. "ವಿಶ್ವಕರ್ಮ ಪತ್ರಿಕೆಯು ತನ್ನ ಎರಡನೆಯ ವರ್ಷವನ್ನು ಮುಗಿಸಿ ಮೂರನೆಯ ವರ್ಷಕ್ಕೆ ಕಾಲಿಟ್ಟಿದೆ. ಈ ಎರಡು ವರ್ಷಗಳ ಅವಧಿಯಲ್ಲಿ ಅದು ಕೇವಲ ವಿಶ್ವಕರ್ಮ ಸಮಾಜದ ಅಭಿವೃದ್ಧಿಗಾಗಿ ಮಾತ್ರ ಶ್ರಮಿಸದೆ, ಶಿಲ್ಪ, ಕಲೆ, ಕೈಗಾರಿಕೆ, ಧರ್ಮ-ಕರ್ಮಗಳ ಸಾರ್ವತ್ರಿಕ ಸಾಮೂಹಿಕ ಅಭಿವೃದ್ಧಿಗಾಗಿ ಟೊಂಕಕಟ್ಟಿ ಶ್ರಮಿಸುತ್ತಿದೆ. ದೇಶಾಭಿವೃದ್ಧಿಯು, ಸ್ವಾತಂತ್ರ್ಯ ಸ್ಥಿರತೆಯು ಈ ಅಭ್ಯುದಯ ಸಾಧನೆಯಾದಲ್ಲದೆ ಸಿದ್ಧಿಸದು ಎಂಬುದು ಈ ಪತ್ರಿಕೆಯ ವಿಚಾರ ಸರಣಿ. ದೇಶದಲ್ಲಿ ಅಕ್ಷರಜ್ಞಾನ, ಆಡಳಿತ ನೈಪುಣ್ಯತೆಗೆ ಎಂತಹ ಅಗ್ರಮರ್ಯಾದೆ ಇದೆಯೋ ಅಷ್ಟೇ ಏಕೆ, ಅದಕ್ಕಿಂತ ಹೆಚ್ಚಿನ ಮರ್ಯಾದೆ ಶಿಲ್ಪ, ಕಲೆ, ಕೈಗಾರಿಕೆಗಳಿಗೆ ದೊರೆತರೇ ಇಂದಿನ ಸಂಕಷ್ಟಮಯ ಪರಿಸ್ಥಿತಿಯಿಂದ ದೇಶವು ಬಿಡುಗಡೆ ಹೊಂದೀತು. ಇಂಗ್ಲೆಂಡು ಅಮೆರಿಕಗಳು ಔನ್ನತ್ಯದ ಶಿಖರವನ್ನೇರಿರಬೇಕಾದರೆ ಅವು ಸಾಧಿಸಿರುವ ಉತ್ತಮೋತ್ತಮ ವೈಜ್ಞಾನಿಕ ಶಿಲ್ಪ ಸಂಪತ್ತು, ಯಾವ ಕೆಲಸದಲ್ಲೂ ಉಚ್ಚ ನೀಚ ಭೇದವೆಣಿಸದ ಕರ್ಮಶ್ರದ್ಧೆ, ಜಾತೀಯ ಶ್ರೇಷ್ಠ ಕನಿಷ್ಠ ಭಾವನೆಗಳಿಲ್ಲದ ಸಾಮಾಜಿಕ ಸಮಾನತೆ ಇವು ಮುಖ್ಯ ಕಾರಣಗಳು. ಇಂಗ್ಲೆಂಡಿನ ಬಹುಕಾಲದ ರಾಜ್ಯಭಾರದಿಂದ ಈ ಗುಣಗಳ ಮಹತ್ವವನ್ನರಿತೂ ನಾವು, ನಮ್ಮಲ್ಲಿ ಆಧ್ಯಾತ್ಮಿಕ ಸಂಪತ್ತು ಇದೆಯೆಂಬ ಹೆಮ್ಮೆಯಿಂದ ಈ ಅಮೂಲ್ಯ ಗುಣಗಳನ್ನು ನಮ್ಮಲ್ಲಿಯೂ, ಅದರ ಜತೆಗೆ, ಹೆಚ್ಚಿಸಿಕೊಳ್ಳದೆ ಕಡೆಗಣಿಸಿದೆವಾದರೆ ನಾವು ನಮ್ಮ ಅಧಃಪತನದಿಂದ ಒಂದು ಅಂಗುಲವೂ ಮೇಲೇರಲಾರೆವು. ಅಷ್ಟೇ ಅಲ್ಲದೆ ಭಾರತ

ದೇಶವು ಇತರ ದೇಶಗಳ ಸರಿಸಮಕ್ಕೆ ನಿಲ್ಲಲಾರದೆ, ಈಗ ತಾನೇ ಗಳಿಸಿರುವ ಅಪೂರ್ವ ಮನ್ನಣೆಯನ್ನು ಕಳೆದುಕೊಳ್ಳಬೇಕಾಗುವುದು ಮಾತ್ರವಲ್ಲದೆ, ಔದ್ಯೋಗಿಕವಾಗಿಯೂ ಆರ್ಥಿಕವಾಗಿಯೂ ಪರಾಧೀನವಾಗಿ, ರಾಜಕೀಯವಾಗಿ ಗಳಿಸಿದ ಸ್ವಾತಂತ್ರ್ಯವನ್ನು ಹೆಚ್ಚು ಕಾಲ ಅನುಭವಿಸಲಾರದೆ ಕಳೆದುಕೊಳ್ಳುವಂತಾದೀತು. ಈ ವಿಚಾರಗಳ ಮಹತ್ವವನ್ನರಿತ ಕೆಲವು ವಾಚಕರು ಪ್ರಶಂಸಾಪರ ವಾಕ್ಯಗಳನ್ನು ಬರೆದಿರುತ್ತಾರೆ. ಈ ವಾಚಕರಿಗೆ ನಾವು ಋಣಿಯಾಗಿದ್ದೇವೆ. ಈ ವಿಚಾರ ಸರಣಿಯು ಜನತೆಯಲ್ಲಿ ಹೀಗೆಯೇ ಹೆಚ್ಚಿ ಅದು ಪ್ರವೃತ್ತಿ ರೂಪದಲ್ಲಿ ಕಂಡುಬರುವುದಾದರೆ 'ವಿಶ್ವಕರ್ಮ'ನಿಗೆ ಅದಕ್ಕಿಂತ ಹೆಚ್ಚಿನ ಆನಂದ ಮತ್ತೆ ಯಾವುದೂ ಇರುವುದಿಲ್ಲ".[೫೪]

ವಿಶ್ವಕರ್ಮ ಸಮಾಜಕ್ಕೆ ಇಂಥದೊಂದು ಪತ್ರಿಕೆಯ ಅವಶ್ಯಕತೆ ಇತ್ತೆಂಬುದು ಆ ಕಾಲದ ಈ ಸಂಪಾದಕೀಯವನ್ನು ನೋಡಿದರೆ ಸ್ಪಷ್ಟವಾಗುತ್ತದೆ. ಇದು ಆ ಕಾಲದ ಎಲ್ಲ ವಿಶ್ವಕರ್ಮ ವಿದ್ಯಾವಂತ ಸಮುದಾಯದ ಹಂಬಲಕ್ಕೆ ಬೆಂಬಲವಾಗಿ ಮೂಡಿಬಂದ ಪತ್ರಿಕೆಯಾಗಿತ್ತು. ಪತ್ರಿಕೆಯು ಎಲ್ಲರ ಆಶೆ–ಆಶಯಗಳ ಪ್ರತೀಕವಾಗಿ ಪ್ರಕಟವಾಗುತ್ತಿತ್ತು. ಸಮಕಾಲೀನ ಸಮಾಜದ ಅನೇಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯ ಈ ಪತ್ರಿಕೆಯಿಂದ ನಡೆದಿದೆ. ಧರ್ಮ, ಸಂಸ್ಕೃತಿ, ಮತ ಸಂಬಂಧ ವಿಷಯದಲ್ಲಂತೂ ಅದ್ಭುತವಾದ ಸಂಶೋಧನಾತ್ಮಕ ವಿಶ್ಲೇಷಣಾತ್ಮಕ ಲೇಖನಗಳು ಪ್ರಕಟಗೊಂಡಿವೆ. ವಿಶ್ವಕರ್ಮ ಜನಾಂಗದಲ್ಲಿ ಈ ಪತ್ರಿಕೆ ಒಂದು ನವೀನ ಕ್ರಾಂತಿಯನ್ನೇ ತಂದಿತ್ತೆನ್ನಬಹುದು. ಮತ ಸಿದ್ಧಾಂತ ಪ್ರತಿಪಾದನೆ, ಆಚಾರ ನಿರೂಪಣೆ ಮೊದಲಾದ ಸಾಂಸ್ಕೃತಿಕ ವಿಷಯಗಳ ಜೊತೆಗೆ, ಸಾಮಾಜಿಕ ಸಮಸ್ಯೆಗಳ ವಿವೇಚನೆಯು ಪತ್ರಿಕೆಯ ಪ್ರತಿ ಸಂಚಿಕೆಗಳಲ್ಲಿ ಮೂಡಿಬಂದಿದೆ. ಸಣ್ಣ ಕತೆಗಳ ಪ್ರಪಂಚವು ಈ ಪತ್ರಿಕೆಯ ಮೂಲಕ ಒಂದು ನೂತನ ವಿಚಾರ ಸರಣಿಯನ್ನೇ ಪಡೆದಿತ್ತೆನ್ನಬಹುದು. ಎಲ್ಲ ಸಮಾಜದವರು ತಮ್ಮ ಸಮಾಜದ ಚಿತ್ರಗಳನ್ನು ಸಾರ್ವಜನಿಕವಾಗಿ ಮುಂದಿಡುತ್ತಿರುದ್ದ ಸಂದರ್ಭದಲ್ಲಿ ವಿಶ್ವಕರ್ಮ ಸಮಾಜದ ಪರಿಸ್ಥಿತಿಯನ್ನು ಅರಿಯುವ ಪ್ರಯತ್ನ ಮಾಡಿ ಸಾಮಾಜಿಕ ಸಮಸ್ಯೆಗಳ ಮೇಲೆ ಕ್ಷಕಿರಣ ಬೀರುವ ಕೆಲಸ ಮಾಡಿತು. ಒಟ್ಟಾರೆ ಶುಷ್ಕ ಟೀಕೆಯಲ್ಲಿ ಕಾಲ ಕಳೆಯದೆ, ಸಮಾಜವನ್ನು ತಿದ್ದಬೇಕು. ಸಮಾಜದಲ್ಲಿ ಬದಲಾವಣೆಯಾಗಬೇಕೆನ್ನುವ ಪ್ರತಿಯೊಬ್ಬ ವಿದ್ಯಾವಂತನಿಗೆ ಈ ಪತ್ರಿಕೆ ಚಿಮ್ಮುಹಲಗೆಯಾಗಿ ಪರಿಣಮಿಸಿತ್ತು. ವಿಶ್ವಕರ್ಮ ಸಮಾಜವನ್ನು ಮುಂದೆ ತರಬೇಕೆಂಬ ಮಹದಾಶೆಯಿಂದ ಲಾಭದ ಅಪೇಕ್ಷೆಯಿಲ್ಲದೆ ಈ ಪತ್ರಿಕೆಯನ್ನು ಪ್ರಕಟಿಸಲಾಯಿತು ಎಂಬುದು ಅಭಿಮಾನ ಪಡುವ ಸಂಗತಿಯಾಗಿದೆ.

ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳ ಕುರಿತು ಇಲ್ಲಿಯವರೆಗೆ ಯಾರೂ ಚರ್ಚಿಸಿಲ್ಲ. ಪ್ರಾಯಶಃ ಸಣ್ಣ ಸಮುದಾಯದ ಪತ್ರಿಕೆ ಎಂಬ ಕಾರಣ ಮುಖ್ಯವಾಗಿರಬಹುದು. ಇತ್ತೀಚೆಗೆ ಈ ಸಮಾಜದಲ್ಲಿ ತುಂಬ ಜಾಗೃತಿಯುಂಟಾಗಿ ೧೯೮೦ರ ದಶಕದ ನಂತರ ಹಲವಾರು ಪತ್ರಿಕೆಗಳು ಪ್ರಕಟವಾಗುತ್ತ ಬಂದಿವೆ. ಇವುಗಳನ್ನು ಕುರಿತು ಯಾವುದೆ ಅಧ್ಯಯನಗಳು ನಡೆದಿರುವುದಿಲ್ಲ.

ಲಿಂಗಾಯತರ ಪತ್ರಿಕೆಗಳಂತೆ ವಿಶ್ವಕರ್ಮ ಪತ್ರಿಕೆಗಳು ಜನತೆಯ ಮನಸ್ಸು ಮುಟ್ಟುವಂತೆ ಕಾರ್ಯಗಳನ್ನು ಮಾಡಿವೆ. ಅದಕ್ಕೆ ಮುಖ್ಯ ಕಾರಣವೆಂದರೆ ಇವು ನಗರಕೇಂದ್ರೀತ ಪ್ರಕಟಣೆಯಾಗಿರುವುದು. ಆದರೆ ಗ್ರಾಮೀಣ ಜನರಿಗೆ ಅವು ಅಷ್ಟಾಗಿ ತಲುಪಿದಂತೆ ಕಾಣುವುದಿಲ್ಲ. ಮೇಲಾಗಿ ಹಳ್ಳಿಯ ಜನರು ತಮ್ಮ ದುಡಿಮೆಯಲ್ಲಿ ಮಗ್ನರಾಗಿರುತ್ತಾರೆ. ಅವರ ಬೆವರಿನ ಶ್ರಮವನ್ನು ಗುರುತಿಸುವ ಕೆಲಸವನ್ನು ಪ್ರಾಯಶಃ ನಗರಕೇಂದ್ರಿತ ಈ ಪತ್ರಿಕೆಗಳು ಗಮನಿಸಲಾರದೆ ಹೋಗಿರಬಹುದು. ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ಹಳ್ಳಿಗಳೆಲ್ಲ ಸಂಪೂರ್ಣ ಸ್ವತಂತ್ರವಾಗಿದ್ದವು. ಒಂದು ಹಳ್ಳಿಯಲ್ಲಿ ವಾಸಿಸುವ ಜನರು ತಮಗೆ ಅವಶ್ಯವೆನಿಸುವ ಮೂಲಭೂತ ಸಾಮಗ್ರಿಗಳನ್ನು ಹಳ್ಳಿಗಳಲ್ಲಿಯೇ ಉತ್ಪಾದಿಸುತ್ತಿದ್ದರು. ವಿಶ್ವಕರ್ಮ ಸಮಾಜದ ಐದು ವೃತ್ತಿಯ ಜನರನ್ನು ಇಂದಿಗೂ ಹಳ್ಳಿಗಳಲ್ಲಿ 'ಪಾಂಚಾಳರು' ಎಂದು ಕರೆಯುತ್ತಾರೆ. ಬಡಿಗರು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು. ಹೀಗೆ ಈ ಸಮುದಾಯದ ಜನರು ರೈತ ಸಮುದಾಯಕ್ಕೆ ಬೇಕಾದ ಎಲ್ಲ ಆವಶ್ಯಕ ಸಾಮಗ್ರಿಗಳನ್ನು ತಯಾರಿಸಿ ಕೊಡುತ್ತಿದ್ದರು. ಹೀಗಾಗಿ ಹಳ್ಳಿಯ ಜನರು ನಗರದತ್ತ ಮುಖ ಮಾಡುವುದು ಸಾಧ್ಯವಿರಲಿಲ್ಲ.

ಆದರೆ ಯಾವಾಗ ಸ್ವಾತಂತ್ರ್ಯ ದೊರಕಿತೋ ಅಂದಿನಿಂದ ಹಳ್ಳಿಗಳು ಪಾರತಂತ್ರ್ಯಕ್ಕೆ ಒಳಗಾದವು. ಹಳ್ಳಿಯ ಜನ ಇಂದು ಪ್ರತಿಯೊಂದಕ್ಕೂ ನಗರವನ್ನು ಅವಲಂಬಿಸುವಂತಾಗಿದೆ. ಗ್ರಾಮೀಣ ಕೈಗಾರಿಕೆಗಳ ಮೂಲಕ ಬದುಕನ್ನು ಸಾಗಿಸುತ್ತಿದ್ದ ವೈಶ್ವಕರ್ಮ ಸಮಾಜದಲ್ಲಿ ಜಾಗೃತಿಯನ್ನುಂಟು ಮಾಡಲು ಪತ್ರಿಕೆಗಳು ಪ್ರಕಟವಾಗಿವೆ ಎಂಬುದು ಉತ್ತಮ ಸಂಗತಿಯಾಗಿದೆ.

ಇಂದು ಈ ಸಮಾಜವು ಮುಂದುವರಿದಿದೆ, ಎಲ್ಲರೂ ವಿದ್ಯಾವಂತರಾಗುತ್ತಿದ್ದಾರೆ, ಈ ಸಂದರ್ಭದಲ್ಲಿ ಪತ್ರಿಕೆಗಳನ್ನು ಪ್ರಕಟಿಸುವುದು ದೊಡ್ಡ ವಿಷಯವಲ್ಲ. ಆದರೆ ಅಂದು ಆ ಸಮುದಾಯಕ್ಕೆ ಅದು ಅನ್ನದ ಪ್ರಶ್ನೆಯಾಗಿತ್ತು. ಅನ್ನ ಸಂಸ್ಕೃತಿಯ ಪ್ರತೀಕವಾಗಿ ವಿಶ್ವಕರ್ಮ ಸಮುದಾಯ ಕಾರ್ಯ ಮಾಡುತ್ತಿತ್ತು. ಇವರಿಂದ ಹಳ್ಳಿಯ ಕೃಷಿಕ ಸಮುದಾಯ ತಮಗೆ ಬೇಕಾದ ಕುಂಟಿ ಕೂರಗಿ, ಕುಡಗೋಲ ಮೊದಲಾದ ವಸ್ತುಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಈ ಸಮುದಾಯದ ಜನರಲ್ಲಿ ಇರುವ ಕಲೆಗೆ ಒಂದು ಘನತೆ ಗೌರವವಿತ್ತು. ಆದರೆ ವಿಶ್ವಕರ್ಮ ಸಮುದಾಯದಿಂದ ಪ್ರಕಟವಾಗುತ್ತಿರುವ ಪತ್ರಿಕೆಗಳಲ್ಲಿ ಗ್ರಾಮೀಣ ಭಾಗದ ವಿಶ್ವಕರ್ಮ ಕಲಾವಿದರ ಕುರಿತು ವಿಷಯಗಳು ಪ್ರಕಟವಾಗುತ್ತಿರುವುದು ಇತ್ತೀಚೆಗೆ ಎಂದು ಹೇಳಬಹುದು. ಯಾವಾಗ ಈ ಸಮುದಾಯ ಅಕ್ಷರ ಸಂಸ್ಕೃತಿಯತ್ತ ವಾಲತೊಡಗಿತು. ಆಗ ವಿಶ್ವಕರ್ಮ ಸಮಾಜದ ಎಲ್ಲ ಕಲಾವಿದರ ಕಲೆಗಳು, ಪಂಚಕಲೆಗಳ ವೃತ್ತಿಜ್ಞಾನ ಇನ್ನಷ್ಟು ಬೆಳಕಿಗೆ ಬರುವಂತಾಯಿತು.

ಇಲ್ಲಿಯವರಿಗೆ ವಿಶ್ವಕರ್ಮ ಪತ್ರಿಕೆಗಳ ಕುರಿತು ಅಧ್ಯಯನ-ಸಮೀಕ್ಷೆಯಂಥ ಯಾವ ಪ್ರಕ್ರಿಯೆಗಳು ನಡೆದಿಲ್ಲ. ಕಳೆದ ನಾಲ್ಕೈದು ದಶಕಗಳ ಅವಧಿಯಲ್ಲಿ ಪತ್ರಿಕಾ ಕ್ಷೇತ್ರದಲ್ಲಿ ಮಾಡಿದ ಮತ್ತು ಮಾಡುತ್ತಿರುವ ಸಾಧನೆ ಅನನ್ಯವಾದುದು. ಈ ಪತ್ರಿಕೆಗಳು ರಾಷ್ಟ್ರೀಯ. ನಾಡು ನುಡಿಯ ಪ್ರಭಾವ

ಮತ್ತು ಪ್ರೇರಣೆ ಪಡೆದುಕೊಂಡಿವೆ. ಕನ್ನಡದಲ್ಲಿ ವಿಶ್ವಕರ್ಮ ಪತ್ರಿಕೆಗಳ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಬೇಕೆಂಬ ಉದ್ದೇಶದಿಂದ ಸಂಶೋಧನೆಗೆ ಈ ಪತ್ರಿಕೆಗಳನ್ನು ಆಯ್ಕೆ ಮಾಡಿಕೊಂಡು ಅವುಗಳ ತಾತ್ವಿಕ ಸ್ವರೂಪವನ್ನು ಕುರಿತು ಅಧ್ಯಯನ ಮಾಡಿದ್ದೇನೆ. ವಿಶ್ವಕರ್ಮ ಸಮಾಜ ೧೯೨೦ ರಿಂದ ಜಾಗೃತ ಪ್ರಜ್ಞೆಯನ್ನು ಹೊಂದಿದ್ದರೂ, ಅದು ಪತ್ರಿಕೋದ್ಯಮ ಕ್ಷೇತ್ರಕ್ಕೆ ಕಾಲಿಟ್ಟದ್ದು ೧೯೪೦ರಲ್ಲಿ ಇಪ್ಪತ್ತನೇ ಶತಮಾನದ ನಾಲ್ಕನೇ ದಶಕ ನಂತರ ಸುಳಿದೊಗೆದು ಬೆಳೆದದ್ದು ೧೯೮೦ರ ನಂತರ. ಹೀಗಾಗಿ ಇಂದು ಸುಮಾರು ೨೦ ಕ್ಕೂ ಹೆಚ್ಚು ಕನ್ನಡದಲ್ಲಿ ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ಪ್ರಕಟವಾಗುತ್ತಿವೆ.

ವಿಶ್ವಕರ್ಮ ಪತ್ರಿಕೆಗಳ ಪ್ರಭಾವ ಮತ್ತು ಪ್ರೇರಣೆಗಳನ್ನು ಗಮನಿಸಿದಾಗ ಸ್ವಧರ್ಮ, ಸ್ವ-ಸಂಸ್ಕೃತಿ ಹಾಗೂ ಸ್ವಸಂಘಟನೆಗೆ ಒತ್ತುಕೊಟ್ಟಷ್ಟು ತನ್ನ ಸಮಕಾಲೀನ ಸಮಾಜದಲ್ಲಿ ನಡೆಯುತ್ತಿದ್ದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ಜಾಗತೀಕರಣ ವಿದ್ಯಮಾನಗಳಿಗೂ ಸ್ಪಂದಿಸಿದ್ದು ವಿಶ್ವಪತ್ರಿಕೆಗಳ ಹೆಗ್ಗಳಿಕೆಯಾಗಿದೆ. ಕಟ್ಟುವಿಕೆ ಎನ್ನುವುದು ತನ್ನಷ್ಟಕ್ಕೆ ತಾನೇ ನಿರ್ಲಿಪ್ತವಾಗಿ ಕಟ್ಟುಕೊಳ್ಳುವುದಲ್ಲ. ತನ್ನ ಕಾಲದ ಎಲ್ಲ ಸಂಕಟ ಮತ್ತು ಸಂಭ್ರಮಗಳನ್ನು ಅಡ್ಡಹಾಯದೆ ಕಟ್ಟಿಕೊಂಡ ರಚನೆಗಳು ಅರ್ಥಹೀನ. ಅವು ಕೋಣಿಕೂಸಿನಂತೆ ನಿರರ್ಥಕ. ವಿಶ್ವಕರ್ಮ ಪತ್ರಿಕೆಗಳು ಓಣಿ ಕೂಸಿನಂತೆ ಎಲ್ಲವನ್ನೂ ಗಮನಿಸಿ, ಪರೀಕ್ಷಿಸಿ, ನೆಲದ ಸತ್ವವನ್ನು ಹೀರಿ ತನ್ನ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ನೆಲೆಗಳನ್ನು ಕಟ್ಟಿಕೊಂಡದ್ದು ಗಮನಾರ್ಹ ಸಂಗತಿಯಾಗಿದೆ.

**ಕೊನೆ ಟಿಪ್ಪಣಿ**

೧. Historical Studies on Modern India, Ed: B. M. Sankdher, P. 134.

೨. ಶ್ರೀನಿವಾಸ ಹಾವನೂರ: ಹೊಸಗನ್ನಡ ಅರುಣೋದಯ, ಪುಟ-೫೦೬.

೩. ಅದೇ ಪುಟ-೫೦೮

೪. ಅದೇ ಪುಟ-೫೧೨

೫. ವಿಶ್ವಕರ್ಮಾ ಸಂಪಾದಕೀಯ: ಸಂಪುಟ-೧, ಸಂಚಿಕೆ-೩,೪, ಪುಟ-೭, ಜನೆವರಿ ೧೯೫೦.

೬. ವಿಶ್ವಕರ್ಮಾ ಸಂಪಾದಕೀಯ: ಸಂಪುಟ-೧, ಸಂಚಿಕೆ-೩,೪, ಪುಟ-೮, ಜನೆವರಿ ೧೯೫೦.

೭. ಅದೇ ಪುಟ-೮.

೮. ಮಂಗಳೂರ ಸಮಾಚಾರ, ಮೊದಲ ಸಂಚಿಕೆ-೧, ಪುಟ-೨, ಜುಲೈ, ೧೮೪೩.

೯. ಡೆಪ್ಯೂಟಿ ಚನ್ನಬಸಪ್ಪ : ಮಠ ಪತ್ರಿಕೆ ಸಂಪುಟ-೧, ಸಂಚಿಕೆ-೧, ಪೀಠಿಕೆ, ೧೮೬೫.

೧೦. ವಿಶ್ವಕರ್ಮ ಪತ್ರಿಕೆ ಸಂಪುಟ-೨, ಸಂಚಿಕೆ-೨, ಪುಟ-೨೦, ಡಿಸೆಂಬರ್-೧೯೪೯.

೧೧. ಪರ್ಲ ಅನಂತಾಚಾರ್ಯ: ವಿಶ್ವರಥ ಪುಟ-೧೦೬.

೧೨. ಪಾಟೀಲ ಪುಟ್ಟಪ್ಪ : ಪ್ರಪಂಚ ಪುಟ-೨, ಜನೇವರಿ ೧೯೮೬.

೧೩. G.S. Ghurey : Caste and race in India, Page-6.

೧೪. ಕೆ. ವಿ. ಕೃಷ್ಣಮೂರ್ತಿ: ದಕ್ಷಿಣ ಭಾರತದ ಪಾರಂಪರಿಕ ಕುಶಲಕರ್ಮಿಗಳು ಪುಟ-೧೩೨.

೧೫. ಅದೇ ಪುಟ-೧೩೪

೧೬. ಅದೇ ಪುಟ-೧೪೯

೧೭. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ ಪತ್ರಿಕೆ, ಪುಟ-೪, ೯-೮-೧೯೮೭.

೧೮. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ ಪತ್ರಿಕೆ ಪುಟ-೩, ೧೯-೮-೧೯೯೦.

೧೯. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ ಪತ್ರಿಕೆ ಪುಟ-೨, ೯-೮-೧೯೮೭.

೨೦. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ ಪತ್ರಿಕೆ ಪುಟ-೨, ೧೬-೧೧-೧೯೯೮.

೨೧. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ : ಸಂಪಾದಕೀಯ ಪುಟ, ೧೯೯೪.

೨೨. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ : ಸಂಪಾದಕೀಯ ಪುಟ, ೧೯೯೨.

೨೩. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ ಪತ್ರಿಕೆ ಪುಟ-೪, ೧೯೯೯.

೨೪. ಎ.ಎಂ. ರಂಗನಾಥರಾಯರು : ಜಗತ್ ಕಲ್ಯಾಣ ಪತ್ರಿಕೆ ಪುಟ-೨, ೧೯೯೭.

೨೫. ನಾಗರಾಜ ಗುಂಜಳ : ಸಂಪಾದಕೀಯ 'ವಿಶ್ವಕರ್ಮ ಜ್ಞಾನವಾಹಿನಿ' ಪುಟ-೨, ಸೆಪ್ಟಂಬರ್ ೧೯೯೪.

೨೬. ವಿಶ್ವಕರ್ಮ ಸಂಪುಟ ೪, ಸಂಚಿಕೆ-೧೦, ಪುಟ ೨೯-೩೦, ೧೯೫೨.

೨೭. ವಿಶ್ವಕರ್ಮ ಜ್ಞಾನ ವಾಹಿನಿ : ಸಂಪುಟ ೧, ಸಂಚಿಕೆ-೨, ಪುಟ ೯-೧೦, ೧೯೯೪.

೨೮. ಬಿ. ಎ. ಆಚಾರ್ಯ : ಸಹಚಿಂತನ ಸಂಪಾದಕೀಯ ಪುಟ-೧, ಡಿಸೆಂಬರ್ ೨೦೧೯.

೨೯. ಸಹಚಿಂತನ ಪತ್ರಿಕೆ ಸಂಪುಟ-೧೨, ಸಂಚಿಕೆ-೪, ಪುಟ-೬-೭, ಏಪ್ರಿಲ್ ೨೦೧೭.

೩೦. ಕಾಳಿಕಾ ಸಂದೇಶ ಸಂಪುಟ-೬, ಸಂಚಿಕೆ-೮ ಪುಟ-೧೧-೧೫, ಅಕ್ಟೋಬರ್ ೨೦೧೭.

೩೧. ಕಾಳಿಕಾ ಪ್ರಭ ಸಂ.೧, ಸಂಚಿಕೆ-೩. ಪುಟ-೧೭, ಜೂನ ೨೦೦೫.

೩೨. ಕಾಳಿಕಾ ಸಂದೇಶ ಸಂಪುಟ-೭, ಸಂಚಿಕೆ-೩ಪುಟ-೧೦-೧೧, ಮೇ ೨೦೧೮.

೩೩. ವಿಶ್ವಕರ್ಮ ಸಂದೇಶ ಸಂಪುಟ-೭, ಸಂಚಿಕೆ-೧೨, ಪುಟ-೮, ಫೆಬ್ರುವರಿ ೨೦೧೧.

೩೪. ವಿಶ್ವಕರ್ಮೋದಯ ಸಂಪುಟ-೨, ಸಂಚಿಕೆ-೧೧, ಪುಟ-೧೪-೧೭, ಫೆಬ್ರವರಿ ೨೦೦೫.

೩೫. ವಿಶ್ವಕರ್ಮೋದಯ ಸಂಪುಟ-೩, ಸಂಚಿಕೆ-೨ ಪುಟ-೨೦, ಮೇ ೨೦೦೫.

೩೬. ಸಹಚಿಂತನ ಸಂಪುಟ-೩, ಸಂಚಿಕೆ-೧, ಪುಟ-೯-೧೦, ಜನೆವರಿ ೨೦೧೨.

೩೭. ಸಹಚಿಂತನ ಸಂಪುಟ-೩, ಸಂಚಿಕೆ-೨, ಪುಟ-೬, ಫೆಬ್ರುವರಿ ೨೦೧೨.

೩೮. ಸಹಚಿಂತನ ಸಂಪುಟ-೨, ಸಂಚಿಕೆ-೮, ಪುಟ-೪, ಆಗಸ್ಟ್ ೨೦೧೧.

೩೯. ಸಹಚಿಂತನ ಸಂಪುಟ-೨, ಸಂಚಿಕೆ-೫, ಪುಟ-೪-೫, ಮೇ ೨೦೧೧.

೪೦. ಸಹಚಿಂತನ ಸಂಪುಟ-೧೧, ಸಂಚಿಕೆ-೧, ಪುಟ-೫, ಜನವರಿ ೨೦೧೮.

೪೧. ಸಹಚಿಂತನ ಸಂಪುಟ-೧೧, ಸಂಚಿಕೆ-೨, ಪುಟ-೧೫, ಪಫೆಬ್ರುವರಿ ೨೦೧೮.

೪೨. ಸಹಚಿಂತನ ಸಂಪುಟ-೧೦, ಸಂಚಿಕೆ-೧೨, ಪುಟ-೧೩, ಡಿಶಂಬರ ೨೦೧೭.

೪೩. ವಿಶ್ವಕರ್ಮ ಸಂದೇಶ ಸಂಪುಟ-೩, ಸಂಚಿಕೆ-೩, ೯, ಪುಟ-೨೮, ಫೆಬ್ರುವರಿ ೨೦೦೮.

೪೪. ವಿಶ್ವಕರ್ಮ ವಿಕಾಸವಾಣಿ: ಪ್ರಥಮ ಸಂಪಾದಕೀಯ, ಮಾರ್ಚ್ ೨೦೧೭.

೪೫. ವಿಶ್ವಬ್ರಾಹ್ಮಣ ಸಂಪುಟ-೬, ಸಂಚಿಕೆ೭ ಪುಟ-೧೨-೧೩, ಮಾರ್ಚ ೨೦೦೫.

೪೬. ವಿಶ್ವಕರ್ಮ ಸಂದೇಶ ಸಂಪುಟ-೧ ಸಂಚಿಕೆ-೮, ಪುಟ-೧೧-೧೨, ನವೆಂಬರ್ ೨೦೦೫.

೪೭. ವಿಶ್ವಕರ್ಮ ಸಂದೇಶ ಸಂಪುಟ-೬, ಸಂಚಿಕೆ-೭ ಪುಟ-೧೦-೧೧, ಸೆಪ್ಟಂಬರ್ ೨೦೧೦.

೪೮. ಕಾಳಿಕಾದೇವಿ ವಾಣಿ ಸಂಪುಟ-೩೩, ಸಂಚಿಕೆ-೧೧, ಪುಟ-೨೭, ಮಾರ್ಚ ೨೦೧೨.

೪೯. ಕಾಳಿಕಾದೇವಿ ಸಂಪುಟ-೫, ಸಂಚಿಕೆ-೯, ಪುಟ-೪-೬, ಜನವರಿ ೨೦೧೪.

೫೦. ಸಹಚಿಂತನ ಸಂಪುಟ-೬, ಸಂಚಿಕೆ-೫, ಪುಟ-೧೭, ಮೇ ೨೦೧೪.

೫೧. ವಿಶ್ವಕರ್ಮಾ ಸಂಪುಟ-೨ ಸಂಚಿಕೆ-೧೦ ಪುಟ-೪೭, ಸೆಪ್ಟಂಬರ್ ೧೯೫೦.

೫೨. ಸಂಪಾದಕೀಯ, ಸಂಪುಟ-೩, ಸಂಚಿಕೆ-೧, ಪುಟ-೫, ನವೆಂಬರ್ ೧೯೫೦.

೫೩. ವಿಶ್ವಕರ್ಮಾ ಸಂಪುಟ-೨, ಸಂಚಿಕೆ-೧೦, ಪುಟ-೪೭, ೧೯೫೦.

೫೪. ವಿಶ್ವಕರ್ಮಾ ಸಂಪುಟ-೩, ಸಂಚಿಕೆ-೧, ಪುಟ-೫, ೧೯೫೧.

# ಅಧ್ಯಾಯ–ಮೂರು

# ವಿಶ್ವಕರ್ಮ ಪತ್ರಿಕೆಗಳ ರಾಚನಿಕ ಸ್ವರೂಪ

ಧರ್ಮವು ಭಾರತೀಯರ ಜೀವನದ ಎಲ್ಲ ಸ್ತರಗಳನ್ನೂ ವ್ಯಾಪಿಸಿಕೊಂಡಿದೆ ಎಂಬ ಮಾತು ಜನಜನಿತವಾದದ್ದು. 'ಧರ್ಮ' ಶಬ್ದವು ಭಾರತೀಯರ ಬದುಕಿಗೆ ಬಹುದೊಡ್ಡ ಸ್ಥಾನವನ್ನು ಕೊಟ್ಟಂತೆ, ಅದು ಕಾಲಾನುಗುಣವಾಗಿ ಅವರ ಬದುಕಿನ ವಿಕಾಸಕ್ಕೆ ಅವಕಾಶವನ್ನೀಯದ ಹೊರೆಯೂ ಆಗಿ ಪರಿಣಮಿಸಿದ್ದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಇದಕ್ಕೆ ಕಾರಣ 'ಧರ್ಮ'ದ ಬಗೆಗೆ ಮನುಷ್ಯನು ಬೆಳೆಸಿಕೊಂಡು ಬಂದ ಸಂಕುಚಿತ ದೃಷ್ಟಿ. 'ಧರ್ಮ' ಶಬ್ದವು ಮೊದಲು ಪಡೆದುಕೊಂಡಿದ್ದ ವಿಶಾಲವಾದ ಅರ್ಥಗಳೆಲ್ಲವೂ ಹೆಚ್ಚು ಹೆಚ್ಚು ವ್ಯಾಖ್ಯಾನಕ್ಕೆ ಒಳಗಾದಂತೆಲ್ಲಾ, ವಿಕಾಸವಾಗುವುದಕ್ಕೆ ಬದಲಾಗಿ ಅದರ ವ್ಯಾಪ್ತಿಯು ಸಂಕೋಚಗೊಳ್ಳುತ್ತಾ ನಿಂತನೀರಿನಂತೆ ಕಲುಷಿತವಾಗಲು ಪ್ರಾರಂಭವಾಯಿತು. ನಿಯತವಾದ ಕ್ರಿಯೆಯನ್ನು ಆಚರಿಸುವುದೇ ಧರ್ಮ, ಉಳಿದ ಎಲ್ಲ ಉತ್ತಮ ಕ್ರಿಯೆಗಳೂ ಅಧರ್ಮ, ಒಂದು ನಿರ್ದಿಷ್ಟವಾದ ಗ್ರಂಥವನ್ನು ಅಧ್ಯಯನ ಮಾಡುವುದೇ ಧರ್ಮ, ಉಳಿದದ್ದೆಲ್ಲವೂ ಅಧರ್ಮ, ನಿರ್ದಿಷ್ಟವಾದ ಕುಲದಲ್ಲಿ ಜನಿಸಿದವರೇ ಶ್ರೇಷ್ಠ; ಇನ್ನುಳಿದವರು ಕನಿಷ್ಠ ಎಂಬ ಸಂಕುಚಿತ ಕಲ್ಪನೆ ಬೆಳೆದು ಮನುಜ ಕುಲಕ್ಕೆಲ್ಲಾ ಸಮನವಾಗಿ ಅನ್ವಯುವಾಗಬೇಕಾಗಿದ್ದ ಧರ್ಮ, ಮನುಷ್ಯರ ಒಂದು ಗುಂಪಿಗೆ ಸೀಮಿತವಾಗುವಂತಾಯಿತು. ಸಮಾಜವು ಸಂಕುಚಿತವಾಗಿದ್ದಾಗ, ಅದರ ಸುಭದ್ರತೆಗೋಸ್ಕರ, ಸುವ್ಯವಸ್ಥೆಗೋಸ್ಕರ ಮಾಡಿಕೊಂಡಿದ್ದ ಸಾಮಾಜಿಕ ನಿಯಮಗಳು, ಕರ್ತವ್ಯಗಳು ಸಮಾಜ ವಿಸ್ತೃತವಾದಂತೆಲ್ಲಾ ವಿಶಾಲವಾಗಿ ಅನ್ವಯವಾಗದೆ, ಸೀಮಿತವಲಯದಲ್ಲೇ ಸ್ಥಿರವಾಗಿ ನಿಂತವು. ವರ್ಣಾಶ್ರಮ ಧರ್ಮದ ಪ್ರಕಾರ ಮನುಷ್ಯರೆಲ್ಲರೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಭಾಗಗೊಂಡರು. ವೃತ್ತಿ ಅಥವಾ ಕಸುಬಿನ ಆಧಾರದ ಮೇಲೆ ಪ್ರಥಮತಃ ರೂಪುಗೊಂಡ ಈ ವರ್ಗೀಕರಣ ಕಾಲಕ್ರಮದಲ್ಲಿ ಹುಟ್ಟಿನ ಆಧಾರದ ಮೇಲೆ ವೃತ್ತಿಯನ್ನು ವಿಭಜಿಸಿ ನಾಲ್ಕು ವರ್ಗಗಳನ್ನಾಗಿ ಮಾಡುವ ವಿಪರ್ಯಸ್ತರೂಪವನ್ನು ತಳೆಯಿತು.

ಇದರ ಪರಿಣಾಮವಾಗಿ ಸಮಾಜದಲ್ಲಿ ಅಸಮಾನತೆ ಅಸಂತುಷ್ಟಿ ಮೂಡಿತ್ತು. ಸಮಾಜದಲ್ಲಿ ವ್ಯಕ್ತಿಯ ಸ್ಥಾನಮಾನಗಳು ಆತನ ಹುಟ್ಟಿನಿಂದ ನಿರ್ಧಾರವಾಗಹತ್ತಿದವು.

ವ್ಯಕ್ತಿಗೆ ಆತನ ಅಭಿರುಚಿ, ಸಾಮರ್ಥ್ಯ ಮತ್ತು ಅರ್ಹತೆಯ ಆಧಾರದ ಮೇಲೆ ಸಾಮಾಜಿಕ ವೃತ್ತಿ ಹಾಗೂ ಕರ್ತವ್ಯಗಳು ನಿರ್ಧಾರವಾಗುವುದಕ್ಕೆ ಬದಲಾಗಿ ಆತನು ಜನಿಸಿದ ಜಾತಿಯಿಂದಲೇ ನಿರ್ಧರಿಸುವುದು ವೈಜ್ಞಾನಿಕವಾಗಿ ಹೇಗೆ ಸಮರ್ಥನೀಯವಾಗುತ್ತದೆ? ಇದರಿಂದ ಹಲವು ಅನರ್ಥಗಳು ಘಟಿಸಿದವು. ದೇಹಶ್ರಮ ಕಡೆಗಣಿಸಲ್ಪಟ್ಟು ಜ್ಞಾನವೇ ಶ್ರೇಷ್ಠ ಎನ್ನುವ ಪರಂಪರೆ ಬೆಳೆಯಿತು. ಬದುಕಿನ ವೈವಿಧ್ಯತೆ ನಾಶವಾಗಿ ಕೇಂದ್ರೀಕೃತ ಜೀವನ ಕ್ರಮಗಳು, ಆದೀನ ಪ್ರವೃತ್ತಿಗಳು ಢಾಳವಾದವು. ಇದರಿಂದ ಕರ್ಮಮಾರ್ಗವನ್ನೇ ಪ್ರಧಾನವಾಗಿ ಅವಲಂಬಿಸಿದ್ದ ವಿಶ್ವಕರ್ಮ ಸಮುದಾಯವು ಕೆಳತಳ್ಳಲ್ಪಟ್ಟಿತ್ತು. ವಿಶ್ವಕರ್ಮ ಜನಾಂಗವು ಅತ್ಯಂತ ಪ್ರಾಚೀನವಾದ ಕೌಶಲ್ಯ ಶೀಲ ಸಮಾಜವಾಗಿದೆ. ವಿಶ್ವಕರ್ಮರ ಸಾಹಿತ್ಯ-ಸಂಸ್ಕೃತಿಗಳು ವಿಸ್ತಾರೋನ್ನತವಾಗಿ ಬೆಳೆದು ನಿಂತಿವೆ. ಕನ್ನಡದಲ್ಲಿ ವಿಶ್ವಕರ್ಮ ಸಾಹಿತ್ಯ ಅಪಾರ ಪ್ರಮಾಣದಲ್ಲಿ ರಚನೆಗೊಂಡಿದೆ. ಅದನ್ನು ಅವರ ವೈವಿಧ್ಯಮಯವಾದ ಪತ್ರಿಕಾ ಸಾಹಿತ್ಯ ಮತ್ತಷ್ಟು ವಿಸ್ತರಿಸಿದೆ.

ಕನ್ನಡದಲ್ಲಿ ಪತ್ರಿಕೋದ್ಯಮ ಇಂದು ಬೃಹತ್‌ಪ್ರಮಾಣದಲ್ಲಿ ಬೆಳೆದು ನಿಂತಿದೆ. ಆಯಾ ಜಾತಿ-ಧರ್ಮ-ಪಂಥದ ನೆಲೆಯಲ್ಲಿ ನೂರಾರು ಪತ್ರಿಕೆಗಳು ಪ್ರಕಟಗೊಳ್ಳುತ್ತಿವೆ. ವಾರಪತ್ರಿಕೆ, ಮಾಸಪತ್ರಿಕೆ, ದ್ವೈಮಾಸಿಕ, ತ್ರೈಮಾಸಿಕ ಪತ್ರಿಕೆಗಳು ಪ್ರಕಟಗೊಳ್ಳುವುದು ಸಾಮಾನ್ಯ ಪ್ರಕ್ರಿಯೆಯಾಗಿದೆ. ೧೯೪೭ ಭಾರತಕ್ಕೆ ಸ್ವಾತಂತ್ರ್ಯ ದೊರೆತ ಮೊದಲ ವರ್ಷ. ದೇಶದ ಎಲ್ಲ ವರ್ಗದ ಜನರು ನಮಗಿನ್ನು ಸ್ವಾತಂತ್ರ್ಯ ಸಿಕ್ಕಿತು, ನಾವೆ ರೂಪಿಸಿದ ರಾಜ್ಯಾಂಗ-ಶಾಸಕಾಂಗದ ಮೂಲಕ ಇಡೀ ದೇಶವನ್ನು ಸಮೃದ್ಧಿಯೆಡೆಗೆ ಒಯ್ಯಬಹುದು ಎಂಬ ಆಶಾಭಾವನೆಯನ್ನು ಹೊಂದಿದ್ದರು. ಅನಕ್ಷರತೆ ತಾಂಡವವಾಡುತ್ತಿದ್ದ ಆ ಸಂಕ್ರಮಣ ಸಂದರ್ಭದಲ್ಲಿ ವಿಶ್ವಕರ್ಮ ಸಮಾಜವು ತನ್ನ ಅಸ್ತಿತ್ವ ಮತ್ತು ಅಸ್ಮಿತೆಗಾಗಿ ಹತ್ತು ಹಲವು ಯೋಜನೆಗಳನ್ನು ರೂಪಿಸಿಕೊಂಡಿತು. ಅದರಲ್ಲಿ ಪತ್ರಿಕಾ ಪ್ರಕಟನೆ ಪ್ರಧಾನವಾಗಿದೆ.

ಕನ್ನಡದಲ್ಲಿ ಇದುವರೆಗೂ ಪ್ರಕಟವಾಗಿರುವ ಮತ್ತು ಪ್ರಕಟವಾಗುತ್ತಿರುವ ವಿಶ್ವಕರ್ಮ ಪತ್ರಿಕೆಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ವಿವರಿಸಬಹುದು.

೧. ಆತ್ಮೀಯ ಬೋಧಕ - ಸಂ: ಶ್ರೀ ಮಂಜುನಾಥ ಆಚಾರ್ಯ, ಉಡುಪಿ-೨೦೧೨

೨. ಋಷಿಸ್ವರಂ - ಸಂ: ವೈ. ಧರ್ಮೇಂದ್ರ ಆಚಾರ್ಯ, ಉಡುಪಿ-೨೦೧೬

೩. ಉಡುಪಿ ಮಿತ್ರ - ಸಂ: ಪ್ರಭಾಕರ ಆಚಾರ್ಯ, ಉಡುಪಿ-೨೦೧೭

೪. ಕಾಳಿಕಾ ಸಂದೇಶ - ಸಂ: ಶ್ರೀ ಜಗನ್ನಾಥರಾವ್ ಬಡಿಗೇರ, ಶಿರಸಂಗಿ-೨೦೧೨

೫. ಕಾಳಿಕಾದೇವಿ ವಾಣಿ - ಸಂ: ಶ್ರೀ.ಡಿ.ಆರ್.ಬಡಗೇರ, ಬೆಂಗಳೂರು-೨೦೦೯

೬. ಚಿಂತನಾ ಶೀಲ ಬುದ್ಧಿ ಜೀವಿ – ಸಂ:ಲಕ್ಷ್ಮೀಶ ಆಚಾರ್ಯ, ಬೆಂಗಳೂರು–೨೦೦೩

೭. ಜಗತ್ ಕಲ್ಯಾಣ – ಸಂ: ಎ.ಆರ್.ಮಂಜುನಾಥ, ಶಶಿಚಂದ್ರ ಬೆಂಗಳೂರು–೧೯೭೭

೮. ಜೇನುಗೂಡು ಜಗತ್ತು – ಸಂ: ಶ್ರೀ ಎಂ.ರಾಮಮೂರ್ತಿ, ಬೆಂಗಳೂರು–೧೯೯೨

೯. ರೂವಾರಿ – ಸಂ: ಬೈಕಾಡಿ ಜನಾರ್ಧನ ಆಚಾರ್, ಮಂಗಳೂರು–೨೦೦೪

೧೦. ವಿಶ್ವಕರ್ಮಾ – ಸಂ: ಮ. ಗಂಗಾಧರಮೂರ್ತಿ, ಮೈಸೂರು–೧೯೪೯

೧೧. ವಿಶ್ವಕರ್ಮ ಜ್ಞಾನ ವಾಹಿನಿ–ಸಂ: ನಾಗರಾಜ ಮಾನಪ್ಪ ಗುಂಜಳ, ಗದಗ–೧೯೯೪

೧೨. ವಿಶ್ವಬಂಧು – ಸಂ: ಡಾ.ಎ.ಎಫ್.ಮೋಹನ್‌ರಾವ್, ಶಿವಮೊಗ್ಗ–೨೦೦೦

೧೩. ವಿಶ್ವಬ್ರಾಹ್ಮಣ – ಸಂ: ಡಾ.ಎ.ಎಫ್.ಮೋಹನ್‌ರಾವ್, ಶಿವಮೊಗ್ಗ–೨೦೦೨

೧೪. ವಿಶ್ವಕರ್ಮೋದಯ – ಸಂ: ಶಿಲ್ಪ, ಸಿ.ಆರ್.ಸುರೇಶ ಚಿತ್ರದುರ್ಗ–೨೦೦೫

೧೫. ವಿಶ್ವದರ್ಶನ – ಸಂ: ಶ್ರೀ ಜೀವಣ್ಣ ಮಸಳಿ. ಬಾಗಲಕೋಟ್–೧೯೮೬

೧೬. ವಿಶ್ವಕರ್ಮ ಸಂದೇಶ – ಸಂ: ಶ್ರೀ ಜಗನ್ನಾಥರಾವ್ ಬಡಗೇರ, ಶಿರಸಂಗಿ,೨೦೦೫

೧೭. ವಿಶ್ವಕರ್ಮ ನುಡಿ–ಸಂ: ಶ್ರೀ ಎ. ರುದ್ರಪ್ಪ, ಬಾಬು ಪತ್ತಾರ, ಬೆಂಗಳೂರು–೨೦೧೨

೧೮. ವಿಶ್ವಕರ್ಮ ವಿಕಾಸವಾಣಿ – ಸಂ: ಶ್ರೀ ಸಿ.ಪಿ.ಮಾಯಾಚಾರಿ, ಶಿರಸಂಗಿ–೨೦೧೭

೧೯. ವಿಶ್ವಕರ್ಮ ಕಲಾ–ಸಂ: ಟಿ.ವಿ.ಮುತ್ತಾಚಾರ್ಯ ಬೆಂಗಳೂರು–೧೯೮೨

೨೦. ವಿಧಾತೃ – ಸಂ: ಶ್ರೀ ಎನ್.ಸಿ.ಛಾಯಪತಿ ಬೆಂಗಳೂರ–೨೦೧೦

೨೧. ವಿಶ್ವವಾಣಿ – ಮಾಲಿಕರು, ಕೆ.ಪಿ.ನಂಜುಂಡಿ, ಬೆಂಗಳೂರು–೨೦೧೬

೨೨. ಸಹಚಿಂತನ – ಸಂ: ಶ್ರೀ ಬಿ.ಎ.ಆಚಾರ್ಯ, ಮಣಿಪಾಲ–೧೯೮೭

೨೩. ಸಿದ್ದಪ್ಪಾಜಿ ಮಹಿಮಾ ಮಂಜರಿ, ಸಂ: ಸಿ.ರಾಮಚಂದ್ರ, ಮೈಸೂರು–೧೯೯೬

೨೪. ಸುಗ್ಗಿ ಸುದ್ದಿ, ಸಂ:ಈಶ್ವರ್ ವಿಶ್ವಕರ್ಮ, ಬೆಂಗಳೂರು–೨೦೧೦

೨೫. ಸೃಜನಶೀಲ ವಿಶ್ವಕರ್ಮ–ಸಂ: ಶ್ರೀ ಎನ್. ವಿಶ್ವರೂಪಚಾರ್, ಬೆಂಗಳೂರ ೨೦೦೨

೨೬. ಸ್ಥಿತಿ ಗತಿ – ಸಂ:ಡಾ.ಎನ್.ಭಾಸ್ಕರ ಆಚಾರ್ಯ ಕೋಟೇಸ್ವರ ಉಡುಪಿ–೨೦೧೦

ಕ್ಷೇತ್ರಕಾರ್ಯದಲ್ಲಿ ನನ್ನ ಸಂಶೋಧನೆಗೆ ಸಂಬಂಧಿಸಿದ ಮೂಲ ಆಕರಗಳಾಗಿ ದೊರತೆ ಕನ್ನಡ ವಿಶ್ವಕರ್ಮ ಪತ್ರಿಕೆಗಳ ಚಾರಿತ್ರಿಕ ಕಥನವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ವಿಶ್ವಕರ್ಮಾ:**

ಸ್ವಾತಂತ್ರದ ನಂತರ ಕನ್ನಡ ನಾಡಿನಲ್ಲಿ ಹುಟ್ಟಿಕೊಂಡಿರುವ ವಿವಿಧ ಸಮುದಾಯದ ಪತ್ರಿಕೆಗಳಲ್ಲಿ ವಿಶ್ವಕರ್ಮ ಸಮುದಾಯವು ತನ್ನ ಪತ್ರಿಕೆಯ ಮೂಲಕ ಸಾಮಾಜಿಕ ಸಂಘಟನೆಯ ಜೊತೆಜೊತೆಗೆ ರಾಷ್ಟ್ರ ಪ್ರೇಮ, ನಾಡುನುಡಿಯ, ವಿಚಾರಗಳನ್ನು ಜ್ಯಾತ್ಯಾತೀತವಾದದ ವಿಷಯಗಳನ್ನು ಪ್ರಕಟಿಸುತ್ತ ಬಂದ ಹೆಗ್ಗಳಿಕೆ 'ವಿಶ್ವಕರ್ಮಾ' ಪತ್ರಿಕೆಯದ್ದಾಗಿದೆ. ನನಗೆ ದೊರೆತ ಈ ಪತ್ರಿಕೆಯು ನವೆಂಬರ್ ೧೯೪೯, ಸಂಪುಟ-೨, ಸಂಚಿಕೆ-೧೧ ಮಾಸಪತ್ರಿಕೆಯಾಗಿದ್ದು, ಮೈಸೂರಿನ ಮ. ಗಂಗಾಧರಮೂರ್ತಿ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿದೆ. ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ವಿಶ್ವಕರ್ಮ ಜನಾಂಗವನ್ನು ಕುರಿತು ಪ್ರಾರಂಭವಾದ ಮೊಟ್ಟ ಮೊದಲ ಪತ್ರಿಕೆಯಾಗಿದೆ. ಪತ್ರಿಕೆಯ ವಾರ್ಷಿಕ ಚಂದಾ ನಾಲ್ಕು ರೂ. ಬಿಡಿ ಪ್ರತಿಯ ಬೆಲೆ ೬ ಆಣೆ ಇತ್ತು. ೧/೮ ಡೆಮಿ ಸೈಜಿನಲ್ಲಿ ೪೦ ಪುಟಗಳಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆಯಲ್ಲಿ ಪ್ರಮುಖವಾಗಿ ರಾಷ್ಟ್ರ, ಅಂತರಾಷ್ಟ್ರೀಯ, ನಾಡುನುಡಿಯ ಏಕೀಕರಣದ, ಹಿಂದುಳಿದ ವರ್ಗಗಳ ಕುರಿತು ಚರ್ಚೆ, ಸಾರ್ವಜನಿಕ ವಿಚಾರಗಳು, ಶೈಕ್ಷಣಿಕ ವಿಚಾರಗಳಿಗೆ ಸಂಬಂಧಿಸಿದ ಸಂಪಾದಕೀಯಗಳು ಇತರೆ ಸಮುದಾಯದ ಪತ್ರಿಕೆಗಳಿಗೆ ಕೈಗನ್ನಡಿಯಾಗಿದೆ.

ಶಿಲ್ಪ, ಕಲೆ, ಕೈಗಾರಿಕೆ, ಧರ್ಮ-ಕರ್ಮಗಳಿಗಾಗಿಯೇ ಮಿಸಲಾದ ಈ ಮಾಸಪತ್ರಿಕೆಯು ಸಮುದಾಯದ ಸೃಜನಶೀಲತೆಯ ಕೈಗನ್ನಡಿಗಿದೆ. ಸಂಪುಟ ೩ ಸಂಚಿಕೆ ೧೦ ಆಗಸ್ಟ್ ೧೯೫೧ರಲ್ಲಿ ಪತ್ರಿಕೆಯು ಮೂರು ವರ್ಷಗಳನ್ನು ಪೂರೈಸುತ್ತಿರುವ ಸಂದರ್ಭದಲ್ಲಿ ಸಂಪಾದಕರು 'ಮಾಸಪತ್ರಿಕೆಯ ಚಂದಾದಾರ' ಎಂಬ ಚಿಕ್ಕ ಲೇಖನ ಬರೆದು ಪತ್ರಿಕೆಯ ಪ್ರಕಟಣೆಗೆ ಆದ ತೊಂದರೆಯನ್ನು ನಿವೇದಿಸಿಕೊಂಡಿದ್ದಾರೆ.

'ವಿಶ್ವಕರ್ಮ ಸಮಾಜೋನ್ನತಿಗಾಗಿ ಕಾರ್ಯಮಾಡುವ ಒಂದು ಪತ್ರಿಕೆಯು ಬೇಕೆಂಬುದು ಬಹುಕಾಲದಿಂದ ನಮ್ಮ ಜನರ ಬಯಕೆಯಾಗಿತ್ತು. ಈಗ ಇಂಥ ಪತ್ರಿಕೆ ಹೊರಟಿದ್ದರೂ ಅದಕ್ಕೆ ಸಮಾಜದ ಜನರ ಬೆಂಬಲ ಸಾಕಷ್ಟಿಲ್ಲ. ಈಚೆಗೆ ಕಾಗದ ಮುದ್ರಣ ವಸ್ತುಗಳ ಬೆಲೆಯು ವಿಪರೀತ ಏರಿದ ಫಲವಾಗಿ ಪತ್ರಿಕೆಯು ಸಾಲದಲ್ಲಿ ಬಿದ್ದಿದೆ. ಈ ಕಾರಣದಿಂದ ಕಳೆದ ಜೂನ ತಿಂಗಳಿನಲ್ಲಿ ಈ ಆ ಆಗಸ್ಟ್ ಸಂಚಿಕೆಯಿಂದ ವಾರ್ಷಿಕ ಚಂದಾ ದರವನ್ನು ಆರು ರೂಪಾಯಿಗಳಿಗೆ ಹೆಚ್ಚಿಸಲಾಗುವುದೆಂದು ಪ್ರಕಟಿಸಿದ್ದೆವು. ವಾಚಕರಿಂದ ಈವರೆಗೆ ನಮಗೆ ಆಶಾದಾಯಕ ಪ್ರತಿಧ್ವನಿ ಬರಲಿಲ್ಲ, ಮಾತ್ರವಲ್ಲ 'ನಾಲ್ಕು ರೂಪಾಯಿಗಿಂತ ಹೆಚ್ಚಿಸಿದರೆ ಪತ್ರಿಕೆಯೇ ಬೇಡವೆಂದು, ಒಂದು ವೇಳೆ ಹೆಚ್ಚಿಸಿದರೂ ನಮಗೆ ನಾಲ್ಕು ರೂಪಾಯಿಯೇ ಕಳಿಸಬೇಕೆಂದೂ' ಪತ್ರಗಳು ಬಂದಿವೆ. ಈಗಲೇ ಕಳುಹಿಸಿದ ವಿ.ಪಿ.ಗಳಲ್ಲಿ ಸುಮಾರು ಅರ್ಧದಷ್ಟು ಹಿಂದಕ್ಕೆ ಬರುತ್ತಿರುವಾಗ ಇನ್ನು ಪೂರ್ತಿ ವಾಪಸು ಬಂದರೆ ಪತ್ರಿಕೆಯನ್ನೇ ನಿಲ್ಲಿಸಬೇಕಾದೀತೆಂದು ಹೆದರಬೇಕಾಗಿದೆ. ಪತ್ರಿಕೆ ನಿಂತು ಹೋದರೆ ಕೆಲವರಿಗೆ ಏನಾ ಮಿಕ್ಕ ವಾಚಕಲೋಕಕ್ಕೆ ವರ್ಷಕ್ಕೊಂದು ನಾಲ್ಕು ರೂಪಾಯಿ

ಮಿಕ್ಕಂತೆಯೇ ಆದೀತೆಂದು ಎಣಿಸುವುದಾದರೆ ಪತ್ರಿಕೆಯನ್ನು ನಿಲ್ಲಿಸುವುದೇ ಒಳಿತೆಂದು ಕಾಣುತ್ತದೆ. ಪ್ರತಿ ತಿಂಗಳಲ್ಲಿಯೂ ಹೊಸ ಹೊಸ ಚಂದಾದಾರರನ್ನು ಹುಡುಕಿ ಹುಡುಕಿ ನಮಗಂತೂ ಸಾಕಾಗಿದೆ. ಪತ್ರಿಕೆಯು ಹುಟ್ಟಿದ ಲಾಗಾಯ್ತು ಇಲ್ಲಿಯವರೆಗೆ ಒಬ್ಬರೂ ಬಿಡದೆ ಚಂದಾದಾರರಿದ್ದಿದ್ದರೆ ಸುಮಾರು ಮೂರು ಸಹಸ್ರಕ್ಕೂ ಮಿಕ್ಕು ಚಂದಾದಾರರಿರಬೇಕಿತ್ತು. ಕಳೆದ ಎರಡು ಮೂರು ತಿಂಗಳಿನಿಂದಂತೂ ಈ ಸಂಖ್ಯೆಯು ಬಿದ್ದು ಹೋಗಿ ಈ ತಿಂಗಳು ಕೇವಲ ೬೮೪ ಚಂದಾದಾರರಿದ್ದಾರೆ. ವರ್ಷವೊಂದಕ್ಕೆ ಸುಮಾರು ೫ ಸಹಸ್ರ ರೂಪಾಯಿ ಖರ್ಚು ಇದ್ದು ಇಷ್ಟು ಕಡಿಮೆ ಸಂಖ್ಯೆಯ ಚಂದಾದಾರರಿಂದ ಪತ್ರಿಕೆಯು ನಡೆಯುವುದು ದುಸ್ತರವೆಂದು ನಾವು ಬಾಯಿಬಿಟ್ಟು ಹೇಳಬೇಕಿಲ್ಲ. ಹಿಂದೆ ವಿ.ಪಿ.ಯನ್ನು ತಿರಸ್ಕರಿಸಿರುವವರೂ ಕಾರಣಾಂತರಗಳಿಂದ ತರಿಸುವುದನ್ನು ಬಿಟ್ಟವರೂ ಈಗ ತಾವಾಗಿಯೇ ಚಂದಾದಾರರಾಗಬೇಕೆಂದೂ, ಈಗಿರುವ ಚಂದಾದಾರರೂ ಸದಾಕಾಲ ಚಂದಾದಾರರಾಗಿ ಉಳಿಯಬೇಕೆಂದೂ ಅಲ್ಲದೆ ಹೊಸಬರನ್ನು ಹೆಚ್ಚು ಹೆಚ್ಚಾಗಿ ಚಂದಾದಾರರನ್ನಾಗಿ ಮಾಡಬೇಕೆಂದೂ ಆಗ್ರಹಪೂರ್ವಕವಾಗಿ ಕೇಳಿಕೊಳ್ಳುತ್ತೇವೆ.

ಮುಂದಿನ ಸೆಪ್ಟಂಬರ್ ತಿಂಗಳಿಂದ ಪುಟ ಸಂಖ್ಯೆಯನ್ನು ೪೦ಕ್ಕೆ ನಿಲ್ಲಿಸಿ, ಚಂದಾದಾರರನ್ನು ನಾಲ್ಕುವರೆ ರೂ.ಗೆ ಮಾತ್ರ ಹೆಚ್ಚಿಸುತ್ತೇವೆ. ವಿ.ಪಿ. ಛಾರ್ಜನ್ನು ಸರಕಾರದವರು ಹೆಚ್ಚಿಸಿರುವುದರಿಂದ ವಿ.ಪಿ. ಮೂಲಕ ಚಂದಾ ಕಟ್ಟುವವರಿಗೆ ೫ ರೂ. ಬೀಳುತ್ತದೆ. ಹಾಗೂ ನಮಗೆ ಸರಾಸರಿ ೧೨೦೦ ಚಂದಾದಾರರಾದರೂ ದೊರತೇ ತೀರಬೇಕು. ಆಗಲೇ ಪತ್ರಿಕೆಯು ಸ್ಥಿರವಾಗಿ ನಿಂತು ಸಮಾಜಸೇವೆಯನ್ನು ಸಲ್ಲಿಸಲು ಸಾಧ್ಯ.(೧೯೫೧) ಇನ್ನು ಮುಂದೆ ಚಂದಾದಾರರು ತಮ್ಮ ಅವಧಿ ಮುಗಿದ ಕೂಡಲೆ ೪ರೂ. ೮ ಆಣೆಯನ್ನು ಮನಿ ಆರ್ಡರ್ ಮೂಲಕ ಕಳಿಸಿಕೊಡಬೇಕೆಂದೂ, ಸಮಾಜಾಭಿಮಾನದಿಂದ ಈ ಪತ್ರಿಕೆಗೆ ಒತ್ತಾಸೆಯನ್ನಿತ್ತು ಹೆಚ್ಚು ಜನ ಚಂದಾದಾರರನ್ನು ಮಾಡಬೇಕೆಂದೂ ಪ್ರಾರ್ಥಿಸುತ್ತೇವೆ. ಇನ್ನು ಮುಂದಿನ ವಾರ್ಷಿಕ ಚಂದಾ ರೂ. ೪ ರೂ. ೮ ಆಣೆ ವಿ.ಪಿ. ಮೂಲಕ ರೂ.೫".[೧]

ಸಂಪಾದಕರ ಈ ಮನವಿಗೆ ವಿಶ್ವಕರ್ಮ ಸಮಾಜದ ನೂರಾರು ಜನ ಪ್ರತಿಕ್ರಿಯೆ ನೀಡಿ ಪತ್ರಿಕೆಯನ್ನು ನಿಲ್ಲಿಸಬಾರದೆಂದು ಮನವಿ ಮಾಡಿಕೊಂಡಿದ್ದಾರೆ. 'ನೀವು ನಿರಾಶರಾಗಬೇಕಾಗಿರಲಿಲ್ಲ. ಆರು ರೂ. ಚಂದಾ ಮಾಡಿದ್ದರೆ ಅದನ್ನು ಸಂತೋಷದಿಂದ ಕೊಡುತ್ತಿದ್ದೆವು, ಚಂದಾದಾರರನ್ನು ಹೆಚ್ಚು ಮಾಡಿಕೊಡುತ್ತೇವೆ, ಪತ್ರಿಕೆಯನ್ನು ಒಂದಾವೃತ್ತಿ ತರಿಸಿ ನಿಲ್ಲಿಸುವವರಿಗಾಗಿ ನೀವು ವ್ಯಥೆ ಪಡಬೇಡಿ, ಪತ್ರಿಕೆಯ ಇದುವರೆಗಿನ ಸೇವೆಗಾಗಿ ಸಮಾಜವೇ ಹೆಮ್ಮೆ ಪಡುತ್ತದೆ' ಎಂಬ ಆಶಯದ ನೂರಾರು ಪತ್ರಗಳು ಸಂಪಾದಕರಿಗೆ ಬಂದಿವೆ. ಕೆಲವರು ಆಜೀವ ಚಂದಾ ಹಣವನ್ನು ಕಳಿಸಿಕೊಟ್ಟರೆ, ಕೆಲವರು ಕಂತಿನ ರೂಪದಲ್ಲಿ ಆಜೀವ ಚಂದಾ ಹಣ ಕಟ್ಟಲು ವಾಗ್ದಾನ ಮಾಡಿದ್ದಾರೆ.

ಹೀಗೆ 'ವಿಶ್ವಕರ್ಮಾ' ಪತ್ರಿಕೆಯು ಕೇವಲ ೫ ವರ್ಷ ೬ ತಿಂಗಳು ಕಾಲ ಪ್ರಕಟಗೊಂಡ ಮಾಹಿತಿ ನನಗೆ ಲಭ್ಯವಾಗಿದೆ. ನನಗೆ ಲಭ್ಯವಿದ್ದ ೧೯೫೩ ಏಪ್ರೀಲ್ ತಿಂಗಳವರಗೆ ಸುಮಾರ ೪೫ ಸಂಚಿಕೆಗಳವರಗೆ ಈ ಪತ್ರಿಕೆಯು ಪ್ರಸಾರವಾಗಿದೆ. ತದನಂತರ ದೇಶದ ಒಟ್ಟು ಆರ್ಥಿಕ ಪರಿಸ್ಥಿತಿ ಹದಿಗೆಟ್ಟ ಕಾರಣವಾಗಿ ಬೆಲೆಗಳೆಲ್ಲ ಗಗನಕ್ಕೇರಿದವು. ಕಾಗದಕ್ಕಾಗಿ ಪರದಾಡುವ ಪರಿಸ್ಥಿತಿ ನಿರ್ಮಾಣವಾಯಿತು. ಹೀಗಾಗಿ ಪತ್ರಿಕೆಯು ತನ್ನ ಐದುವರ್ಷ ಆರು ತಿಂಗಳ ಕಾಲ ಸೇವೆ ಸಲ್ಲಿಸಿ ಮುಕ್ತಾಯಗೊಂಡಿತು.

**ವಿಶ್ವದರ್ಶನ :**

ಜೀವಣ್ಣ ಮಸಳಿಯವರ ಸಂಪಾದಕತ್ವದಲ್ಲಿ 'ವಿಶ್ವದರ್ಶನ' ಪತ್ರಿಕೆಯು ಮೊದಲ ವಾರ ಪತ್ರಿಕೆಯಾಗಿ ೧೯೨೩ ರಲ್ಲಿ ಬಾಗಲಕೋಟೆಯಿಂದ ಪ್ರಸಾರವಾಗುತ್ತಿತ್ತು. ಈ ಪತ್ರಿಕೆಯು ಸುಮಾರ ಹತ್ತು ವರ್ಷಗಳ ಕಾಲ ನಡೆದು, ೧೯೮೪ ಮತ್ತು ೧೯೮೫ರ ಅವಧಿಯಲ್ಲಿ ಒಂದು ವರ್ಷಗಳ ಕಾಲ ದಿನ ಪತ್ರಿಕೆಯಾಗಿ ಇದೇ ವಿಶ್ವದರ್ಶನ ಹೆಸರಿನಿಂದ ಪ್ರಕಟವಾಗಿದೆ. ತದನಂತರ ೧೯೮೬ ರಲ್ಲಿ ಮತ್ತೆ ವಾರ ಪತ್ರಿಕೆಯಾಗಿ ಪ್ರಸಾರವಾಗಿದೆ. ಈ ಪತ್ರಿಕೆಯು ಜ್ಯಾತ್ಯಾತೀತವಾಗಿದ್ದು, ಇದು ವಿಶ್ವಕರ್ಮ ಸಮುದಾಯಕ್ಕೆ ಸಿಮೀತವಾಗದೆ ಎಲ್ಲಾ ಸಮುದಾಯದ ಮತ್ತು ಪ್ರಾದೇಶಿಕತೆಯ ಸುದ್ದಿಗಳನ್ನು ಪ್ರಕಟಿಸಿರುವ ಹೆಗ್ಗಳಿಕೆ ಈ ಪತ್ರಿಕೆ ಇದೆ. ವಿಶ್ವಕರ್ಮ ಮತ್ತು ವಿಶ್ವಕರ್ಮೇತರ ವಿಷಯಗಳನ್ನು ಪ್ರಸಾರ ಮಾಡುತ್ತಾ ಬಂದಿದ್ದು ಅಂದಿನ ಯುವ ಬರಹಗಾರರ ಪ್ರತಿಭೆಗಳಿಗೆ ತರಬೇತಿ ಸ್ವರೂಪದಲ್ಲಿ ಅವಕಾಶ ಕಲ್ಪಿಸಿದ್ದು ಗಮನಿಸುವ ವಿಚಾರವಾಗಿದೆ. ೧೯೮೬ ರಲ್ಲಿ ಜೀವಣ್ಣ ಮಸಳಿಯವರ ಹಿರಿಯ ಸುಪುತ್ರ ಆನಂದ ಮಸಳಿಯವರು ಈ ಪತ್ರಿಕೆಯ ಕೆಲಸಕ್ಕೆ ತಮ್ಮ ತಂದೆಯವರೊಂದಿಗೆ ಕೆಲಸವನ್ನು ಮಾಡಿದ್ದಾರೆ. ಕಿರಿಯ ಸುಪುತ್ರರಾದ ಕರುಣಾಕರ ಮಸಳಿಯವರು ಈ ಪತ್ರಿಕೆಯ ಕಾರ್ಯನಿರ್ವಹಣೆ ಮಾಡುತ್ತಿದ್ದರು.

ಭಾರತ ಮತ್ತು ಕರ್ನಾಟಕದಲ್ಲಿಯೂ ವಿಶ್ವಕರ್ಮ ಸಮುದಾಯದವರು ವಾಸ್ತುಶಿಲ್ಪ, ಸಂಗೀತ, ಸಾಹಿತ್ಯದ ಜೊತೆಗೆ ಪತ್ರಿಕೆಯ ಮುದ್ರಣ ಸೇವೆಯನ್ನು ಪ್ರಾರಂಭಿಸಿದರು. ನನಗೆ ದೊರತ ಮೊದಲ ವಾರ ಪತ್ರಿಕೆ ವಿಶ್ವದರ್ಶನ ದಿನಪತ್ರಿಕೆ(೧೯೨೩). ಸಂಪಾದಕರಾದ ಜೀವಣ್ಣ ಮಸಳಿಯವರ ಈ ಪತ್ರಿಕೆಯ ಪ್ರಸಾರದ ಕೆಲಸವು ತುಂಬಾ ಕಠಿಣಮಯವಾಗಿತ್ತು. ಪತ್ರಿಕೆಯ ಪ್ರಕಟಣೆಯಲ್ಲಿ ಎಷ್ಟೇ ಕಷ್ಟ ಕಾರ್ಪಣ್ಯಗಳು ಎದುರಾದರೂ ಪ್ರಸಾರದ ಕೆಲಸವನ್ನು ನಿಲ್ಲಿಸದೇ ಕಾರ್ಯವನ್ನು ಮಾಡಿದ್ದಾರೆ. ಆ ದಿನದ ವಿಶ್ವದರ್ಶನ ಪತ್ರಿಕೆಯ ಕಾರ್ಯನಿರ್ವಾಹಕರಾಗಿ ಇವರ ಕಿರಿಯ ಚಿರಂಜೀವಿ ಕರುಣಾಕರ ಮಸಳಿಯವರು ಅಂದರೆರಿವತ್ತು ಚಿಕ್ಕಬಳ್ಳಾಪುರದ ನಂದಿ ಆಶ್ರಮದ ಪರಮ ಪೂಜ್ಯರು, ರಾಷ್ಟ್ರಸಂತ ವೇದವೇದಾಂತಾಚಾರ್ಯ ಸ್ವಾಮಿ ಶಿವಾತ್ಮಾನಂದ ಸರಸ್ವತೀ ಗುರುಜೀಯವರ ಅಪಾರ ಪರಿಶ್ರಮದಿಂದ ಪತ್ರಿಕೆಯು ನಿರಂತರವಾಗಿ ಸಮಾಜದ ಸರ್ವರಿಗೂ ತಲುಪುತ್ತಲೇಯಿತ್ತು.

ಜೀವಣ್ಣ ಮಸಳಿಯವರ ಹಿರಿಯ ಚಿರಂಜೀವಿಯಾದ ಆನಂದ ಮಸಳಿಯವರು ತಾವು ಚಿಕ್ಕವರಿದ್ದಾಗಿನ ನೆನಪುಗಳನ್ನು ಹಂಚಿಕೊಂಡಿದ್ದು ಹೀಗೆ, ವಿಶ್ವದರ್ಶನ ಪತ್ರಿಕೆಯು ತಮ್ಮ ತಂದೆಯವರೊಂದಿಗೆ ಬಾಗಲಕೋಟೆಯ ಕಾರಿಹಳ್ಳದ ಹತ್ತಿರಯಿರುವ ಚಿಕ್ಕ ಬಾಡಿಗೆಯ ಮನೆಯ ಒಂದು ಕೋಣೆಯಲ್ಲಿ ವಾಸವಿದ್ದು, ತಂದೆಯವರು ಶಾಲೆಯಿಂದ ಬರುವಷ್ಟರಲ್ಲಿಯೇ ಪತ್ರಿಕೆಯ ಸುದ್ದಿಗಳನ್ನು ಸಿದ್ಧಪಡಿಸುತ್ತಿದ್ದರು. ಅಕ್ಷರದ ಮಳೆಗಳನ್ನು ಜೋಡಿಸುವ ಕಾರ್ಯದ ಜೊತೆಗೆ ಮುದ್ರಣ ಕೆಲಸವನ್ನು ಅಣ್ಣತಮ್ಮಂದಿರಿಬ್ಬರೂ ನಿರ್ವಹಿಸುತ್ತಿದ್ದರು. ಪತ್ರಿಕೆ ಹಂಚುವ ಹುಡಗರು ಯಾರಾದರೂ ಬರದೆ ಇದ್ದ ದಿನ ಸ್ವತಃ ಸೈಕಲ್ ಏರಿ ಪತ್ರಿಕೆಯ ಗಂಟು ಇಟ್ಟುಕೊಂಡು ಮನೆ ಮನೆಗಳಿಗೆ, ಕಛೇರಿಗಳಿಗೆ ಪತ್ರಿಕೆಯನ್ನು ತಲುಪಿಸುವ ಜವಾಬ್ದಾರಿಯುತ ಕೆಲಸ ಮಾಡಿರುವ ಹೆಗ್ಗಳಿಕೆ ಇವರದು.

ಜೀವಣ್ಣ ಮಸಳಿಯವರು ಪತ್ರಿಕೆಯನ್ನು ಪ್ರಾರಂಭಿಸಿದ ಮೇಲೆ ಆರ್ಥಿಕ ತೊಂದರೆಯಂತಹ ಹತ್ತು ಹಲವಾರು ತೊಂದರೆಗಳನ್ನು ಅನುಭವಿಸಿದ್ದರೂ ಛಲ ಬಿಡದ ಛಲಗಾರನಂತೆ ಪತ್ರಿಕಾ ಸೇವೆಯ ಸಲುವಾಗಿಯೇ ತಮ್ಮ ಶಿಕ್ಷಕ ವೃತ್ತಿಗೆ ಇನ್ನೂ ಎರಡು ವರ್ಷಗಳ ಸೇವೆ ಇರುವಾಗಲೇ ನಿವೃತ್ತಿ ಪಡೆದು ಸಾಹಿತ್ಯ, ಸಂಶೋಧನೆ ಹಾಗೂ ಪತ್ರಿಕಾ ಸೇವೆಯ ಕ್ಷೇತ್ರವನ್ನು ಬೆಳಸಿದ್ದಾರೆ.

ವಿಶ್ವದರ್ಶನ ವಾರ ಪತ್ರಿಕೆಯ ಸಂಪುಟ ೧೨, ಸಂಚಿಕೆ ೨೫-೨೬ರ, ೧೯೮೬ರ 'ಪ್ರಜಾರಾಜ್ಯ ಎಲ್ಲಿದೇ?',[੨] ಅಂಕಣ, 'ಜಾನಪದ ಸಾಹಿತಿಗಳ ಪರಿಚಯ', 'ಕವನಗಳು' ಹೀಗೆ ಹಲವಾರು ವಾರದ ಎಲ್ಲಾ ವಿಷಯಗಳ ಈ ಪತ್ರಿಕೆಯು ಪ್ರಸಾರವನ್ನು ಮಾಡುತ್ತಿದ್ದರು. ಒಟ್ಟು ಹದಿನಾಲ್ಕು ವರ್ಷಗಳ ಕಾಲ ಸುಮಾರು ೨೭ ಸಂಚಿಕೆಗಳಲ್ಲಿ ಈ ಪತ್ರಿಕೆಯು ಪ್ರಸಾರವಾಗಿದೆ.

**ವಿಶ್ವಕರ್ಮ ಸಂದೇಶ :**

ಶ್ರೀ ಜಗನ್ನಾಥರಾವ್ ಬಡಿಗೇರ ಅವರ ಸಂಪಾದಕತ್ವದಲ್ಲಿ ಮಾದರಿ ಪತ್ರಿಕೆಯಾಗಿ 'ಕಾಳಿಕಾ ಪ್ರಭ'ವನ್ನು ೨೦೦೫ ಜೂನ್ ತಿಂಗಳಿನಿಂದ ಪ್ರಕಟವಾಗುತ್ತಿದ್ದು, ಈ ಪತ್ರಿಕೆಯು ರಜಿಸ್ಟ್ರಾರ್ ನ್ಯೂಸ್ ಪೇಪರ್ ಆಫ್ ಇಂಡಿಯಾ ಅವರ ನಿರ್ದೇಶನದ ಮೇರೆಗೆ ಮುಂದೆ ನವ್ಹೆಂಬರ್ ತಿಂಗಳಿನಿಂದ **'ವಿಶ್ವಕರ್ಮ ಸಂದೇಶ'** ಎಂಬ ಹೆಸರಿನಿಂದ ಪ್ರಕಟಗೊಂಡಿದೆ. ಐದು ಸಾವಿರ ಪತ್ರಿಕೆಗಳು ಇಡೀ ನಾಡಿನಾದ್ಯಂತ ಪ್ರಸಾರಗೊಳ್ಳುತ್ತಿವೆ. ನಾಡಿನ ತುಂಬ ವಾಸವಾಗಿರುವ ಎಲ್ಲ ವಿಶ್ವಕರ್ಮ ಬಂಧುಗಳ ಮನೆಮನಗಳಿಗೆ ಈ ಪತ್ರಿಕೆ ತಲುಪುತ್ತಿದೆ. ಸಂಪಾದಕರ ಪರಿಶ್ರಮದಿಂದ ಪತ್ರಿಕೆ ವ್ಯಾಪಕವಾಗಿ ಬೆಳೆದು ಬಂದಿದೆ. ಈ ಪತ್ರಿಕೆಯ ಗೌರವ ಸಂಪಾದಕರಾದ ಖ್ಯಾತ ಇತಿಹಾಸ ತಜ್ಞ ಡಾ. ಎಸ್.ಕೆ.ಜೋಶಿ ಅವರು ತಮ್ಮ ಸಂಶೋಧನಾತ್ಮಕ ಲೇಖನಗಳಿಂದ ಪತ್ರಿಕೆಗೆ ಒಂದು ಮೂರ್ತಸ್ವರೂಪವನ್ನು ತಂದುಕೊಟ್ಟಿದ್ದಾರೆ. ವಿರೂಪಾಕ್ಷ ಬಡಿಗೇರ, ಶೀಲಾಕಾಂತ ಪತ್ತಾರ, ಸಿ.ಪಿ. ಮಾಯಾಚಾರಿ, ಪಾ.ವಿ. ಅರಕೇರಿ, ರಾಜೇಂದ್ರ ಬಡಿಗೇರ, ಡಾ. ವೀರೇಶ ಬಡಿಗೇರ ಮೊದಲಾದವರ ಸಂಶೋಧನಾತ್ಮಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ. ಈ ಎಲ್ಲ ಲೇಖನಗಳಲ್ಲಿ

ಅಡಕವಾಗಿರುವ ಸಾಮಾಜಿಕ, ಧಾರ್ಮಿಕ, ಸಂಶೋಧನಾತ್ಮಕ ಅಂಶಗಳು ಅಡಕವಾಗಿವೆ. ಈ ಪತ್ರಿಕೆಯಲ್ಲಿಯೂ ಮಾಸಭವಿಷ್ಯ, ಕ್ಷೇತ್ರ ವಾರ್ತೆಗಳು ಮೊದಲಾದ ಸಮಕಾಲೀನ ವಿಚಾರಗಳು ಪ್ರಕಟಗೊಳ್ಳುತ್ತವೆ.

ವಿಶ್ವಕರ್ಮ ಸಮಾಜವು ಇತರ ಸಮಾಜಗಳಂತೆ ಮೈಕೊಡವಿಕೊಂಡು ಮೇಲೇಳಬೇಕೆಂಬುದು ಈ ಪತ್ರಿಕೆಯ ಆಶಯವಾಗಿದೆ. ಶೈಕ್ಷಣಿಕ ಮತ್ತು ಸಾಮಾಜಿಕ ಸೇವಾ ಕ್ಷೇತ್ರದಲ್ಲಿ ವಿಶ್ವಕರ್ಮ ಮಠಗಳು ಹೇಗೆ ಕಾರ್ಯಮಾಡಬೇಕು ಎಂಬುದನ್ನು ಕುರಿತು ಜಗನ್ನಾಥರಾವ್ ಬಡಿಗೇರ ಅವರು ಸಂಪಾದಕೀಯವೊಂದರಲ್ಲಿ ಹೀಗೆ ಬರೆಯುತ್ತಾರೆ:

"ಕರ್ನಾಟಕದಲ್ಲಿ ಅಧಿಕೃತ ಸುಮಾರು ೧೫೦ ಮಠಗಳು ಇವೆ. ೨೦೦೦೦ ಸ್ವಾಮಿಗಳು ಹಾಗೂ ೧೦೦ಕ್ಕಿಂತ ಹೆಚ್ಚು ಜಗದ್ಗುರುಗಳು ಇದ್ದಾರೆ. ಅವರೆಲ್ಲರೂ ಹೆಚ್ಚು ಕಡಿಮೆ ವಿವಿಧ ಜಾತಿ ಪಂಗಡಗಳಿಗೆ ಸಂಬಂಧಿಸಿದ್ದರೂ ಬಹುತೇಕ ಲಿಂಗಾಯತ ಪಂಗಡಗಳಿಗೆ ಸಂಬಂಧಿಸಿದವುಗಳೇ ಜಾಸ್ತಿ. ಶೃಂಗೇರಿಯ ಶಾರದಾಪೀಠ, ಉಡುಪಿಯ ಅಷ್ಟಮಠಗಳು ಬ್ರಾಹ್ಮಣರಿಗೆ ಸಂಬಂಧಿಸಿವೆ. ಆದಿಚುಂಚನಗಿರಿಮಠ ಗೌಡ–ಒಕ್ಕಲಿಗರಿಗೆ, ಹಂಪಿ ಹೇಮಕೂಟ ದೇವಾಂಗರಿಗೆ, ಕಾಗಿನೆಲೆ ಶ್ರೀ ಕನಕ ಗುರುಪೀಠ ಕುರುಬರಿಗೆ, ಶ್ರವಣಬೆಳ್ಗೊಳದ ಬಾಹುಬಲಿ ಪೀಠ ಜೈನರಿಗೆ, ತಿಂಥಣಿ ಮೌನೇಶ್ವರಪೀಠ ವಿಶ್ವಕರ್ಮರಿಗೆ, ಹುಬ್ಬಳ್ಳಿಯ ವೀರಭಿಕ್ಷಾವರ್ತಿಪೀಠ ಕುರುಹಿನಶೆಟ್ಟರಿಗೆ, ಶಿವರಾತ್ರೀಶ್ವರಮಠ, ಮೂರುಸಾವಿರಮಠ, ತರಳಬಾಳು ಬೃಹನ್ಮಠ, ಸಿರಿಗೆರೆ, ಡಂಬಳ ಗದಗ ತೋಂಟದಾರ್ಯಮಠ, ಧಾರವಾಡ ಮುರುಘಾಮಠ ಹೀಗೆ ಮಠಗಳು ಇನ್ನೂ ಹತ್ತು ಹಲವಾರು ಲಿಂಗಾಯತರಿಗೆ ಸಂಬಂಧಿಸಿವೆ.

ಈ ರೀತಿ ವಿವಿಧ ಸಮಾಜದ ಮಠಗಳು ತಮ್ಮ ತಮ್ಮ ಜನರ ಸರ್ವತೋಮುಖ ಉನ್ನತಿಗಾಗಿ ಶಿಕ್ಷಣ ಮಾಧ್ಯಮದಿಂದ ಮುಂದೆ ಧಾವಿಸುತ್ತಿವೆ. ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ ವಿಶ್ವಕರ್ಮ ಬ್ರಾಹ್ಮಣ ಸಮಾಜವೂ ಸ್ಪರ್ಧಿಸಬೇಕಾಗಿದೆ. ೩೫ ಲಕ್ಷಕ್ಕೂ ಮಿಕ್ಕಿ ಇರುವ ನಮ್ಮ ಈ ಸಮಾಜವು ಅಲ್ಲಲ್ಲಿ ಪ್ರತಿಯೊಂದು ಜಿಲ್ಲೆಗೂ ವಿಶ್ವಬ್ರಾಹ್ಮಣ ಶಿಕ್ಷಣ ಸಂಸ್ಥೆಗಳನ್ನು ತಮ್ಮ ಸ್ವಪ್ರಯತ್ನದಿಂದ ಸ್ಥಾಪಿಸುವ ಸಂಕಲ್ಪ ಮಾಡಬೇಕಾಗಿದೆ. ನಮ್ಮ ವಿಶ್ವಬ್ರಾಹ್ಮಣ ಮಠಮಾನ್ಯರು ಬದ್ಧರಾಗಬೇಕಾಗಿದೆ. ಹಾಗೆ ನಾವುಗಳೆಲ್ಲ ಕಾರ್ಯಸಿದ್ಧರಾಗೋಣ ಎಂದು ಈ ಸಂಪಾದಕೀಯ ಶಬ್ದಗಳ ಮೂಲಕ ಪ್ರಾರ್ಥಿಸುತ್ತೇನೆ".[೩] ಬೇರೆ ಸಮಾಜದ ಮಠಗಳು ಆಧುನಿಕತೆಯ ಗಾಳಿಗೆ ಮೈಯೊಡ್ಡಿ, ಶಿಕ್ಷಣ–ಸಮಾಜ ಸೇವಾ ಕಾರ್ಯಗಳಲ್ಲಿ ತಮ್ಮನ್ನು ತಾವು ಸರ್ವಾರ್ಪಣ ಮನೋಭಾವದಿಂದ ದುಡಿಸಿಕೊಂಡ ಸಂದರ್ಭವನ್ನು ಪತ್ರಿಕೆಯ ಸಂಪಾದಕರು ಸೂಕ್ಷ್ಮವಾಗಿ ಗಮನಿಸಿ, ವಿಶ್ವಕರ್ಮ ಸಮಾಜಕ್ಕೆ ಸಂಬಂಧಿಸಿದ ಅನೇಕ ಮಠಗಳಿದ್ದರೂ ಒಗ್ಗಟ್ಟುವಿಲ್ಲದ ಕಾರಣಕ್ಕಾಗಿ ಸಮಾಜ ಹಿಂದುಳಿದಿರುವಿಕೆಗೆ ಕಾರಣ ಎಂದು ಹೇಳುತ್ತ, ಸಮಾಜದಲ್ಲಿ ಒಗ್ಗಟ್ಟಾಗಬೇಕಾದರೆ, ಮೊದಲು ಮಠಗಳು ತಮ್ಮ ಕರ್ತವ್ಯವನ್ನು ಪರಿಪಾಲಿಸಬೇಕೆಂಬ ಕಳಕಳಿ

ಈ ಸಂಪಾದಕೀಯದಲ್ಲಿದೆ. ಕರ್ನಾಟಕದಲ್ಲಿ ಸಿದ್ಧಗಂಗಾ ಮಠ, ಸುತ್ತೂರು ಮಠ, ಆದಿಚುಂಚನಗಿರಿ ಮಠ, ತೋಂಟದಾರ್ಯ ಮಠ, ಚಿತ್ರದುರ್ಗ ಮಠ, ಕಲಬುರ್ಗಿಯ ಶರಣಬಸಪ್ಪಜ್ಜನವರ ಮಠ, ಬೆಳಗಾವಿಯ ರುದ್ರಾಕ್ಷಿ ಮಠ, ಹೀಗೆ ಕನ್ನಡ ನಾಡಿನ ಈ ಮಠಗಳು ಶಿಕ್ಷಣವನ್ನು ನೀಡುತ್ತಿರುವಂತೆ, ಕರ್ನಾಟಕದ ವಿಶ್ವಕರ್ಮ ಸಮುದಾಯದ ಮಠಗಳು ತಮ್ಮ ಸಮುದಾಯದ ಜ್ಞಾನವನ್ನು, ಕರಕುಶಲ ಮತ್ತು ಶಿಲ್ಪಕಲೆಗಳಿಗೆ ಸಂಬಂಧಿಸಿದ ಹಾಗೂ ವೃತ್ತಿಯಾಧಾರಿತ ಶಿಕ್ಷಣ ಸಂಸ್ಥೆಗಳ ಸ್ಥಾಪಿಸುವ ಅವಶ್ಯಕತೆ ಇರುತ್ತದೆ. ಈ ಪತ್ರಿಕೆಯು ರಜಿಷ್ಟ್ರಾರ್ ನ್ಯೂಸ್ ಪೇಪರ್ ಆಫ್ ಇಂಡಿಯಾ ಅವರ ನಿರ್ದೇಶನದ ಮೇರೆಗೆ ೨೦೧೨ ರಲ್ಲಿ ನಿಲ್ಲಿಸಲಾಗುತ್ತದೆ. ಈ ಪತ್ರಿಕೆಯು ಒಟ್ಟು ಏಳು ಸಂಪುಟಗಳಲ್ಲಿ ೩೬ ಸಂಚಿಕೆಯಲ್ಲಿ ಪ್ರಸಾರವಾಗಿದೆ.

**ಕಾಳಿಕಾ ಸಂದೇಶ :**

'ವಿಶ್ವಕರ್ಮ ಸಂದೇಶ' ಪತ್ರಿಕೆಯ ಸಂಪಾದಕರಾಗಿ ಕೆಲಸ ಮಾಡಿರುವ ಶಿರಸಂಗಿಯ ಶ್ರೀ ಜಗನ್ನಾಥರಾವ್ ಬಡಿಗೇರ ಅವರ ಈ ಪತ್ರಿಕೆಯನ್ನು 'ರಜಿಷ್ಟ್ರಾರ್ ನ್ಯೂಸ್ ಪೇಪರ್ ಆಫ್ ಇಂಡಿಯಾ' ಅವರ ನಿರ್ದೇಶನದ ಮತ್ತು ನಿಯಮಗಳ ಮೇರೆಗೆ ನಿಲ್ಲಿಸಿದರು. ಇದೇ ಅವಧಿಯಲ್ಲಿ ಇದೇ ಸಂಪಾದಕರ ಸತತ ಪರಿಶ್ರಮದ ಫಲವಾಗಿ ೨೦೧೨ ಅಕ್ಟೋಬರ್ ತಿಂಗಳಿನಿಂದ R.N.I.NO. KARKAN೨೦೧೨/೪೩೪೦೩ ಈ ನಂಬರನೊಂದಿಗೆ **'ಕಾಳಿಕಾ ಸಂದೇಶ'** ಎಂಬ ಹೆಸರಿನಿಂದ ಸುಕ್ಷೇತ್ರ ಶಿರಸಂಗಿಯ ಕಾಳಿಕಾ ಮಾತೆ ಸನ್ನಿಧಿಯಿಂದ ಮರು ಪ್ರಕಟಣೆಯನ್ನು ಪ್ರಾರಂಭಿಸಿದರು, ಈ 'ಕಾಳಿಕಾ ಸಂದೇಶ' ಮಾಸ ಪತ್ರಿಕೆಯು ಇವತ್ತಿನವರೆಗೂ ಓದುಗರ ಕೈ ಸೇರುತ್ತಿದೆ. ಈ ಪತ್ರಿಕೆಯಲ್ಲಿ 'ವಿಶ್ವಕರ್ಮರೇ ಪ್ರಪಂಚದ ಪ್ರಥಮ ವಿಜ್ಞಾನಿಗಳು',[೪] ಮಹಿಳೆಯರ ಬಗೆಗೆ, ಗುರುವಿನ ಕುರಿತು, ಹಾಗೂ ಧಾರ್ಮಿಕ ಲೇಖನಗಳ ವಿಶ್ಲೇಷಣೆಯನ್ನು ಈ ಪತ್ರಿಕೆಯು ಮಾಡುತ್ತಾ ಬಂದಿದೆ.

"ದೇಶಗಳನ್ನು ಹುಡಿಕೊಂಡು ಸಂಶೋಧಕರು ಧ್ರುವದಿಂದ ಧ್ರುವಕ್ಕೆ ಹೋಗುತ್ತಾರೆ. ಅಮೇರಿಕಾವನ್ನು ಹುಡಿಕಿಕೊಂಡು ಕೊಲಂಬಸ್ ಹೋದ. ಭಾರತವನ್ನು ಹುಡಿಕೊಂಡು ವಾಸ್ಕೋಡಾಗಾಮಾ ಬಂದ. ಆದರೆ ಭೂಮಿಯನ್ನು ಹುಡುಕಿಕೊಂಡು ಯಾರು, ಎಲ್ಲಿಗೆ ಹೋಗುವುದು? ನಾವು, ನೀವು ಎಲ್ಲಿದ್ದೇವೆಯೋ ಅದು ಅಲ್ಲಿಯೇ ಇಲ್ಲವೇ? ಅನಾತ್ಮ ವಸ್ತುಗಳನ್ನು ನಾವು ಹುಡುಕಿ ಪಡೆಯಬಹುದು ಆದರೇ ಆತ್ಮ ವಸ್ತುವನ್ನು ಹುಡುಕುವುದು ಹೇಗೆ? ಎಲ್ಲಿ?"[೫] ಹುಡುಕಿದರು ಸಿಗದ ಆತ್ಮ ಎಂಬ ಲೇಖನವನ್ನು ವಿಜಾಪೂರದ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳವರ ವಾಣಿಯಾಗಿದೆ. ಕನ್ನಡ ಕಬೀರ ಇಬ್ರಾಹಿಮ್ ಸುತಾರ ಇವರಂತಹ ಭಾವೈಕ್ಯತೆಯ ಚಿಂತನಕಾರರ ವಿಚಾರಗಳ ಲೇಖನವು ಪ್ರಸಾರ ಮಾಡಿದೆ. ಅಂದರೆ ಈ ಪತ್ರಿಕೆಯು ವಿಶ್ವಕರ್ಮ ಸಮುದಾಯದ ಜೊತೆ ಜೊತೆಗೆ ವಿಶ್ವಕರ್ಮೇರ ಸಮುದಾಯದ ಆಧ್ಯಾತ್ಮಿಕ ಚಿಂತನೆಗಳನ್ನು ಪ್ರಸಾರ ಮಾಡುತ್ತಾ ಬಂದಿದೆ. ಎಂಟು ಸಂಪುಟದಲ್ಲಿ ೪೫

ಸಂಚಿಕೆಗಳೊಂದಿಗೆ ಈ ಪತ್ರಿಕೆಯು ಇಂದಿಗೂ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಶಿರಸಂಗಿ ಕ್ಷೇತ್ರದಿಂದ ಪ್ರಕಟವಾಗುತ್ತಿದೆ.

**ಸೃಜನಶೀಲ ವಿಶ್ವಕರ್ಮ :**

ಎನ್. ವಿಶ್ವರೂಪಾಚಾರ್ ಪ್ರಧಾನ ಸಂಪಾದಕತ್ವದಲ್ಲಿ ೨೦೦೩ರಲ್ಲಿ 'ಸೃಜನಶೀಲ ವಿಶ್ವಕರ್ಮ' ಎಂಬ ಪಾಕ್ಷಿಕ ಪತ್ರಿಕೆಯಾಗಿ ಪ್ರಕಟವಾಗಿದೆ. ವಿಶ್ವಕರ್ಮ ಸಮಾಜಕ್ಕೆ ಇದರ ಅವಶ್ಯಕತೆ ಇತ್ತೆಂಬುದು ಎಲ್ಲ ವಿಶ್ವಕರ್ಮ ವಿದ್ಯಾವಂತರ ಅಭಿಪ್ರಾಯವಾಗಿದೆ. ಪತ್ರಿಕೆಯು ಎಲ್ಲರ ಆಶೆ-ಆಶಯಗಳ ಪ್ರತೀಕವಾಗಿ ಪ್ರಕಟವಾಗುತ್ತಿತ್ತು. ಸಮಕಾಲೀನ ಸಮಾಜದ ಅನೇಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯ ಈ ಪತ್ರಿಕೆಯಿಂದ ನಡೆದಿದೆ. ಧರ್ಮ, ಸಂಸ್ಕೃತಿ, ಮತ ಸಂಬಂಧ ವಿಷಯದಲ್ಲಂತೂ ಸಂಶೋಧನಾತ್ಮಕ ವಿಶ್ಲೇಷಣಾತ್ಮಕ ಲೇಖನಗಳು ಪ್ರಕಟಗೊಂಡಿವೆ. ವಿಶ್ವಕರ್ಮ ಜನಾಂಗದಲ್ಲಿ ಈ ಪತ್ರಿಕೆ ಒಂದು ನವೀನ ಕ್ರಾಂತಿಯನ್ನೇ ಮಾಡಿತು. ಮತಧರ್ಮ ಸಿದ್ಧಾಂತ ಪ್ರತಿಪಾದನೆ, ಆಚಾರ ವಿಚಾರಗಳ ನಿರೂಪಣೆ ಮೊದಲಾದ ಸಾಂಸ್ಕೃತಿಕ ವಿಷಯಗಳ ಜೊತೆಗೆ, ಸಾಮಾಜಿಕ ಸಮಸ್ಯೆಗಳೂ ಪತ್ರಿಕೆಯ ಪ್ರತಿ ಸಂಚಿಕೆಗಳಲ್ಲಿಯೂ ಮೂಡಿಬಂದಿದೆ. ಈ ಪತ್ರಿಕೆಯ ಮೂಲಕ ವಿಶ್ವಕರ್ಮ ಸಮುದಾಯದಲ್ಲಿ ಒಂದು ನೂತನ ವಿಚಾರ ಸರಣಿಯೇ ಆರಂಭವಾಯಿತು. ಎಲ್ಲ ಸಮಾಜದವರು ತಮ್ಮ ತಮ್ಮ ಸಮಾಜದ ಚಿತ್ರಗಳನ್ನು ಸಾರ್ವಜನಿಕವಾಗಿ ಮುಂದಿಡುತ್ತಿದ್ದ ಸಂದರ್ಭದಲ್ಲಿ ವಿಶ್ವಕರ್ಮ ಸಮಾಜವೂ ತನ್ನ ಪರಿಸ್ಥಿತಿಯನ್ನು ಅರಿಯುವ ಪ್ರಯತ್ನದೊಂದಿಗೆ ಗಂಭೀರವಾದ ಸಾಮಾಜಿಕ ಸಮಸ್ಯೆಗಳ ಮೇಲೆ ಕ್ಷಕಿರಣ ಬೀರುವ ಕೆಲಸ ಮಾಡಿತು. ಒಟ್ಟಾರೆ ಶುಷ್ಕ ಅಥವಾ ಜನಪ್ರಿಯ ಟೀಕೆಯಲ್ಲಿ ಕಾಲ ಕಳೆಯದೆ, ಸಮಾಜವನ್ನು ತಿದ್ದಬೇಕು, ಸಮಾಜದಲ್ಲಿ ಬದಲಾವಣೆಯಾಗಬೇಕೆನ್ನುವ ಪ್ರತಿಯೊಬ್ಬ ವಿದ್ಯಾವಂತರಿಗೆ ಈ ಪತ್ರಿಕೆ ಚಿಮ್ಮುಹಲಗೆಯಾಗಿ ಪರಿಣಮಿಸಿತ್ತು. ವಿಶ್ವಕರ್ಮ ಸಮಾಜವನ್ನು ಶ್ರೇಣೀಕೃತ ವ್ಯವಸ್ಥೆಯಲ್ಲಿ ಮುಂದೆ ತರಬೇಕೆಂಬ ಒಂದೇ ಒಂದು ಮಹದಾಶೆಯಿಂದ ಈ ಪತ್ರಿಕೆಯನ್ನು ಲಾಭದ ಅಪೇಕ್ಷೆಯಿಲ್ಲದೆ ಪ್ರಕಟಿಸಿದ್ದಾರೆ.

**ವಿಶ್ವಕರ್ಮ ನುಡಿ ಪತ್ರಿಕೆ :**

ಆಗಸ್ಟ್ ೨೦೧೨ರಿಂದ 'ವಿಶ್ವಕರ್ಮ ನುಡಿ' ಎಂಬ ಪತ್ರಿಕೆಯು ಬೆಂಗಳೂರಿನಿಂದ ಪ್ರಕಟವಾಗುತ್ತಿದೆ. ಎ.ರುದ್ರಪ್ಪ ಮತ್ತು ಬಾಬು ಪತ್ತಾರ ಅವರು ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಾರಂಭದಲ್ಲಿ ನಾಲ್ಕು ಪುಟಗಳ ಈ ಪತ್ರಿಕೆಯನ್ನು ಉಚಿತವಾಗಿ ನೀಡಲು ನಿರ್ಧರಿಸಿದ್ದರು. ಆದರೆ ಆಡಿಟ್ ಸಮಸ್ಯೆ ಕಾರಣವಾಗಿ ಕಡಿಮೆ ಹಣದಲ್ಲಿ ಚಂದಾ ದರವನ್ನು ನಿಗದಿಪಡಿಸಿ ಪ್ರಕಟಿಸುತ್ತಿದೆ. ಈ ಪತ್ರಿಕೆಯಲ್ಲಿ ಸಾಹಿತ್ಯಿಕವಾದ ಮೌಲಿಕ ಗಂಭೀರವಾದ ಲೇಖನಗಳಿಲ್ಲದಿದ್ದರೂ ಸಮಕಾಲೀನ ರಾಜಕೀಯ ಶೈಕ್ಷಣಿಕ ವಿಚಾರಗಳು ಪ್ರಕಟಗೊಂಡಿವೆ. ವಿಶ್ವಕರ್ಮ ವಿದ್ಯಾರ್ಥಿ ನಿಲಯಗಳ ವಿವರ, ಅಲ್ಲಿ ಅಧ್ಯಯನಕ್ಕಾಗಿ ಆಶ್ರಯ ಪಡೆದ ವಿದ್ಯಾರ್ಥಿಗಳ

ಸಂಖ್ಯೆ, ನಾಡಿನ ತುಂಬ ನಡೆಯುತ್ತಿರುವ ವಿಶ್ವಕರ್ಮ ಸಮಾಜ ಬಾಂಧವರ ವಿವಿಧ ಕಾರ್ಯಕ್ರಮಗಳ ವರದಿಗಳು ಇಲ್ಲಿ ಪ್ರಕಟಗೊಂಡಿವೆ. ವಿಶ್ವಕರ್ಮ ಕಲಾವಿದರ ಪರಿಚಯ ಮಾಲಿಕೆ ಮೂಲಕ ಅನೇಕ ಉಪೇಕ್ಷಿತ ಕಲಾವಿದರು ಮೊದಲ ಬಾರಿಗೆ ಇಲ್ಲಿ ಪರಿಚಯಸಲ್ಪಟ್ಟಿರುವುದು ಗಮನಾರ್ಹ ಅಂಶವಾಗಿದೆ.

ವಿಶ್ವಕರ್ಮ ಸಮಾಜದ ಮುಂದಿರುವ ಸವಾಲುಗಳ ಕುರಿತು ಅನೇಕ ಮಹತ್ವದ ವಿಚಾರಗಳನ್ನು ಈ ಪತ್ರಿಕೆ ಪ್ರಕಟಿಸುತ್ತ ಬಂದಿದೆ.

"ಯಾವುದೇ ಒಂದು ಸಮಾಜ ಅದರ ಸಂಘಟಿತ ಸ್ಥಿತಿ ಜೀವಂತವಾಗಿ ಉಳಿದು ಬೆಳೆಯಬೇಕಾದರೆ, ಅದಕ್ಕೆ ಆಗಿಂದಾಗ್ಗೆ ಬರುವ ಸವಾಲುಗಳನ್ನು ಯಶಸ್ವಿಯಾಗಿ ಬಗೆಹರಿಸಿಕೊಳ್ಳುವಂತಹ ಒಂದು ಆತ್ಮ ಪ್ರಜ್ಞೆ ಬೇಕು. ಸವಾಲು ಆಂತರಿಕದದ್ದಾದರೆ ಅದನ್ನು ಕಂಡುಕೊಳ್ಳುವ ವಿವೇಚನಾ ಸಾಮರ್ಥ್ಯ, ಮತ್ತದಕ್ಕೆ ತಕ್ಕ ಪರಿಹಾರವನ್ನು ಒದಗಿಸುವ ಚೈತನ್ಯ ಇರಬೇಕು. ಈ ಕುರಿತು ವಿಶ್ಲೇಷಣೆ ಮಾಡಬೇಕಾದ ಅವಶ್ಯಕತೆ ಇದೆ."[೬] ಇಲ್ಲಿಯ ಮಾತುಗಳಲ್ಲಿ ಆಧುನಿಕ ಜಗತ್ತಿನಲ್ಲಿಂದು ಸಮಾಜದ ಸಂಘಟನೆಯ ಬಗೆಗಿನ ಅಪರೂಪದ ಕಾಳಜಿಯನ್ನು ಗುರುತಿಸಬಹುದು. ನನಗೆ ಈ ಪತ್ರಿಕೆಯ ೨ ಸಂಪುಟ, ೮ ಸಂಚಿಕೆಗಳು, ದೊರತಿವೆ.

**ಜಗತ್ ಕಲ್ಯಾಣ :**

ವಿಶ್ವಕರ್ಮ ಸಮಾಜದ ಸರ್ವತೋಮುಖ ಅಭಿವೃದ್ಧಿಯ ಮುಖವಾಣಿಯಾಗಿ ಕಳೆದ ನಲವತ್ತು ವರ್ಷಗಳಿಂದ 'ಜಗತ್ ಕಲ್ಯಾಣ' ಎಂಬ ಪಾಕ್ಷಿಕ ಪತ್ರಿಕೆ ಪ್ರಕಟಗೊಳ್ಳುತ್ತಿದೆ. ದಿವಂಗತ ಎ.ಎಂ. ರಂಗನಾಥರಾಯರು ಸಂಪಾದಕತ್ವದಲ್ಲಿ ೧೯೮೦ ರಲ್ಲಿ ಹರಿಹರದಿಂದ ಈ ಪತ್ರಿಕೆಯನ್ನು ಪ್ರಾರಂಭಿಸಿದ್ದರು. ಟ್ಯಾಬ್ಲಾಯಡ್ ಮಾದರಿಯಲ್ಲಿ ಈ ಪತ್ರಿಕೆ ನಾಲ್ಕು ಪುಟುಗಳಲ್ಲಿ ಪ್ರಕಟವಾಗುತ್ತಿದೆ. ಅವುಗಳ ಕೇಲವು ಸಂಚಿಕೆಗಳು ಲಭ್ಯವಿಲ್ಲ. ವಿಶ್ವಕರ್ಮ ಸಮಾಜದ ರಾಜಕೀಯ, ಶೈಕ್ಷಣಿಕ, ಸಾಹಿತಿಗಳ ಪರಿಚಯ, ಸಾಧಕರ ವಿಚಾರಗಳು, ಮಂಗಲ ಕಾರ್ಯಗಳ ಮಾಹಿತಿ ಹೀಗೆ ಎಲ್ಲ ಚಟುವಟಿಕೆಗಳನ್ನು ಪರಿಚಯಿಸುವ ಪ್ರಯತ್ನ ಇಲ್ಲಿದೆ. ವಿಶ್ವಕರ್ಮ ಸಮಾಜದ ಸ್ವಾಮಿಗಳ ಕಾರ್ಯಕ್ರಮಗಳು, ವಿಶ್ವಕರ್ಮ ಸಹಕಾರಿ ಸಂಸ್ಥೆಗಳ ಪ್ರಗತಿಯ ವಿವರ, ವಿಶ್ವಕರ್ಮ ಸಮಾಜದ ಅಭಿವೃದ್ಧಿಯ ಕುರಿತಾದ ಅನೇಕ ವರದಿಗಳು–ವಿವರಗಳು ಇಲ್ಲಿ ಪ್ರಕಟಗೊಂಡಿವೆ. ಜಗತ್ ಕಲ್ಯಾಣ ಪತ್ರಿಕೆಯು ೨೦೧೮ರಿಂದ ಆರ್ಥಿಕತೆಯ ಅಭಾವದಿಂದ ಪ್ರಕಟವಾಗುತ್ತಿಲ್ಲ. ಎಂಬುದು ಸಂಪಾದಕರಾದ ಎ.ಆರ್. ಮಂಜುನಾಥ ಅವರ ತಿಳಿಸಿದ್ದಾರೆ. ಈ ಪತ್ರಿಕೆಯ ಒಟ್ಟು ೨೦ ಸಂಪುಟಗಳು, ಪ್ರತಿ ಸಂಪುಟಗಳ ೧೬ ಸಂಚಿಕೆಗಳಲ್ಲಿ ಕೆಲವು ದೊರತಿವೆ.

**ಸಿದ್ಧಪ್ಪಾಜಿ ಮಹಿಮಾ ಮಂಜರಿ :**

ಶ್ರೀ ಸಿ.ರಾಮಚಂದ್ರ ಮೈಸೂರ ಅವರ ಸಂಪಾದಕತ್ವದಲ್ಲಿ 'ಸಿದ್ಧಪ್ಪಾಜಿ ಮಹಿಮಾ ಮಂಜರಿ' ವ್ಯಕ್ತಿಯೊಬ್ಬರ ಮಹಿಮೆಯನ್ನೇ ತಿಳಿಸಲು ಹುಟ್ಟಿದ ವಿಶೇಷ ಧಾರ್ಮಿಕ ಮಾಸಪತ್ರಿಕೆ ಇದಾಗಿದೆ.

ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲೂಕಿನ ಚಿಕ್ಕಲ್ಲೂರು ಗ್ರಾಮದ ಹೊಸಮಠ ಕ್ಷೇತ್ರದಲ್ಲಿರುವ ಶ್ರೀ ಸಿದ್ಧಪ್ಪಾಜಿ ದೇವಸ್ಥಾನ ಟ್ರಸ್ಟ್ ಮೂಲಕ ೧೯೯೫ರಿಂದ ಪ್ರಕಟಗೊಳ್ಳುತ್ತಿರುವ 'ಸಿದ್ಧಪ್ಪಾಜಿ ಮಹಿಮಾ ಮಂಜರಿ' ಎಂಬ ಮಾಸಪತ್ರಿಕೆ ಸಿದ್ಧಪ್ಪಾಜಿ ಅವರ ಪವಾಡಗಳನ್ನು ತಿಳಿಸುವ ಪತ್ರಿಕೆಯಾಗಿದೆ. ಶ್ರೀಕ್ಷೇತ್ರದಲ್ಲಿ ನಿರಂತರ ನಡೆಯುವ ಲಕ್ಷದೀಪೋತ್ಸವ, ಚಂದ್ರ ಮಂಡಲೋತ್ಸವ ಮೊದಲಾದ ಕಾರ್ಯಕ್ರಮಗಳ ಸಮಗ್ರ ವರದಿ ವಾರ್ತೆಗಳು ಇಲ್ಲಿ ಪ್ರಕಟಗೊಂಡಿವೆ. ಪ್ರತಿ ಸಂಚಿಕೆಯಲ್ಲಿ ಒಂದೊಂದು ಮೌಲಿಕ ಸಂಶೋಧನಾತ್ಮಕ ಲೇಖನ ಪ್ರಕಟಗೊಂಡಿವೆ. ಒಟ್ಟು ೩ ಸಂಪುಟಗಳು, ಪ್ರತಿ ಸಂಪುಟದ ೪ ಸಂಚಿಕೆಗಳಲ್ಲಿ ಕೆಲವು ಪತ್ರಿಕೆಗಳನ್ನು ಪಡೆದುಕೊಂಡಿರುತ್ತೇನೆ. ಇದು ಇಂದಿಗೂ ಪ್ರಸಾರವಾಗುವುದನ್ನು ಕಾಣಬಹುದಾಗಿದೆ.

**ವಿಧಾತೃ :**

೨೦೧೦ ಫೆಬ್ರುವರಿಯಿಂದ ಎನ್.ಸಿ. ಛಾಯಾಪತಿ ಅವರ ಸಂಪಾದಕತ್ವದಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿರುವ ವಿಧಾತೃ ಪತ್ರಿಕೆ ತುಂಬ ಮೌಲಿಕ ಸಂಶೋಧನಾತ್ಮಕ ಲೇಖನಗಳನ್ನು ಒಳಗೊಂಡು ಪ್ರಕಟವಾಗುತ್ತಿದೆ. ನನ್ನ ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿಯ ಎಲ್ಲ ಲೇಖನಗಳನ್ನು ಪಟ್ಟಿ ಮಾಡಿಕೊಂಡಿರುವೆ. ಈ ಪತ್ರಿಕೆಯ ಸಂಪುಟಗಳು ೮, ಪ್ರತಿ ಸಂಪುಟಗಳ ೬ ಸಂಚಿಕೆಗಳು ಲಭ್ಯವಾಗಿವೆ.

ಪತ್ರಿಕೆಯ ಮೊದಲ ಸಂಚಿಕೆಯಲ್ಲಿ ಸಂಪಾದಕರಾದ ಎನ್.ಸಿ.ಛಾಯಾಪತಿಯವರು ಪತ್ರಿಕೆಯ ಉದ್ದೇಶಗಳನ್ನು ಹೀಗೆ ವಿವರಿಸುತ್ತಾರೆ:

೧. ಪತ್ರಿಕೆಯಲ್ಲಿ ವೈಶ್ವಕರ್ಮಣ ಸಂಸ್ಕೃತಿ, ಸಾಹಿತ್ಯ ಮತ್ತು ಕಲೆಗೆ ಪ್ರಾಮುಖ್ಯತೆ ನೀಡುವುದು.

೨. ವಿಶ್ವಕರ್ಮ ಸಮಾಜದ ಮುಖವಾಣಿಯಾಗಿ ಸಮಾಜದ ಪ್ರತಿಯೊಂದು ಸಂಘ-ಸಂಸ್ಥೆಗಳ ಕಾರ್ಯ ಚಟುವಟಿಕೆಗಳನ್ನು ವರದಿ ಮಾಡುವುದು.

೩. ಗತಿಸಿ ಹೋಗಿರುವ ಹಾಗೂ ಹಾಲಿ ಇರುವ ನಮ್ಮ ಸಮಾಜದ ವಿದ್ವಾಂಸರು, ಗಣ್ಯರು ಪ್ರತಿಭಾನ್ವಿತರು ಮತ್ತು ಸಮಾಜ ಸೇವಾ ನಿರತ ವ್ಯಕ್ತಿಗಳ ಪರಿಚಯ ನೀಡುವುದು.

೪. ನಮ್ಮ ಧಾರ್ಮಿಕ ಪೀಠಗಳ ಚಟುವಟಿಕೆಗಳನ್ನು ತಿಳಿಸುವುದು.

೫. ಸಮಾಜ ಬಂಧುಗಳಿಗೆ ವಧು-ವರರ ಮಾಹಿತಿ ನೀಡುವುದು.

೬. ಓದುಗರ ಸಕಾರಾತ್ಮಕ ಟೀಕೆ ಟಿಪ್ಪಣಿ ಸಲಹೆಗಳನ್ನು ಪ್ರಕಟಿಸುವುದು.

ಈ ಮೇಲಿನ ತತ್ವಗಳ ಆಧಾರದ ಮೇಲೆ ಪತ್ರಿಕೆಯನ್ನು ಪ್ರಕಟಿಸುವ ತಮ್ಮ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ.

'ವಿಶ್ವಕರ್ಮ ಧರ್ಮ', 'ವ್ಯಕ್ತಿ ಪರಿಚಯ ಮಾಲೆ' ಮೊದಲಾದ ಸ್ಥಿರ ಅಂಕಣಗಳೊಂದಿಗೆ ಮಹತ್ವದ ಸಂಶೋಧನಾತ್ಮ ಲೇಖನಗಳೂ ಇಲ್ಲಿವೆ. 'ಶಿಲ್ಪದ ಮಹಿಮೆ', 'ಕರ್ನಾಟಕದ ಪುರಾತನ

ಹನುಮಂತನ ದೇವಾಲಯಗಳು', 'ಗಣಪತಿಗೇಕೆ ಅಗ್ರಪೂಜೆ', 'ಡಾ.ಎಂ.ಎನ್.ಶ್ರೀನಿವಾಸರ ಬ್ರಾಹ್ಮಣೀಕರ ಅಥವಾ ಸಂಸ್ಕೃತಾನುಕರಣ ಸಿದ್ಧಾಂತದ ಬಗೆಗೆ', 'ವಿಶ್ವಕರ್ಮ ಯೋಗ', 'ವಿಶ್ವಕರ್ಮ ಚರಿತ್ರೆ' ಮುಂತಾದ ಮಹತ್ವದ ಲೇಖನಗಳು ಅಧ್ಯಯನಯೋಗ್ಯವಾಗಿವೆ. ಈ ಪತ್ರಿಕೆಯು ಕೋವಿಡ್-೧೯, ಕೊರೋನಾ ವೈರಸ್‌ನ್ನು ಹರಡದಂತೆ ಹತೋಟಿಯಲ್ಲಿಡಲು ದೇಶವ್ಯಾಪಿ ಲಾಕ್‌ಡೌನ್ ಸಮಯದಲ್ಲಿ ಮೊಟ್ಟ ಮೊದಲ ಬಾರಿಗೆ ಆನ್‌ಲೈನ್ ಪತ್ರಿಕೆಯಾಗಿ ಪ್ರಸಾರವಾದ ಹೆಗ್ಗಳಿಕೆ ಇದಾಗಿದೆ.

**ರೂವಾರಿ :**

ವಿಶ್ವಕರ್ಮ ಸಮಾಜದ ವೈಶಿಷ್ಟ್ಯವಾಗಿರುವ ಕಲೆಯನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಪ್ರಕಟವಾಗುತ್ತಿರುವ ಮಹತ್ವದ ಪತ್ರಿಕೆಯಾಗಿದೆ 'ರೂವಾರಿ'. ನಾಡಿನ ಶಿಲ್ಪಕಲೆಯ ವೈಶಿಷ್ಟ್ಯಗಳನ್ನು ಪರಿಚಯಿಸುವ ಮೌಲಿಕ ಲೇಖನಗಳು ಇಲ್ಲಿ ಪ್ರಕಟಗೊಂಡಿವೆ. ಪ್ರತಿಭಾವಂತ ಕಲಾವಿದರ ಪರಿಚಯ ಮಾಲಿಕೆ ಇಲ್ಲಿದೆ. 'ಕಾನೂನು ನಿಮಗೆ ತಿಳಿದಿರಲಿ', 'ಪದಬಂಧ', 'ರಸಪ್ರಶ್ನೆ' ಎಂಬ ಸ್ಥಿರಾಂಕಣಗಳು ಇಲ್ಲಿ ಪ್ರಕಟವಾಗುತ್ತಿವೆ.

ರೂವಾರಿ ಪತ್ರಿಕೆಯ ಸಂಪಾದಕರಾದ ಬೈಕಾಡಿ ಜನಾರ್ದನ ಆಚಾರಿ ಅವರು ಪ್ರತಿ ತಿಂಗಳು ಸಂಪಾದಕೀಯ ರೂಪದಲ್ಲಿ 'ರೂವಾರಿ ಉವಾಚ' ಎಂಬ ಅಂಕಣವನ್ನು ಬರೆಯುತ್ತ ಬಂದಿದ್ದಾರೆ. ವಿಶ್ವಕರ್ಮ ಸಮಾಜವನ್ನು ಬಡಿದೆಬ್ಬಿಸುವ ಕ್ರಾಂತಿಕಾರಿ ವಿಚಾರಗಳನ್ನು ಇಲ್ಲಿ ಪ್ರತಿಪಾದಿಸುತ್ತ ಬಂದಿದ್ದಾರೆ. ಫೆಬ್ರವರಿ ೨೦೦೫ರ ರೂವಾರಿ ಉವಾಚ ಅಂಕಣದಲ್ಲಿ ಹೀಗೆ ಬರೆಯುತ್ತಾರೆ:

"ವಿಶ್ವಕರ್ಮರು, ಕರಕುಶಲಕರ್ಮಿಗಳು, ಸೂಕ್ಷ್ಮಕುಸುರಿ ಕೆಲಸಗಳಲ್ಲಿ ಇವರು ನಿಷ್ಣಾತರು. ಪೂರ್ಣ ಬೆಳಗಿದವರು ಎಂಬುದರಲ್ಲಿ ಎರಡು ಮಾತಿಲ್ಲ. ಇದು ಇತಿಹಾಸದ ಮಾತು. ಇಂದು ಅವರು ಡೋಲಾಯಮಾನ ಸ್ಥಿತಿಯಲ್ಲಿದ್ದಾರೆ. ವೃತ್ತಿಯಲ್ಲಿ ಭದ್ರತೆ ಇವರಿಗಿಲ್ಲ. ಆಕಾಶದಲ್ಲಿ ಬೆಳ್ಳಿ ರೇಖೆಗಳು ಕಾಣಿಸುತ್ತಿಲ್ಲ. ಕಾರ್ಮೋಡಗಳೇ ಹೆಚ್ಚು. ಇಂದು ಜಾತಿಗನುಗುಣವಾಗಿ ವೃತ್ತಿ, ಕಸಬುಗಳು ಕಣ್ಮರೆಯಾಗಿವೆ. ಚಿನ್ನ, ಬೆಳ್ಳಿ, ಕಬ್ಬಿಣ, ಕಾಷ್ಠಶಿಲ್ಪ ಎರಕ ಶಿಲ್ಪ ಹಾಗೂ ಮೂರ್ತಿಶಿಲ್ಪ- ಈ ಪಂಚಕಸುಬುಗಳಲ್ಲೇ ತಮ್ಮ ಭವಿಷ್ಯವನ್ನು ಹುಡುಕುತ್ತಿದ್ದ ವಿಶ್ವಕರ್ಮರು ಇಂದು ಕಂಗಾಲಾಗಿದ್ದಾರೆ. ಕಾರಣ ಇಷ್ಟೆ. ಬದಲಾಗುತ್ತಿರುವ ವಿದ್ಯಮಾನಗಳಿಗೆ ಅನುಗುಣವಾಗಿ ಹೊಂದಿಕೊಳ್ಳುವ ಸಿದ್ಧತೆಯ ಬಗ್ಗೆ ಅವರೆಂದೂ ಚಿಂತನೆ ನಡೆಸಿದವರಲ್ಲ, ತಲೆ ಕೆಡಿಸಿಕೊಂಡವರೂ ಅಲ್ಲ. ಮೊರಾರ್ಜಿ ದೇಸಾಯಿಯವರು ಕೇಂದ್ರ ಅರ್ಥಸಚಿವರಾಗಿದ್ದಾಗ ಜಾರಿಗೊಳಿಸಿದ 'ಗೋಲ್ಡ್ ಕಂಟ್ರೋಲ್ ಆಕ್ಟ್' ಬಂದಾಗಲೇ ಇವರು ಜಾಗೃತರಾಗಬೇಕಿತ್ತು. ಸಹಕಾರಿ ತತ್ವದ ಆಧಾರದ ಮೇಲೆ ಪಂಚಕಸುಬುಗಳಿಗೆ ಸಂಬಂಧಿಸಿದಂತೆ ವಸ್ತುಗಳ ಉತ್ಪಾದನೆ ಮಾಡಿ ಮಾರುಕಟ್ಟೆಗೆ ಹಾಕಬಹುದಿತ್ತು. ತಾಲೂಕು, ಜಿಲ್ಲಾ ಮಟ್ಟದಲ್ಲಿ ಆತಾತ ಕಸುಬುಗಳ ಮಂದಿ ಒಟ್ಟು ಸೇರಿ ಪಾಲು ಬಂಡವಾಳ ಹಾಕಿ ಈ

ಕರಕುಶಲ ಕೆಲಸಗಳಿಗೆ ಒಂದು ಉದ್ದಿಮೆಯ ರೂಪ ಕೊಟ್ಟಿದ್ದರೆ ವಿದೇಶಗಳಿಗೂ ತಮ್ಮ ಉತ್ಪಾದನೆಗಳನ್ನು ರಫ್ತು ಮಾಡಿ ತಾವು ಕೈ ತುಂಬಾ ಸಂಪಾದಿಸುವುದಲ್ಲದೆ ವಿದೇಶೀ ವಿನಿಮಯವನ್ನು ದೇಶಕ್ಕೆ ತಂದು ಕೊಡಬಹುದಿತ್ತು. ಎಪ್ಪತ್ತರ ದಶಕದ ಆದಿಯಲ್ಲಿ ಮಂಗಳೂರಿನಲ್ಲಿ ವಿಶ್ವಕರ್ಮ ಸಮ್ಮೇಳನ ರಾಜ್ಯಮಟ್ಟದಲ್ಲಿ ನಡೆದಿತ್ತು. ಅದೇ ದಶಕದ ಕೊನೆಯಲ್ಲಿ ಬೆಂಗಳೂರಿನಲ್ಲಿ ಸಮ್ಮೇಳನ ನಡೆಯಿತು. ಸಮ್ಮೇಳನಗಳು ಭರ್ಜರಿಯಾಗಿ ನಡೆದವೇ ಹೊರತು ಸಮ್ಮೇಳನದ ನಿರ್ಣಯಗಳ ಬಗ್ಗೆ ಹೆಚ್ಚು ಕಾರ್ಯಪ್ರವೃತ್ತರಾಗದೇ ಇದ್ದದ್ದು ಸಮ್ಮೇಳನದ ವೈಫಲ್ಯ ಎನ್ನಲೇಬೇಕು. ಆಗಲೇ ಇಲ್ಲ ಎನ್ನುವಂತಿಲ್ಲ. ಎರಡು ಸಹಕಾರಿ ಸಂಸ್ಥೆಗಳು ದ.ಕ.ಜಿಲ್ಲೆಯಲ್ಲಿ ಹಾಗೂ ಇತರ ಜಿಲ್ಲೆಗಳಲ್ಲೂ ಕುಶಲಕರ್ಮಿಗಳ ಸಹಾಯಕ್ಕಾಗಿ ಹುಟ್ಟಿಕೊಂಡವು. ಆದರೆ ವೃತ್ತಿಯ ಬಗ್ಗೆ ಸರಕಾರದ ಗಮನ ಸೆಳೆದದ್ದು ಕೇವಲ ಮೌನ ರೋದನವೇ ಆಗಿ ಹೋಯಿತು.

ಈಗಲೂ ಅಷ್ಟೆ, ಸಮಾವೇಶ-ಸಮ್ಮೇಳನಗಳು ನಡೆಯುತ್ತವೆ. ಮಂತ್ರಿಗಳು, ರಾಜಕಾರಣಿಗಳು ಯಥಾಪ್ರಕಾರ ತಮ್ಮ ಭರವಸೆಗಳ ಮಹಾಪೂರ ಹರಿಸಿ ಬಿಡುತ್ತಾರೆ. ನಂಬಿದ ಜನಕೋಟಿ ಚಪ್ಪಾಳೆ ತಟ್ಟುತ್ತಾರೆ. ಮತ್ತಷ್ಟು ಚಪ್ಪಾಳೆಗಾಗಿ ಮತ್ತಷ್ಟು ಹೊಗಳುವ ರಾಜಕಾರಣಿಗಳು, ಸರಕಾರ ಈ ಅಸಹಾಯಕ ಹಾಗೂ ಅಸಂಘಟಿತ ಕುಶಲಕರ್ಮಿಗಳಿಗಾಗಿ ಏನು ಯೋಜನೆ ರೂಪಿಸಿಕೊಂಡಿದ್ದಾರೆ? ಇಲ್ಲ. ಏಕೆಂದರೆ ಇವರದ್ದು ಓಟ್ ಬ್ಯಾಂಕ್ ಅಲ್ಲ. ಇವರದ್ದು ನಿರ್ಣಾಯಕ ಮತಗಳುಳ್ಳ ಪ್ರಬಲ ಹಾಗೂ ಬಹುಸಂಖ್ಯಾತ ಸಮುದಾಯವೂ ಅಲ್ಲ. ಕುಶಲಕರ್ಮಿಗಳೇ, ಸ್ವಾಮಿ ವಿವೇಕಾನಂದರು ಹೇಳಿದ ಮಾತು 'ನಿನಗೆ ನೀನೇ ರೂವಾರಿ' ಎಂಬುದನ್ನು ಮರೆಯದಿರಿ. ವೃತ್ತಿಗೆ ಸಂಬಂಧಿಸಿದಂತೆ ಸಂಘಟಿತರಾಗಿ ಯೋಜನೆಗಳನ್ನು ರೂಪಿಸಿ, ಹೊಸ ಆಯಾಮಗಳನ್ನು ನೀಡಿ, ಸೃಜನಶೀಲರು ಎಂಬುದಕ್ಕೆ ಸಾಕ್ಷಿಯಾಗಿ ಸ್ಪರ್ಧಾತ್ಮಕ ಜಗತ್ತಿನಲ್ಲಿ ಎದ್ದು ನಿಲ್ಲುವ ಪ್ರಯತ್ನ ಮಾಡಿ. ಪಾರಂಪರಿಕ ಕಸುಬುಗಳಿಗೇ ಜೋತು ಬೀಳದೆ ಹೊಸ ಕ್ಷೇತ್ರಗಳಿಗೂ ಲಗ್ಗೆ ಹಾಕಿ ಎದ್ದು ನಿಲ್ಲಿ. ಪರಿಶ್ರಮಕ್ಕೆ ತಕ್ಕ ಪ್ರತಿಫಲ ಇದ್ದೇ ಇದೆ".[೭]

ಮೇಲಿನ ಸಂಪಾದಕೀಯದಲ್ಲಿ ವಿಶ್ವಕರ್ಮ ಸಮಾಜದ ಸ್ಥಿತಿಗತಿಯ ಜೊತೆಗೆ ಸಮಾಜದಲ್ಲಿ ನಡೆಯುತ್ತಿರುವ ಪ್ರಯತ್ನಗಳು, ಮತ್ತು ಮುಂದೆ ಸಾಗಬೇಕಾದ ದಾರಿಯನ್ನು ಕುರಿತ ಚಿಂತನೆಯಿದೆ. ಒಟ್ಟಾರೆ ಸಮಾಜದ ಅಭಿವೃದ್ಧಿಯೇ ಈ ಪತ್ರಿಕೆಯ ಪ್ರಮುಖ ಧ್ಯೇಯೋದ್ದೇಶವಾಗಿದೆ. 'ಮಹಾಭಾರತದ ನೀತಿ ಸಂಹಿತೆ', 'ಕಲೆಯಲ್ಲಿ ಕಲಾವಸ್ತು', 'ಮಹಾಕವಿ ಕುವೆಂಪು ಪ್ರೀತಿಸಿದ ಕುಪ್ಪಳಿ ಕಾಡು', 'ದೃಶ್ಯ ಕಲೆ ವಿಮರ್ಶೆಯೊಳಗಿನ ತಾತ್ವಿಕ ನಿಲುವು', 'ಕರ್ನಾಟಕದಲ್ಲಿ ಭರತನಾಟ್ಯ' ಮುಂತಾದ ಸಂಶೋಧನಾತ್ಮಕ ಲೇಖನಗಳು ಪ್ರಕಟವಾಗಿವೆ. ಈ ಪತ್ರಿಕೆಯ ಒಟ್ಟು ೪ ಸಂಪುಟಗಳು, ಪ್ರತಿ ಸಂಪುಟದ ೧೦ ಸಂಚಿಕೆಗಳನ್ನೊಳಗೊಂಡು ಪ್ರಕಟವಾಗಿರುವುದು.

**ವಿಶ್ವಬ್ರಾಹ್ಮಣ :**

ಶಿವಮೊಗ್ಗದ ಡಾ. ಎ.ಎಫ್. ಮೋಹನ್‌ರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ವಿಶ್ವಬ್ರಾಹ್ಮಣ' ಎಂಬ ಮಾಸಪತ್ರಿಕೆಯ ಕೆಲವು ಸಂಚಿಕೆಗಳನ್ನು ಲಭ್ಯವಾದವು. ೧೯೯೯ರಿಂದ ಈ ಪತ್ರಿಕೆ ಪ್ರಕಟವಾಗುತ್ತಿದೆ. ಮಲೆನಾಡು ಕರ್ನಾಟಕದ ಭಾಗದಲ್ಲಿ ಜರುಗುವ ವಿಶ್ವಕರ್ಮ ಸಮಾಜದ ಕಾರ್ಯಕ್ರಮಗಳ ವಿವರ ಈ ಪತ್ರಿಕೆಯಿಂದ ನಮಗೆ ಮೊದಲ ಬಾರಿಗೆ ದೊರೆಯುತ್ತವೆ. ವಿಶ್ವಕರ್ಮರ ಧರ್ಮ, ಸಂಸ್ಕೃತಿ, ಸಮಾಜ-ಸಾಹಿತ್ಯ ಕುರಿತು ಅನೇಕ ಸಂಶೋಧನಾತ್ಮಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

ಚಿಕ್ಕ ಚಿಕ್ಕ ಸಂಪಾದಕೀಯಗಳು ಸಮಕಾಲೀನ ಸ್ಥಿತಿಗತಿಗಳನ್ನು ಅತ್ಯಂತ ವಸ್ತುನಿಷ್ಠವಾಗಿ ತಿಳಿಸುತ್ತವೆ. ಇತಿಹಾಸದ ಕಾಲಗರ್ಭದಲ್ಲಿ ನಡೆದು ಹೋದ ಘಟನೆಗಳನ್ನು ಅರಿತುಕೊಳ್ಳಲು ಇವು ಸಹಕಾರಿಯಾಗಿವೆ. ಜನೆವರಿ ೨೦೦೫ರ ಸಂಪಾದಕೀಯ ಹೀಗಿದೆ:

"೨೦೦೪ ಡಿಶಂಬರ್ ೨೬ರಂದು ಸಂಭವಿಸಿದ ಪ್ರಕೃತಿಯ ಪ್ರಕೋಪದಿಂದ ಮಿನಿಜಲ ಪ್ರಳಯವಾಗಿ ಒಂದು ಲಕ್ಷ ಅರವತ್ತು ಸಾವಿರಕ್ಕೂ ಹೆಚ್ಚು ಜನರು ಸಾವಿಗೀಡಾದುದನ್ನು ತಿಳಿದು ಪ್ರತಿಯೊಬ್ಬ ಮಾನವನೂ ಅರಿತುಕೊಳ್ಳಬೇಕಾದುದು, ಜಗತ್ತು ಅಶಾಶ್ವತವೆಂಬ ಕಟು ಸತ್ಯ. ಪ್ರಕೃತಿಯ ಪ್ರಕೋಪಕ್ಕೆ ಅಧರ್ಮವೂ ಕಾರಣ. 'ಧರ್ಮೋ ರಕ್ಷತಿ ರಕ್ಷಿತಃ' ಯಾರು ಧರ್ಮವನ್ನು ರಕ್ಷಿಸುತ್ತಾರೋ ಅವರನ್ನು ಧರ್ಮ ರಕ್ಷಿಸುತ್ತದೆ ಎಂಬುದು ಶೃತಿವಾಣಿ. ಕಾರಣ ನಾವೆಲ್ಲರೂ ಧರ್ಮರಕ್ಷಕರಾಗೋಣ. ಮಿನಿ ಜಲ ಪ್ರಳಯದಿಂದ ಅನೇಕ ಕೋಟ್ಯಾಧೀಶರೂ, ಮೇಧಾವಿಗಳೂ, ವಿಜ್ಞಾನಿಗಳೂ, ಉದ್ಯೋಗಪತಿಗಳೂ, ದಾರ್ಶನಿಕರೂ ಮೊದಲಾದ ಅನೇಕರು ಬೀದಿ ಪಾಲಾಗಿ ಭಿಕ್ಷೆ ಬೇಡುವಂತಾಗಿದೆ. ಪ್ರಭು ವಿಶ್ವಕರ್ಮರು ಜಗತ್ತಿನ ತಂದೆ. ನಾವೆಲ್ಲರೂ ಆತನ ಮಕ್ಕಳು. ಒಬ್ಬರಿಗೊಬ್ಬರು ಸಹಾಯ ಸಹಕಾರ ನೀಡಬೇಕಾದುದು ಕರ್ತವ್ಯ. ಆ ದಿಶೆಯಲ್ಲಿ ಸುನಾಮಿ ಸಂತ್ರಸ್ತರಿಗೆ ಸಹಾಯ ಸಾಂತ್ವನ ನೀಡಿ ಸಹಕರಿಸಬೇಕಾಗಿ ಸವಿನಯ ಪ್ರಾರ್ಥನೆ".[೮]

ಸಂಪಾದಕೀಯ ಅತ್ಯಂತ ಚಿಕ್ಕದಾದರೂ ಹೇಳಿದ ವಿಷಯ ಅತ್ಯಂತ ಕರಾರುವಕ್ಕಾಗಿರುವುದನ್ನು ಕಾಣಬಹುದಾಗಿದೆ. 'ಕಾಳಾಮುಖ ವಿಶ್ವಕರ್ಮರು', 'ಶ್ರೀಮದ್ಭಗವದ್ಗೀತಾ', 'ವೇದಗಳ ಪರಿಚಯ', 'ವಿಶ್ವಬ್ರಾಹ್ಮಣ ಧರ್ಮ' ಮೊದಲಾದ ಮೌಲಿಕ ಸಂಶೋಧನಾತ್ಮಕ ಲೇಖನಗಳು ಇಲ್ಲಿ ಪ್ರಕಟಗೊಂಡಿವೆ. ಈ ಪತ್ರಿಕೆಗಳಲ್ಲಿ ಪ್ರಕಟಗೊಂಡ ಐವತ್ತಕ್ಕೂ ಹೆಚ್ಚು ಸಂಶೋಧನಾತ್ಮಕ ಲೇಖನಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಂಡಿರುವೆ. ಸಂಪುಟ ೪, ಸಂಚಿಕೆ ೧೬ ಲಭ್ಯವಾಗಿವೆ.

**ವಿಶ್ವಕರ್ಮೋದಯ :**

೨೦೦೬ರಿಂದ ಚಿತ್ರದುರ್ಗದಿಂದ ಸಿ.ಅರ್. ಸುರೇಶ್ ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ವಿಶ್ವಕರ್ಮೋದಯ' ಮಾಸಪತ್ರಿಕೆ ಮೌಲಿಕವಾದ ಲೇಖನಗಳನ್ನು ಒಳಗೊಂಡು ಪ್ರಕಟವಾಗುತ್ತಿದೆ.

ವಿಶ್ವಕರ್ಮ ಸಮಾಜದ ಸಮಕಾಲೀನ ಸಮಸ್ಯೆಗಳ ಬಗ್ಗೆ, ಸಮಾಜದ ಅಭಿವೃದ್ಧಿ ಕಾರ್ಯಗಳ ಬಗ್ಗೆ, ವಿಶ್ವಕರ್ಮ ಪ್ರಾಚೀನ ಪರಂಪರೆ ಬಗ್ಗೆ ಇಲ್ಲಿ ಲೇಖನಗಳು ಪ್ರಕಟಗೊಂಡಿವೆ. 'ವಿಶ್ವಕರ್ಮ ಧರ್ಮ', 'ವಿಶ್ವಕರ್ಮ ಧರ್ಮಾಚರಣೆಗಳು', 'ವಿಶ್ವಕರ್ಮದ ಮೂಲ ಕಾಳಾಮುಖರು' ಮುಂತಾದ ಗಂಭೀರ ಸಂಶೋಧನಾತ್ಮಕ ಲೇಖನಗಳು ಇಲ್ಲಿ ಪ್ರಕಟಗೊಂಡಿವೆ.

ಸಂಪಾದಕರಾದ ಸಿ.ಆರ್. ಸುರೇಶ್ ಅವರ ಸಂದರ್ಭೋಚಿತ ಸಂಪಾದಕೀಯ ಬರಹಗಳು ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಿವೆ. ವಿಶ್ವಕರ್ಮ ಸಮಾಜ ದಕ್ಷಿಣ ಮತ್ತು ಉತ್ತರ ಕರ್ನಾಟಕದಲ್ಲಿ ಅನೇಕ ಬೇರೆ ಬೇರೆ ಪಂಥಗಳ ಪ್ರಭಾವಕ್ಕೆ ಒಳಗಾಗಿದ್ದು, ಹೀಗಾಗಿ ವಿಶ್ವಕರ್ಮರು ವೇದಗಳನ್ನು ನಂಬಿದಂತೆ, ಅವೈದಿಕ ಪರಂಪರೆಯ ೧೨ನೇ ಶತಮಾನದ ವಚನಗಳನ್ನು ನಂಬಬೇಕೆಂಬ ಆಶಯ ಅವರದು. ಈ ಹಿನ್ನೆಲೆಯಲ್ಲಿ ಅವರು ಫೆಬ್ರವರಿ ೨೦೦೮ರ ಪತ್ರಿಕೆಗೆ ಬರೆದ ಸಂಪಾದಕೀಯ ಬರಹವನ್ನು ಗಮನಿಸಬಹುದು.

"ವಚನಗಳು ಎಂದಾಕ್ಷಣ ಸರ್ವಜ್ಞ, ಬಸವಣ್ಣನವರು, ಅಕ್ಕಮಹಾದೇವಿ ಮುಂತಾದ ಶರಣರು ಕಣ್ಣೆದುರು ಬರುತ್ತಾರೆ. ಹಾಹೆಯೇ ಆಂಧ್ರಪ್ರದೇಶದಲ್ಲಿ ವೇಮನ ಮಹಾಯೋಗಿಗಳ ವಚನಗಳು ಜನಪ್ರಿಯತೆ ಗಳಿಸಿವೆ. ಇದಕ್ಕೆ ಕಾರಣ ಸಾಹಿತ್ಯದ ತಿರುಳು ಮತ್ತು ಪ್ರಚಾರದ ರೀತಿ. ನಮ್ಮ ವಿಶ್ವಕರ್ಮ ಧರ್ಮದಲ್ಲಿ ಕೇವಲ ವಚನಕಾರರಾಗಿರದೇ ದೈವೀಲೋಕ ಕಲ್ಯಾಣ ಕಾರ್ಯದಲ್ಲೂ ಮುಂಚೂಣಿಯಲ್ಲಿದ್ದರು. ಇವರಲ್ಲಿ ೧೨ನೇ ಶತಮಾನದವರೇ ಹೆಚ್ಚು. ಜಗದ್ಗುರು ಮೌನೇಶ್ವರರು, ಕಿನ್ನರಿ ಬ್ರಹ್ಮಯ್ಯ, ಬಾಚಿ ಕಾಯಕದ ಬಸವಯ್ಯ, ಕಾಳವ್ವೆ, ಹಾವಿನಾಳದ ಕಲ್ಲಯ್ಯ, ಘಟ್ಟಿವಾಳಯ್ಯನವರು ಪ್ರಚಲಿತದಲ್ಲಿರುವವರು. ಇವರಲ್ಲದೇ ಅಪ್ರಚಲಿತದಲ್ಲಿರುವ ಎಷ್ಟೋ ವಿಶ್ವಕರ್ಮ ಸಮಾಜದ ವಚನಕಾರರು ಅಜ್ಞಾತವಸ್ಥೆಯಲ್ಲಿರುವರು. ಅವರ ಮತ್ತು ಅವರುಗಳ ವಚನಗಳನ್ನು ಸಂಶೋಧನೆ ಮೂಲಕ ಬೆಳಕಿಗೆ ತರಬೇಕಾಗಿದೆ. ಇಂದು ನಮ್ಮ ಧರ್ಮದ ವಚನಕಾರರನ್ನು ನಾವು ಮಹಾತ್ಮರು ಧರ್ಮಗುರುಗಳೆಂದು ಆರಾಧಿಸುತ್ತಿದ್ದೇವೆ ವಿನಃ ಅವರ ತತ್ವಗಳ ಸಾರವಾದ ವಚನಗಳನ್ನು ಅಳವಡಿಸಿಕೊಳ್ಳುವಲ್ಲಿ ವಿಫಲರಾಗಿದ್ದೇವೆ. ಇಂದು ನಾವು ಸಂಘಟನೆ, ಏಕತೆ, ಅಭಿವೃದ್ಧಿ ಹಾಗೆಲ್ಲಾ ಕೂಗಾಡುವ ಧನಿಯನ್ನು ೧೨ನೇ ಶತಮಾನದಲ್ಲಿಯೇ ಈ ಬಗ್ಗೆ ಧನಿ ಎತ್ತಿ ನಮ್ಮವರ ಮನೋಧರ್ಮವನ್ನು ಒರೆಗಲ್ಲಿನಲ್ಲಿ ತಿಕ್ಕಿ ನೋಡಬೇಕಾಗಿದೆ.

ನಾವು ವೇದ ಧರ್ಮೀಯರೂ ಹೌದು; ವಚನ ಸಾಹಿತ್ಯ ಪ್ರಧಾನರೂ ಹೌದು ಎಂಬುದಕ್ಕೆ ನಮ್ಮವರು ಬರೆದಿರುವ ವಚನ ಭಂಡಾರವೇ ಸಾಕ್ಷಿ. ಇವುಗಳ ಕಡೆ ಗಮನ ಹರಿಸಿ ಜನಮನದಲ್ಲಿ ತರುವುದು ಅವಶ್ಯ. ಮೌನೇಶ್ವರರ ವಚನಗಳನ್ನು ನಮ್ಮ ಸಾಹಿತಿಗಳು ಸಂಗ್ರಹಿಸಿ ಪ್ರಕಟಿಸುತ್ತಿದ್ದಾರೆ. ಇನ್ನುಳಿದ ವಚನಕಾರರ ವಚನಗಳನ್ನು ಸಹ ಇವುಗಳ ಜೊತೆಯಲ್ಲಿ ಹೆಚ್ಚು ಹೆಚ್ಚು ಸಂಗ್ರಹಿಸಿ, ಪ್ರಕಟಿಸಿ, ಪ್ರಚಾರಗೊಳಿಸಬೇಕಾಗಿದೆ. ನಮ್ಮವರು ಯಾವುದೇ ಆಹ್ವಾನ ಪತ್ರಿಕೆಯ ಮುದ್ರಣ ಸಮಯದಲ್ಲಿ ಕೊನೆಯ ಒಂದು ಪುಟವನ್ನು ವಚನಗಳಿಗಾಗಿ ಮುಡಿಪಿಟ್ಟು ವಿವಿಧ ವಚನಗಳನ್ನು

ಪ್ರಕಟಿಸುವ ಸುವ್ಯವಸ್ಥೆ ಬರಬೇಕಾಗಿದೆ. ಅಲ್ಲದೇ ಧಾರ್ಮಿಕ ಸಭೆ ಸಮಾರಂಭಗಳಲ್ಲಿ ವಚನ ವಾಚನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಪ್ರಚಾರದ ಸೂಕ್ತ ಪ್ರಕವಾಗಿದೆ”.[೯]

ಹೀಗೆ ಸಮನ್ವಯ ಸಮಾಜದ ನಿರ್ಮಾಣಕ್ಕೆ ಪತ್ರಿಕೆಯಲ್ಲಿ ಪ್ರಕಟವಾದ ಅನೇಕ ಲೇಖನಗಳು ಸಾಕ್ಷಿಯಾಗಿವೆ. ಮುಖ್ಯವಾಗಿ ಮೌನೇಶ್ವರರ ವಚನಧಾರೆಯ ಅನೇಕ ಲೇಖನಗಳು ಈ ಪತ್ರಿಕೆಯ ಸಂಚಿಕೆಗಳಲ್ಲಿ ಪ್ರಕಟವಾಗಿವೆ. ಈ ಪತ್ರಿಕೆಯು ಒಟ್ಟು ೧೨ ಸಂಪುಟಗಳು ಪ್ರತಿ ಸಂಪುಟದ ೧೧ ಸಂಚಿಕೆಗಳನ್ನು ಒಳಗೊಂಡು ಪ್ರಸಾರವಾಗುತ್ತಿದೆ. ಇದರಲ್ಲಿ ಕೆಲವು ಲಭ್ಯವಾಗಿವೆ.

**ಆತ್ಮೀಯ ಬೋಧಕ :**

ಪ್ರಾರಂಭದಲ್ಲಿ ಪ್ರಬೋಧಕ ಎಂಬ ಹೆಸರಿನಿಂದ ಪ್ರಕಟವಾಗುತ್ತಿದ್ದ ಈ ಮಾಸಪತ್ರಿಕೆ ಈಗ ‘ಆತ್ಮೀಯ ಬೋಧಕ’ ಎಂಬ ಹೆಸರಿನಿಂದ ಪ್ರಕಟಗೊಳ್ಳುತ್ತಿದೆ. ಈ ಪತ್ರಿಕೆಯ ಸಂಪಾದಕೀಯಗಳು ತುಂಬ ಅರ್ಥಪೂರ್ಣವಾಗಿವೆ. ವಿಶ್ವಕರ್ಮ ಸಮಾಜದ ವಿವಿಧ ಸಮಸ್ಯೆಗಳನ್ನು ಕುರಿತು ಸಂಪಾದಕೀಯದಲ್ಲಿ ವಿಶ್ಲೇಷಿಸಲಾಗಿದೆ. ಸಂಶೋಧನಾತ್ಮಕ ಲೇಖನಗಳು ಇಲ್ಲಿ ಪ್ರಕಟವಾಗದಿದ್ದರೂ ವಿಶ್ವಕರ್ಮ ಸಮಾಜದ ವಿವಿಧ ಕಾರ್ಯಕ್ರಮಗಳ ವರದಿಗಳು ಪ್ರಕಟಗೊಂಡಿವೆ.

ಪ್ರಧಾನ ಸಂಪಾದಕರಾದ ಮಂಜುನಾಥ ಆಚಾರ್ಯ ಅವರು ವಿಶ್ವಕರ್ಮ ಸಮಾಜದ ಉನ್ನತಿಗಾಗಿ ಚಿಂತಿಸಿ ಬರೆದ ಅನೇಕ ಚಿಂತನಪರ ಆಲೊಚನೆಗಳಿವೆ. ಕೇವಲ ವಿಶ್ವಕರ್ಮ ಸಮಾಜದ ಹಿತಚಿಂತನೆ ಮಾತ್ರವಲ್ಲದೆ, ಒಟ್ಟು ಮಾನವಕುಲದ ಸಮಕಾಲೀನ ಸಮಸ್ಯೆಗಳ ಮೇಲೆಯೂ ಅವರು ಬೆಳಕು ಚೆಲ್ಲುವ ಕೆಲಸ ಮಾಡಿದ್ದಾರೆ. ಉದಾ: ಡಿಶಂಬರ ೨೦೦೯ರ ಸಂಚಿಕೆಯ ಸಂಪಾದಕೀಯದಲ್ಲಿ ಹದಗೆಡುತ್ತಿರುವ ಜನಸಾಮಾನ್ಯರ ಆರ್ಥಿಕ ಪರಿಸ್ಥಿತಿ ಕುರಿತು ತುಂಬ ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ:

“ಲಂಗು ಲಂಗಾಮಿಲ್ಲದ ಬೆಲೆ ಏರಿಕೆ, ಹಣದುಬ್ಬರ, ಆಕಾಶಮುಖವಾಗಿ ಒಂದೇ ಸಮನೆ ಏರುತ್ತಿರುವ ಹಳದಿ ಲೋಹ ಚಿನ್ನದ ಬೆಲೆ ಜನಸಾಮಾನ್ಯರ ಆರ್ಥಿಕ ಸ್ಥಿತಿಗತಿಯನ್ನು ತುಂಬಾ ಚಿಂತಾಜನಕ ಪರಿಸ್ಥಿತಿಗೆ ತಲುಪಿಸಿದೆ. ಒಂದೆಡೆ ಬದುಕಲು ಬೇಕಾದ ಆಹಾರ, ದವಸ ಧಾನ್ಯಗಳು ಮತ್ತೊಂದೆಡೆ ಸಂಸಾರ ಬಂಧನದ ಅನಿವಾರ್ಯ ಚಿನ್ನ ಇನ್ನೊಂದೆಡೆ ಜನಸಾಮಾನ್ಯರು ನೆಲೆ ನಿಲ್ಲಲು ಅಗತ್ಯವಾದ ಸೂರಿನಡಿಯ ಭೂಮಿ ಮೂರೂ ಕೈಗೆ ಎಟುಕುವ ವ್ಯವಸ್ಥೆಯಲ್ಲಿ ಇದ್ದರೇನೆ ಮನುಷ್ಯ ಮನುಷ್ಯನಾಗಿ ಬದುಕಲು ಸಾದ್ಯ. ಇಲ್ಲದಿದ್ದರೆ ಆತನ ಪರಿಸ್ಥಿತಿಯನ್ನು ಕೇಳುವುದೇ ಸಾದ್ಯವಿಲ್ಲ”.[೧೦] ಹೀಗೆ ಮನುಷ್ಯಕುಲದ ಅನೇಕ ಸಮಸ್ಯೆಗಳ ಬಗ್ಗೆ ಬರೆದು ಜಾಗೃತಿಯನ್ನುಂಟು ಮಾಡಲು ಪ್ರಯತ್ನಿಸಿರುವುದು ಗಮನಾರ್ಹವಾದುದು. ಈ ಪತ್ರಿಕೆಯ ೬ ಸಂಪುಟಗಳು. ಪ್ರತಿ ಸಂಪುಟದ ೧೦ ಸಂಚಿಕೆಗಳಿಂದ ಕರಾವಳಿ ಕರ್ನಾಟಕದಿಂದ ಪ್ರಕಟವಾಗುತ್ತ ಬಂದಿದೆ.

ವಿಶ್ವಕರ್ಮ ಕಲಾ :

೧೯೮೭ರಿಂದ ಪ್ರಕಟವಾಗುತ್ತಿರುವ ವಿಶ್ವಕರ್ಮ ಕಲಾ ಪತ್ರಿಕೆಯು ಕೇವಲ ೪೮ ಪುಟಗಳ ಗಾತ್ರವನ್ನು ಹೊಂದಿದ್ದರೂ ವಿಶ್ವಕರ್ಮ ಸಮಾಜದ ಒಟ್ಟು ನೋಟವನ್ನು ನೀಡುವಲ್ಲಿ ಸಫಲವಾಗಿದೆ. ವಿಶೇಷವಾಗಿ ತಿಂತಿಣಿ ಮೌನೇಶ್ವರರ ಜೀವನ ಹಾಗೂ ವಚನಗಳ ಸಾಹಿತ್ಯದ ಮೇಲೆ ಬೆಳಕು ಚೆಲ್ಲುವ ಅನೇಕ ಲೇಖನಗಳು ಇಲ್ಲಿ ಪ್ರಕಟಗೊಂಡಿವೆ. ಕುಶಲಕರ್ಮಿಗಳ ಸ್ಥಿತಿಗತಿ ಕುರಿತು, ವಿಶ್ವಕರ್ಮ ಧಾರ್ಮಿಕ ಕ್ಷೇತ್ರಗಳ ಕುರಿತು ಮಾಹಿತಿಪೂರ್ಣ ಲೇಖನಗಳು ಇಲ್ಲಿ ಪ್ರಕಟಗೊಂಡಿವೆ. ಈ ಪತ್ರಿಕೆಯ ಕೆಲವು ಸಂಚಿಕೆಗಳಲ್ಲಿ ಅಡಕವಾಗಿರುವ ಮಹತ್ವದ ಲೇಖನಗಳನ್ನು ನನ್ನ ಅಧ್ಯಯನದಲ್ಲಿ ಬಳಸಿರುವೆ.

೨೧ ಮೇ ೨೦೦೦ರಲ್ಲಿ ಬೆಂಗಳೂರಿನಲ್ಲಿ ನಡೆಯಲಿದ್ದ ಪ್ರಥಮ ವಿಶ್ವಕರ್ಮ ಮಹಿಳಾ ಸಮ್ಮೇಳನದ ಕುರಿತು ಸಂಪಾದಕೀಯದಲ್ಲಿ ಅರ್ಥಪೂರ್ಣ ಮಾಹಿತಿ ದಾಖಲಿಸಿದ್ದಾರೆ. "ಕರ್ನಾಟಕ ರಾಜ್ಯ ವಿಶ್ವಕರ್ಮ ಮಹಿಳಾ ಸಮ್ಮೇಳನ ಪ್ರಥಮ ಬಾರಿಗೆ ಬೆಂಗಳೂರಲ್ಲಿ ಮೇ ೨೧ ಮತ್ತು ೨೨ರಂದು ನಡೆಯಲಿದ್ದು, ಎಲ್ಲ ಜಿಲ್ಲೆ ಹಾಗೂ ನಗರದ ಅನೇಕ ಮಹಿಳಾ ಸಂಘ ಪ್ರಮುಖರುಗಳು ಒಟ್ಟುಗೂಡಿ ಚರ್ಚಿಸಿ, ಒಟ್ಟಾರೆ ನಮ್ಮ ಜನಾಂಗಕ್ಕೆ ಹಾಗೂ ಮಹಿಳೆಯರಿಗೆ ಆಡಳಿತ, ವಿದ್ಯಾಕ್ಷೇತ್ರಗಳಲ್ಲಿ ಸೂಕ್ತ ಪ್ರಾತಿನಿಧ್ಯ ಒದಗಿಸಲು ಮುಖ್ಯಮಂತ್ರಿಗಳು ಮತ್ತು ಪ್ರಧಾನ ಮಂತ್ರಿಗಳಿಗೂ ಮನವಿ ಸಲ್ಲಿಸಲಿರುವ ಕಾರ್ಯ ಸ್ತುತ್ಯವಾದುದು. ಪ್ರಸ್ತುತ ರಾಜ್ಯದ ಒಟ್ಟು ಜನಸಂಖ್ಯೆ ಅಂದಾಜು ೫.೫. ಕೋಟಿಯಲ್ಲಿ ವಿಶ್ವಕರ್ಮರು ೨,೨೪, ೩೨೦ (೦.೨೨ಕೋಟಿ) ಇದ್ದು ಶೇ.೪.೨ ಇರುತ್ತೇವೆ. ಆದರೆ ರಾಜ್ಯ ಆಡಳಿತ ಹಾಗೂ ಪ್ರಜೋಪಯೋಗಿ ಅಭಿವೃದ್ಧಿ ಸಮಿತಿಗಳಲ್ಲಿ ನಮ್ಮ ಜನಾಂಗದ ಪ್ರತಿನಿಧಿತ್ವ ಇಲ್ಲದೇ ಯಾವುದೇ ಉದ್ಯೋಗ ಆರ್ಥಿಕಾಭಿವೃದ್ಧಿಗಳಿಗೆ ಅವಕಾಶಗಳೇ ಸಿಕ್ಕದೇ ಜನಾಂಗದ ಯುವಪೀಳಿಗೆ ವಿದ್ಯೆ, ಉದ್ಯೋಗ ಹಾಗೂ ಆರ್ಥಿಕ ನೆರವುಗಳಲ್ಲಿ ವಂಚಿತರಾಗಿ ಇತರೇ ಜನಾಂಗಗಳ ಪ್ರಮಾಣದಂತೆ ಮುಂದುವರಿಯುತ್ತಿಲ್ಲ. ಪರಿಸ್ಥಿತಿ ಹೀಗಿರುವಲ್ಲಿ ಅತೀ ಹಿಂದುಳಿದವರ ಹಾಗೂ ವಿಧಾನಸಭೆ ಲೋಕಸಭೆ ರಾಜ್ಯಸಭೆ ಪರಿಷತ್ತುಗಳು ಮತ್ತು ಅನೇಕ ಆಯೋಗಗಳಲ್ಲಿ ಪ್ರತಿನಿಧಿತ್ವವಿಲ್ಲದ ಜನಾಂಗ 'ವಿಶ್ವಕರ್ಮ'ರೆಂಬುದನ್ನು ಆಡಳಿತಾರೂಢ ಪ್ರಮುಖರಿಗೆ ಮನವರಿಕೆ ಮಾಡಿಕೊಟ್ಟು ಜನಸಂಖ್ಯಾನುಗುಣ ಪ್ರಮಾಣದಲ್ಲಿ ಈ ಎಲ್ಲ ಕ್ಷೇತ್ರಗಳಲ್ಲಿ ಪ್ರಾತಿನಿಧ್ಯ ಗಳಿಸಲು ಸಮ್ಮೇಳನದಲ್ಲಿ ಸೂಕ್ತ ನಿರ್ಧಾರ ತೆಗೆದುಕೊಂಡು ಸರ್ಕಾರಕ್ಕೆ ಮನವೊಲಿಸಲು ಸಾಧಿಸಲು ಒಗ್ಗಟ್ಟಿನಿಂದ ಮುಂದುವರಿಯೋಣ".[೧೧]

ಹೀಗೆ ವಿಶ್ವಕರ್ಮ ಸಮಾಜದ ಅಭಿವೃದ್ಧಿಗಾಗಿ ನಿರಂತರ ಇಂಥ ಆಲೋಚನೆಗಳ ಸಂಪಾದಕೀಯ, ಲೇಖನಗಳನ್ನು ಇಲ್ಲಿ ಪ್ರಕಟಿಸುತ್ತ ಬರಲಾಗಿದೆ. ಅಲ್ಲದೇ ಇಡೀ ರಾಜ್ಯದ ತುಂಬ ಜರುಗಿದ ವಿಶ್ವಕರ್ಮ ಸಮಾಜದ ಅನೇಕ ಮಹತ್ವದ ಕಾರ್ಯಕ್ರಮಗಳ ವರದಿಗಳು ಈ ಪತ್ರಿಕೆಯಲ್ಲಿ ಕಾಲಕಾಲಕ್ಕೆ ಪ್ರಕಟಗೊಳ್ಳುತ್ತ ಬಂದಿವೆ. ಈ ಪತ್ರಿಕೆಯ ೩೨ ಸಂಪುಗಳು. ಪ್ರತಿ ಸಂಪುಟವು ೮ ಸಂಚಿಕೆಗಳನ್ನೊಳಗೊಂಡು ಪ್ರಸಾರವಾಗುತ್ತಿದೆ. ಇದರಲ್ಲಿ ಕೆಲವು ಪತ್ರಿಕೆಗಳು ಮಾತ್ರ ಲಭ್ಯವಾಗಿರುತ್ತವೆ.

**ಕಾಳಿಕಾದೇವಿ ವಾಣಿ :**

೨೦೦೯ರಿಂದ ಪ್ರಕಟವಾಗುತ್ತಿರುವ ಈ ಪತ್ರಿಕೆಯಲ್ಲಿ ಅನೇಕ ಸಂಶೋಧನಾತ್ಮಕ ಲೇಖನಗಳು ಪ್ರಕಟಗೊಳ್ಳುತ್ತಿವೆ. 'ವಿಶ್ವಕರ್ಮ' ಉಗಮ ವಿಕಾಸದ ಕುರಿತು, ಶಿರಸಂಗಿ ಕಾಳಿಕಾಕ್ಷೇತ್ರ, ತಿಂಥಣಿ ಮೌನೇಶ್ವರ ಕ್ಷೇತ್ರ ಮತ್ತು ವಿಶ್ವಕರ್ಮ ಮಠಗಳಲ್ಲಿ ನಡೆಯುವ ಸಮಗ್ರ ಕಾರ್ಯಕ್ರಮಗಳ ವಿವರ ಇಲ್ಲಿ ದೊರಕುತ್ತವೆ. 'ಸಂಸ್ಕೃತ ಸಾಹಿತ್ಯದಲ್ಲಿ ದೀಪದ ಪರಿಕಲ್ಪನೆ', 'ವಿಶ್ವಕರ್ಮ ಧರ್ಮ' ಪ್ರಮುಖ ತ್ರಿ-ಶಿಲ್ಪಾಚಾರ್ಯರು', 'ಯಾರು ಈ ವಿಶ್ವಕರ್ಮ', 'ಧರ್ಮ ಮತ್ತು ವ್ರತನಿಯಮಗಳು', 'ಶಿರಸಂಗಿ : ಪೌರಾಣಿಕ ಐತಿಹ್ಯ' ಮೊದಲಾದ ಸಂಶೋಧನಾತ್ಮಕ ಲೇಖನಗಳು ಪ್ರಕಟಗೊಂಡಿವೆ. ಪತ್ರಿಕೆಯ ಟ್ಯಾಗ್‌ಲೈನ್ ವಿಶ್ವಕರ್ಮರ ಧಾರ್ಮಿಕ ಮತ್ತು ಸಾಮಾಜಿಕ ಮಾಸಪತ್ರಿಕೆ ಎಂದಿದೆ. ಸಮಾಜದ ಆಗು ಹೋಗುಗಳನ್ನು ದಾಖಲಿಸಿರುವುದು ಇದರ ಪ್ರಮುಖ ಉದ್ದೇಶವಾಗಿದೆ. ಈ ಪತ್ರಿಕೆಯ ಒಟ್ಟು ೮ ಸಂಪುಟಗಳು, ಪ್ರತಿ ಸಂಪುಟಗಳು ೧೨ ಸಂಚಿಕೆಗಳನ್ನೊಳಗೊಂಡಿದ್ದು, ಅವುಗಳಲ್ಲಿ ಕೆಲವು ಲಭ್ಯವಾಗಿವೆ.

**ವಿಶ್ವಕರ್ಮ ವಿಕಾಸವಾಣಿ :**

ರಾಷ್ಟ್ರ ಸಂತ ಶ್ರೀ ಶಿವಾತ್ಮಾನಂದ ಸರಸ್ವತಿ ಸ್ವಾಮಿಜಿ, ಜ್ಞಾನಾನಂದ ಆಶ್ರಮ, ನಂದಿಗ್ರಾಮ, ಚಿಕ್ಕಬಳ್ಳಾಪುರ ಇವರ ಗೌರವ ಸಂಪಾದಕತ್ವದಲ್ಲಿ, ಶ್ರೀ ಸಿ.ಪಿ.ಮಾಯಾಚಾರಿ ಅವರ ಪ್ರಧಾನ ಸಂಪಾದನೆಯಲ್ಲಿ 'ವಿಶ್ವಕರ್ಮ ವಿಕಾಸವಾಣಿ' ಎಂಬ ಮಾಸಪತ್ರಿಕೆಯು ಮಾರ್ಚ ೨೦೧೭ರಿಂದ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಶಿರಸಂಗಿಯ ಶ್ರೀ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆಯಿಂದ ಪ್ರಕಟಗೊಳ್ಳುತ್ತಿದೆ. ಈ ಪತ್ರಿಕೆಯಲ್ಲಿ ಸಂಪಾದಕೀಯ, ವಿಶ್ವಕರ್ಮ ಪುಣ್ಯಕ್ಷೇತ್ರಗಳ ಪರಿಚಯ, ವಿಶ್ವಕರ್ಮ ಮಹಾಪುರುಷರ ಜೀವನ ಚರಿತ್ರೆಗಳು, ವೈಶ್ವಕರ್ಮಣ ಸಾಹಿತ್ಯ ಬೆಳೆದು ಬಂದ ದಾರಿ, ಪ್ರಾತಃಸ್ಮರಣೀಯರು, ಕಿರಿಯರ ಪುಟ, ಇದು ನಿಮಗೆ ತಿಳಿದಿರಲಿ ಮೊದಲಾದ ಸ್ಥಿರ ಅಂಕಣಗಳ ಜೊತೆಗೆ ವಿಶ್ವಕರ್ಮ ಜನಾಂಗಕ್ಕೆ ಸಂಬಂಧಿಸಿದ ಸಂಶೋಧನಾತ್ಮಕ ಮೌಲಿಕ ಲೇಖನಗಳು ಇಲ್ಲಿ ಪ್ರಕಟಗೊಳ್ಳುತ್ತಿವೆ. ಕಳೆದ ವರ್ಷ ಪ್ರಾರಂಭವಾಗಿರುವ ಈ ಪತ್ರಿಕೆಯ ಒಟ್ಟು ಪರಿಣಾಮವನ್ನು ಇನ್ನೂ ಕಾದು ನೋಡಬೇಕಾಗಿದೆ. ಈ ಪತ್ರಿಕೆಯು ೩ ಸಂಪುಟಗಳು, ೧೮ ಸಂಚಿಕೆಗಳನ್ನೊಳಗೊಂಡು ಪ್ರಕಟಗೊಳ್ಳುತ್ತಿದೆ.

**ವಿಶ್ವ ಬಂಧು :**

ಶಿವಮೊಗ್ಗದಿಂದ ಡಾ.ಎ.ಎಫ್.ಮೋಹನರಾವ್ ಅವರ ಸಂಪಾದಕತ್ವದಲ್ಲಿ ವಿಶ್ವ 'ಬಂಧು' ತ್ರೈಮಾಸಿಕ ಪತ್ರಿಕೆಯು ಪ್ರಕಟವಾಗುತ್ತಿತ್ತು. ಇದರಲ್ಲಿ ಮೌಲಿಕವಾದ ಲೇಖನಗಳು ಪ್ರಕಟವಾಗಿವೆ. ವಿಶ್ವಕರ್ಮ ಸಮಾಜದ ಸಮಕಾಲೀನ ಸಮಸ್ಯೆಗಳ ಬಗ್ಗೆ, ಸಮಾಜದ ಅಭಿವೃದ್ಧಿ ಕಾರ್ಯಗಳ ಬಗ್ಗೆ, ವಿಶ್ವಕರ್ಮ ಪ್ರಾಚೀನ ಪರಂಪರೆ ಬಗ್ಗೆ ಇಲ್ಲಿ ಲೇಖನಗಳು ಪ್ರಕಟಗೊಂಡಿವೆ. 'ವಿಶ್ವಕರ್ಮ

ಧರ್ಮ', 'ವಿಶ್ವಕರ್ಮ ಧರ್ಮಾಚರಣೆಗಳು', 'ವಿಶ್ವಕರ್ಮದ ಮೂಲ ಕಾಳಾಮುಖರು' ಮುಂತಾದ ಧಾರ್ಮಿಕ ಲೇಖನಗಳು ಇಲ್ಲಿ ಪ್ರಕಟಗೊಂಡಿವೆ. ಈ ಪತ್ರಿಕೆಯು ೧ ಸಂಪುಟ ಹಾಗೂ ೩ ಸಂಚಿಕೆಗಳು ಲಭ್ಯವಾಗಿವೆ.

**ಸಹಚಿಂತನ :**

ಶ್ರೀ ಬಿ.ಎ. ಆಚಾರ್ಯ ಅವರ ಪ್ರಧಾನ ಸಂಪಾದಕತ್ವದಲ್ಲಿ 'ಸಹಚಿಂತನ' ಎಂಬ ರಾಷ್ಟ್ರೀಯ ಕನ್ನಡ ಮಾಸಪತ್ರಿಕೆಯು ಉಡುಪಿ ಜಿಲ್ಲೆಯ ಮಣಿಪಾಲದಿಂದ ಪ್ರಕಟವಾಗುತ್ತಿದೆ. ಈ ಪತ್ರಿಕೆಯು ೧೯೮೭ರಲ್ಲಿ ಕರಾವಳಿ ಕರ್ನಾಟಕದ ವಿಶ್ವಕರ್ಮ ಸಮುದಾಯದ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಷಯಗಳಿಗೆ ಸಂಬಂಧಿಸಿದ ಲೇಖನಗಳನ್ನು ದಾಖಲಿಸುತ್ತ ಬಂದಿದೆ. ಈ ಪತ್ರಿಕೆಯು ನಾಲ್ಕು ದಶಕಗಳ ಅವಧಿಯ ಸಂಪಾಸಕೀಯಗಳನ್ನು ಅವಲೋಕಿಸಿದರೆ, ರಾಷ್ಟ್ರ ಮತ್ತು ರಾಜ್ಯಗಳ ಪ್ರಗತಿಪಥ ವಿಚಾರಗಳನ್ನು ಹಂಚುತ್ತ ಬಂದಿದೆ ಅಂದರೆ, ವಿಶ್ವಕರ್ಮ ಸಮುದಾಯಕ್ಕಷ್ಟೇ ಸೀಮಿತವಾಗದೇ ಸಮಗ್ರ ಪ್ರಾದೇಶಿಕ ವಿಷಯಗಳಿಗೆ ಆಧ್ಯತೆ ನೀಡಿರುವುದು ಈ ಪತ್ರಿಕೆಯ ಹೆಗ್ಗಳಿಕೆ.

ಈ ಪತ್ರಿಕೆಯು ವಿಶ್ವಕರ್ಮ ಮಹಾಪುರುಷರ ಜೀವನ ಚರಿತ್ರೆಗಳು, ವೈಶ್ವಕರ್ಮಣ ಸಾಹಿತ್ಯ ಬೆಳೆದು ಬಂದ ದಾರಿ, ಪ್ರಾತಃಸ್ಮರಣೀಯರು, ಶ್ರೀವಾಣಿ, ನೀವೆನಂತಿರೀ, ಪೌರಾಣಿಕ ಬಾಲಸಿರಿ, ಮನಸ್ಸು ಮಲ್ಲಿಗೆ, ಶರೀರದ ಚಮತ್ಕಾರಗಳು, ಮಹಿಳಾ ಅಂಕಣ, ಆರೋಗ್ಯಕರ ಜೀವನ ಶೈಲಿ ಮತ್ತು ಸುದ್ದಿ ಸಮಾಚಾರಗಳನ್ನು ಮುಂತಾದ ಮೌಲಿಕ ಲೇಖನಗಳು ಪ್ರಕಟಗೊಳ್ಳುತ್ತಿವೆ. "ಪ್ರಜಾಪ್ರಭುತ್ವದಲ್ಲಿ ರಾಷ್ಟ್ರಕ್ಕೆ ಸಂವಿಧಾನವೇ ಆಧಾರ. ಅದರಡಿಯಲ್ಲಿ ರಾಜ್ಯಾಂಗ, ನ್ಯಾಯಾಂಗ, ಕಾರ್ಯ್ಯಾಂಗ, ಕಾರ್ಯನಿರ್ವಹಿಸಬೇಕು. ಸಂವಿಧಾನಕ್ಕೆ ತಿದ್ದುಪಡಿ ಮಾಡುವಾಗಲೂ ಅದರ ಮೂಲ ಆಶಯಕ್ಕೆ ಧಕ್ಕೆಯಾಗದಂತೆ ನೋಡಿಕೊಳ್ಳಬೇಕು. ಸಾಮಾನ್ಯ ಪ್ರಜೆಗಳಿಗೂ ಸಂವಿಧಾನದ ಮುಖ್ಯ ವಿಷಯಗಳ ಪರಿಜ್ಞಾನ ಬೇಕು. ಅವರೆಲ್ಲರೂ ಅದಕ್ಕೆ ಬದ್ಧರಾಗಿರಬೇಕು. ನಮ್ಮ ದೇಶದಲ್ಲಿ ಶ್ರೀ ಸಾಮಾನ್ಯರಿಗೆ ನ್ಯಾಯಪಥದಲ್ಲಿ ಹೆಚ್ಚು ಭರವಸೆ".

"ಭಾರತದ ಸುಪ್ರೀಂ ಕೋರ್ಟ್ ಈ ವರ್ಷ ಕೆಲವು ಭಾವನಾತ್ಮಕ, ವಿವಾದಾತ್ಮಕ ವಿಚಾರಗಳಿಗೆ ಸಂಬಂಧಪಟ್ಟ ಐತಿಹಾಸಿಕ ತೀರ್ಪು ನೀಡಿದೆ. 'ಸಲಿಂಗ ಸಖ್ಯ ಅಪರಾಧವಲ್ಲ; ನೈಸರ್ಗಿಕ', 'ವಿವಾಹೇತರ ಸಂಬಂಧ ಕಾನೂನು ಬಾಹಿರ ಅಲ್ಲ' ಹಾಗೂ 'ಶಬರಿಮಲೆ ದೇವಸ್ಥಾನಕ್ಕೆ ಎಲ್ಲಾ ವಯಸ್ಸಿನ ಮಹಿಳೆಯರಿಗೆ ಪ್ರವೇಶಕ್ಕೆ ಅವಕಾಶ' ಈ ಮೂರು ಪ್ರಮುಖವಾದವುಗಳು. ಸುಪ್ರೀಂ ಕೋರ್ಟು ಸಂಪ್ರದಾಯವಾದಿಗಳಿಗೆ ಇರುಸು ಮುರುಸು ತಂದಿರುವುದು ಸಹಜ. 'ನೈತಿಕ ಅಧಃಪತನಕ್ಕೆ ಹೆದ್ದಾರಿ' ಎಂದು ಸಮುದಾಯದ ಹಲವರು ಆಕ್ರೋಶ ವ್ಯಕ್ತಪಡಿಸಿರುವುದು ಗಮನಾರ್ಹ".

“ಮೂಡಯಬಿದರಿಯಲ್ಲಿ ಜರುಗಿದ ಆಳ್ವಸ್ ನುಡಿಸಿರಿ ೨೦೧೮ಇದರ ಸರ್ವಾಧ್ಯಕ್ಷರಾದ ಡಾ.ಮಲ್ಲಿಕಾ ಎಸ್. ಘಂಟಿಯವರು ಆಡಿದ ‘ಬಹುತ್ವವನ್ನು ಒಪ್ಪಿಕೊಂಡಿರುವ ಸೌಹಾರ್ದಕ್ಕೆ ಹೆಸರಾಗಿರುವ ಕರಾವಳಿಯ ನೆಲದಲ್ಲಿ ಸಂಘರ್ಷಗಳು ಹೆಚ್ಚಾಗುತ್ತಿರುವುದು ಆತಂಕದಾಯಕ’ ಇದು ಚಿಂತನಯೋಗ್ಯ”[೧೨] ಎಂಬ ಸಂಪಾದಕೀಯ ವಿಚಾರ ಪ್ರಸ್ತುತವೆನಿಸುತ್ತದೆ. ೧೯೮೭ರಿಂದ ೧೨ ಸಂಪುಟಗಳು, ಪ್ರತಿ ಸಂಪುಟದ ೧೨ ಸಂಚಿಕೆಗಳನ್ನೊಳಗೊಂಡು ಮನಿಪಾಲದಿಂದ ಪ್ರಕಟಗೊಳ್ಳುತ್ತಿದೆ.

**ಋಷಿಸ್ವರಂ :**

ಪರಮಪೂಜ್ಯ ಜಗದ್ಗುರು ಅಷ್ಟೋತ್ತರಶತಶ್ರೀ ಕಾಳಹಸ್ತೇಂದ್ರ ಸರಸ್ವತಿ ಮಹಾಸ್ವಾಮಿಗಳವರ ಪೀಠ, ಕಟಪಾಡಿ ಇವರ ಪರಮ ಸಂರಕ್ಷತೆಯಲ್ಲಿ ‘ಋಷಿಸ್ವರಂ’ ಎಂಬ ತ್ರೈಮಾಸಿಕ ಪತ್ರಿಕೆಯಾಗಿ ಪ್ರಕಟವಾಗುತ್ತಿದೆ. ಇದರ ಸಂಪಾದಕರಾಗಿ ಶ್ರೀ ವೈ. ಧರ್ಮೇಂದ್ರ ಆಚಾರ್ಯ ಕಾಸರಗೋಡು ಇವರು ಕಾರ್ಯನಿರ್ವಹಿಸುತ್ತಾರೆ. ಶೈಕ್ಷಣಿಕ, ವೈದಿಕ, ಶಿಲ್ಪಕಲೆಗಳ, ಸಂವರ್ಧನೆ ಏಕೀಕೃತ, ಸಸಕ್ತ, ಸಂಮೃದ್ಧಿ ಸಮಾಜ ನಿರ್ಮಾಣ ಈ ಪತ್ರಿಕೆಯ ಪ್ರಮುಖ ಆಶಯವಾಗಿದೆ. ಶೀಗುರು ಸಂದೇಶ, ಧರ್ಮದರ್ಶನ, ಪುರಾಣೋಕ್ತಿ, ಸುದ್ಧಿನೋಟ, ಕ್ಷೇತ್ರ ದರ್ಶನ, ವ್ಯಕ್ತಿ ವಿಶೇಷ, ಸ್ತೋತ್ರ ದರ್ಶನ ಮೊದಲಾದ ವಿಷಯಗಳನ್ನು ಅಂತರದಲ್ಲಿ ಒಳಗೊಂಡು ಪ್ರಕಟಗೊಳ್ಳುತ್ತಿದೆ.

“ದೇಶದಲ್ಲಿ ಸಂಖ್ಯಾಬಲದಲ್ಲಿ ಮುಂದಿದ್ದರೂ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಂಗಗಳಲ್ಲಿ ಸಮುದಾಯದ ಹಿಂದುಳಿಯುವಿಕೆಗೆ ಕಾರಣ ಸ್ವಾಭಿಮಾನ–ಸ್ವಾವಲಂಬನೆ–ಸಂಘಟನೆಯ ಕೊರತೆ. ನೂರಾರು ಸಂಘಟನೆಗಳಿವೆ ಐಕ್ಯಮತದ ಯೋಜನೆಗಳಿಲ್ಲ. ನೂರಾರು ಚದುರಿದ ಚಿಂತನೆಗಳಿವೆ; ಏಕತೆಯ ಸೂತ್ರವಿಲ್ಲ. ಹೊಸ ಕಾಲಘಟ್ಟ ತೆರೆದಿಟ್ಟ ಅವಕಾಶಗಳಿವೆ; ಬಳಿಸಲು ಶೈಕ್ಷಣಿಕ ಅರ್ಹತೆಗಳಿಲ್ಲ. ಸರಕಾರದ ಸವಲತ್ತುಗಳಿವೆ; ಪಡೆಯುವ ಪ್ರಯತ್ನಗಳಿಲ್ಲ, ಇಂತಹ ನೂರಾರು ಸವಾಲುಗಳ ಹೆದ್ದೆರೆಗಳನ್ನು ಮೀರಿ ಬರಬೇಕಾದ ಸಂಕ್ರಮಣ ಕಾಲದಲ್ಲಿ ಸಮುದಾಯವು ಇದೆ.”[೧೩] ಎನ್ನುವ ಸುದ್ದಿನೋಟದಲ್ಲಿ ವಿಚಾರವು ಚಿಂತನೆಗೆ ಅವಕಾಶ ನೀಡಿದೆ. ಈ ಪತ್ರಿಕೆಯು ಸಂಪುಟ–೪, ಸಂಚಿಕೆ–೪ನ್ನು ಒಳಗೊಂಡ ಪತ್ರಿಕೆಯು ಲಭ್ಯವಿದ್ದು, ಪ್ರಸ್ತುತದಲ್ಲಿಯೂ ಪ್ರಕಟಗೊಳ್ಳುತ್ತಿದೆ.

**ವಿಶ್ವಕರ್ಮಾ :**

೧೯೭೦ರಲ್ಲಿ ಬಿ.ಹರಿಶ್ಚಂದ್ರ ಆಚಾರ್ಯ ಅವರ ಸಂಪಾದತ್ವದಲ್ಲಿ ರಾಷ್ಟ್ರೀಯ ವಿಶ್ವಬ್ರಾಹ್ಮಣ ಸಮಾಜೋದ್ಧರಕ ಸಭಾ(ರಿ) ಇವರಿಂದ ವಿಶ್ವಕರ್ಮಾ ಪತ್ರಿಕೆಯು ಮಂಗಳೂರಿನಿಂದ ಪ್ರಸಾರವಾಗುತ್ತಿತ್ತು. ೧೯೮೧ರ ನಂತರ ಈ ಪತ್ರಿಕೆಗೆ ಬೈಕಾಡಿ ಜನಾರ್ಧನ ಆಚಾರ್ ಇವರು ಸಂಪಾದಕರಾಗಿ ‘ವಿಶ್ವಕರ್ಮಾ’ ಕನ್ನಡ ರಾಷ್ಟ್ರೀಯ ಮಾಸಪತ್ರಿಕೆಯು ಮಂಗಳೂರಿನಿಂದ ಪ್ರಕಟವಾಗುತ್ತಿತ್ತು. ಈ ಪತ್ರಿಕೆಯು ಶ್ರೀ ಪಾಲ್ಕೆ ಬಾಬುರಾಯಾಚಾರ್ಯ ಇವರ ಶ್ರದ್ಧಾಂಜಲಿಯ ವಿಶೇಷ ಸಂಚಿಕೆ

ಲಭ್ಯಗಿದ್ದು, ಇದರಿಂದ ಕರಾವಳಿ ಕರ್ನಾಟಕದ ಮಂಗಳೂರಿನಲ್ಲಿ 'ವಿಶ್ವಕರ್ಮಾ' ಪತ್ರಿಕೆಯು ಪ್ರಸಾರಾಗಿತ್ತು ಎಂಬುದನ್ನು ಕಂಡುಕೊಳ್ಳಲಾಗಿದೆ.

ಇದೇ ಹೆಸರಿನ ಪತ್ರಿಕೆಯು ಮೈಸೂರಿನಿಂದ ೧೯೪೮ರಲ್ಲಿ ಶ್ರೀ ಮ. ಗಂಗಾಧರ ಮೂರ್ತಿಯವರು ಸಂಪಾದಕರಾಗಿ ಕಾರ್ಯನಿರ್ವಹಿದ್ದಾರೆ. ಒಂದೇ ಹೆಸರಿನಲ್ಲಿರುವ ಈ ಪತ್ರಿಕೆಯು ಮಂಗಳೂರು ಮತ್ತು ಮೈಸೂರಿನಲ್ಲಿ ಬೇರೆ ಬೇರೆ ಸಂಪಾದನಾ ಮಂಡಳಿಯಿಂದ ಪ್ರಕಟಗೊಳ್ಳುತ್ತಿತ್ತು.

"ಶ್ರೀ ಪಾಲ್ಕೆ ಬಬುರಾಯಾಚಾರ್ಯ ಅವರೊಂದು ವಿಶಿಷ್ಟ ಶಕ್ತಿಯಾಗಿ ಸಮಾಜದ ಸರ್ವಾಂಗೀನ ಪ್ರಗತಿಗಾಗಿ ಅನೇಕ ಕಾರ್ಯಗಳನ್ನು ಕೈಗೊಂಡಿದ್ದಾರೆ. ತಮ್ಮ ನಂತರ ಆ ಕಾರ್ಯಗಳು ಸ್ಥಗಿತಗೊಳ್ಳದಂತೆ ಮುನ್ನೆಚ್ಚರಿಕೆನ್ನು ವಹಿಸಿ ನಡೆದುಕೊಂಡು ಹೋಗುವಂತೆ ಮಾಡಿದ್ದಾರೆ. ಅವರೊಂದಿಗೆ ಸೇರಿ ಕೆಲಸ ಮಾಡಿದವರಿಗೆ ಸಮಾಜದ ಬಗ್ಗೆ ತುಂಬ ಕಳಕಳಿ ಇತ್ತು. ಆ ಬಗ್ಗೆ ನನ್ನೊಂದಿಗೆ ಎಷ್ಟೋಬಾರಿ ಮಾತನಾದ್ದಾರೆ. 'ಅವರ ಆತ್ಮಕ್ಕೆ ಚಿರಶಾಂತಿ ದೊರೆಯಲಿ ಎಂದು ಪ್ರಾರ್ಥಿಸುವುದನ್ನು ಬಿಟ್ಟು ಅವರ ಚೇತನ ಸಮಾಜವನ್ನೆಲ್ಲ ಆವರಿಸಿ ಅನಂತ ಚೈತನ್ಯ ಸ್ರವಂತಿಯನ್ನು ಈ ಸಮಾಜದಲ್ಲಿ ಪುಟಿಯುವಂತೆ ಮಾಡಿ ಎಲ್ಲಾ ರಂಗಗಳಲ್ಲೂ ಈ ಸಮಾಜವು ಅಗ್ರಗಣ್ಯವಾಗುವಂತೆ ಮಾಡಲಿ ಎಂದು ಪ್ರಾರ್ಥಿಸಬೇಕಾಗಿದೆ"[೧೪] ಎಂದು ಶ್ರೀ ಜಿ. ಜ್ಞಾನಾನಂದ ಅವರು ಶ್ರದ್ಧಾಂಜಲಿ ನುಡಿ ಅರ್ಪಿಸಿದ್ದಾರೆ. ೧೯೮೧ರ ದಶಂಬರ್‌ನ ದೊರೆತ ಈ ಪತ್ರಿಕೆ ಸಂಪುಟ ೨೭, ಸಂಚಿಕೆ ೧೨ಗಳನ್ನೊಳಗೊಂಡಿದೆ.

**ವಿಶ್ವಕರ್ಮ ಜ್ಞಾನ ವಾಹಿನಿ :**

ಗದಗಿನ ನಾಗರಾಜ ಎಂ. ಗುಂಜಾಳ ಇವರ ಸಂಪಾದಕತ್ವದಲ್ಲಿ 'ವಿಶ್ವಕರ್ಮ ಜ್ಞಾನ ವಾಹಿನಿ' ಎಂಬ ಕನ್ನಡ ಮಾಸಿಕ ಪತ್ರಿಕೆಯು ಪ್ರಕಟವಾಗಿದೆ. ಇದರಲ್ಲಿ ಪ್ರಚಲಿತ ವಿಷಯ ವಸ್ತುಗಳ ಕುರಿತು ಲೇಖನಗಳು ಪ್ರಕಟವಾಗಿವೆ. ವಿಶ್ವಕರ್ಮ ಸಮಾಜದ ಸಮಕಾಲೀನ ಜ್ಞಾನದ ಅಭಿವೃದ್ಧಿಯ ಬಗ್ಗೆ, ಸಾಮಾಜಿಕ ಅಭಿವೃದ್ಧಿ ಕಾರ್ಯಗಳ ಬಗ್ಗೆ, ಸ್ತ್ರೀಯರ ಚಿಂತನೆ, ವಿಜ್ಞಾನದ ವಿಚಾರ, ವೇದಗಳ ವಿಚಾರ, ಶಿಲ್ಪಕಲೆ ಮತ್ತು ಇತರೆ ಸಮುದಾಯದ ಪೂಜ್ಯರ ಸಂದೇಶಗಳು ಸಂಘಟನೆಯ ವರದಿಗಳನ್ನು ಕುರಿತು ಮುಂತಾದ ಲೇಖನಗಳು ಪ್ರಕಟಗೊಂಡಿವೆ.

"ಉತ್ತರ ಕರ್ನಾಟಕದ ವಿಶ್ವಕರ್ಮ ಸಮಾಜ ಸಂಘಟನೆಯ ಕುರಿತು ವಿಶ್ವಕರ್ಮ ಸಮಾಜದ ಬಾಂಧವರು ಅಲ್ಪಸಂಖ್ಯಾತರು ಇದ್ದು, ಈ ಸಮಾಜದ ಉನ್ನತಿಗಾಗಿ ಯಾವುದೇ ಸುಧಾರಣೆಯಾಗಲೀ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಭದ್ರತೆ ಇಲ್ಲದಾಗಿದೆ. ಕಾರಣ ರಾಯಚೂರು ಜಿಲ್ಲಾ ಅಧ್ಯಕ್ಷರು ಶ್ರೀ ಜಿ.ಚಂದಪ್ಪ ಹಾಗೂ ಧಾರವಾಡದ ಶ್ರೀ ಜಿ.ಬಿ.ಮನ್ವಾಚಾರ್ಯ ಇವರು ಸಮಾಲೋಚನೆ ಮಾಡಿ ಈ ಸಂಘಟನೆ ಎಂಟು ಜಿಲ್ಲೆಯ ಬಾಂಧವರಿಗೆ ಒಂದೆಡೆ ಸೇರಿಸುವುದು ಅಗತ್ಯವಾಗಿತ್ತು. ಇದರ ಮಧ್ಯವರ್ತಿ ಸ್ಥಳ ಗದಗ ಮಾಡಿಕೊಂಡು ಸಮಾಲೋಚನೆ ಸಭೆ

ಕರೆಯಲಾಗಿತ್ತು".[೧೫] ಆಗಸ್ಟ್ ೧೯೯೪ರ ಲಭ್ಯವಾದ ಪತ್ರಿಕೆಯು ೨ ಸಂಚಿಕೆಗಳನ್ನೊಳಗೊಂಡ ಸಂಪುಟ ಪತ್ರಿಕೆಯಾಗಿದೆ.

**ಉಡುಪಿ ಮಿತ್ರ :**

ಚಿತ್ತೂರು ಪ್ರಭಾಕರ ಆಚಾರ್ಯ ಇವರ ಸಂಪಾದಕತ್ವದಲ್ಲಿ RNI No.KARKAN 2005/16682ರ ನೋಂದಣಿಯೊಂದಿಗೆ 'ಉಡುಪಿ ಮಿತ್ರ' ಎಂಬ ಕನ್ನಡ ಪಾಕ್ಷಿಕ ಪತ್ರಿಕೆಯು ಉಡುಪಿಯಿಂದ ಪ್ರಕಟವಾಗುತ್ತಿದೆ. ಇದು ಸತತ ೧೮ ವರ್ಷಗಳಿಂದ ಪ್ರಕಟಣೆಯಾಗುತ್ತಿದ್ದು, ಸ್ಥಳೀಯ ಸುದ್ದಿ, ರಾಜಕೀಯ ಸುದ್ದಿ, ಜಾಹೀರಾತು, ಸಾಧಕರ ಕುರಿತ ಲೇಖಗಳು, ವಿಶ್ವಕರ್ಮ ಸಮುದಾಯದ ಕಾರ್ಯಕ್ರಮದ ಪಟ್ಟಿಗಳು, ಆರೋಗ್ಯಕರ ಸಮಾಜಕ್ಕೆ ಬೇಕಾದ ವಿಷಯಗಳ ಪ್ರಸಾರ ಮಾಡುವುದರೊಂದಿಗೆ, ಇಂದಿಗೂ ಈ ಪತ್ರಿಕೆ ಆ ಭಾಗದ ಪ್ರಕಟಗೊಂಡಿವೆ. ಈ ಪತ್ರಿಕೆಯ ದಿನಾಂಕ ೧೫.೦೧.೨೦೧೭ರ ಪ್ರತಿಯು ಲಭ್ಯವಿರುತ್ತದೆ.

**ಸುಗ್ಗಿ ಸುದ್ದಿ :**

ಬೆಂಗಳೂರಿನ ಶ್ರೀ ಈಶ್ವರ ವಿಶ್ವಕರ್ಮ ಇವರ ಸಂಪಾದಕತ್ವದಲ್ಲಿ 'ಸುಗ್ಗಿ ಸುದ್ದಿ' ಎಂಬ ವಿಶೇಷ ಸುದ್ದಿಗಳ ಸುಗ್ಗಿಯ ಮಾಸಿಕ ಪತ್ರಿಕೆಯಾಗಿ ೧೯೯೮ರಿಂದ ಪ್ರಸಾರವಾಗುತ್ತಿದೆ. ಈ ಪತ್ರಿಕೆಯ ಸತತ ೧೨ ವರ್ಷಗಳಿಂದ ವಿಶ್ವಕರ್ಮ ಸಮಾಜದ ಪರಂಪರೆ, ನೋವು-ನಲಿವುಗಳ ಬಗ್ಗೆ ಹಲವಾರು ಲೇಖನಗಳನ್ನು ಪ್ರಕಟವಾಗುತ್ತಿದ್ದು, ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ವಿಶ್ವಕರ್ಮ ಸಮಾಜಕ್ಕೆ, ಸಮಾಜಿಕ, ಶೈಕ್ಷಣಿಕವಾಗಿ, ರಾಜಕೀಯವಾಗಿ ಆಗುತ್ತಿರುವ ಅನ್ಯಾಯಗಳು ವಿಶ್ವಕರ್ಮ ಸಂಘಟಣೆಗಳ ಹೋರಾಟಗಳು, ವಿಶ್ವಕರ್ಮ ಪರಂಪರೆ, ಗುರುಪರಂಪರೆ ಧಾರ್ಮಿಕ ಸ್ಥಳಗಳ ಪರಿಚಯ ಇತ್ಯಾದಿಗಳನ್ನು ಒಳಗೊಂಡಂತೆ ಲೇಖನಗಳನ್ನಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ವಿಶ್ವಕರ್ಮ ಸ್ಥಳೀಯ ಸುದ್ದಿ, ರಾಜಕೀಯ ಸುದ್ದಿ, ಜಾಹೀರಾತು, ಸಾಧಕರ ಕುರಿತ ಲೇಖಗಳು ಪ್ರಕಟಗೊಂಡಿವೆ.

"ಸತ್ತು ಹೋದ ಸಾಮಾಜಿಕ ನ್ಯಾಯ ಎಂಬ ಲೇಖನದಲ್ಲಿ ಸಾಮಾಜಿಕ ನ್ಯಾಯ ಎಂದರೇನು? ಎಂಬ ಉಪ ಶೀರ್ಷಿಕೆ ಅಡಿಯಲ್ಲಿ ಜಾತಿ, ಧರ್ಮ,ಲಿಂಗ, ಬಾಷೆ, ವರ್ಣ, ಪ್ರದೇಶ ಅಂತಸ್ತು ಇವುಗಳ ಭೇದಭಾವ ಇಲ್ಲದೇ ಎಲ್ಲಾ ನಾಗರೀಕರಿಗೆ ರಕ್ಷಣೆ ನೀಡುವುದು ಹಾಗೂ ಎಲ್ಲರನ್ನು ಸಮಾನ ದೃಷ್ಟಿಯಿಂದ ನೋಡುವುದೇ ಸಾಮಾಜಿಕ ನ್ಯಾಯ ಹಿಂದುಳಿದ ವರ್ಗಗಳ ಹಿತಾಸಕ್ತಿ, ಕನಿಷ್ಟ ವೇತನ, ಜೀತಪದ್ಧತಿಯ ನಿರ್ಮೂಲನೆ, ಮಕ್ಕಳ ಶೋಷಣೆಯ ನಿರ್ಮೂಲನೆ, ಸ್ತ್ರೀಯರಿಗೆ ಸಮಾನಹಕ್ಕು ಹಾಗೂ ಗೌರವ ಮುಂತಾದವುಗಳು ಸಾಮಾಜಿಕ ನ್ಯಾಯಕ್ಕೆ ಒಳಪಟ್ಟಿವೆ. ರಾಜಕಾರಣಿಗಳು ಬದಲಾಗದೇ ಹೋದರೆ ಮುಂದಿನ ದಿನಗಳು ರಕ್ತಕ್ರಾಂತಿಯ ದಿನಗಳಾಗಿ ಸಮಾಜದಲ್ಲಿ ಶಾಂತಿ ನಾಶವಾಗುತ್ತದೆ. ದೇಶ ರಾಜ್ಯಗಳು ಹೊತ್ತಿಕೊಂಡು ಉರಿಯುತ್ತವೆ. ಆದ್ದರಿಂದ ಅಧಿಕಾರದ ಚುಕ್ಕಾಣಿ ಹಿಡಿದವರು ಸಾಮಾಜಿಕ ನ್ಯಾಯಕ್ಕೆ

ಒತ್ತುಕೊಡಬೇಕಿದೆ".[೧೬] ಎಂಬ ಲೇಖನದ ವಿಷಯ ಗಮನಿಸಿದಾಗ ವಿಶ್ವಕರ್ಮಪತ್ರಿಕೆಗಳು ಚಾರಿತ್ರಿಕವಾಗಿ, ಕೇವಲ ತನ್ನ ಸಮುದಾಯಕ್ಕೆ ಮೀಸಲಾಗದೇ, ಸಮಗ್ರ ಸಾಮಾಜಿಕ ನ್ಯಾಯದ ಪರವಾಗಿ ಕಾರ್ಯನಿರ್ವಹಿಸಿದೆ. ಈ ಪತ್ರಿಕೆಯ ಸಂಪುಟ ೧೨, ಸಂಚಿಕೆ ೧ ರ ಮಾಸ ಪತ್ರಿಕೆ ದೊರೆತಿದೆ.

**ಚಿಂತನ ಶೀಲ ಬುದ್ಧಿ ಜೀವಿ :**

ಬೆಂಗಳೂರಿನವರಾದ ಶ್ರೀ ಲಕ್ಷ್ಮೀಶ ಆಚಾರ್ಯ ಇವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರವ 'ಚಿಂತನ ಶೀಲ ಬುದ್ಧಿ ಜೀವಿ' ಎಂಬ ಯುಗಾದಿ ವಿಶೇಷಾಂಕದ ಕನ್ನಡ ಮಾಸ ಪತ್ರಿಕೆಯು ಪ್ರಸಾರವಾಗಿದೆ. ಈ ಪತ್ರಿಕೆಯಲ್ಲಿ ಬಡವರಿಗೆ ಕಾನೂನು ಉಚಿತ, ಸ್ವಾತಂತ್ರ್ಯ ಅಂದರೇನು, ಸ್ತ್ರೀಶಕ್ತಿ, ಅನ್ವೇಷಣಾ ಪ್ರವಾಸ, ಪ್ರತಿಭಟಿಸಬೇಕು ಸೊಸೈಟಿಗೆ ಪುನಶ್ಚೇತನ, ಮೇರು ವ್ಯಕ್ತಿತ್ವಕ್ಕೆ ಅಭಿನಂದನೆ ಕುರಿತಾದ ಲೇಖನಗಳನ್ನು ಪ್ರಕಟವಾಗಿವೆ ಹಾಗೂ ಈ ಪತ್ರಿಕೆಯ ಒಳಪುಟಗಳಲ್ಲಿ ದೇವರು ಇಲ್ಲೆ ಎನ್ನಬೇಡಿ, ವೇದವ್ಯಾಸರಿಗೊಂದು ನಮನ, ಭಾವೈಕ್ಯತಾ ಸಂಘಟನೆ ವಿಶ್ವಕರ್ಮ ಮಿಷನ್, ಭವಿಷ್ಯತ್ ಯೋಜನೆಗಳು, ರಾಗಿ ತಂದೀರಾ, ಮುತ್ತು ಉತ್ಪಾದನೆಯಂತಹ ಸಾಮಜಿಕ ಲೇಖನಗಳನ್ನು ಪ್ರಕಟಿಸಲಾಗಿದೆ.

"ಪರಮ ಸಹಿಷ್ಣುತೆ, ಪರೋಪಕಾರಿ ಗುಣ, ಹೃದಯವಂತಿಕೆ, ಬೇಧವಿಲ್ಲದ ಸಮಾಜ, ದಾನ ಧರ್ಮ, ಕರ್ಮಮಾರ್ಗದ ನಂಬಿಕೆಗಳು ಉಳಿದು, ಅನವರತ ಕೆಲಸ ನಿತ್ಯದ ದೇವ ಭಕ್ತಿ, ಆತ್ಮ ಪರಮಾತ್ಮನ ನಿತ್ಯ ನಿಜಸಂಬಂಧ ಹರಿಕಾರನಾಗಿ ತನ್ನಲ್ಲಿಯೇ ಆ ಪರಬ್ರಹ್ಮ ಸ್ವರೂಪಿಯನ್ನು ಅವಾಹನೆ ಮಾಡಿ, ತಾನು ಒಬ್ಬ ಕೇವಲ ಸೂತ್ರದಾರನಾಗಿ ಪೂಜೆ, ನಿತ್ಯಾನುಷ್ಠಾನ, ಸಾಂಪ್ರದಾಯಿಕ ಹಬ್ಬ ಆಚರಣೆ, ವ್ರತಪೂಜೆಗಳು, ಶಿಲ್ಪಗಳ ಮೂಲಕ ಸರ್ವಕಾಲಿಕತೆಯನ್ನು ಐಕ್ಯತೆಯನ್ನು ಪ್ರದರ್ಶಿಸುವ ಮನೋಭಾವ ವಿಶ್ವಕರ್ಮರಲ್ಲೀಯೇ ಅಲ್ಲದೆ ಬೇರೆಯಾರಲ್ಲಿದೆ?

ಭಕ್ತಿ ಹುಟ್ಟುವುದು ಹೃದಯದಲ್ಲಿ ವ್ಯಕ್ತಿಯ ಆತ್ಮಕ್ಕೆ ಚೇತನತೆ ತುಂಬಿದರೆ ದೈವ ಭಕ್ತಿಯುಂಟಾಗುತ್ತದೆ. ದೇವರಿಗೆ ಕೃತಜ್ಞತೆ ಸಲ್ಲಿಸುವುದಕ್ಕಾಗಿ ಅರ್ಚಿಸುವಂತೆ ಮಾಡುವುದು, ಅದಕ್ಕೆ ಬೇಕಾದ ಪೂರಕ ಪರಿಕರಗಳ ಸಿದ್ಧತೆ, ತನ್ನ ಇಷ್ಟಾರ್ಥ ದೇವರ ರೂಪದ ಮೂರ್ತಿಗಳನ್ನು ತನ್ನ ಶಕ್ತಿಗೆ ತಕ್ಕಂತೆ ಕಲೆ, ಚಿತ್ರ, ಶಿಲ್ಪ, ವಿಗ್ರಹ ಗೊಂಬೆಗಳನ್ನಾಗಿ, ಮೃತ್ತಿಕೆ, ಲೋಹ, ಮರ, ಶಿಲೆ ಅಥವಾ ಇನ್ನಿತರ ವಸ್ತುಗಳಲ್ಲಿ ದೇವರ ಕಲ್ಪನೆಯನ್ನೇ ಮೂಡಿಸಿ, ಜೀವಕಳೆ ತುಂಬಿ, ಆರ್ಚಿಸಲು ಕೊಡುವವನೇ ದೇವರ ಪ್ರವಾದಿಯಂತಿರುವ ವಿಶ್ವಬ್ರಹ್ಮಣ ಶಿಲ್ಪಿ".[೧೭] ಈ ಪತ್ರಿಕೆಯ ಸಂಪುಟ–೧, ಸಂಚಿಕೆ–೬ರ ಪ್ರತಿಯು ದೊರೆತಿದೆ.

**ಸ್ಥಿತಿ ಗತಿ :**

ಡಾ.ಎನ್. ಭಾಸ್ಕರ್ ಆಚಾರ್ಯ ಅವರ ಸಂಪಾದಕತ್ವದಲ್ಲಿ 'ಸ್ಥಿತಿ ಗತಿ' ಎಂಬ ಕನ್ನಡ–ಇಂಗ್ಲೀಷ್–ದ್ವಿಭಾಷಾ–ತ್ರೈಮಾಸಿಕ ಪತ್ರಿಕೆಯು ಕೋಟೇಶ್ವರ ಉಡುಪಿ ಜಿಲ್ಲೆಯಿಂದ ೨೦೧೧ ರಿಂದ

ಇಲ್ಲಿಯವರಗೂ ನಿರಂತರವಾಗಿ, ಸಾಹಿತ್ಯ, ಕಲೆ, ಸಂಸ್ಕೃತಿಗೊಂದು ಕೈಗನ್ನಡಿ ಉದ್ದೇಶದಿಂದ ಈ ಪತ್ರಿಕೆ ಪ್ರಸಾರವಾಗುತ್ತಿದೆ. ಈ ಪತ್ರಿಕೆಯು ೧೦ ನೇ ಸಂಪುಟದೊಂದಿಗೆ ೪೨ ಸಂಚಿಕೆಗಳಲ್ಲಿ ಇದುವರಗೆ ಪ್ರಕಟವಾಗುತ್ತಿದೆ. ಈ ಪತ್ರಿಕೆಯು ಪುಸ್ತಕ ಪರಿಚಯ, ಆರೋಗ್ಯ ಚಿಂತನೆ, ಲಲಿತ ಪ್ರಬಂಧ, ಕತೆ, ಕವನ, ಧಾರಾವಾಹಿ, ಮತ್ತು ಸಂಶೋಧನೆ ಪ್ರಬಂಧ, ಚುಟುಕುಗಳು, ಹೀಗೆ ಹಲವು ಬಗೆಯ ವಿಷಯಗಳನ್ನು ಈ ಪತ್ರಿಕೆಯ ಒಡಲಾಳದಿಂದ ಓದುಗರಿಗೆ ತಲುಪಿಸುತ್ತಿದೆ.

**ಸಂಪಾದಕರು :**

**ಗಂಗಾಧರ ಮೂರ್ತಿಗಳು :** ಸಮಾಜವನ್ನು ಮುನ್ನಡೆಸಬೇಕೆಂಬ ಅತುಲ ಕ್ರಿಯಾಶೀಲ ಅಪೇಕ್ಷೆ ಹೊಂದಿದ ಗಂಗಾಧರ ಮೂರ್ತಿಗಳು ತಮ್ಮ ವೈಯಕ್ತಿಕ ಸುಖವನ್ನು ತ್ಯಾಗ ಮಾಡಿದರು. ಗಂಗಾಧರಮೂರ್ತಿಗಳ ಅಜ್ಜ ಸುಪ್ರಸಿದ್ಧ ರಾಜಪುರೋಹಿತ ಬ್ರಹ್ಮಶ್ರೀ ಈಶ್ವರಾಚಾರ್ಯರು 'ಸರ್ವಸಾರ ಸಂಗ್ರಹ' ದಂಥ ಶಾಸ್ತ್ರ ಗ್ರಂಥಗಳನ್ನು ಪ್ರಕಟಿಸಿ ಪ್ರಖ್ಯಾತರಾಗಿದ್ದರು. ಈಶ್ವಾರಾಚಾರ್ಯರ ಮಗ ಬ್ರಹ್ಮಶ್ರೀ ದಕ್ಷಿಣಾಮೂರ್ತಾ ಚಾರ್ಯರು ಇಂಗ್ಲಿಷ್, ಸಂಸ್ಕೃತ, ಕನ್ನಡ ತ್ರಿಭಾಷಾ ಪಂಡಿತರಾಗಿದ್ದರು. ತಮ್ಮ ವಿದ್ಯೆಯನ್ನು ಮಗನಾದ ಗಂಗಾಧರಮೂರ್ತಿಗಳಿಗೆ ಧಾರೆ ಎರೆದರು. ಆದರೆ ಗಂಗಾಧರ ಮೂರ್ತಿಗಳು ಮೂರು ವರುಷದವರಿದ್ದಾಗಲೇ ತಂದೆ ತೀರಿಕೊಂಡರು. ಅಜ್ಜ ಇವರನ್ನು ಸಾಕಿ ಬೆಳೆಸಿದರು. ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಮೇಲ್ಕೋಟೆಯಲ್ಲಿ ಪೂರೈಸಿ ಹೈಸ್ಕೂಲು ಅಧ್ಯಯನಕ್ಕೆ ಮೈಸೂರಿಗೆ ಬಂದ ಗಂಗಾಧರಮೂರ್ತಿಗಳು ತಮ್ಮ ಚಿಕ್ಕಪ್ಪ ಚಂದ್ರಶೇಖರಾಚಾರ್ಯರ ಆಶ್ರಯ ಪಡೆದರು. ಗಂಗಾಧರಮೂರ್ತಿಗಳು ತಮ್ಮ ಸಮಾಜವನ್ನು ಮೇಲೆತ್ತಬೇಕೆಂಬ ಬಯಕೆಯಿಂದ ಸಂಸ್ಕೃತ ಕನ್ನಡ ಭಾಷೆಗಳನ್ನು ಆಳವಾಗಿ ಅಧ್ಯಯನ ಮಾಡಿದರು. ಉಭಯ ಭಾಷಾ ಛಂದಶ್ಶಾಸ್ತ್ರ, ಜ್ಯೋತಿಷ್ಯಶಾಸ್ತ್ರ ಅಧ್ಯಯನ ಮಾಡಿದರು. ನಂತರ ಆಂಧ್ರಪ್ರದೇಶದ ಲಕ್ಷ್ಮೀನಾರಾಯಣ ಘನಪಾಠಿ ಅವರಲ್ಲಿ ಪರೀಕ್ಷೆ ಕೊಟ್ಟು, ಪಾಸಾದರು. ನಂತರ ತಮ್ಮ ಚಿಕ್ಕಪ್ಪ ಸ್ಥಾಪಿಸಿದ 'ವೇದಶಾಸ್ತ್ರೋಜ್ಜೀವಿನೀ ಸಭೆ'ಯಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡತೊಗಿದರು. ಹಲವಾರು ಕಡೆ ಸಮಾಜೋನ್ನತಿಯ ಕುರಿತು ಉಪನ್ಯಾಸಗಳನ್ನು ನೀಡತೊಡಗಿದರು.

ಇದೇ ಸಮಯದಲ್ಲಿ ವಿಶ್ವಕರ್ಮ ಸಮಾಜದಲ್ಲಿ ಜಾಗೃತಿಯ ಬೀಜಗಳು ಮೂಡ ತೊಡಗಿದ್ದವು. ಒಂದು ದಿನ ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಮಾಜ ಸಂಘಟನೆಯ ಸಭೆ ಜರುಗಿತು. ಆ ಸಭೆಯಲ್ಲಿ ಗಂಗಾಧರಮೂರ್ತಿಗಳು ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಗಂಗಾಧರಮೂರ್ತಿಗಳು ವಿಶ್ವಕರ್ಮ ಸಮಾಜವು ಜನಪ್ರಿಯವಾಗಲು 'ವಿಶ್ವಕರ್ಮ ಜಯಂತಿ'ಯನ್ನು ಆಚರಿಸಬೇಕೆಂಬ ಸಲಹೆಯನ್ನು ಮುಂದಿಟ್ಟರು. ಈ ವಿಶ್ವಕರ್ಮ ಜಯಂತಿ ನಿಮಿತ್ಯ ಉಪನ್ಯಾಸ, ಕೀರ್ತನ ಕಾರ್ಯಕ್ರಮಗಳು, ವಿಶ್ವಕರ್ಮ ಮಹಾಸಭೆ ನಡೆಯತೊಡಗಿದವು. ಗಂಗಾಧರ ಮೂರ್ತಿಗಳ ಈ ಮಹಾಸಭೆ ಅಧಿವೇಶನಗಳ ಪರಿಣಾಮವಾಗಿ ಸಮಾಜ ಜಾಗೃತವಾಗ ತೊಡಗಿತು.

ದೇವಸ್ಥಾನವೊಂದರಲ್ಲಿ ಪಾಠಶಾಲೆಯನ್ನು ಪ್ರಾರಂಭಿಸಿದರು. ಅನೇಕರು ಅಲ್ಲಿ ವೈದಿಕವನ್ನು ಕಲಿತು ಪಾರಂಗತರಾದರು. ಈ ಜ್ಞಾನವು ಮೈಸೂರಿನಾಚೆಗೂ ಹರಡಬೇಕೆಂಬ ಕಾರಣಕ್ಕಾಗಿ ಗಂಗಾಧರಮೂರ್ತಿಗಳು 'ವಿಶ್ವಕರ್ಮ ಸೂಕ್ತಾದಿಗಳು', 'ನಿತ್ಯ ಕರ್ಮಾನುಷ್ಠಾನ ಸಂಗ್ರಹ' ಎಂಬ ಎರಡು ಕೃತಿಗಳನ್ನು ಪ್ರಕಟಿಸಿದರು. ಅಲ್ಲದೆ 'ವಿಶ್ವಕರ್ಮಸ್ತವ', 'ವಿಶ್ವಕರ್ಮಾಷ್ಟೋತ್ತರ', 'ವಿಶ್ವಕರ್ಮ ಮಂಗಳಾಷ್ಟಕ'ಗಳನ್ನು ಗಂಗಾಧರಮೂರ್ತಿಗಳು ರಚಿಸಿ ಪ್ರಕಟಿಸಿದರು.

ಗಂಗಾಧರಮೂರ್ತಿಗಳ ನೇತೃತ್ವದಲ್ಲಿ ಮೈಸೂರು ವಿಶ್ವಕರ್ಮ ಸಮಾಜವು ದೇಶದ ಸಮಸ್ತ ವಿಶ್ವಕರ್ಮ ಸಮಾಜದ ಪ್ರತಿನಿಧಿಯಾಗಿ ಕೆಲಸ ಮಾಡಿತು. ತನ್ನ ಮಹಾಸಭೆಗಳ ಮೂಲಕ ವಿಶ್ವಕರ್ಮ ಸಮುದಾಯದ ಮಕ್ಕಳ ವಿದ್ಯಾಭ್ಯಾಸ ಸೌಕರ್ಯಗಳು ಸಿಕ್ಕುವುದಕ್ಕಾಗಿ, ಕೈಗಾರಿಕೆಗಳು ಅಭಿವೃದ್ಧಿ ಹೊಂದುವುದಕ್ಕಾಗಿ, ವಿಶ್ವಕರ್ಮ ಜನರ ಸಆಮಾಜಿಕ ಕುಂದುಕೊರತೆಗಳು ನಿವಾರಣೆಯಾ ಗುವುದಕ್ಕಾಗಿ ವಿಶ್ವಕರ್ಮ ಜನರಿಗೆ ಸ್ಥಳೀಯ ಸಂಸ್ಥೆಗಳಲ್ಲಿ, ಶಾಸನ ಸಭೆಗಳಲ್ಲಿ ಪ್ರಾತಿನಿಧ್ಯ ದೊರೆಯುವುದಕ್ಕಾಗಿ ಅನೇಕ ನಿರ್ಧಾರಗಳನ್ನು ಮಾಡಿ, ಸರಕಾರದ ಗಮನ ಸೆಳೆಯಿತು.

ಗಂಗಾಧರಮೂರ್ತಿಗಳು ಪ್ರಕಾಂಡ ಪಂಡಿತರಾಗಿದ್ದರು. ಅನೇಕ ಧರ್ಮಶಾಸ್ತ್ರ ವಿಷಯ ಗಳನ್ನು ಒಳಗೊಂಡು, ಗರ್ಭದಾನಾದಿ ಷೋಡಶ ಸಂಸ್ಕಾರಗಳೇ ಅಲ್ಲದೆ ವಿವಿಧ ಶಾಂತಿಕರ್ಮಗಳನ್ನೂ ಒಳಗೊಂಡು, ಕನ್ನಡದಲ್ಲಿ ಕರಣ ನಿರೂಪಣೆಯಿಂದೊಡಗೂಡಿದ 'ಯಾಜುಷೀ ಗೃಹ್ಯ ಬೋಧಿನೀ' ಎಂಬ ಬೃಹತ್ ಗ್ರಂಥವನ್ನು ಗಂಗಾಧರಮೂರ್ತಿಗಳು ರಚಿಸಿದರು. ಆದರೆ ಆರ್ಥಿಕ ಅನಾನುಕೂಲತೆಯಿಂದ ಪ್ರಕಟಣೆ ತಡವಾಯಿತು. ಆದರೂ ಮೈಸೂರು ಮಹಾರಾಜರ ಕೃಪೆಯಿಂದ, ಜನತೆಯ ಸಹಾಯದಿಂದ ಈ ಕೃತಿ ಪ್ರಕಟಗೊಂಡು ಜನಪ್ರಿಯವಾಯಿತು.

ವಿದ್ಯಾವಂತ ಯುವಕರಿಗೆ ಸಮಾಜ ಸೇವೆಯತ್ತ ಆಕರ್ಷಣೆ ಕಡಿಮೆ. ಸ್ವಂತ ನೌಕರಿ ಮಾಡಿ, ತಮ್ಮ ಕುಟುಂಬ ನಿರ್ವಹಣೆಯಲ್ಲಿ ಕಾಲ ಕಳೆಯುವ ಜನರೇ ಹೆಚ್ಚು. ಆದರೆ ಗಂಗಾಧರ ಮೂರ್ತಿಗಳು ಸಮಾಜದ ಹಿತಕ್ಕಾಗಿ ತಮ್ಮ ಹಿತವನ್ನು ತ್ಯಾಗ ಮಾಡಿದರು. ವಿಶ್ವಕರ್ಮ ಜನಾಂಗವನ್ನು ಅಭಿವೃದ್ಧಿಪಡಿಸಲು ಒಬ್ಬರಿಂದ ಸಾಧ್ಯವಿಲ್ಲವೆಂದು ಗಂಗಾಧರ ಮೂರ್ತಿಗಳು ಮನಗಂಡಿದ್ದರು. ವಿಶ್ವಕರ್ಮ ಸಮಾಜವು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಔದ್ಯೋಗಿಕ ಕ್ಷೇತ್ರಗಳಲ್ಲಿ ಅನನ್ಯವಾದ ಸಾಧನೆ ಮಾಡಬೇಕೆಂದು ಗಂಗಾಧರ ಮೂರ್ತಿಗಳು ಅಪೇಕ್ಷೆ ಪಟ್ಟಿದ್ದರು. ಅದಕ್ಕಾಗಿ ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಕೇವಲ ಉಪನ್ಯಾಸ ಭಾಷಣಗಳಿಂದ ಸೀಮಿತ ವಲಯಕ್ಕೆ ಮಾತ್ರ ನಮ್ಮ ವಿಚಾರಗಳನ್ನು ತಿಳಿಸಬಹುದು. ಅದಕ್ಕಾಗಿ ಒಂದು ಪತ್ರಿಕೆಯನ್ನು ಪ್ರಕಟಿಸಬೇಕೆಂದು ಆಶಿಸಿದರು.

ಎರಡನೆಯ ಮಹಾಯುದ್ಧ ಮುಗಿದು, ಸ್ವಾತಂತ್ರ್ಯ ಬಂದ ಹೊಸದರಲ್ಲಿ ಭಾರತ ದೇಶವು ಅನೇಕ ಆತಂಕಗಳನ್ನು ಎದುರಿಸಬೇಕಾಗಿತ್ತು. ಎಷ್ಟೋ ಸಾರ್ವಜನಿಕ ಪತ್ರಿಕೆಗಳು ಹುಟ್ಟಿ ಸಾಯುತ್ತಿದ್ದವು.

ಇಂಥ ಸಂಕ್ರಮಣ ಸಂದರ್ಭದಲ್ಲಿ “ನಮ್ಮ ಜನರ ಸ್ವಭಾವವು ಹಿಂದಿನಂತೆ ಇಲ್ಲ, ಭಾವನೆ ಬದಲಾಗಿದೆ, ಜನಾಂಗದ ಉನ್ನತಿಗೆಂದರೆ ಈಗೀಗ ತ್ಯಾಗ ತೋರಿಸಲು ಸಿದ್ಧರಾಗಿದ್ದಾರೆಂಬುದಾಗಿ”[೧೮] ಜನಾಂಗದ ಬಾಂಧವರಲ್ಲಿ ನಂಬಿಕೆಯಿಟ್ಟು ‘ವಿಶ್ವಕರ್ಮಾ’ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಐದು ವರ್ಷಗಳ ಕಾಲ ನಡೆಸಿದರು.

ಒಂದು ಪತ್ರಿಕೆಯನ್ನು ನಡೆಸುವುದೆಂದರೆ, ಅದರಲ್ಲೂ ಅದು ಜನಾದರಣೀಯವಾಗಿ, ಪ್ರಾಮುಖ್ಯ ಪತ್ರಿಕೆ ಎನಿಸುವಂತೆ ನಡೆಸಬೇಕಾದರೆ ಅದೆಷ್ಟು ಶ್ರಮ ಹಾಕಬೇಕು? ಲೇಖನಗಳನ್ನು ಬರೆಯಬೇಕು, ಲೇಖಕರನ್ನು ಹಿಡಿಯಬೇಕು, ಶಾಸ್ತ್ರ ಪರಿಚಯ ಸಾಹಿತ್ಯ ಪರಿಚಯ ಮಾಡಿಕೊಡಬೇಕು. ಅದಕ್ಕಾಗಿ ಪುಸ್ತಕ ಪತ್ರಿಕೆಗಳನ್ನು ಓದಬೇಕು, ಚಂದಾದಾರರನ್ನು ಗಳಿಸಬೇಕು, ಅವರಿಗೆ ಪತ್ರಿಕೆ ಕಳಿಸಬೇಕು. ಅವರಿಂದ ಬರುವ ಪತ್ರಗಳಿಗೆ ಉತ್ತರ ಬರೆಯಬೇಕು. ಮುದ್ರಣ ವೆಚ್ಚ, ಅಂಚೆಯ ವೆಚ್ಚಗಳನ್ನು ಭರಿಸಬೇಕು! ಚಂದಾದಾರರನ್ನು ಮಾಡುವ ಸಲುವಾಗಿ ಅನೇಕ ಗಂಗಾಧರ ಮೂರ್ತಿಗಳು ಇಡೀ ಕನ್ನಡ ನಾಡನ್ನು ಪ್ರವಾಸ ಮಾಡಿದ್ದಾರೆ.

ಅಖಿಲ ಭಾರತ ಮಟ್ಟದಲ್ಲಿ ವಿಶ್ವಕರ್ಮ ಸಮಾಜದವರು ಯಾವ ಯಾವ ದೇಶದಲ್ಲಿ ಯಾವ ರೀತಿಯಲ್ಲಿದ್ದಾರೆ, ಯಾವ ಯಾವ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ, ಎಷ್ಟರಮಟ್ಟಿಗೆ ಮುಂದುವರಿದಿದ್ದಾರೆ ಎಂಬುದನ್ನು ತಿಳಿಸುವ ಸಲುವಾಗಿ ಸ್ವಂತ ಖರ್ಚಿನಲ್ಲಿ ಇಡೀ ಭಾರತ ದೇಶವನ್ನು ಪ್ರವಾಸ ಮಾಡಿದರು. ತಾವು ದೇಶದ ತುಂಬ ಕಂಡ ವಿಷಯಗಳನ್ನು ‘ಎಚ್ಚೆತ್ತ ಭಾರತೀಯ ವಿಶ್ವಕರ್ಮರು’ ಎಂಬ ಅಂಕಣ ಬರಹದ ಮೂಲಕ ಕನ್ನಡಿಗರಿಗೆ ತಿಳಿಸುವ ಪ್ರಯತ್ನ ಮಾಡಿದರು.

ನವಲಗುಂದ ಬಸವಲಿಂಗ ಸ್ವಾಮಿಗಳು ಏರ್ಪಡಿಸಿದ್ದ ‘ಸರ್ವಧರ್ಮ ಸಮ್ಮೇಳನ’ದಲ್ಲಿ ಭಾಗವಹಿಸಿ ‘ವಿಶ್ವಕರ್ಮವೋ ವಿಶ್ವಧರ್ಮವೋ’ ಎಂದು ಉಪನ್ಯಾಸ ಮಾಡಿ, ಆ ಉಪನ್ಯಾಸವನ್ನು ಗ್ರಂಥರೂಪದಲ್ಲಿ ಪ್ರಕಟಿಸಿದ್ದಾರೆ. ಶಿಲ್ಪದ ಮಹತ್ವವನ್ನು ಕುರಿತು ತಮ್ಮ ಪತ್ರಿಕೆಯಲ್ಲಿ ಹಲವಾರು ಮಹತ್ವದ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿ ವಿಶ್ವಕ್ಕೆ ವಿಶ್ವಕರ್ಮರ ಅಪೂರ್ವ ಕಾಣಿಕೆಯನ್ನು ತೋರಿಸಿಕೊಟ್ಟಿದ್ದಾರೆ.

ವಿಶ್ವಕರ್ಮಾ ಪತ್ರಿಕೆಯ ನಾಲ್ಕನೆಯ ವರುಷದ ಪಾದಾರ್ಪಣೆಯ ಸಂದರ್ಭದಲ್ಲಿ ಸಂಪಾದಕೀಯ ಬರೆಯುತ್ತ “ಈ ಮೂರು ವರುಷಗಳ ಅವಧಿಯಲ್ಲಿ ಈ ಧ್ಯೇಯಸಾಧನೆಗಾಗಿ ಈ ಪತ್ರಿಕೆಯು ತನಗಿರುವ ಅಲ್ಪ ಸಾಧನ ಸಂಪತ್ತುಗಳಲ್ಲಿ ತನ್ನ ಶಕ್ತಿಮೀರಿ ದುಡಿದಿದೆ. ಮುಂದೂ ದುಡಿಯುತ್ತದೆ. ನಮಗಿರುವ ಎಲ್ಲ ತೊಂದರೆಗಳಲ್ಲಿ ಹೆಚ್ಚಾಗಿ ಹಣದ ಅಭಾವವೇ ಉದ್ದೇಶಿತ ಕ್ಷೇತ್ರವನ್ನು ಸಂಕುಚಿತ ಮಾಡಿದೆ. ಹೆಚ್ಚು ಜನರು ಚಂದಾದಾರರಾಗಿ ಆಜೀವ ಸದಸ್ಯರಾಗಿ, ಮಹಾರಾಜ ಪೋಷಕರಾಗಿ, ಸಹಾಯ ಮಾಡಬೇಕು. ನಮಗೊಂದು ಸ್ವಂತ ಮುದ್ರಣಾಲಯ ಸೌಕರ್ಯ ಒದಗಿದರೆ ಪತ್ರಿಕೆಯ ಅಂತರಂಗ ಬಹಿರಂಗಗಳು ಬಲಗೊಳ್ಳುವವು. ಇದು ಶ್ರೀಮಂತರ ಹಸ್ತದ

ಉದಾರತೆಯನ್ನೇ ಅವಲಂಬಿಸಿದೆ......ಈ ಪತ್ರಿಕೆಯ ಏಕಮಾತ್ರ ಜಾಹೀರಾತುದಾರರಾದ ಶ್ರೀ ಪಲ್ಕೆ ಬ್ರದರ್ಸ್ ಅವರಿಗೆ ನಮ್ಮ ವಂದನೆಗಳು. ನಮ್ಮಲ್ಲಿಯ ಬ್ಯಾಂಕರುಗಳೂ, ಜ್ಯೂಯಿಲರಿ ಮಾರ್ಟ್‌ಗಳವರೂ, ಸಿನಿಮಾ ಪ್ರೊಪ್ರೈಟರ್‌ಗಳವರೂ, ಕಾಂಟ್ರಾಕ್ಟರುಗಳೂ, ಮೆಕಾನಿಕ್ ಇಂಜನಿಯರಗಳೂ, ಇತರ ವಿಧಗಳ ಕೆಲಸಗಾರರೂ ಜಾಹೀರಾತುಗಳನ್ನು ಈ ಪತ್ರಿಕೆಯಲ್ಲಿ ಪ್ರಕಟಿಸಿದರೆ ಅವರಿಗೂ ಅವರ ಉದ್ಯಮಗಳಿಗೂ ಲಾಭದಾಯಕವಿದೆ. ಮನಸ್ಸು ಮಾಡಬೇಕು".[೧೯]

ಗಂಗಾಧರ ಮೂರ್ತಿಗಳು ವಿಶ್ವಕರ್ಮ ಸಮಾಜದಲ್ಲಿ ಜಾಗೃತಿಯನ್ನುಂಟು ಮಾಡಲು ಮಾಸಪತ್ರಿಕೆಯೊಂದನ್ನು ಪ್ರಾರಂಭಿಸಿದ್ದು ಒಂದು ಐತಿಹಾಸಿಕ ಸಂದರ್ಭವೆಂದೇ ಹೇಳಬೇಕು. ಏನೂ ಇಲ್ಲದ ಸಂದರ್ಭದಲ್ಲಿ ಮರುಳಗಾಡಿನಲ್ಲಿ ಓಯಾಸಿಸ್ ಹುಟ್ಟಿದಂತೆ, ವಿಶ್ವಕರ್ಮ ಸಮಾಜಕ್ಕೆ ಬೆಳಕಾಗಿ ಬಂದರು.

ದಿನಾಂಕ ೧೬-೧೧-೧೯೫೧ರಂದು ಶ್ರೀರಂಗಪಟ್ಟಣದಲ್ಲಿ ಜರುಗಿದ ಧಾತ್ರೀಹವನದಲ್ಲಿ ಸೇರಿದ್ದ ಮಂಡ್ಯ ಜಿಲ್ಲಾ ವಿಶ್ವಕರ್ಮ ಮಹಾಜನ ಸಭೆಯವರು ವೈದಿಕ ವಿದ್ಯಾಭೂಷಣ ಗಂಗಾಧರ ಮೂರ್ತಿಗಳವರಿಗೆ ಸಮರ್ಪಿಸಿದ ಅಭಿನಂದ ಪತ್ರದಲ್ಲಿ ಅವರು ಸಲ್ಲಿಸಿದ ಸಮಾಜ ಸೇವೆಯನ್ನು ಹೀಗೆ ಪ್ರಶಂಸಿಸಲಾಗಿದೆ:

"ಸಮಾಜೋದ್ಧಾರ ಹಿತಚಿಂತಕರೆ, ಸಮಾಜಸೇವೆಯೇ ಜನ್ಮಸಾರ್ಥಕ್ಯವೆಂದರಿತು ಅಖಿಲ ಭಾರತ ಪ್ರವಾಸವನ್ನು ಕೈಕೊಂಡು ಆ ಕಾಲದಲ್ಲಿ ನಮ್ಮವರಿಗೆ ಸೇವಾಜ್ಞಾನ ದಾನ ಮಾಡುವ ಕಾರ್ಯದಲ್ಲಿ ಪ್ರವೃತ್ತರಾದ ತಮ್ಮ ಮನೋಭಾವವು ಅನುಕರಣೀಯವಾದುದು. ಮೂರು ವರ್ಷಗಳಿಂದ ತಾವು ಹೊರಡಿಸುತ್ತಿರುವ ವಿಶ್ವಕರ್ಮಾ ಮಾಸಪತ್ರಿಕೆಯ ಸಂಪಾದಕೀಯ ವಿಚಾರ ತರಂಗಗಳು ವಿದ್ಯಾವಂತರಿಗೂ ರಾಜಕೀಯ ತಜ್ಞರಿಗೂ ಜ್ಞಾನಾಂಜನವಾಗಿ ಶ್ರೇಷ್ಠತರ ಪತ್ರಿಕೆಯೆಂದು ಗ್ರಹಿಕೆಯಾಗಿದೆ. ಪ್ರಜಾಸಮುದಾಯದಲ್ಲಿ ಸಂಪ್ರದಾಯಕವಾಗಿ ಬಂದಿರುವ ಜಾತೀಯ ಭಿನ್ನಭಾವಗಳು ಎಲ್ಲಾ ಕ್ಷೇತ್ರಗಳಲ್ಲಿ ಪೂರ್ಣವಾಗಿದ್ದರೂ ಹೊಸ ರಾಜ್ಯಾಡಳಿತ ನೀತಿ, ಜಾತಿಭಾವನೆಯಿಂದ ದೂರವಾಗಿರಬೇಕೆಂಬ ಆಡಳಿತಗಾರರ ಸಂಕಲ್ಪದಿಂದ ಹಿಂದುಳಿದ ಹಿಂದೂ ಅಲ್ಪಸಂಖ್ಯಾತರ ಪ್ರಾತಿನಿಧ್ಯ ಆಡಳಿತದಲ್ಲಿ ಮಾಯವಾಗಿದೆ. ಬಹು ಸಂಖ್ಯಾತ ಜಾತಿಯವರು ಸ್ವಜಾತ್ಯಭಿವೃದ್ಧಿ, ಪಕ್ಷಪಾತ ಮನೋಭಾವದೂರರಾಗಿ, ಸರ್ವಾಭಿವೃದ್ಧಿ ಯೋಜನಾಸಂಪನ್ನತೆಯನ್ನು ಮೈಗೂಡಿಸಿಕೊಂಡು ಎಲ್ಲರೂ ಏಕರೀತಿಯ ಸಮಾಜಧರ್ಮವನ್ನು ಅನುಸರಿಸುವವರೆಗೆ ಅಲ್ಪಸಂಖ್ಯಾತರ ಅಭಿವೃದ್ಧಿ ಪ್ರಶ್ನೆ ಕನಸಾಗಿಯೇ ಉಳಿಯುತ್ತದೆ. ಈಗಿನ ಸಂದಿಗ್ಧ ಕಾಲದಲ್ಲಿಯೂ ನಮ್ಮ ದೇಶದ ಹೆಮ್ಮೆಯಂತಿರುವ ಕಲೆ ಕೈಗಾರಿಕೆಗಳು ಚೇತನಗೊಂಡು ನಾವು ಮುಂದುವರಿಯಬೇಕಾಗಿದೆ. ಇದಕ್ಕಾಗಿ ತಮ್ಮ ಮಾಸಪತ್ರಿಕೆಯು ದಿಕ್ಸೂಚಿಯಂತೆ ಇದೆ. ಸ್ವಾಮಿ, ನಮ್ಮ ಆಹ್ವಾನವನ್ನು ಮನ್ನಿಸಿ, ಧಾತ್ರೀಹವನ ಮಹೋತ್ಸವದಲ್ಲಿ ದೀಕ್ಷಾಬದ್ಧರಾಗಿ ಆಶೀರ್ವದಿಸಿದುದು ನಮ್ಮ ಸುಕೃತವೆಂದು ಭಾವಿಸಿ ವಿನೀತರಾಗಿ ಮತ್ತೊಮ್ಮೆ ಅಭಿನಂದಿಸುತ್ತೇವೆ".[೨೦]

ಇದೇ ಮಹೋತ್ಸವದಲ್ಲಿ ಕೃಷ್ಣರಾಜನಗರದ ಹೆಬ್ಬಾಳು ಮಾಧ್ಯಮಿಕ ಶಾಲಾ ಶಿಕ್ಷರಾದ ಆಶುಕವಿ ಸಿ. ಕೆ. ಪುಟ್ಟಣ್ಣಾಚಾರ್ಯರು ರಚಿಸಿದ ಅಭಿನಂದನ ಪದ್ಯ ಷಟ್ಪದಿಯನ್ನು ಓದಿದರು. ಈ ಅಭಿನಂದನ ಪದ್ಯದಲ್ಲಿ ವಿಶ್ವಕರ್ಮ ಪತ್ರಿಕೆಯ ಕುರಿತು ಹೀಗೆ ವರ್ಣಿಸಿದ್ದಾರೆ–

**ವಿಶ್ವಕರ್ಮರ ಸುಕೃತ ಬಲದಿಂ**
**ವಿಶ್ವಜನಗಳ ಮನವ ತಣಿಸಲು**
**ವಿಶ್ವದೊಳು ನೆರೆತೋರಿ ಮೆರೆವರು 'ವಿಶ್ವಕರ್ಮ'ನಲಿ**
**ವಿಶ್ವದಾದ್ಯದಿ ಖ್ಯಾತಿ ಗಳಿಸಿಹ**
**ವಿಶ್ವಕರ್ಮನ ಪತ್ರಮುಖದಿಂ**
**ವಿಶ್ವಕರ್ಮರ ನಡೆಯನುಡಿಗಳ ತಿದ್ದಿ ಮೆರೆಯುವರು**
**ಮೆರೆವ ಮಾಸಿಕ ತನ್ನ ಗುಣದಿಂ**
**ಧರೆಯೊಳಗೆ ಕೀರ್ತಿಯನು ಹೊಂದುತ**
**ಪರಿಪರಿಯ ಬೋಧೆಯೊಳು ಜನಗಳ ನಡೆಯ ನುಡಿಗಳನು**
**ಸರಿಪಡಿಸಲು ರಾಜ್ಯಾಂಗ ರಚನೆಯು**
**ನುರಿತ ಲೇಖಕರಿಂದೆ ತೋರಿಸಿ**
**ಸರಸಮೆನೆ ಸಾರತರ ವಿಷಯಾವಳಿಗೆ ನೆಲೆಯಲ್ತೆ**[೨೧]

ವೈದಿಕ ವಿದ್ಯಾ ಪ್ರಚಾರ ಮತ್ತು ವೈಶ್ವಕರ್ಮ ಧರ್ಮ ಪ್ರಚಾರ ಉದ್ದೇಶದಿಂದ ಗಂಗಾಧರ ಮೂರ್ತಿಯವರು ೧೯೪೮ರ ನವೆಂಬರ್ ತಿಂಗಳಿನಲ್ಲಿ ವಿಶ್ವಕರ್ಮ ಪತ್ರಿಕೆಯನ್ನು ಪ್ರಾರಂಭಿಸಿದರು. ಪತ್ರಿಕೆಯ ಪ್ರಚಾರಕ್ಕಾಗಿ ಅವರು ಕರ್ನಾಟಕವನ್ನು ಮಾತ್ರವಲ್ಲ ಭಾರತವನ್ನೂ ಸುತ್ತಿದ್ದರು. ಅವರನ್ನು ಬಲ್ಲವರು ಕಂಡವರು ಅವರ ವ್ಯಕ್ತಿತ್ವ, ವಿದ್ವತ್, ನಡೆನುಡಿಗಳಿಂದ ಪ್ರಭಾವಿತರಾಗಿದ್ದರು. ಗಂಗಾಧರ ಮೂರ್ತಿಗಳೂ ಬಹಳ ಕಷ್ಟ ನಷ್ಟಗಳ ನಡುವೆಯೂ ವಿಶ್ವಕರ್ಮ ಪತ್ರಿಕೆಯನ್ನು ನಡೆಸುತ್ತಿದ್ದರು. ಗುಣಮಟ್ಟದಿಂದ ಅದು ಸಂಗ್ರಹಯೋಗ್ಯ ಪತ್ರಿಕೆಯಾಗಿತ್ತು. ಸಮಾಜಕ್ಕೆ ಪತ್ರಿಕೆ ಅವಶ್ಯಕ ಎಂಬ ಖಚಿತ ನಿಲುವು ಅವರದ್ದಾಗಿತ್ತು.

**ಹರಿಶ್ಚಂದ್ರ ಆಚಾರ್ಯ** : ಗಂಗಾಧರಮೂರ್ತಿಗಳು ದಿನಾಂಕ ೫-೧೦-೧೯೫೩ರಂದು ನಿಧನರಾದರು. ಸಮಾಜಕ್ಕೆ ಇದು ತುಂಬಲಾರದ ನಷ್ಟವಾಗಿತ್ತು. ಗಂಗಾಧರ ಮೂರ್ತಿಯವರ ಶ್ರದ್ಧಾಂಜಲಿ ಸಭೆಗೆ ಆಗಮಿಸಿದ್ದ ಜಿ. ಹರಿಶ್ಚಂದ್ರ ಆಚಾರ್ಯರು 'ಗಂಗಾಧರ ಮೂರ್ತಿಯವರ ನಡೆಸುತ್ತಿದ್ದ ಸಮಾಜ ಸೇವಾ ಕಾರ್ಯಗಳನ್ನು ಮುಂದುವರಿಸುವುದೇ ಅವರಿಗೆ ಸಲ್ಲಿಸುವ ನಿಜವಾದ ಶ್ರದ್ಧಾಂಜಲಿ' ಎಂದು ಘೋಷಿಸಿದರು. ಗಂಗಾಧರ ಮೂರ್ತಿಯವರು ಸಮಾಜ

ಸುಧಾರಣೆಗೆ ಉಪಯೋಗಿಸುತ್ತಿದ್ದ 'ವಿಶ್ವಕರ್ಮ' ಪತ್ರಿಕೆಯನ್ನು ಜೀವಂತವಾಗಿ ಇಡಬೇಕು. ಯಾವುದೇ ಕಾರಣಕ್ಕೂ ಪತ್ರಿಕೆ ನಿಲ್ಲಬಾರದು, ಸಮಾಜವು ಪತ್ರಿಕೆಯಿಂದ ಪ್ರಯೋಜನ ಹೊಂದಬೇಕೆಂಬ ಆಶಯದಿಂದ ಬಿ. ಹರಿಶ್ಚಂದ್ರ ಆಚಾರ್ಯರು ಪತ್ರಿಕೆಯ ಸಂಪಾದನೆಯ ಜವಾಭ್ದಾರಿಯನ್ನು ವಹಿಸಿಕೊಂಡರು. ವಿಶ್ವಕರ್ಮ ಪತ್ರಿಕೆ ಮೈಸೂರಿನಿಂದ ಮಂಗಳೂರನ್ನು ಸೇರಿತು.

ಬಿ. ಹರಿಶ್ಚಂದ್ರ ಆಚಾರ್ಯರು ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಬೇಕೆನ್ನುವ ಹಿರಿಯಾಸೆಯಿಂದ ಕರ್ನಾಟಕದ ಬೇರೆ ಬೇರೆ ಭಾಗಗಳಿಗೆ ಪ್ರವಾಸ ಕೈಗೊಂಡು ಪತ್ರಿಕೆಯ ಚಂದಾದಾರರ ಸಂಖ್ಯೆಯನ್ನು ಹೆಚ್ಚಿಸಲು ಪ್ರಯತ್ನಿಸಿದರು. ಸಂಖ್ಯಾ ಬಲದಲ್ಲಿ ಕಡಿಮೆ ಇರುವ, ಅನಕ್ಷರಸ್ಥರೇ ಬಹುವಾಗಿರುವ ವಿಶ್ವಕರ್ಮ ಸಮಾಜದವರಿಗಾಗಿ ಒಂದು ಪತ್ರಿಕೆಯನ್ನು ನೆಡೆಸುವುದು ಸುಲಭದ ಕೆಲಸ ಅಲ್ಲ. ಅದನ್ನು ಸವಾಲಾಗಿ ಸ್ವೀಕರಿಸಬೇಕು ಅಷ್ಟೇ. ಪತ್ರಿಕೆ ಸಮಾಜಕ್ಕೆ ಅವಶ್ಯಕ ಎಂಬ ಅಭಿಪ್ರಾಯವನ್ನು ಸಮಾಜದ ಬಹುಜನರು ಹೊಂದಿದ್ದರೂ, ಪತ್ರಿಕೆಯ ಆರ್ಥಿಕ ತಳಹದಿಯನ್ನು ಬಲಪಡಿಸಲು ಯಾರೂ ಮುಂದುಬರುತ್ತಿರಲಿಲ್ಲ. ಮುಂದೆ ವಿಶ್ವಕರ್ಮ ಪತ್ರಿಕೆಯ ಪ್ರಕಾಶನದ ಹೊಣೆಗಾರಿಕೆಯನ್ನು ಮಂಗಳೂರಿನ ಆರ್.ವಿ.ಎಸ್.ಸಭಾದ ಅಧ್ಯಕ್ಷರಾಗಿದ್ದ ಪಾಲ್ಕೆ ಬಾಬುರಾಯ ಆಚಾರ್ಯರು ವಹಿಸಿಕೊಂಡರು.

ಹರಿಶ್ಚಂದ್ರ ಆಚಾರ್ಯರು ಎರಡು ಸಲ ಪತ್ರಿಕೆಗೆ ಪುನರ್‌ಜನ್ಮ ಕೊಟ್ಟ ವಿವರವನ್ನು ೧೯೬೦ರ ವಿಶ್ವಕರ್ಮ ಪತ್ರಿಕೆಯ ಸಂಪಾದಕೀಯದಲ್ಲಿ ಹೀಗೆ ಬರೆಯುತ್ತಾರೆ:

"ವಿಶ್ವಕರ್ಮ ಪತ್ರಿಕೆಯು ಗಂಗಾಧರಮೂರ್ತಿಗಳವರಿಂದ ೧೯೪೩ನೇ ಇಸ್ವಿ ದೀಪಾವಳಿಯ ಸಮಯ ಪ್ರಪ್ರಥಮವಾಗಿ ಪ್ರಕಟಿಸಲ್ಪಟ್ಟು ೧೯೫೩ನೇ ಇಸ್ವಿಯವರೆಗೆ ಮಹತ್ವಪೂರ್ಣವಾದ ಹೆಜ್ಜೆಗಳನ್ನಿಡುತ್ತಾ ಗಂಭೀರವಾಗಿ ಮುನ್ನಡೆಯಿತು. ದಿವಂಗತರು ಸಮಾಜದ ಪುನರುದ್ಧಾರಕ್ಕಾಗಿ ಸಲ್ಲಿಸುತ್ತಿದ್ದ ಹಲವಾರು ಸೇವಾ ಕಾರ್ಯಗಳಿಗೆ ಇದೊಂದು ಗುರುತರವಾದ ಸಾಧನವಾಗಿತ್ತು ಆದರೆ ನಮ್ಮೆಲ್ಲರ ದೌರ್ಭಾಗ್ಯವಶಾತ್ ಸಮಾಜದಿಂದ ಸಾಕಷ್ಟು ಸಹಕಾರ ದೊರೆಯದೆ, ಆರ್ಥಿಕ ಬಿಕ್ಕಟ್ಟು ಬಲವಾಗಿ, ಅನಿವಾರ್ಯವಾಗಿ ಪತ್ರಿಕೆಯನ್ನು ನಿಲ್ಲಿಸಬೇಕಾದ ಕಠಿಣ ಕಾಲ ಒದಗಿ ಕೆಲವೇ ತಿಂಗಳಲ್ಲಿ ಅವರ ಸೇವಾಭಕ್ತಿಗೆ ಮೆಚ್ಚಿ ಪರಮಾತ್ಮನು ಅವರನ್ನು ಕಲಿಸಿಕೊಂಡನೊ ಎಂಬಂತೆ ಶ್ರೀಯುತರು ಅನಿರೀಕ್ಷಿತ ಹಾಗೂ ಅಕಾಲ ಮೃತ್ಯುವಶರಾದರು. ಆಗ ಇಡೀ ಕರ್ನಾಟಕದ ವಿಶ್ವಕರ್ಮರು ಅವರ ಸೇವೆಯನ್ನು ಸ್ಮರಿಸಿ ಕಣ್ಣೀರ್ಗರೆದರು.

ಪತ್ರಿಕೆಯು ಸಮಾಜಕ್ಕೆ ಹಾಗೂ ಕನ್ನಡ ಸಾಹಿತ್ಯಕ್ಕೆ ಸಲ್ಲಿಸುತ್ತಿದ್ದ ಅಮೂಲ್ಯ ಸೇವೆಯನ್ನು ಅರಿತು ಅನೇಕ ಮಹನೀಯರು ಪುನಃ ಪತ್ರಿಕೆಯನ್ನು ಹೊರಡಿಸುವವರಿಲ್ಲದೆ, ಸಮಾಜಕ್ಕೊಂದು ಕೈಗನ್ನಡಿ ಇಲ್ಲದಂತಾಯಿತೆಂದು ಪರಿತಪಿಸುವುದನ್ನು ಕಂಡು, ಅಲ್ಲದೆ ಸಮಾಜದ ಏಳಿಗೆಗಾಗಿ

ಅವಿಶ್ರಾಂತವಾಗಿ ದುಡಿದು ಎಲ್ಲೆಲ್ಲಿಯೂ ನವ ಜಾಗ್ರತಿಯನ್ನುಂಟು ಮಾಡಿ ಆ ಪುಣ್ಯ ಪುರುಷನ ಚಿರಸ್ಮರಣೆಗಾಗಿ ಕೂಡಾ 'ವಿಶ್ವಕರ್ಮ'ನು ಪುನಃ ಅವತರಿಸುವ ಅಗತ್ಯವಿದೆ ಎಂಬುದನ್ನು ಮನಗಂಡು ೧೯೫೪ನೇ ನವೆಂಬರ್‌ನಲ್ಲಿ ಮಂಗಳೂರಿನಿಂದ ಎರಡನೇ 'ವಿಶ್ವಕರ್ಮ'ನು ಪ್ರಕಟವಾಗುವಂತಾಯಿತು. ಆದರೆ ೯ ತಿಂಗಳವರೆಗೆ ಬಹಳ ಕಷ್ಟದಲ್ಲಿ ನಡೆದು ದ್ರವ್ಯಾಭಾವದಿಂದ ವಿಧಿಯಿಲ್ಲದೆ ನಿಲ್ಲಿಸಿ ಬಿಡಬೇಕಾಯಿತು. ಇಡೀ ವರ್ಷದ ಚಂದಾ ಕೊಟ್ಟವರ ಮನಸ್ಸನ್ನು ನೋಯಿಸಬೇಕಾಗಿ ಬಂದುದಕ್ಕಾಗಿ ನಾವು ತುಂಬಾ ವ್ಯಸನ ಪಡುತ್ತೇವೆ.

ಇದೀಗ 'ವಿಶ್ವಕರ್ಮ'ನ ೩ನೇ ಜನ್ಮ. ಮನುಷ್ಯನು ಸಾಹಸಜೀವಿ; ಅಪಜಯವು ಜಯದ ಮೆಟ್ಟಿಲೆಂದು ಭಾವಿಸಿ ಮುಗ್ಗರಿಸಿ ಬಿದ್ದಲ್ಲಿಂದ ಎದ್ದು ಹೆಜ್ಜೆ ಇಡುತ್ತಾ ಸಂಕಲ್ಪಿತ ಉದ್ದೇಶದೆಡೆಗೆ ಸಾಗುವುದೇ ಉನ್ನತಿ ಸಾಧನೆಯ ವೈಶಿಷ್ಟ್ಯವೆಂದು ಬಲ್ಲವರ ಮತ. ಹೀಗಿರುತ್ತ ಪತ್ರಿಕಾ ವ್ಯವಸಾಯದಿಂದ ಕೈ ಸುಟ್ಟುಕೊಂಡರೂ, ಪತ್ರಿಕೆಯಿಂದ ಸಮಾಜಕ್ಕೆ ಹಾಗೂ ಮಾನವ ಜನಾಂಗಕ್ಕೆ ಆಗುವ ಅಪಾರ ಉಪಕಾರವನ್ನು ಗಮನಿಸಿ ಹಾಗೂ ಗಂಗಾಧರ ಮೂರ್ತಿಗಳವರ ನೆನಪಿಗಾಗಿ, ಮಹಾಜನರ ಪ್ರೋತ್ಸಾಹದ ಮೇಲೆ ಸಂಪೂರ್ಣ ಭರವಸೆಯನ್ನಿಟ್ಟು, ಮೂರನೇ ಪ್ರಯತ್ನಕ್ಕೆ ತೊಡಗಿರುತ್ತೇವೆ. ಈ ಉದ್ದೇಶದಲ್ಲಿ ನೆರವಾಗಿ ಈ ಮಹತ್ಕಾರ್ಯವನ್ನು ಸಾರ್ಥಕಗೊಳಿಸುವುದು ನಮ್ಮೆಲ್ಲರ ಕೈಯಲ್ಲಿದೆ.

ಪತ್ರಿಕೆಯು ಪ್ರತಿತಿಂಗಳ ತಾರೀಕು ೫ಕ್ಕೆ ಹೊರಬೀಳುವುದು. ಕೇವಲ ವಿಶ್ವಕರ್ಮರಿಗೆನೇ ಅಲ್ಲದೆ ಸಾರ್ವಜನಿಕರಿಗೂ ಪ್ರಯೋಜನಕಾರಿಯಾಗಿ ದೇಶದ ಹಿತಾಸಕ್ತಿಯನ್ನು ಮುಂದಿಟ್ಟುಕೊಂಡು ದುಡಿಯುವುದು ಪತ್ರಿಕೆಯ ಮುಖ್ಯ ಧ್ಯೇಯವಾಗಿದೆ. ಆದ್ದರಿಂದ ಮಹಾಜನರು 'ವಿಶ್ವಕರ್ಮ'ನನ್ನು ಆದರದಿಂದ ಸ್ವೀಕರಿಸಿ, ಪ್ರೋತ್ಸಾಹಿಸುವರಾಗಿ ನಂಬುತ್ತೇವೆ".[೨೨]

ವಿಶ್ವಕರ್ಮ ಪತ್ರಿಕೆಯ ಬಗ್ಗೆ ಶ್ರೀ ಜ್ಞಾನಾನಂದರು ಬರೆಯುತ್ತಾ "ವಿಶ್ವಕರ್ಮ ಪತ್ರಿಕೆಗೆ ರಂಗು ಬಂದಂತೆ ಕಾಣುತ್ತಿದೆಯಾದರೂ ಸಮಾಜದ ಮುಖವಾಣಿಯಾಗಲು ಹಾಗೂ ಸಮಗ್ರ ಸಮಾಜಕ್ಕೆ ಪ್ರಯೋಜನಕಾರಿಯಾಗಲು ಪತ್ರಿಕೆ ಇನ್ನೂ ದೂರ ಪ್ರಯಾಣ ಕೈಕೊಳ್ಳಬೇಕಾದ ಅವಶ್ಯಕತೆ ಇದೆ. ಕರ್ನಾಟಕದಲ್ಲಿ ನಿಯತಕಾಲಿಕವಾಗಿ, ಕ್ರಮವಾಗಿ ಪ್ರಕಟವಾಗುತ್ತಿರುವ ಏಕೈಕ ಪತ್ರಿಕೆ ವಿಶ್ವಕರ್ಮ".[೨೩] ಇದೇ ಪತ್ರಿಕೆಯ ಮಹತ್ವ! ಪತ್ರಿಕೆಯನ್ನು ಉಳಿಸಿ ಬೆಳೆಸುವುದು ಸಮಾಜದ ಹೊಣೆಗಾರಿಕೆ ಎಂದು ಹೇಳಿದ್ದಾರೆ.

ಬಿ. ಹರಿಶ್ಚಂದ್ರ ಆಚಾರ್ಯರು ಪತ್ರಿಕೆಯನ್ನು ಪಾಲ್ಕೆ ಬಾಬುರಾಯ ಅವರಿಗೆ ಒಪ್ಪಿಸಿದರು. ಅವರು ಕೆಲವು ವರ್ಷ ಪತ್ರಿಕೆಯನ್ನು ಮುನ್ನಡೆಸಿದರು. ಆದರೆ ಪಾಲ್ಕೆ ಬಾಬುರಾಯ ಆಚಾರ್ಯರು ದಿನಾಂಕ:೧೭.೧೨.೧೯೮೬ರಂದು ನಿಧನರಾದರು. ಪಾಲ್ಕೆಯವರಿಗೆ ಶ್ರದ್ಧಾಂಜಲಿ ಸಲ್ಲಿಸಲು ಹೊರತಂದ ಸಂಚಿಕೆಯೇ ವಿಶ್ವಕರ್ಮ ಪತ್ರಿಕೆಯ ಕೊನೆಯ ಸಂಚಿಕೆಯಾಯಿತು.

ಹರಿಶ್ಚಂದ್ರ ಆಚಾರ್ಯರು ವಿಶ್ವಕರ್ಮರಲ್ಲಿ ಬೆಳೆಯುತ್ತಿದ್ದ ಒಳಪಂಗಡಗಳ ಬಗೆಗೆ ತುಂಬ ಬೇಸರಪಟ್ಟಿದ್ದರು. ನಮ್ಮಲ್ಲಿರುವ ಭಾಷಾಭೇದ, ಪ್ರಾದೇಶಿಕ ಭೇದಗಳನ್ನು ಹೇಗೆ ತೊಡೆದು ಹಾಕುವುದೆಂದು ಅವರು ಪರಿತಪಿಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭಾಷಾಭೇದವೇ ಇರಬಾರದು. ಎಲ್ಲರೂ ಕನ್ನಡವೇ ಮಾತನಾಡೋಣವೆಂದು ಅವರು ಕನ್ನಡದಲ್ಲೇ ಸಜಾತೀಯ ಬಾಂಧವರೊಡನೆ ವ್ಯವಹರಿಸಲು ಕರೆಯಿತ್ತರು. ಇಂಥ ಸಂದರ್ಭದಲ್ಲಿಯೇ ವಿಶ್ವಕರ್ಮ ಸಮುದಾಯಕ್ಕೆ ಒಂದು ದೊಡ್ಡ ಸಾಮಾಜಿಕ ಆಘಾತ ಒದಗಿತು.

"ಮಂಗಳೂರಿನ ಒಬ್ಬ ಗಣ್ಯ ವ್ಯಕ್ತಿ ಮೈಸೂರಿನ ಕಡೆಯವರ ಸಂಬಂಧ ಬೆಳೆಸಿದರು. ಮದುವೆ ನಿಶ್ಚಯವಾದೊಡನೆ ದೊಡ್ಡ ಕೋಲಾಹಲ ನಡೆಯಿತು. ಮೈಸೂರು ಕಡೆಯವರದ್ದೊಂದು ಪಕ್ಷ, ಮಂಗಳೂರು ದೇವಸ್ಥಾನದ ಕಡೆಯವರದ್ದೊಂದು ಪಕ್ಷ. ಹೀಗೆ ಎರಡು ಪಕ್ಷಗಳು ಸೃಷ್ಟಿಗೊಂಡವು. ವಿಚಾರವಾದಿಗಳೆಲ್ಲ ಮೈಸೂರು ಕಡೆಯವರನ್ನು ಸೇರಿಕೊಂಡರು. ಸಂಪ್ರದಾಯವಾದಿಗಳು ದೇವಸ್ಥಾನದ ಪಕ್ಷ ಸೇರಿಕೊಂಡರು. ಇಡೀ ಸಮಾಜವೇ ಇಬ್ಭಾಗವಾಯಿತು. ಒಂದೇ ಜಾತಿ, ಪಂಗಡಗಳಿಗೆ ಸೇರಿದವರಾದರೂ ಪರಸ್ಪರ ಸಂಬಂಧ ಕಳೆದುಕೊಂಡು ಕೊಡು–ಕೊಳ್ಳುವಿಕೆಗಳನ್ನು ನಿಲ್ಲಿಸಿ ಬಿಟ್ಟರು. ಕೊನೆಗೆ ಪರಸ್ಪರ ಮಾತುಕತೆ ಕೂಡ ನಿಂತು ಹೋಯಿತು. ಈ ಸಂದರ್ಭದಲ್ಲಿ ಎರಡು ಕಡೆಯವರನ್ನು ಒಂದುಗೂಡಿಸಲು ಹರಿಶ್ಚಂದ್ರಾಚಾರ್ಯರು ಬಹಳಷ್ಟು ಪ್ರಯತ್ನ ನಡೆಸಿದರು. ಈ ಹೋರಾಟದ ಕಾವು ಮಂಗಳೂರಲ್ಲಷ್ಟೇ ಅಲ್ಲ ಹಳ್ಳಿ ಹಳ್ಳಿಗೂ ತಲುಪಿತು. ಕೊನೆಗೆ ಈ ನ್ಯಾಯ ಇತ್ಯರ್ಥಗೊಳಿಸಲು ಗಣ್ಯರೇ ಬರಬೇಕಾಯಿತು. ಖ್ಯಾತ ಸ್ವಾತಂತ್ರ್ಯ ಹೋರಾಟಗಾರ ಎನ್. ಎಸ್. ಕಿಲ್ಲೆಯವರು ಬಂದು ಪರಸ್ಪರ ಎರಡು ಪಕ್ಷದವರನ್ನು ಒಂದುಗೂಡಿಸಿದರು. ಈ ಸಂದರ್ಭದಲ್ಲಿ ಹರಿಶ್ಚಂದ್ರ ಆಚಾರ್ಯರು ನಡೆಸಿದ ಸಂಧಾನಕಾರ್ಯ ಸ್ಮರಣೀಯವಾದುದು.

"ವಿಶ್ವಕರ್ಮರು ತಮ್ಮ ಒಳಪಂಗಡಗಳ ಬೇಲಿ ಕಳಚಿ ಹೊರಬರಬೇಕು. ದೇಶದ ವಿಶ್ವಕರ್ಮರೆಲ್ಲ ಒಂದಾಗಬೇಕು. ನಮ್ಮೊಳಗೆ ನಾವೇ ಭಾಷೆಗಾಗಿ, ಪ್ರಾದೇಶಿಕತೆಗಾಗಿ, ಸಂಪ್ರದಾಯಕ್ಕಾಗಿ ಕಚ್ಚಾಟ ನಡೆಸುತ್ತಾ ಇದ್ದರೆ ನಮ್ಮಲ್ಲಿ ಒಗ್ಗಟ್ಟು ಒಂದಾಗಲು ಸಾಧ್ಯವೇ. ಒಗ್ಗಟ್ಟಿಲ್ಲದೆ ನಾವು ಉದ್ಧಾರವಾಗುವುದಾದರೂ ಹೇಗೆ? ನಾವೇ ನಮ್ಮೊಳಗಿನವರನ್ನು ಪರಸ್ಪರ ಹೀಯಾಳಿಸುತ್ತಿದ್ದರೆ ದುರ್ಬಲರಾಗಿ ಬಿಡುತ್ತೇವೆ. ನಮ್ಮನ್ನು ಇತರರು ಅಧಃಪತನಕ್ಕೆ ತಳ್ಳುವಾಗ ಯಾರೂ ಮೇಲೆತ್ತಲೂ ಬರುವುದಿಲ್ಲ" ಎಂದವರು ವಿಶ್ವಕರ್ಮರಿಗೆ ಕಿವಿಮಾತು ಹೇಳಿದ್ದರು".[೨೪]

ವಿಶ್ವಕರ್ಮ ಪತ್ರಿಕೆಯಲ್ಲಿ ಸಹಸಂಪಾದಕರಾಗಿ ಅನುಭವ ಗಳಿಸಿದ್ದ ಜೈಕಾಡಿ ಜನಾರ್ದನ ಆಚಾರ್ಯರು ನಂತರ 'ಸಹಚಿಂತನ' ಎಂಬ ಮತ್ತೊಂದು ಪತ್ರಿಕೆಯನ್ನು ಪ್ರಾರಂಭ ಮಾಡಿದರು. ಇಂದಿಗೂ ಆ ಪತ್ರಿಕೆ ಪ್ರಕಟವಾಗುತ್ತಿದೆ.

ಗಂಗಾಧರ ಮೂರ್ತಿಗಳ ಜೊತೆಗೆ ವಿಶ್ವಕರ್ಮ ಪತ್ರಿಕೆಯ ಶ್ರೇಯಸ್ಸಿಗಾಗಿ ದುಡಿದ ಮಹನೀಯರಲ್ಲಿ ನಾ. ಭಾ. ಚಂದ್ರಶೇಖರಾಚಾರ್ಯರು ಪ್ರಮುಖರು. ಅವರ ಸೇವೆಯನ್ನೂ ಪರಿಗಣಿಸಲೇಬೇಕು.

**ಜೀವಣ್ಣ ಮಸಳಿ :**

**"ತಾಯಿಯಾದರೇನು ದೇವರಾದರೇನು**
**ಯಾವನಾದರೆ ನನಗೇನು? ನಾ ನನ್ನ**
**ನ್ಯಾಯವಿದ್ದಂತೆ ಉಸುರುವೆನು॥**
**ಆಡಿದಂತಾಡಿದರೆ ಕೋಡಗನ ಮುಖ ಪದ್ಮ**
**ಮೋಡದೊಳು ಮೂಡಿದ ದಿನಕರನಂತೆ**
**ಬಾಡೀತೇಳಯ್ಯ ಬಸವಣ್ಣ"**[೨೫]

ಶ್ರೀ ಮೌನೇಶ್ವರರ ಈ ಮೇಲಿನ ವಚನಗಳ ಸಾಲುಗಳು ಮಾನವನ ನಿಷ್ಠುರ ಬದುಕಿಗೆ ಪೂರಕವಾಗಿವೆ. ಮೌನೇಶ್ವರರ ವಚನಗಳಂತೆ ನಿಷ್ಠುರ, ಸರಳ, ಸಜ್ಜನಿಕೆಯ ಆದರ್ಶ ಕುಟುಂಬವನ್ನು ರೂಪಿಸಿಕೊಂಡಿದ್ದ ಹಿರಿಯ ಸಾಹಿತಿಗಳು, ಸಂಶೋಧಕರಾದ ಶ್ರೀ ಜೀವಣ್ಣ ಮಸಳಿಯವರು ಅಂದಿನ ವಿಜಯಪೂರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಆಲಮಟ್ಟಿಯ ಹಿನ್ನಿರಿನಲ್ಲಿ ಮುಳಗಡೆಯಾಗಿರುವ ಚಿಮ್ಮಲಗಿ ಗ್ರಾಮದ ಶ್ರೀ ಕೇಶಪ್ಪ ಮಸಳಿಯವರ ಮಗನಾಗಿ ಶ್ರೀ ಜೀವಣ್ಣ ಮಸಳಿಯವರು ೦೨ ಫೆಬ್ರುಬರಿ ೧೯೨೯ ರಲ್ಲಿ ಜನಿಸಿದರು. ಇವರು ತಮ್ಮ ಪ್ರಾಥಮಿಕ ಶಿಕ್ಷಣ ಚಿಮ್ಮಲಗಿ ಮತ್ತು ಮುದ್ದೆಬೀಹಾಳದಲ್ಲಿ ಪೊರೈಸಿದ ನಂತರ ಮುಂದೆ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಆಗಿನ ಕಾಲದ ಗೌಂಟಿ ಶಾಲೆಯಲ್ಲಿ ಸೇವೆಯನ್ನು ಪ್ರಾರಂಭಿಸಿದರು. ಸುಮಾರು ಮೂವತ್ತು ವರ್ಷಗಳ ಕಾಲ ವಿಜಾಪೂರ, ಅಮಿನಗಡ, ಹುನಗುಂದ, ಅಮರಾವತಿ, ಬಾಗಲಕೋಟಯಲ್ಲಿ ಶೈಕ್ಷಣಿಕ ಕ್ಷೇತ್ರದ ಅನುಪಮ ಸೇವೆಗೈದಿದ್ದಾರೆ. ತಮ್ಮ ಸೇವಾವಧಿಯ ಎರಡು ವರ್ಷಗಳ ಮುಂಚಿತವಾಗಿ ಸ್ವ ಇಚ್ಛೆಯಿಂದ ನಿವೃತ್ತಿ ತಗೆದುಕೊಂಡು ವೈಶ್ವಕರ್ಮಣ ಸಮಾಜದ ಸಾಹಿತ್ಯ ಸೇವೆಗಾಗಿ ಪೂರ್ಣ ಪ್ರಮಾಣದ ಜೀವನವನ್ನು ಮುಡುಪಾಗಿಟ್ಟಿದ್ದರು.

ಸಮಾಜ ಸುಧಾರಕರು, ಸಾಹಿತಿಗಳು, ಪತ್ರಿಕಾ ಸಂಪಾದಕರಾಗಿದ್ದ ವಿಶ್ವಕರ್ಮರ ಕರ್ಮಯೋಗಿ ಜೀವಣ್ಣ ಮಸಳಿಯವರು ಜೀವನದಲ್ಲಿ ನುಡಿದಂತೆ ನಡೆದರು, ನಡೆದಂತೆ ಬದುಕಿದವರು. ನಿರ್ಭಿಡೆಯಿಂದ, ನಿರರ್ಗಳವಾಗಿ, ಸರಳ ಶೈಲಿಯ ಸರ್ವರಿಗೂ ಮನಮುಟ್ಟುವ ಬರಹಗಾರರಲ್ಲಿ ಇವರು ಪ್ರಮುಖರಾಗಿದ್ದರು. ಆರನೇಯ ತರಗತಿಯಲ್ಲಿರುವಾಗಲೇ ಜೀವಣ್ಣನವರು ಕವನವನ್ನು ರಚಿಸಿ, ಶಿಕ್ಷಕರಿಂದ ಸೈ ಎನಿಸಿಕೊಂಡವರಿವರು. ಬಾಲ್ಯದಲ್ಲಿರುವಾಗಲೇ ಸಾಹಿತ್ಯ ಸಂಸ್ಕೃತಿಯ ಅಭಿರುಚಿಯನ್ನು ಮೈಗೂಡಿಸಿಕೊಂಡು ಬರವಣಿಗೆಯ ಸವಿರುಚಿಯನ್ನು ಪ್ರಾರಂಭಿಸಿಕೊಂಡರು.

ನಾಡಿನುದ್ದಗಲಕ್ಕೂ ನಡೆಯುತ್ತಿದ್ದ ಸ್ವಾತಂತ್ರ್ಯದ ಚಳುವಳಿಯ ಸಮಯದಲ್ಲಿ ಸಾಹಿತ್ಯ ಕೃಷಿ ಮಾಡುತ್ತಿದ್ದ ಜಾನಪದ ಗಾರುಡಿಗ ದ.ರಾ.ಬೇಂದ್ರೆಯವರ, ಹಲಸಂಗಿಯ ಕಾವ್ಯರ್ಷಿ ಮಧುರ ಚೆನ್ನರ, ಗ್ರಂಥಾಲಯ ವಿಜ್ಞಾನಿಗಳಾದ ಡಾ.ಎಸ್.ಆರ್.ಗುಂಜಾಳವರ ಸ್ನೇಹ ಸಂಪರ್ಕದ ಫಲವಾಗಿ ಅವರುಗಳ ಸಾಹಿತ್ಯದ ಪ್ರಭಾವದಿಂದ ಜೀವಣ್ಣ ಮಸಳಿಯವರು ಸಾಹಿತ್ಯ ಮತ್ತು ಸಂಶೋಧನೆಯಲ್ಲಿ ಸುಮಾರು ಮೂವತ್ತುನಾಲ್ಕು ಗ್ರಂಥಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ.

ಜೀವಣ್ಣ ಮಸಳಿಯವರು ಪತ್ರಿಕೋದ್ಯಮದಲ್ಲಿ ಆಸಕ್ತಿವುಳ್ಳರಾಗಿದ್ದು, ತಮ್ಮ ಧರ್ಮಪತ್ನಿಯವರಾದ ದಿವಂಗತ ಶ್ರೀಮತಿ ಜಯದೇವಿಯವರ ಸಂಪಾದಕತ್ವದಲ್ಲಿ ಸುಮಾರು ೧೯೭೦-೮೦ರ ದಶಕದಲ್ಲಿ ಬಾಗಲಕೋಟದಲ್ಲಿ ವಿಶ್ವ ದರ್ಶನ ಎಂಬ ವಾರ ಪತ್ರಿಕೆ ಪಾರಂಭಿಸಿ ಹದಿನೈದು ವರ್ಷಗಳ ಕಾಲ ನಡೆಸಿದರು. ಮುಂದೆ ಇದೇ ಪತ್ರಿಕೆಯು ಎರಡ್ಮೂರು ವರ್ಷಗಳ ಕಾಲ ದಿನ ಪತ್ರಿಕೆಯಾಗಿಯೂ ಪ್ರಸಾರಗೊಂಡಿದೆ. ಈ ಪತ್ರಿಕೆಯು ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ, ಧಾರ್ಮಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿಯ ಸುದ್ದಿಗಳನ್ನು, ಲೇಖನಗಳನ್ನು, ಸಂಪಾದಕೀಯ ಮತ್ತು ಜಾಹಿರಾತುಗಳನ್ನು ಅತ್ಯುತ್ತಮವಾಗಿ ಪ್ರಸಾರ ಮಾಡಿದೆ.

ತಮ್ಮ ಸಾಹಿತ್ಯಾಭಿರುಚಿಯ ಜೊತೆ ಜೊತೆಗೆ ದಿನ ಪತ್ರಿಕೆಗಳು, ಮಾಸ ಪತ್ರಿಕೆಗಳನ್ನು ಓದುವ ಹವ್ಯಾಸ ಬೆಳಸಿಕೊಂಡಿದ್ದ ಇವರು ಒಬ್ಬ ಪ್ರಾಮಾಣಿಕ ಸತ್ಯ ಶೋಧಕರಾಗಿ, ದೈವಿಭಕ್ತರಾಗಿ, ಸಮಾಜ ಚಿಂತಕರಾಗಿ ಪತ್ರಿಕಾ ರಂಗದ ಮೂಲಕ ಅಪಾರ ಕೊಡುಗೆಯನ್ನು ನಾಡಿಗೆ ನೀಡಿದ್ದಾರೆ. ಇವರು ತಮ್ಮ ಪತ್ರಿಕೆಯ ಸಂಪಾದಕರಾಗಿ ಕಾರ್ಯ ಮಾಡುವಾಗ ಇನ್ನೊಬ್ಬರನ್ನು ಮೆಚ್ಚಿಸುವದಕ್ಕಾಗಿ, ಇನ್ನೊಬ್ಬರಿಂದ ಮೆಚ್ಚಿಸಿಕೊಳ್ಳಲಿಕ್ಕಾಗಲಿ ಅವರು ಬದುಕಲಿಲ್ಲ. ಪತ್ರಿಕೆಯ ಮೂಲಕ ಧಾರ್ಮಿಕ, ಸಾಮಾಜಿಕ, ಸೇವಯೊಂದೇ ಮುಖ್ಯ ಉದ್ದೇಶವಾಗಿಟ್ಟುಕೊಂಡಿದ್ದರು.

ಜೀವಣ್ಣ ಮಸಳಿಯವರು ೧೯೫೨ರಲ್ಲಿ ವಿಜಾಪೂರದ ಮುನ್ಸಿಪಲ್ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸುವಾಗ ವಚನ ಪಿತಾಮಹ ಫ.ಗು.ಹಳಕಟ್ಟಿಯವರ ಹಾಗೂ ಕರ್ನಾಟಕದ ಗಾಂಧಿ, ಹೋರಾಟಗಾರರು, ಬರಹಗಾರರು, ಪತ್ರಕರ್ತರೂ ಆಗಿದ್ದ ಹರ್ಡೇಕರ ಮಂಜಪ್ಪನವರ ಪ್ರೇರಣೆ, ಪ್ರಭಾವ, ಸಂಪರ್ಕದಿಂದಾಗಿ ಪತ್ರಿಕೆಯ ಮೂಲಕ ಸಾಹಿತ್ಯವನ್ನು ಸಮಾಜಕ್ಕೆ ತಲುಪಿಸುವ ಹಂಬಲದಿಂದ ಬಾಗಲಕೋಟೆಯಲ್ಲಿ ಸಂಘಟಕ ಪತ್ರಿಕೆಯ ನಂತರ ಎರಡನೆಯ ಸ್ಥಳೀಯ ಪತ್ರಿಕೆಯಾಗಿ ಅಂದು ವಿಶ್ವ ದರ್ಶನ ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯ ಕಾರ್ಯಕೆಲಸಕ್ಕೆ ತಮ್ಮ ಇಡೀ ಕುಟುಂಬದವರ ಶ್ರಮದ ಸೇವೆಯೊಂದಿಗೆ ಸುಮಾರು ಹದಿನೈದು ವರ್ಷಗಳ ಕಾಲ ಈ ಪತ್ರಿಕೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದಾರೆ.

ಜೀವಣ್ಣ ಮಸಳಿಯವರ ವಿಶ್ವ ದರ್ಶನ ಪತ್ರಿಕೆ ಪ್ರಾರಂಭಿಸಿದ ಅವಧಿಯಲ್ಲಿ ಈ ಪತ್ರಿಕೆಯ ಪ್ರಸಾರದ ಕೆಲಸವು ತುಂಬಾ ಕಠಿಣಮಯವಾಗಿತ್ತು. ಪತ್ರಿಕೆಯ ಪ್ರಕಟಣೆಯಲ್ಲಿ ಎಷ್ಟೇ ಕಷ್ಟ ಕಾರ್ಪಣ್ಯಗಳು ಎದುರಾದರೂ ಪ್ರಸಾರದ ಕೆಲಸವನ್ನು ನಿಲ್ಲಿಸದೇ ಕಾರ್ಯವನ್ನು ಮಾಡಿದ್ದಾರೆ.

ಆ ದಿನದ ವಿಶ್ವದರ್ಶನ ಪತ್ರಿಕೆಯ ಕಾರ್ಯನಿರ್ವಾಹಕರಾಗಿ ಇವರ ಕಿರಿಯ ಚಿರಂಜೀವಿ ಕರುಣಾಕರ ಮಸಳಿಯವರು ಅಂದರೆ ಇಂದಿನ ವಿಚಾರ ಸಂಕಿರಣದ ದಿವ್ಯ ಸಾನಿಧ್ಯ ವಹಿಸಿರುವ ಪರಮ ಪೂಜ್ಯರು, ರಾಷ್ಟ್ರಸಂತ ವೇದವೇದಾಂತಾಚಾರ್ಯ ಸ್ವಾಮಿ ಶಿವಾತ್ಮಾನಂದ ಸರಸ್ವತೀ ಗುರುಜೀಯವರ ಅಪಾರ ಪರಿಶ್ರಮದಿಂದ ಪತ್ರಿಕೆಯು ಸೃಜನಶೀಲತೆಯಿಂದ ಸಮಾಜದ ಸರ್ವರಿಗೂ ತಲುಪತ್ತಲೆಯಿತ್ತು.

ವಿಶ್ವದರ್ಶನ ಪತ್ರಿಕೆಯ ಸೇವೆಯಲ್ಲಿ ಇವರ ಹಿರಿಯ ಚಿರಂಜೀವಿಯಾದ ಆನಂದ ಮಸಳಿಯವರು ತಾವು ಚಿಕ್ಕವರಿದ್ದಾಗಿನ ನೆನಪುಗಳನ್ನು ಬಿಚ್ಚುತ್ತಾ ತಮ್ಮ ತಂದೆಯವರೊಂದಿಗೆ ಬಾಗಲಕೋಟೆಯ ಕಾರಿಹಳ್ಳದ ಹತ್ತಿರಯಿರುವ ಚಿಕ್ಕ ಬಾಡಿಗೆಯ ಮನೆಯ ಒಂದು ಕೋಣೆಯಲ್ಲಿ ಮುದ್ರಣದ ಕೆಲಸವನ್ನು ಮಾಡಿರುವ ಆ ದಿನಗಳಲ್ಲಿ ತಂದೆಯವರು ಶಾಲೆಯಿಂದ ಬರುವಷ್ಟರಲ್ಲಿಯೇ ಪತ್ರಿಕೆಯ ಸುದ್ದಿಗಳನ್ನು ಸಿದ್ಧಪಡಿಸಲು ಅಕ್ಷರದ ಮಳಿಗಳನ್ನು ಜೋಡಿಸುವ ಕಾರ್ಯದ ಜೊತೆಗೆ ಮುದ್ರಣ ಕೆಲಸವನ್ನು ಇವರೇ ಅಣ್ಣತಮ್ಮಂದಿರು ನಿರ್ವಹಿಸುತ್ತಿದ್ದರು. ಇವರ ಅಪಾರ ಶ್ರಮದ ಕೆಲಸ ಸ್ಮರಣೀಯವಾದದ್ದು. ಪತ್ರಿಕೆಯ ಹಂಚುವ ಹುಡಗರು ಯಾರಾದರೂ ಬರದೆ ಇದ್ದ ದಿನ ಸ್ವತಃ ಸೈಕಲ್ ಏರಿ ಪತ್ರಿಕೆಯ ಗಂಟು ಇಟ್ಟುಕೊಂಡು ಮನೆ ಮನೆಗಳಿಗೆ, ಕಛೇರಿಗಳಿಗೆ ಪತ್ರಿಕೆಯನ್ನು ತಲುಪಿಸುವ ಜವಾಬ್ದಾರಿಯುತ ಕೆಲಸವನ್ನು ಸಂಕೋಚವಿಲ್ಲದೇ ಮಾಡಿರುವ ಹೆಗ್ಗಳಿಕೆ ಇವರದು.

ಜೀವಣ್ಣ ಮಸಳಿಯವರು ಪತ್ರಿಕೆಯನ್ನು ಪ್ರಾರಂಭಿಸಿದ ಮೇಲೆ ಹತ್ತು ಹಲವಾರು ತೊಂದರೆಗಳನ್ನು ಅನುಭವಿಸಿದ್ದರೂ ಛಲ ಬಿಡದ ಛಲಗಾರನಂತೆ ಪತ್ರಿಕಾ ಸೇವೆಯ ಸಲುವಾಗಿಯೇ ತಮ್ಮ ಶಿಕ್ಷಕ ವೃತ್ತಿಗೆ ಇನ್ನೂ ಎರಡು ವರ್ಷಗಳ ಸೇವೆ ಇರುವಾಗಲೇ ನಿವೃತ್ತಿ ಪಡೆದು ಸಾಹಿತ್ಯ, ಸಂಶೋಧನೆ ಹಾಗೂ ಪತ್ರಿಕಾ ಸೇವೆಯ ಕ್ಷೇತ್ರಕ್ಕೆ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಪ್ರಚಾರದಿಂದ ದೂರವಿದ್ದ ಜೀವಣ್ಣ ಮಸಳಿಯವರ ಪ್ರೀತಿ, ಪ್ರೇಮ, ಮಮತೆ ವಾತ್ಸಲ್ಯ, ತ್ಯಾಗದ ಪಾವಿತ್ರ್ಯತೆ ಬಿಂಬಿಸುವ 'ನರಕದಲ್ಲಿ ನಂದಾದೀಪ', 'ರಾಮಾಯಣದಲ್ಲಿ ವೈಶ್ವಕರ್ಮರು', 'ಮೌನೇಶ್ವರರ ವಚನಗಳ ಸಂಗ್ರಹ', ವಿಶ್ವಕರ್ಮ ಜನಾಂಗದವರ ಸಮಗ್ರ ಬದುಕಿನ ಬಗೆಗೆ 'ಮಹಾಮನು' ಕಾದಂಬರಿ ಸೇರಿದಂತೆ ಸುಮಾರು ೩೪ ಕೃತಿಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ. ತಮ್ಮ ಬದುಕಿನ ಬಹು ಭಾಗವನ್ನು ಪತ್ರಿಕಾ ಸೇವೆಯಲ್ಲಿ ಕಳೆದಿದ್ದಾರೆ.

ವಿಶ್ವದರ್ಶನ ಹೆಸರಿನಲ್ಲಿ ಪ್ರಕಟವಾಗುತ್ತಾ ಬಂದಿರುವ ಈ ಪತ್ರಿಕೆಯ ಸಂಪುಟ ೧೨ – ಸಂಚಿಕೆ ೨೫–೨೬ ರಲ್ಲಿ ಮುಖ ಪುಟದಲ್ಲಿ ಪ್ರಜಾರಾಜ್ಯ ಎಲ್ಲಿದೆ? ಎಂಬ ಅರ್ಥಪೂರ್ಣವಾಗಿರುವ ಸುದ್ದಿ ಇಂದಿಗೂ ರಾಜಕೀಯದವರಿಗೆ ಸ್ಥಳೀಯ ಸಾಮಾಜಿಕ ಪ್ರಜ್ಞೆ ಮೂಡಿಸುವ ಜಾಗೃತಿಯ ಘಂಟೆಯಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಪರಂಪರೆಯನ್ನು ಜನಸಾಮಾನ್ಯರಿಗೆ ತಿಳಿಸುವ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ಪತ್ರಿಕೆಯು ಸಾಮಾಜಿಕ ಕಳಕಳಿ ಉಳಿಸಿಕೊಂಡು ಬರುವ

ಮೂಲಕ ಸಮಕಾಲೀನ ಜನಜೀವನದ ಸ್ಥಿತಿಗತಿಗಳ ವಾಸ್ತವಿಕತೆ ಕುರಿತು, ಪ್ರಾದೇಶಿಕ, ರಾಜ್ಯ, ರಾಷ್ಟ್ರದ ಹತ್ತು ಹಲವಾರು ಮಹತ್ತರವಾದ ಸುದ್ದಿ ಸಮಾಚಾರಗಳು, ಸಂದೇಶಗಳು ತಮ್ಮ ಮತ್ತು ಇತರ ಪತ್ರಿಕೆಗಳಿಗೆ ಸಂಪಾದಕೀಯ ಕುರಿತು ಉತ್ತಮ ಬರವಣಿಗೆ ನೀಡಿದ್ದಾರೆ. ಇದರ ಜೊತೆಗೆ ಆಗಿನ ಸಮಯದಲ್ಲಿ ಬಾಗಲಕೋಟೆಯಲ್ಲಿ ಈ ಪತ್ರಿಕೆಯ ಮೂಲಕ ಸುಮಾರು ೩೦ ರಿಂದ ೫೦ ಯುವಕರು, ಉದಯೋನ್ಮುಖ ಕವಿಗಳು ಬೆಳದರು.

ಸಮುದಾಯಗಳಲ್ಲಿ ಅಗತ್ಯವಾದ ಮೌಲ್ಯಗಳನ್ನು ಕಾರ್ಯರೂಪಕ್ಕೆ ತರುವ ಪ್ರಜ್ಞೆಯನ್ನು ಮೂಡಿಸುವಲ್ಲಿ, ಓದುಗರ ಸಾಮಾಜಿಕ ಅರಿವು ಮೂಡುವಲ್ಲಿ, ಎಚ್ಚರಿಸುವ ಅವಶ್ಯಕವಾದ ವಿಷಯಗಳನ್ನು ಕ್ರೋಢೀಕರಿಸಿ, ಪ್ರಕಟಣೆಯನ್ನು ಮಾಡುವಲ್ಲಿ ಯಶಸ್ವೀಯಾಗಿದ್ದಾರೆ. ಪತ್ರಿಕಾ ಮಾಧ್ಯಮದ ಮುಖ್ಯ ಉದ್ದೇಶ ಸರ್ವರಿಗೂ ಸಮಬಾಳು ಎನ್ನುವ ಹಾಗೆ ಎಲ್ಲಾ ಕ್ಷೇತ್ರಗಳ ವಿಷಯಗಳನ್ನು ಬೆಳಕಿಗೆ ತರುವದಾಗಿತ್ತು.

ಪತ್ರಿಕಾ ಸಂಪಾದಕವು ಸಾಮಾಜಿಕ ವ್ಯವಸ್ಥೆಯ ಓರ್ವ ಚಿಕಿತ್ಸಕನಿದ್ದಂತೆ, ಸರ್ವ ರಂಗದ ವಿಷಯಗಳಲ್ಲಿ ಸರ್ವಜ್ಞನಂತಾಗುವವನು. ನಾಡು–ನುಡಿ, ನೆಲ–ಜಲ, ಭಾಷೆ–ಸಂಸ್ಕೃತಿ, ಪ್ರಕೃತಿ–ಪರಿಸರ, ಕಲೆ–ಸಂಗೀತ, ಸಾಹಿತ್ಯ–ಸಹಬಾಳ್ವೆಯಂತಹ ವಿಷಯಗಳು ಮೂಕನಿಗೂ ಧ್ವನಿಯಾಗಿ ಮಾತಾಗುತ್ತಾನೆ ಎಂಬಂತೆ ವಿವಿಧತೆಯಲ್ಲಿ ಏಕತೆಯನ್ನು ಸಾರುವ ವಿಶೀಷ್ಟವಾದ ದೃಷ್ಟಿಕೋನ ವಾಸ್ತವ ಪ್ರಜ್ಞೆಯನ್ನು ನೀಡುವ ಸಮರ್ಥ ಸಂಪಾದಕರಾಗಿ ಜೀವಣ್ಣ ಮಸಳಿಯವರು ಸೇವೆ ಮಾಡಿದ್ದಾರೆ.

ಜೀವಣ್ಣ ಮಸಳಿಯವರ ಸಂಪಾದಕತ್ವದ ಪತ್ರಿಕೆಯನ್ನು ಓದುತ್ತಿದ್ದ ಪಾಟೀಲ ಪುಟ್ಟಪ್ಪನವರು, ದೇವರಾಜ ಅರಸರು ಇವರಿಗೆ ಪತ್ರದ ಮೂಲಕ ಪ್ರತಿಕ್ರಿಯೆ, ಮೆಚ್ಚಿಗೆ ಬರೆದು ಅಭಿನಂದಿಸಿರುವುದು ಹೆಮ್ಮೆಯ ವಿಷಯವಾಗಿದೆ. ವಿಶ್ವ ದರ್ಶನ ಪತ್ರಿಕೆಯು ಚಿಕ್ಕದಾಗಿದ್ದರೂ ವಿಷಯ ಪ್ರಸಾರದಲ್ಲಿ ಹಿರಿಮೆಯನ್ನು ಹೊಂದಿದ್ದು, ಅಖಂಡ ವಿಜಯಪೂರ ಜಿಲ್ಲೆಯಿದ್ದಾಗ ಪಿ.ಎಂ.ನಾಡಗೌಡ ಅವರು ನೂತನವಾದ ಬಾಗಲಕೋಟ ಜಿಲ್ಲೆಯನ್ನು ಮಾಡಲು ಸಂಘಟನೆ ಮಾಡಿರುವ ವಿಷಯ ಕುರಿತು ವಿಶೇಷ ಲೇಖನವನ್ನು ಮಾಡಿ, ಮೊಟ್ಟ ಮೊದಲು ಪ್ರಕಟಣೆ ಮಾಡಿರುವುದು ಇಂದಿಗೂ ಈ ಪತ್ರಿಕೆಯ ಹೆಗ್ಗಳಿಕೆಯಾಗಿದೆ. ಈ ವಿಷಯ ಕುರಿತು ವಿವಿಧ ಪತ್ರಿಕೆಗಳು ಕೂಡಾ ಕಾಲನುಕ್ರಮ ಧ್ವನಿಯಾಗಿ ನಿಂತ ಪ್ರತಿಫಲವೇ ೧೯೯೭ರಲ್ಲಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಜೆ.ಎಚ್.ಪಟೇಲ್ ಅವರು ಬಾಗಲಕೋಟೆಯನ್ನು ನೂತನ ಜಿಲ್ಲೆಯಾಗಿ ಘೋಷಿಸಿದರು.

ಜೀವಣ್ಣ ಮಸಳಿಯವರು ತಮ್ಮ ಪತ್ರಿಕಾ ಸೇವೆಯ ಜೊತೆಗೆ ಯುವ ಬರಹಗಾರರಿಗೆ ಸ್ಫೂರ್ತಿ ತುಂಬುವ ಹಂಬಲದೊಂದಿಗೆ ಬರವಣಿಗೆಯಲ್ಲಿ ಆಸಕ್ತಿ ಹೊಂದಿರುವ ಯುವಕರ ಲೇಖನಗಳನ್ನು ತರಿಸಿಕೊಂಡು, ತಮ್ಮ ಪತ್ರಿಕೆಯ ಅಂಕಣ ಭಾಗದಲ್ಲಿ ಪ್ರಕಟಿಸುತ್ತಿದ್ದರು.

ಉದಾಹರಣೆಯಾಗಿ ಹೇಳುವದಾದರೆ ಜಾನಪದ ಅಭಿರುಚಿವುಳ್ಳ ಜಿ.ಬಿ.ಖಾಡೆಯವರ ಕುರಿತ ಲೇಖನಗಳು, ಈಗಿನ ಗುಳೇದಗುಡ್ಡ ತಾಲೂಕಾ ಕಸಾಪ ಅಧ್ಯಕ್ಷರಾದ ಸಿ.ಎಂ.ಜೋಶಿಯವರ 'ದಾರಿ ಬಿಟ್ಟಾರ' ಅಂಕಣದಲ್ಲಿ ಬರಗಾಲದಂತಹ ಅತ್ಯುತ್ತಮ ವಿಷಯಗಳ ಕುರಿತು ಲೇಖನಗಳು ಇಂದಿಗೂ ಪ್ರಸ್ತುತವಾಗಿವೆ. ಹೀಗೆ ನಾಡಿನ ಹಿರಿಯ ವಿದ್ವಾಂಸರು, ಚಿಂತಕರು ಪತ್ರಿಕೆ ಓದುವ ಹವ್ಯಾಸ ಇರುವವರು ಇವರ ಪತ್ರಿಕೆಯ ಸುದ್ದಿ ಸಮಾಚಾರಗಳನ್ನು ಪ್ರೀತಿಯಿಂದ ಓದಿ ಮೆಚ್ಚುಗೆ ಸೂಚಿಸುತ್ತಿದ್ದರು.

ಜೀವಣ್ಣ ಮಸಳಿಯವರ ಪತ್ರಿಕಾ ಸಾಹಿತ್ಯವು ಅನೇಕ ವೈಶಿಷ್ಟ್ಯಗಳನ್ನು ಹೊಂದಿದ್ದು, ಸ್ಥಳೀಯ ಸುದ್ದಿಗಳು, ಧಾರ್ಮಿಕ ಚಿಂತನೆಗಳು, ಸಾಮಾಜಿಕ ಸಮಾಚಾರಗಳು, ನುಡಿಮುತ್ತುಗಳು, ಕರಕುಶಲತೆಯ ಲೇಖನಗಳು, ರಾಜಕೀಯ ವಿದ್ಯಮಾನಗಳು, ಶೈಕ್ಷಣಿಕ ಸಂದೇಶಗಳು, ಜಾಹಿರಾತುಗಳು, ಅಂಕಣ ಬರಹಗಳು, ಕವನಗಳು, ಸಂಪಾದಕೀಯ ಮತ್ತು ಸಂಘಟನೆಯ ಸುದ್ದಿಗಳು, ಸಾಹಿತ್ಯ, ಸಾಂಸ್ಕೃತಿಕ, ಕಲೆ, ಸಂಗೀತದಂತಹ ಮನರಂಜನೆಯ ಸುದ್ದಿಗಳು ಸಹ ಅಚ್ಚುಕಟ್ಟಾಗಿ ಪ್ರಕಟಿಸಲ್ಪಡುತ್ತಿದ್ದವು.

**"ಕಂಡ ಭಕ್ತರಿಗೆ ಕೈಮುಗಿವಾತನೆ ಭಕ್ತ**
**ಮೃಧು ವಚನವೆ ಸಕಲ ಜಪಂಗಳಯ್ಯಾ**
**ಮೃಧು ವಚನವೆ ಸಕಲ ತಪಂಗಳಯ್ಯಾ**
**ಸದುವಿನಯವೇ ಸದಾಶಿವನ ಒಲುಮೆಯಯ್ಯಾ**
**ಕೂಡಲ ಸಂಗಮನಂತಲ್ಲದೊಲ್ಲನಯ್ಯ"**[೨೬]

ಶರಣರ ವಾಣಿಯಂತೆ ಅರಿವು-ಅನುಭಾವ ಪ್ರಧಾನವಾದ ಸಾಮಾಜದಲ್ಲಿ ವ್ಯಕ್ತಿ ತಾನು ಬದುಕಿ ಇತರರನ್ನು ಬದುಕಿಸಬೇಕು, ಗೌರವಿಸಬೇಕು, ಶರಣರಾದವರು ಭಕ್ತರಾದವರು ಕಿರುಕುಳ ದೈವಗಳನ್ನು ತ್ಯಜಿಸಿ, ಅಂಧ ಶ್ರದ್ಧೆ- ಅನಾಚಾರಗಳನ್ನು ತೊಡೆದು ಹಾಕಿ, ಸತ್ಯ ಶುದ್ಧ ಕಾಯಕದಿಂದ ಕೂಡಿದ ಸ್ವಾವಲಂಬೀ ಜೀವನ ನಡೆಸುವ ಸಮಾಜವು ನಿರ್ಮಾಣವಾಗಬೇಕು. ಸಕಲ ಜೀವಾತ್ಮರಿಗೆ ಲೇಸ ಬಯಸುವ ಶರಣ ಸಮೂಹದ ಸಮಾಜವನ್ನು ನಾವು ಕಟ್ಟುವ ಮೂಲಕ ಸಮಾಜವನ್ನು ತಿದ್ದಿ, .ಸಾಮಾಜಿಕ ಬದುಕಿನ ಪ್ರತಿಯೊಂದು ಅಂಶಗಳನ್ನು ಅರಿತು, ಶೋಧಿಸಿ ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸಿ, ಅದರಂತೆ ಪಾಲಿಸಿ ಸಾಮಾಜಿಕ ಉತ್ಕೃಷ್ಠ ಪರಂಪರೆಯ ಪರಮೋಚ್ಚ ಆದರ್ಶಗಳ ಪಾಲಿಸಿರುವ ಶ್ರೀ ಜೀವಣ್ಣ ಮಸಳಿಯವರು ಈ ದಿನಮಾನದ ಸಮಾಜೋದ್ಧಾರಕ ಮಹಾನುಭಾವರೆಂದೆನಿಸಿದ್ದಾರೆ.

ಇವರ ಪತ್ರಿಕಾ ಕ್ಷೇತ್ರದ ಸೇವೆಗಾಗಿ ನಾಡಿನ ಸರ್ವಸಮಾಜದ ಏಳ್ಗೆಗಾಗಿ ಸದಾ ಸಕ್ರೀಯವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದ ಫಲವಾಗಿ ಇಂದು ಸಂಘ ಸಂಸ್ಥೆಗಳು ಇವರ ಸಾಮಾಜಿಕ ಸೇವೆ ಗುರುತಿಸಬೇಕಾಗಿದೆ. ಕನ್ನಡದ ಸಾರಸ್ವತ ಲೋಕದ ಕವಿ ಹೃದಯದ, ಶೋಧಕರ

ಸಂಶೋಧಕರಾಗಿ ಕಾರ್ಯವನ್ನು ಮಾಡಿದ್ದಾರೆ. ಇವರ ಸಮಗ್ರವಾದ ಸಾಮಾಜಿಕ ಕಾಳಜೀಯನ್ನು ಗುರುತಿಸುವಂತಹ ಕಾರ್ಯ ಇನ್ನು ಮುಂದಾದರು ಆಗಬೇಕಾಗಿದೆ, ಇವರ ಸಾಹಿತ್ಯ ಸಮಾಜದ ಸಸಿಯನ್ನು ದೇಶದ ಹೆಮ್ಮರವಾಗುವಂತೆ ಮಾಡಬೇಕು. ತಮ್ಮ ಜೀವನದುದ್ದಕ್ಕೂ ಕಷ್ಟಗಳನ್ನು ಅನುಭವಿಸಿದರೂ ಇವರು ಸಮಾಜಕ್ಕೆ ಉತ್ತಮ ಸಂದೇಶ ಸಾರುತ್ತಾ ವಿಶ್ವ ಪ್ರೇಮವನ್ನು ಬೆಳೆಸುವುದು ಇವರ ಜೀವನದ ಗುರಿಯಾಗಿ ಮಾಡಿಕೊಂಡಿರುವುದು ವಿಶ್ವಕ್ಕೆ ಮಾದರಿಯಾಗಿದ್ದಾರೆ. ಇಂತಹ ಮಹಾತ್ಮ ಸಾಹಿತಿಗಳಾದ 'ಶ್ರೀ ಜೀವಣ್ಣ ಮಸಳಿ ಅವರ ಬದುಕು ಬರಹ' ಕುರಿತು ಮಯ ಪ್ರಕಾಶನ, ಕಮಲಾಪುರ(ಬೆಣ್ಣೂರು) ಉತ್ತರ ಕರ್ನಾಟಕ ವಿಶ್ವಕರ್ಮ ಯುವ ಬರಹಗಾರರ ಹಾಗೂ ಸಂಶೋಧಕರ ವೇದಿಕೆ ಬಾಗಲಕೋಟ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದ ಸಹಯೋಗದಲ್ಲಿ ರಾಜ್ಯ ಮಟ್ಟದ ವಿಚಾರ ಸಂಕಿರಣ ಮಾಡಿರುವುದು ಇಡೀ ರಾಜ್ಯಕ್ಕೆ ಮಾದರಿಯಾಗಿದೆ.

**ಶಿಲ್ಪಿ ಸಿ.ಆರ್. ಸುರೇಶ :** ಚಿತ್ರದುರ್ಗದಿಂದ ಪ್ರಕಟವಾಗುವ ವಿಶ್ವಕರ್ಮೋದಯ ಪತ್ರಿಕೆ ಸಂಪಾದಕರೂ ಮಾಲೀಕರೂ ಆದ ಶಿಲ್ಪಿ ಸಿ. ಆರ್. ಸುರೇಶ ಒಬ್ಬ ಪ್ರತಿಭಾವಂತ ಪತ್ರಕರ್ತರು. ೨೦೦೩ ಫೆಬ್ರುವರಿ ತಿಂಗಳಿನಿಂದ ವಿಶ್ವಕರ್ಮೋದಯ ಪತ್ರಿಕೆ ಪ್ರಕಟವಾಗುತ್ತಿದೆ. ವಿಶ್ವಕರ್ಮ ಸಮಾಜ ಸಂಘಟನೆ ಜಾಗೃತಿಯ ಗುರಿಯನ್ನು ಇಟ್ಟುಕೊಂಡು ಹೊರಬರುತ್ತಿರುವ ಈ ಪತ್ರಿಕೆಯಲ್ಲಿ ಅನೇಕ ವೈಚಾರಿಕ, ಧಾರ್ಮಿಕ –ಆಧ್ಯಾತ್ಮಿಕ ಲೇಖನಗಳು ಪ್ರಕಟಗೊಂಡಿವೆ. ಗಂಗಾಧರಮೂರ್ತಿ ಅವರಂಥ ಹಿರಿಯರು ಬರೆದ ಹಳೆಯ ಲೇಖನಗಳನ್ನು ಕೆಲವು ಆಯ್ದು ಮರುಮುದ್ರಣ ಮಾಡುತ್ತ ಮುನ್ನಡೆದಿದ್ದಾರೆ. ಸಂಚಿಕೆಯು ಪ್ರತಿತಿಂಗಳು ಉತ್ತಮ ಲೇಖನಗಳಿಂದಲೂ ಸಂದರ್ಭೋಚಿತವಾದ ಸಂಪಾದಕೀಯ ಬರವಣಿಗೆಯಿಂದಲೂ ಮೂಡಿಬರುತ್ತಿದೆ. ಜನತೆಗೆ ಮೆಚ್ಚುಗೆಗೆ ಮತ್ತು ಪ್ರಶಂಸೆಗೆ ಪಾತ್ರವಾಗಿದೆ. 'ವಿಶ್ವಕರ್ಮೋದಯ'ವು ವಿಶ್ವಕರ್ಮ ಧರ್ಮ ಸಾಹಿತ್ಯವನ್ನು ಪ್ರಚಾರ ಮಾಡುವುದರೊಂದಿಗೆ ಸಮಾಜದಲ್ಲಿಯ ಪ್ರತಿಭಾನ್ವಿತ ಲೇಖಕರನ್ನೂ ಪರಿಚಯಿಸುತ್ತಿದೆ.

ವಿಶ್ವಕರ್ಮ ಸಮಾಜವನ್ನು ಸಮನ್ವಯವಾಗಿ ಮುನ್ನಡೆಸುವ ಆಶಯ ಸುರೇಶ ಅವರದು. ಅತ್ತ ದಕ್ಷಿಣ ಕರ್ನಾಟಕದ ಜನರು ವೇದ–ಸಂಸ್ಕೃತ ಅಭಿಮಾನಿಗಳಾದರೆ, ಇತ್ತ ಉತ್ತರ ಕರ್ನಾಟಕದ ಜನರು ತಿಂಥಿಣಿ ಮೌನೇಶ್ವರ, ನಾಗಲಿಂಗರ ಪ್ರಭಾವಕ್ಕೆ ಒಳಗಾದವರು. ಹೀಗಾಗಿ ವೇದ ಮತ್ತು ವಚನ ಸಂಸ್ಕೃತಿಗಳ ಸಮನ್ವಯ ಸಮಾಜ ನಮ್ಮದು ಎಂಬುದು ಸುರೇಶ ಅವರ ಅಭಿಪ್ರಾಯವಾಗಿದೆ.

ವಿಶೇಷವೆಂದರೆ ವಿಶ್ವಕರ್ಮೋದಯ ಪತ್ರಿಕೆಗೆ ಬೇರೆ ಯಾರೂ ಉಪಸಂಪಾದಕರಾಗಲಿ, ಸಂಪಾದಕ ಮಂಡಳಿ ಸದಸ್ಯರಾಗಲಿ ಇಲ್ಲ. ಸುರೇಶ ಅವರು ಏಕಾಂಗ ವೀರರಾಗಿ ಪತ್ರಿಕೆಯನ್ನು ಮುನ್ನಡೆಸುತ್ತಿದ್ದಾರೆ.

**ಸಿ.ಪಿ.ಮಾಯಾಚಾರಿ** : ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಶಿರಸಂಗಿ ಗ್ರಾಮದಲ್ಲಿ ಪ್ರಾಚೀನ ಕಾಳಿಕಾ ದೇವಸ್ಥಾನವಿದೆ. ಈ ದೇವಸ್ಥಾನ ಕಾರಣವಾಗಿ ಇಲ್ಲೊಂದು ವಿಶ್ವಕರ್ಮ ಸಮಾಜ ಸಂಘಟನೆ ಮಾಡಬೇಕೆಂಬ ಆಶಯದಿಂದ ವಿರೂಪಾಕ್ಷ ಬಡಿಗೇರ ಅವರು ಪರಿಶ್ರಮ ವಹಿಸಿ ಶ್ರೀ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆ ಮತ್ತು ವಿಶ್ವಕರ್ಮ ಪ್ರತಿಷ್ಠಾನಗಳನ್ನು ಅಸ್ತಿತ್ವಕ್ಕೆ ತಂದರು. ಈ ಸಂಸ್ಥೆಗಳ ಕಾರ್ಯವಿಧಾನ ಜನಮನಕ್ಕೆ ಸದಾಕಾಲ ತಿಳಿಯುತ್ತಿರಬೇಕೆಂಬ ಬಯಕೆಯಿಂದ 'ವಿಶ್ವಕರ್ಮ ವಿಕಾಸವಾಣಿ' ಎಂಬ ಮಾಸಿಕ ಪತ್ರಿಕೆಯನ್ನು ದಿನಾಂಕ:೨೮ ಮಾರ್ಚ್, ೨೦೧೭ರಂದು ಪ್ರಾರಂಭಿಸಿದರು. ಇದರ ಸಂಪಾದಕರಾಗಿ ಸಿ.ಪಿ.ಮಾಯಾಚಾರಿ ಯವರು ಕಾರ್ಯ ನಿರ್ವಹಣೆ ಮಾಡುತ್ತಿದ್ದಾರೆ.

ಕಾಳಿಕಾ ದೇವಸ್ಥಾನದ ವೇದಿಕೆಯಲ್ಲಿ ಈ ಪತ್ರಿಕೆ ಲೋಕಾರ್ಪಣೆಯೊಂದಿಗೆ ಶ್ರೀಕ್ಷೇತ್ರದ ಮಾಹಿತಿ ಕಿರುಹೊತ್ತಿಗೆಯ ಮರಾಠಿ ಮತ್ತು ಕನ್ನಡ ಆವೃತ್ತಿ ಕೃತಿಗಳನ್ನು, ವೈಶ್ವಕರ್ಮಣ ಧರ್ಮ ಪರಂಪರೆ ಈ ಕಿರುಹೊತ್ತಿಗೆಗಳನ್ನು ಬಿಡುಗಡೆ ಮಾಡಲಾಯಿತು. ಈ ಪತ್ರಿಕೆ ಗೌರವ ಸಂಪಾದಕರಾಗಿ ಸ್ವಾಮಿ ಶಿವಾತ್ಮನಂದ ಸರಸ್ವತಿ ಸ್ವಾಮೀಜಿ ಜ್ಞಾನಾನಂದ ಆಶ್ರಮ ಸಿದ್ಧನಗವಿ ನಂದಿ ಚಿಕ್ಕಬಳ್ಳಾಪುರ ಅವರು ಆಶೀರ್ವದಿಸುತ್ತಿದ್ದಾರೆ. ಶ್ರೀ ಕಾಳಿಕಾದೇವಿಯ ಕ್ಷೇತ್ರದ ವೈಶಿಷ್ಟ್ಯ ಮತ್ತು ಅಲ್ಲಿಯ ಕಾರ್ಯ ಚಟುವಟಿಕೆಗಳನ್ನು ಎಲ್ಲ ಭಾಗದ ಜನರಿಗೆ ತಿಳಿಸುವುದು, ವಿಶ್ವಕರ್ಮ ವೈದಿಕ ವಾಙ್ಮಯದ ಪರಿಚಯವನ್ನು ಪ್ರಚುರ ಪಡಿಸುವುದು, ಸಮಾಜದ ಬಂಧುಗಳಲ್ಲಿ ಶೈಕ್ಷಣಿಕ, ವೈದಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜಾಗೃತಿ ಮೂಡಿಸುವುದು ಹೀಗೆ ಅನೇಕ ವೈಚಾರಿಕ ಲೇಖನಗಳ ಮೂಲಕ ವಿಶ್ವಕರ್ಮ ವಿಕಾಸವಾಣಿ ರೂಪಗೊಳ್ಳಬೇಕೆಂದು ಸ್ವಾಮೀಜಿ ಬಯಸಿದ್ದಾರೆ.

ಈ ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಹುಬ್ಬಳ್ಳಿಯ ಖ್ಯಾತ ಚಿಂತಕರಾದ ಸಿ.ಪಿ.ಮಾಯಾಚಾರಿ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ಸಂಪಾದಕೀಯ ಭಾಗವನ್ನು ಇವರೇ ಬರೆಯುತ್ತಾರೆ. ವಿಶ್ವಕರ್ಮ ಸಮಾಜದ ಯುವಜನತೆಯಲ್ಲಿ ವಿಶ್ವಕರ್ಮ ಪ್ರಜ್ಞೆ ಮೂಡಿಸುವಲ್ಲಿ ಈ ಪತ್ರಿಕೆಯ ಪಾತ್ರ ಗಣನೀಯವಾಗಿದೆ ಎಂಬ ಆಶಯ ಸಂಪಾದಕರದ್ದು.

**ಧರ್ಮೇಂದ್ರ ಆಚಾರ್ಯ:** ಕಟಪಾಡಿಯಲ್ಲಿರುವ ಶ್ರೀ ಜಗದ್ಗುರು ಆನೆಗುಂದಿ ಮಹಾಸಂಸ್ಥಾನ ಮಠ ಸರಸ್ವತೀಪೀಠದ ಮುಖವಾಣಿಯಾಗಿ ೨೦೧೩ರಿಂದ ಪ್ರಕಟವಾಗುತ್ತಿರುವ 'ಋಷಿಸ್ವರಂ' ಎಂಬ ಪತ್ರಿಕೆ ವಿಶ್ವಕರ್ಮ ಸಮಾಜದ ಒಂದು ಪ್ರಮುಖ ಧಾರ್ಮಿಕ ಪತ್ರಿಕೆಯಾಗಿದೆ. ಜಗದ್ಗುರು ಕಾಳಹಸ್ತೇಂದ್ರ ಸರಸ್ವತಿ ಮಹಾಸ್ವಾಮಿಗಳವರು ಇದರ ಆಶ್ರಯದಾತರು. ಈ ಪತ್ರಿಕೆಯ ಸಂಪಾದಕರಾಗಿ ವೈ. ಧರ್ಮೇಂದ್ರ ಆಚಾರ್ಯ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ವೃತ್ತಿಯಲ್ಲಿ ಸುಬೇಧಾರರಾಗಿ ಅವರು ಸಮಾಜದ ಪ್ರಮುಖ ಹಿತಚಿಂತಕರಾಗಿದ್ದಾರೆ. ಸಮಾಜದ ಜನರಿಗೆ ಧಾರ್ಮಿಕ ಅರಿವು ಮೂಡಿಸುವುದೇ ಈ ಪತ್ರಿಕೆಯ ಮುಖ್ಯ ಉದ್ದೇಶವಾಗಿದೆ.

ಆನೆಗೊಂದಿ ಪೀಠವು ಪ್ರಾಚೀನವಾಗಿದ್ದರೂ, ಅದು ಹೆಚ್ಚು ಕ್ರಿಯಾಶೀಲವಾಗಿ ಸಮಾಜ ಮುಖಿ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದು ಇತ್ತೀಚೆಗೆ. ಅದರಲ್ಲೂ ಸಮಾಜ ಬಾಂಧವರು ಅಪಾರ ಪರಿಶ್ರಮ ವಹಿಸಿ, ಈ ಪೀಠವನ್ನು ಮುಂಚೂಣಿಗೆ ತಂದಿದ್ದಾರೆ. ಈಗಿನ ಶ್ರೀಗಳು ಸಮಾಜ ಕಟ್ಟುವ ಕಂಕಣ ತೊಟ್ಟಿದ್ದಾರೆ. ಶ್ರೀಗಳು ಮಠದ ಕರ್ಣಧಾರತ್ವವನ್ನು ವಹಿಸಿಕೊಂಡ ನಂತರ, ವೈದಿಕ ಪಾಠಶಾಲೆಯನ್ನು ಆರಂಭಿಸಿ, ವಿಶ್ವಕರ್ಮ ಸಮಾಜದ ಮಕ್ಕಳಿಗೆ ವೈದಿಕ ಶಿಕ್ಷಣ ನೀಡುತ್ತಿದ್ದಾರೆ. ಸಂಪಾದಕರಾದ ಅವರು ಕಾಸರಗೋಡಿನಲ್ಲಿ ನೆಲೆನಿಂತಿದ್ದರೂ ಪತ್ರಿಕೆಗೆ ಅಪರೂಪದ ಸಂಪಾದಕೀಯಗಳನ್ನು ಬರೆಯುವ ಮೂಲಕ ಪತ್ರಿಕೆಯ ಮೌಲ್ಯವನ್ನು ದ್ವಿಗುಣಗೊಳಿಸಿದ್ದಾರೆ.

**ಎ.ಎಫ್. ಮೋಹನರಾವ್:** ಇವರು ವಿಶ್ವಬ್ರಾಹ್ಮಣ ಪತ್ರಿಕೆಯ ಸಂಪಾದಕರು ಮತ್ತು ಮಾಲೀಕರಾದ ಎ.ಎಫ್. ಮೋಹನ್‌ರಾವ್ ಅವರು. ಗುರುಗಳ, ಮಠಾಧೀಶರ, ಸರಕಾರೀ ಅಧಿಕಾರಿಗಳು, ಸಂಘ ಸಂಸ್ಥೆಗಳ ಪದಾಧಿಕಾರಿಗಳು, ಸಾಹಿತಿಗಳು, ಶಿಕ್ಷಕರು, ರಾಜಕೀಯ ಗಣ್ಯ, ಪುರೋಹಿತರು, ಅರ್ಚಕರು, ಶ್ರೀಮಂತರು ಹಿತೈಷಿಗಳು 'ವಿಶ್ವಬ್ರಾಹ್ಮಣ' ಪತ್ರಿಕೆಯ ಹಿತಚಿಂತಕರೆಂದು ಕರೆಯುವ ಮೋಹನರಾವ್ ಅವರು ಈ ಪತ್ರಿಕೆಯಲ್ಲಿ ದಾರಾವಾಹಿಯಾಗಿ ಪ್ರಕಟವಾದ ಅನೇಕ ಲೇಖನಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸಿದ್ದಾರೆ. 'ವಿಶ್ವಕರ್ಮ ಸಮಾಜ ದರ್ಶನ' (ಭಾಗ-೧, ೨), ಲೋಕಪೂಜ್ಯ ವಿಶ್ವಬ್ರಾಹ್ಮಣರು, ವಿಶ್ವಬ್ರಾಹ್ಮಣರ ಪೂರ್ವಕಥೆ ಮೊದಲಾದ ಕೃತಿಗಳನ್ನು ಪ್ರಕಟಿಸಿದ್ದಾರೆ. 'ವೇದಗಳ ಪರಿಚಯ', 'ಭಗವದ್ಗೀತಾ' ಮೊದಲಾದ ಪ್ರಾಚೀನ ಕೃತಿಗಳ ಕುರಿತು ನಿರಂತರವಾಗಿ ಪರಿಚಯಾತ್ಮಕ ಲೇಖನಗಳನ್ನು ಪ್ರಕಟಿಸುತ್ತ ಬಂದಿದ್ದಾರೆ.

ಶಿವಮೊಗ್ಗದಲ್ಲಿ ವೈದ್ಯವೃತ್ತಿಯಲ್ಲಿದ್ದ ಮೋಹನರಾವ್ ಅವರು ಶಿವಮೊಗ್ಗ ಜಿಲ್ಲಾ ವಿಶ್ವಕರ್ಮ ಮಹಾಸಂಘವನ್ನು ಸ್ಥಾಪಿಸಿದರು. ಈ ಸಂಸ್ಥೆಯ ಮೂಲಕ ವಿಶ್ವಕರ್ಮ ಸಮಾಜ ದರ್ಶನ ಎಂಬ ಮೌಲಿಕ ಕೃತಿಯನ್ನು ಪ್ರಕಟಿಸಿದರು. ವಿಶ್ವಬಂಧು ಎಂಬ ಪ್ರಕಾಶನದ ಮೂಲಕ ೨೦೦೬ರಲ್ಲಿ 'ಆಲ್ ಇಂಡಿಯಾ ವಿಶ್ವಕರ್ಮ ಡೈರೆಕ್ಟರಿ' ಎಂಬ ಕೃತಿಯನ್ನು ಪ್ರಕಟಿಸಿದರು. ಇದು ಅನೇಕ ಗಣ್ಯಾತಿಗಣ್ಯ ವಿಶ್ವಬ್ರಾಹ್ಮಣರ ಪರಿಚಯ ಕೃತಿ ಹಾಗೂ ಅವರ ವಿಳಾಸಗಳೊಂದಿಗೆ ಮುದ್ರಣವಾಗಿದೆ. ವಿಶ್ವಬ್ರಾಹ್ಮಣ ಪತ್ರಿಕೆಯಲ್ಲಿ ಮಹಾತ್ಮರ ಮಠಗಳು, ಪಂಚಪೀಠಗಳು, ಶಾಖಾಮಠಗಳು ಎಲ್ಲೆಲ್ಲಿವೆ ಎಂಬುದನ್ನು ಗುರುತಿಸಿ ಬರೆದಿದ್ದಾರೆ. ಪುಣ್ಯಪುರುಷರ ಚರಿತ್ರೆಯನ್ನು ರಚಿಸಿದ್ದಾರೆ. ವಿಶ್ವಕರ್ಮರ ಸಮಗ್ರ ಇತಿಹಾಸವನ್ನು ಕುರಿತು ಮೌಲಿಕ ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾರೆ.

ಧಾರವಾಡ ಜಿಲ್ಲೆಯ ಹಿರೆಕೆರೂರಿನವರಾದ ಡಾ. ಎಫ್.ಡಿ. ಅರ್ಕಾಚಾರ್ ಅವರ ಸುಪುತ್ರರಾಗಿ ೧೯೩೯ರಲ್ಲಿ ಜನಿಸಿದ ಮೋಹನರಾವ್ ಅವರು ವೈದ್ಯವೃತ್ತಿಯೊಂದಿಗೆ ಸಮಾಜ ಕಟ್ಟುವ ಮಹಾಮಣಿಹದಲ್ಲಿ ತಮ್ಮನ್ನು ಸರ್ವಾರ್ಪಣ ಮನೋಭಾವದಿಂದ ತೊಡಗಿಸಿಕೊಂಡಿದ್ದರು. ಇಂಥ ಪ್ರಾತಃಸ್ಮರಣೀಯರು ೮ ನವೆಂಬರ್ ೨೦೦೮ರಂದು ನಿಧನರಾದರು.

**ಮಂಜುನಾಥ ಆಚಾರ್ಯ :** ಉಡುಪಿ ಜಿಲ್ಲೆಯ ಪಣಿಯೂರು ಗ್ರಾಮದಿಂದ ಪ್ರಕಟವಾಗುವ ಆತ್ಮೀಯ ಬೋಧಕ ಮಾಸಿಕ ಪತ್ರಿಕೆಯ ಸಂಪಾದಕರು ಮಂಜುನಾಥ ಆಚಾರ್ಯ ಅವರು. ವಿಶ್ವಕರ್ಮ ಸಮಾಜವು ಭಾರತವ್ಯಾಪಿ ಬೆಳೆದ ಒಂದು ದೊಡ್ಡ ಸಮಾಜ. ಆದರೆ ಈ ಧರ್ಮದ ತತ್ವ ಸಿದ್ಧಾಂತಗಳು ಇನ್ನೂ ಜನಸಾಮಾನ್ಯರ ಪಾಲಿಗೆ ನಿಲುಕಿಲ್ಲ ಎಂಬ ಕಾರಣಕ್ಕಾಗಿ ಆತ್ಮೀಯ ಬೋಧಕ ಎಂಬ ಮಾಸಿಕವನ್ನು ಮಂಜುನಾಥ ಆಚಾರ್ಯ ಅವರು ಆರಂಭಿಸಿದ್ದಾರೆ. ವಿಶ್ವಕರ್ಮ ಧರ್ಮದ ಪ್ರಾಚೀನ ಗ್ರಂಥಗಳ ವಿವರಣೆ, ವೇದ-ಉಪನಿಷತ್ತಗಳ ಕುರಿತು ಪರಿಚಯಾತ್ಮಕ ಲೇಖನಗಳನ್ನು ಪ್ರಕಟಿಸುತ್ತಿದ್ದಾರೆ.

ಮಂಜುನಾಥ ಆಚಾರ್ಯ ಅವರು ಕಾಲಮಾನದ ಅವಶ್ಯಕತೆಗೆ ಅನುಗುಣವಾಗಿ ಸಂಪಾದಕೀಯ ಬರೆಯುತ್ತ ಬಂದಿದ್ದಾರೆ. ವಿಶ್ವಕರ್ಮ ಸಮಾಜಕ್ಕೆ ಎಳ್ಳಷ್ಟು ಅನ್ಯಾಯವಾದರೂ ಅದನ್ನು ಪ್ರತಿಭಟಿಸಬೇಕು ಎನ್ನುವ ಮನೋಭಾವ ಅವರದು. ಹಿಂದಿನ ಕರ್ನಾಟಕ ಸರಕಾರ ಜಾತಿಗಣತಿ ಮಾಡಲು ಮುಂದಾದ ಸಂದರ್ಭದಲ್ಲಿ, ವಿಶ್ವಕರ್ಮ ಸಮಾಜ ಬಾಂಧವರು ಇತರ ಉಪಜಾತಿಗಳನ್ನು ಬರೆಸದೆ, ವಿಶ್ವಕರ್ಮ ಅಥವಾ ವಿಶ್ವಬ್ರಾಹ್ಮಣ ಎಂದು ಮಾತ್ರ ಬರೆಸಬೇಕು ಎಂದು ತಮ್ಮ ಪತ್ರಿಕೆಯ ಮೂಲಕ ಒತ್ತಾಯಿಸಿದವರು.

ವಿಶ್ವಕರ್ಮ ಸಮಾಜವನ್ನು ಉದ್ಧರಿಸಿದ ಪುಣ್ಯಪುರುಷರಾದ ಮೌನೇಶ್ವರ, ವೀರಬ್ರಹ್ಮೇಂದ್ರ ಸ್ವಾಮಿಗಳು, ಅಜಾತ ನಾಗಲಿಂಗ ಸ್ವಾಮಿಗಳು ಮೊದಲಾದ ಮಹನೀಯರ ಕುರಿತು ಮಹತ್ವದ ಲೇಖನಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತ ಬಂದಿದ್ದಾರೆ.

**ಜಗನ್ನಾಥ ಬಡಿಗೇರ :** ಸವದತ್ತಿ ತಾಲೂಕಿನ ಶಿರಸಂಗಿ ಗ್ರಾಮದ ವಿಶ್ವಶಕ್ತಿ ಪ್ರಕಾಶನ ಸಂಸ್ಥೆಯ ಮೂಲಕ ವಿಶ್ವಕರ್ಮ ಸಂದೇಶ (ಮೊದಲು ಇದು ಕಾಳಿಕಾಪ್ರಭ ಹೆಸರಿನಲ್ಲಿ ಪ್ರಕಟವಾಗುತ್ತಿತ್ತು) ಎಂಬ ಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಜಗನ್ನಾಥರಾವ ಬಡಿಗೇರ ಸಮಾಜ ಚಿಂತಕರಲ್ಲಿ ಒಬ್ಬರಾಗಿದ್ದಾರೆ.

ಒಂದು ಧರ್ಮವಾಗಲಿ, ಸಮಾಜವಾಗಲಿ ಬೆಳೆಯಬೇಕಾದರೆ ಆ ಸಮಾಜಕ್ಕೆ ಆ ಧರ್ಮಕ್ಕೆ ಶಾಸ್ತ್ರೀಯವಾದ ಒಂದು ಸಾಹಿತ್ಯಬೇಕು. ಆ ಸಾಹಿತ್ಯ ಗ್ರಂಥರೂಪದಲ್ಲಿ ಅಥವಾ ಪತ್ರಿಕೆ ರೂಪದಲ್ಲಾಗಿರ ಬಹುದು. ಇವುಗಳು ಧರ್ಮ ಹಾಗೂ ಸಾಹಿತ್ಯದ ಪ್ರಸಾರ ಮಾಧ್ಯಮಗಳಾಗಿವೆ. ಇಂದು ಪತ್ರಿಕೆಗಳು ಮಾನವನ ಜೀವನದ ಜೀವಾಳವೇ ಆಗಿವೆ. ವಿಶ್ವಕರ್ಮ ಧರ್ಮವು ಸನಾತನ ಧರ್ಮವಾಗಿದ್ದು, ತನ್ನದೇ ಆದ ವಿಶಿಷ್ಟ ಸಂಸ್ಕೃತಿಯ ಅಪಾರವಾದ ಸಾಹಿತ್ಯವನ್ನು ಹೊಂದಿದ್ದು, ಇಂದು ಸಾಮಾನ್ಯವಾಗಿ ಆ ಸಾಹಿತ್ಯಗಳು ಲಭ್ಯವಾಗದಿರುವುದರಿಂದ ಅನೇಕ ಲೇಖಕರು ಆ ಲೇಖನಗಳನ್ನು ಧರ್ಮದ ಪತ್ರಿಕೆಗಳ ಮುಖೇನ ಕಂತು ಕಂತುಗಳ್ಲಿ ಪ್ರಸಾರ ಮಾಡುತ್ತಿರುವುದು ನಿಜಕ್ಕೂ ಸಂತೋಷದ ವಿಷಯ. ಅಂತಹ ಪತ್ರಿಕೆಯ ಅವಶ್ಯಕತೆಯು ಸಮಾಜಕ್ಕೆ ಬಹಳಷ್ಟಿದೆ.

ಆ ಕೊರತೆಯನ್ನು ನೀಗಿಸುವಲ್ಲಿ ಹಲವಾರು ಪತ್ರಿಕೆಗಳ ಕಾರ್ಯತತ್ಪರತೆಯನ್ನು ಮೆಚ್ಚಬೇಕಾದುದೇ. ಅಂತಹ ಅಪರೂಪದ ಪತ್ರಿಕೆಗಳಲ್ಲಿ 'ವಿಶ್ವಕರ್ಮ ಸಂದೇಶ' (ಕಾಳಿಕಾ ಪ್ರಭ) ಪತ್ರಿಕೆಯ ಪಾತ್ರವೂ ಹಿರಿದಾಗಿದೆ. ೨೦೦೫ರಲ್ಲಿ ಪ್ರಾರಂಭವಾದ ಈ ಪತ್ರಿಕೆಯ ಯಶಸ್ಸಿನ ಹಿಂದೆ ಸಂಪಾದಕರೂ ಪ್ರಕಾಶಕರೂ ಆಗಿ ಕೆಲಸ ಮಾಡುತ್ತಿರುವ ಅತ್ಯುತ್ತಮ ಸಮಾಜ ಸೇವಕರೂ ಪತ್ರಿಕೋದ್ಯಮಿಗಳೂ ಆದ ಜಗನ್ನಾಥರಾವ್ ಬಡಿಗೇರ ಅವರ ಶ್ರಮ ಅಪಾರವಾಗಿದೆ.

ಜಗನ್ನಾಥರಾವ್ ಬಡಿಗೇರ ಅವರು ೧೧ ಜೂನ, ೧೯೩೫ರಂದು ಬಾಗಲಕೋಟ ತಾಲೂಕಿನ ಹಿರೇಶೆಲ್ಲಿಕೇರಿ ಗ್ರಾಮದಲ್ಲಿ ಜನಿಸಿದರು. ಬಡತನದ ಹಿನ್ನೆಲೆಯಲ್ಲಿಯೇ ಮನೆತನದ ಉದ್ಯೋಗ ಬಡಿಗತನವನ್ನು ಮಾಡುತ್ತಲೇ ಅಧ್ಯಯನ ಮಾಡಿ, ಲೋಕೋಪಯೋಗ ಇಲಾಖೆಯಲ್ಲಿ ಗುಮಾಸ್ತರಾಗಿ ಕೆಲಸಕ್ಕೆ ಸೇರಿ, ಹಂತ ಹಂತವಾಗಿ ಬೆಳೆದು, ದ್ವಿತೀಯ ದರ್ಜೆಯ ಗುತ್ತಿಗೆದಾರರೆಂದು ಖ್ಯಾತರಾದವರು. ೧೯೭೫ರಲ್ಲಿ ಬಾಗಲಕೋಟ ವಿಶ್ವಕರ್ಮ ಸಮಾಜದ ಸೇವಾ ಕಾರ್ಯಕರ್ತರಾಗಿ ತಾಲೂಕು ಮಟ್ಟದ ವಿಶ್ವಕರ್ಮ ಕುಶಲ ಕಾರ್ಮಿಕರ ಸಂಘವನ್ನು ಅಸ್ತಿತ್ವದಲ್ಲಿ ತಂದರು. ಆಗ ಪಂಚ ಕಸುಬುಗಳಿಂದ ಜೀವನ ನಿರ್ವಹಿಸುತ್ತಿದ್ದ ಬಡಿಗ, ಕಮ್ಮಾರ, ಕಂಚುಗಾರ, ಶಿಲ್ಪಿ ಹಾಗೂ ಅಕ್ಕಸಾಲಿಗರನ್ನು ಒಗ್ಗೂಡಿಸಿಕೊಂಡು ಆಗಿನ ಸಮಯದಲ್ಲಿ ಜೀವಣ್ಣ ಮಸಳಿ ಅವರ ನೇತೃತ್ವದಲ್ಲಿ ಹಾಗೂ ಸಮಾಜದ ನೇತಾರರ ಮುಖಂಡತ್ವದಲ್ಲಿ ಸುಮಾರು ಹದಿನೈದು ದಿನಗಳವರೆಗೆ ಚಳವಳಿ ನಡೆಸಿ, ಆಗ ಕಸುಬುದಾರರಿಗೆ ಒಂದು ವರ್ಷಕ್ಕೆ ರೈತರು ನೀಡುತ್ತಿದ್ದ ಒಂದು ಕೂರಿಗೆಗೆ ಸಿಗುವ ೩೨ ಸೇರು ಧಾನ್ಯವನ್ನು ೬೪ ಸೇರು ಧಾನ್ಯವನ್ನು ರೈತರು ಕೊಡುವಂತೆ ಮಾಡಿ ವಿಶ್ವಕರ್ಮ ಕಸುಬುದಾರರಿಗೆ ನ್ಯಾಯ ಸಿಗುವಂತೆ ಹೋರಾಟ ನಡೆಸಿ ಜಯ ಸಾಧಿಸಿದರು.

೧೯೭೮ರಲ್ಲಿ ಶಿರಸಂಗಿಯ ಲಕ್ಷ ದೀಪೋತ್ಸವ ನಡೆಯುವ ಮುನ್ನ ಶ್ರೀ ಕಾಳಿಕಾ ಕ್ಷೇತ್ರದ ಜೀರ್ಣೋದ್ಧಾರ ಸಮಯಕ್ಕೆ ಒಬ್ಬ ಒಳ್ಳೆಯ ಪ್ರಾಮಾಣಿಕ ಗುತ್ತಿಗೆದಾರರ ಅವಶ್ಯಕತೆ ಇರುವುದನ್ನು ಗಮನಿಸಿ, ಆಗಿನ ವಿಶ್ವಕರ್ಮ ವಿಕಾಸಸಂಸ್ಥೆಯ ಕಾರ್ಯಕಾರಿ ಮಂಡಳಿ ಸದಸ್ಯರಾದ ವೀರಣ್ಣ ಬಡಿಗೇರ, ಎಲ್.ವಿ. ಹಡಗಲಿಯವರು ಜಗನ್ನಾಥರಾವ್ ಅವರನ್ನು ಕ್ಷೇತ್ರಕ್ಕೆ ಕರೆಸಿಕೊಂಡರು. ಶಿರಸಂಗಿ ಕ್ಷೇತ್ರದ ಅಭಿವೃದ್ಧಿಯ ಕೆಲಸದ ಗುತ್ತಿಗೆದಾರರಾಗಿ ಪ್ರಾಮಾಣಿಕ ಸೇವೆಯನ್ನು ನಿರ್ವಹಿಸುತ್ತ ಸಮಾಜದ ಸೇವೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡರು.

೨೦೦೫ರ ಯುಗಾದಿಯ ಸಂಭ್ರಮದಲ್ಲಿ ಕಾಳಿಕಾ ಪ್ರಭ ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಜಗನ್ನಾಥರಾವ್ ಬಡಿಗೇರ ಅವರೇ ಸಂಪಾದಕರಾಗಿ, ಪ್ರಕಾಶಕರಾಗಿ ಪತ್ರಿಕೆಯನ್ನು ಮುನ್ನಡೆಸುತ್ತಿದ್ದಾರೆ. ೨೦೦೫ ಸೆಪ್ಟಂಬರ್ ತಿಂಗಳಲ್ಲಿ ಕಾಳಿಕಾಪ್ರಭ ಪತ್ರಿಕೆಯ ಹೆಸರನ್ನು ಅನಿವಾರ್ಯವಾಗಿ ಬದಲಾಯಿಸಿ 'ವಿಶ್ವಕರ್ಮ ಸಂದೇಶ' ಹೆಸರಿನಿಂದ ಪ್ರಾರಂಭಿಸಿದರು. ಕೇವಲ ಒಂದು ವರ್ಷದಲ್ಲಿ ಐದು ಸಾವಿರ ಪ್ರತಿಗಳು ನಾಡಿನ ತುಂಬ ಪ್ರಸಾರವಾದದ್ದು ಗಮನಾರ್ಹ ಸಂಗತಿ. ಜಗನ್ನಾಥರಾವ್ ಅವರ ಅಮಯೋಚಿತ ಸಂಪಾದಕೀಯಗಳು ಸಮಾಜದ ಕಣ್ಣು ತೆರೆಸುವಂತಿವೆ.

**ಬಿ.ಎ.ಆಚಾರ್ಯ :** ಮಂಗಳೂರುದಿಂದ ಪ್ರಸಾರವಾಗುತ್ತಿರುವ 'ಸಹ ಚಿಂತನ' ಪತ್ರಿಕೆಯನ್ನು ೧೯೮೭ರಿಂದ ಮಂಗಳೂರಿನಿಂದ ಪ್ರಕಟಣೆ ಮಾಡಿದರು. ಈ ಪತ್ರಿಕೆಯ ಮೊದಲು ಸಂಪಾದಕರಾದವರು ಪ್ರಕಾಶ ಆಚಾರ್ಯ ಕಾರ್ಕಳ ಅವರು. ಗೌರವ ಸಂಪಾದಕರು, ಸಂಪಾದಕ ಮಂಡಳಿ ಸಹಯೋಗದಿಂದಿಗೆ ಪತ್ರಿಕೆಯನ್ನು ೩೩ ವರುಷಗಳಿಂದ ನಿರಂತರವಾಗಿ ಪ್ರಕಟಿಸುತ್ತ ಬಂದಿದ್ದಾರೆ. ಪ್ರಾರಂಭದಲ್ಲಿ ಮೊದಲು ಪ್ರಕಾಶ್ ಆಚಾರ್ ಅವರು ಚಿಕ್ಕ ಸಂಪಾದಕೀಯ ಬರೆಯುತ್ತಿದ್ದರು. ಕಳೆದ ಎರಡು ದಶದಿಂದ ಸಹ ಚಿಂತನ ಪತ್ರಿಕೆಯ ಸಂಪಾದಕರಾಗಿ ಬಿ. ಎ. ಆಚಾರ್ಯ ಅವರು ಸಂದರ್ಭೋಚಿತ ಸಂಪಾದಕೀಯಗಳನ್ನು ಬರೆದು ನಾಡವರ ಗಮನ ಸೆಳೆದಿದ್ದಾರೆ.

**ಎನ್.ಸಿ.ಛಾಯಾಪತಿ :** ಕನ್ನಡದಲ್ಲಿ ಪ್ರಕಟವಾಗುತ್ತಿರುವ 'ವಿಧಾತೃ' ಪತ್ರಿಕೆಯು ಬೆಂಗಳೂರಿನಿಂದ ೨೦೧೦ರಿಂದ ಪ್ರಕಟವಾಗುತ್ತಿದೆ. ಈ ಪತ್ರಿಕೆಯ ಸಂಪಾದಕರಾಗಿ ಎನ್.ಸಿ. ಛಾಯಾಪತಿ ಅವರು ಸಮಾಜ ಸೇವೆಯ ಏಕೈಕ ಹಂಬಲದಿಂದ ಈ ಪತ್ರಿಕೆಯನ್ನು ಮುನ್ನಡೆಸುತ್ತಿದ್ದಾರೆ. ವಿಶ್ವಕರ್ಮ ಸಂಸ್ಕೃತಿಯ ವಿಶ್ವವಿಕಾಸದ ಹಲವು ಮೌಲಿಕ ವಿಚಾರಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದಾರೆ. ವೈಯಕ್ತಿಕ ನೆಲೆಯಲ್ಲಿ ಅವರ ಪ್ರಯತ್ನ ಅಭಿನಂದನೀಯವಾದುದು. ಪತ್ರಿಕಾರಂಗದ ಮೂಲಕ ಸಮಾಜಸೇವೆ ಮಾಡಬೇಕೆಂಬ ಉದ್ದೇಶದಿಂದ ಅವರು ವಿಧಾತೃ ಎಂಬ ಮಾಸಿಕವನ್ನು ಪ್ರಕಟಿಸುತ್ತಿದ್ದಾರೆ. ವಿಧಾತೃ ಪತ್ರಿಕೆ ಐದು ವರ್ಷಗಳು ಪೂರೈಸಿದ ಸಂದರ್ಭದಲ್ಲಿ ತಮ್ಮ ಸಂಪಾದಕೀಯದಲ್ಲಿ ಹೀಗೆ ಬರೆಯುತ್ತಾರೆ–

"ವಿಧಾತೃ ಪತ್ರಿಕೆ ಐದು ವರ್ಷಗಳು ಪೂರೈಸಿದ ಸಂದರ್ಭದಲ್ಲಿ ತಮ್ಮೆಲ್ಲರಿಗೂ ನನ್ನ ಶುಭಾಶಯಗಳು. ಪತ್ರಿಕೆಯ ಸಂಸ್ಕೃತಿ, ಸಾಹಿತ್ಯ ಮತ್ತು ಕಲೆಗಾಗಿ ಮೀಸಲಿದ್ದು ಅವುಗಳ ಕುರಿತಾಗಿ ಲೇಖನಗಳನ್ನು ಪ್ರಕಟಿಸುತ್ತ ಬಂದಿರುತ್ತದೆ. ಅವುಗಳ ಮಧ್ಯೆ, ಸುದ್ದಿ ಸಮಾಚಾರ ಹಾಗೂ ಪ್ರಸ್ತುತ ಸಾಮಾಜಿಕ ವಿಷಯಗಳ ಬಗ್ಗೆಯೂ ಲೇಖನಗಳನ್ನು ಪ್ರಕಟ ಮಾಡಲಾಗಿದೆ. ಪತ್ರಿಕೆಯು ಕರ್ನಾಟಕಾದ್ಯಂತ ಪ್ರಸಾದರ ಹೊಂದಿದ್ದು ಪತ್ರಿಕೆಯ ಬೆಳವಣಿಗೆಗೆ ಸಹಕಾರ ಕೊಡುತ್ತಿರುವ ಎಲ್ಲರಿಗೂ ನನ್ನ ಕೃತಜ್ಞತಾಪರ್ವಕ ನಮನಗಳು. ನನಗೆ ತಿಳಿದಂತೆ ನಮ್ಮ ಸಮಾಜದಲ್ಲಿ ಪತ್ರಿಕೆ ನಡೆಸುವುದು ಸುಲಭದ ಕೆಲಸವಲ್ಲ. ಇದುವರೆವಿಗೂ ನಮ್ಮ ಸಮಾಜದಲ್ಲಿ ಹಲವಾರು ಪತ್ರಿಕೆಗಳು ಪ್ರಕಟಣೆಗೊಂಡು ಆರ್ಥಿಕ ಮುಗ್ಗಟ್ಟಿನಿಂದಾಗಿ ಸ್ಥಗಿತಗೊಂಡಿರುವುದೇ ಹೆಚ್ಚು. ಸಮಾಜದ ಪತ್ರಿಕೆಗಳು ಇತರೆ ಪತ್ರಿಕೆಗಳಿಂಗಿ ವಿಭಿನ್ನ. ಏಕೆಂದರೆ ಇಲ್ಲಿ ವ್ಯಾಪಾರೀಕರಣದ ಸಮಾಜ ಸೇವೆಯೇ ಮೂಲ ಉದ್ದೇಶವಾಗಿರುತ್ತದೆ. ಕಾಗದದ ಬೆಲೆ, ಮುದ್ರಣ ವೆಚ್ಚ, ಡಿ.ಟಿ.ಪಿ ಖರ್ಚು ಇತ್ಯಾದಿಗಳೆಲ್ಲವೂ ೫ ವರುಷಗಳಲ್ಲಿ ೩ ಪಟ್ಟು ಹೆಚ್ಚಿರುವ ಸಂದರ್ಭದಲ್ಲಿ ಅನಿವಾರ್ಯವಾಗಿ ಫೆಬ್ರವರಿ ೨೦೧೫ರಿಂದ ಚಂದಾದರವನ್ನು ಹೆಚ್ಚಿಸಲಾಗಿದೆ. ದಯಮಾಡಿ ಸಹಕರಿಸಿ. ಪತ್ರಿಕೆ ರಂಗದ ಮೂಲಕ ಸಮಾಜ ಸೇವೆಗೆ ಅವಕಾಶ ಮಾಡಿಕೊಡಿ ಎಂದು ಮತ್ತೊಮ್ಮೆ ಸಮಾಜ ಬಂಧುಗಳಲ್ಲಿ ಮನವಿ" ಎನ್.ಸಿ.

ಛಾಯಾಪತಿ ಅವರು ಸಮಾಜಸೇವಾ ಹಂಬಲದಿಂದ ಇಂದಿಗೂ ಪತ್ರಿಕೆಯನ್ನು ಅತ್ಯಂತ ಶ್ರದ್ಧೆ ನಿಷ್ಠೆಯಿಂದ ಪ್ರಕಟಿಸುತ್ತ ಬಂದಿದ್ದಾರೆ.

**ನಾ.ಭಾ.ಚಂದ್ರಶೇಖರಾಚಾರ್ಯ :** ವಿಶ್ವಕರ್ಮ ಸಮಾಜದ ಪತ್ರಿಕೆಗಳಿಗೆ ನಿರಂತರ ಲೇಖನಗಳನ್ನು ಬರೆಯುತ್ತ ಸಮಾಜವನ್ನು ಜಾಗೃತಗೊಳಿಸಿದ ಹಿರಿಯ ಚೇತನಗಳಲ್ಲಿ ನಾ. ಭಾ. ಚಂದ್ರಶೇಖರಾಚಾರ್ಯ ಅವರು ಪ್ರಮುಖರು. ವಿಶ್ವಕರ್ಮ ಧರ್ಮ ಸಾಹಿತ್ಯವನ್ನು ಜನಾಂಗದ ಅಂತರಂಗದಲ್ಲಿ ಬಿತ್ತಲು ಪರಿಶ್ರಮಿಸಿದವರು. ವೇದ, ಆಗಮ, ಉಪನಿಷತ್ತು, ಪುರಾಣ, ಇತಿಹಾಸಗಳಲ್ಲಿ ಸುಪ್ತವಾಗಿರುವ ಪಂಚಾರ್ಷೇಯ ಸಿದ್ಧಾಂತ'ದ ತತ್ವಗಳನ್ನು ಜನಸಾಮಾನ್ಯರಿಗೂ ತಿಳಿಯುವಂತೆ ತಮ್ಮ ಲೇಖನಗಳ ಮೂಲಕ ಪ್ರಕಟಪಡಿಸಿದ ಚಿಂತಕರು. ೨೨ ಜೂನ ೧೯೧೦ರಂದು ಮೈಸೂರಿನಲ್ಲಿ ಜನಿಸಿದ ನಾ. ಭಾ. ಅವರು ವೇದವಿದ್ವಾಂಸರಾದ ಗಂಗಾಧರಮೂರ್ತಿಗಳ ಪ್ರೀತಿಗೆ ಪಾತ್ರರಾದವರು. ಅವರ ಮಾರ್ಗದರ್ಶನದಲ್ಲಿ ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಗಳಿಸಿದರು. ತಮ್ಮ ಜೀವನದ ನಿರ್ವಹಣೆಗಾಗಿ ನ್ಯಾಯಾಂಗ ಇಲಾಖೆಯಲ್ಲಿ ಸೇವೆ ಮಾಡಿದರು. ನಾ. ಭಾ. ಅವರು ಸರಳ ಸಜ್ಜನಿಕೆಯ ವ್ಯಕ್ತಿಗಳು. ಬಾಲ್ಯದಿಂದಲೇ ಅವರು ಸಮಾಜ ಸೇವಾ ಚಟುವಟಿಕೆಗಳಲ್ಲಿ ಪಾಲ್ಗೊಂಡು ಸಮಾಜದ ಸರ್ವತೋಮುಖ ಶ್ರೇಯೋಭಿವೃದ್ಧಿಗಾಗಿ ಆಜನ್ಮಪರ್ಯಂತ ಶ್ರಮಿಸಲು ಪಣತೊಟ್ಟವರು.

ವೈಶ್ವಕರ್ಮಣ ಸಮಾಜ ಸೇವೆಯೇ ಶ್ರೀ ವಿಶ್ವಕರ್ಮ ಪರಬ್ರಹ್ಮನ ಸೇವೆ ಎಂದರಿತು ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಮಾರ್ಗದರ್ಶನ ಮಾಡುವುದರಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡವರು. ಸಮಾಜದ ಪ್ರಗತಿಗಾಗಿ ಅನೇಕ ಸಂಘಸಂಸ್ಥೆಗಳಿಗೆ ಚೈತನ್ಯವನ್ನು ತುಂಬಿ ಮಾರ್ಗದರ್ಶನ ಮಾಡಿದವರು. ಸರಕಾರಿ ಸೇವೆಯಲ್ಲೂ ಕರ್ತವ್ಯನಿಷ್ಠೆ, ನಿರ್ವಹಣಾ ನೈಪುಣ್ಯತೆ ಪ್ರಾಮಾಣಿಕತೆ, ಸಮಯಪ್ರಜ್ಞೆ, ಶಿಸ್ತು ಕಾರ್ಯತತ್ಪರತೆಯಿಂದ ಕೆಲಸವನ್ನು ನಿರ್ವಹಿಸಿದವರು.

ಗಂಗಾಧರಮೂರ್ತಿಗಳ ಸಂಪಾದಕತ್ವದಲ್ಲಿ ೧೯೫೦ರ ದಶಕದಲ್ಲಿ ಪ್ರಕಟವಾಗುತ್ತಿದ್ದ 'ವಿಶ್ವಕರ್ಮಾ' ಪತ್ರಿಕೆಯ ಉಪಸಂಪಾದಕರಾಗಿ ಸ್ಮರಣೀಯ ಸೇವೆ ಸಲ್ಲಿಸಿದವರು. ತುಮಕೂರಿನಿಂದ ಪ್ರಕಟವಾಗುತ್ತಿದ್ದ ವಿಶ್ವಕರ್ಮ ಪ್ರಕಾಶ, ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ ವಿಶ್ವಕರ್ಮಾ ಪತ್ರಿಕೆಯ ಸಂಪಾದಕ ಮಂಡಳಿ ಸದಸ್ಯರಾಗಿ ಈ ಮೂರೂ ಪತ್ರಿಕೆಗಳಿಗೆ ನೂರಾರು ಲೇಖನಗಳನ್ನು ಬರೆದು, ಜನರಲ್ಲಿ ಜಾಗೃತಿಯನ್ನುಂಟು ಮಾಡಿದವರು. ಅಲ್ಲದೆ ಸುಮಾರು ೧೫ಕ್ಕಿಂತಲೂ ಹೆಚ್ಚು ಪುಸ್ತಕಗಳು ಬರೆದು ಪ್ರಕಟಿಸಿದ್ದಾರೆ. ಹಲವಾರು ಪ್ರತಿಭಾವಂತರ ಪರಿಚಯ ಲೇಖನಗಳು, ಪುಸ್ತಕಗಳಿಗೆ ಮುನ್ನುಡಿ ಲೇಖನಗಳನ್ನು, ಪ್ರಸಿದ್ಧ ಶಿಲ್ಪಿಗಳ ಪರಿಚಯ ಲೇಖನಗಳು, ತೆಲುಗು ಗ್ರಂಥದ ಅನುವಾದ ಪುಸ್ತಕಗಳು ಮತ್ತು ಲೇಖನಗಳು ಪ್ರಕಟವಾಗಿವೆ. ಅವರು ಬರೆದ ಹಲವು ಲೇಖನಗಳು ರಾಜ್ಯ ಮತ್ತು ರಾಷ್ಟ್ರೀಯ ಪತ್ರಿಕೆಗಳಲ್ಲೂ ಪ್ರಕಟವಾಗಿವೆ.

ನಾ.ಭಾ. ಅವರ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಲಭ್ಯವಿರುವ ಲೇಖನಗಳನ್ನು ಸಂಗ್ರಹಿಸಿ ಅವು ಮುಂದಿನ ಪೀಳಿಗೆಗೆ ಜ್ಞಾನಾಭಿವೃದ್ಧಿಗೆ ಸಹಕಾರಿ ಎಂದು ತಿಳಿದು ಹುಬ್ಬಳ್ಳಿಯ ಶ್ರೀ

ವಿಶ್ವಮಯ ಸಾಹಿತ್ಯ ಪ್ರಸಾರ ಸಮಿತಿಯವರು 'ನಾ. ಭಾ. ಕೃತಿ ಸಂಪುಟ ೧-೨' ಎಂದು ಎರಡು ಭಾಗಗಳಲ್ಲಿ ಪ್ರಕಟಿಸಿದ್ದಾರೆ. ಇಂಥ ಮಹಾನುಭಾವರು ದಿನಾಂಕ ೧೦-೬-೨೦೦೫ರಂದು ನಿಧನರಾದರು.

ಸವದತ್ತಿ ತಾಲೂಕಿನ ಶಿರಸಂಗಿ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆಯಿಂದ ಪ್ರಕಟವಾಗುವ ವಿಶ್ವಕರ್ಮ ವಿಕಾಸವಾಣಿ ಪತ್ರಿಕೆಯನ್ನು ಗಮನಿಸಿದಾಗ-

ಗೌರವ ಸಂಪಾದಕರು : ಶ್ರೀ ಶಿವಾತ್ಮಾನಂದ ಸರಸ್ವತಿ ಸ್ವಾಮೀಜಿ

ಪ್ರಧಾನ ಸಂಪಾದಕರು : ಸಿ. ಪಿ. ಮಾಯಾಚಾರಿ

ವ್ಯವಸ್ಥಾಪಕ ಸಂಪಾದಕರು : ಡಾ. ವಿರೂಪಾಕ್ಷ ಬಡಿಗೇರ

ಸಂಪಾದಕ ಮಂಡಳಿ ಸದಸ್ಯರಾಗಿ- ಭೀಮಸೇನ ಬಡಿಗೇರ ಹುಬ್ಬಳ್ಳಿ, ಅಶೋಕ ಕುಲ್ಲಳ್ಳಿಕರ ಜಮಖಂಡಿ, ಜಿ. ಎನ್. ಹಂಸಭಾವಿ ಹುಬ್ಬಳ್ಳಿ, ಬಿ. ಜನಾರ್ಧನ ಆಚಾರ ಮಂಗಳೂರ, ಎಸ್. ಕೆ. ಪತ್ತಾರ ಧಾರವಾಡ, ಎಸ್. ಎಂ. ಕಮ್ಮಾರ ಮುಂಡರಗಿ, ವೀರಣ್ಣ ಸೊಲ್ಲಾಪುರ ಬೆಂಗಳೂರ, ಗೋಪಾಲಕೃಷ್ಣ ಮನ್ವಾಚಾರ ಬೆಂಗಳೂರ, ಡಾ. ಗೋಪಾಲ ಮಹಾಮುನಿ ಬೇಡಕಿಹಾಳ, ಸುರೇಶ ಜುಂಜರವಾಡ ಬೈಲಹೊಂಗಲ ಇವರನ್ನು ಆಯ್ಕೆ ಮಾಡಿದ್ದಾರೆ. ಇವರು ಲೇಖನಗಳನ್ನು ಬರೆಯುವುದರ ಜತೆಗೆ ವಿಶ್ವಕರ್ಮ ಸಮಾಜದ ವಿವಿಧ ಕಾರ್ಯಕ್ರಮಗಳ ವಿವರವನ್ನು ಪತ್ರಿಕೆಗೆ ತಿಳಿಸುತ್ತ, ಸಮಗ್ರ ಕರ್ನಾಟಕದ ವಿಶ್ವಕರ್ಮ ಸಮಾಜವನ್ನು ತಲುಪುವ ನಿಟ್ಟಿನಲ್ಲಿ ಕಾರ್ಯ ಮಾಡುತ್ತಿವೆ.

ಕಟಪಾಡಿ ಆನೆಗೊಂದಿ ಮಹಾಸಂಸ್ಥಾನಪೀಠದ ಮುಖವಾಣಿಯಾಗಿ ಪ್ರಕಟವಾಗುತ್ತಿರುವ ಋಷಿಸ್ವರಂ ಪತ್ರಿಕೆ ಉಪಸಂಪಾದಕರಾಗಿ ಲೋಕೇಶ ಎಂ.ಬಿ. ಆಚಾರ್ ಕಂಬಾರು ಮತ್ತು ಕೆ.ಎಂ. ಗಂಗಾಧರ ಆಚಾರ್ಯ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಧಾನ ಸಂಪಾದಕರು ಧರ್ಮೇಂದ್ರ ಆಚಾರ್ಯ ಅವರು ಕಾಸರಗೋಡಿನಲ್ಲಿ ನೆಲೆನಿಂತಿರುವ ಕಾರಣ, ಈ ಇಬ್ಬರು ಉಪಸಂಪಾದಕರು ಪತ್ರಿಕೆಗೆ ಲೇಖನಗಳನ್ನು ತರಿಸುವುದು, ಪರಿಶೀಲಿಸುವುದು, ಸೂಕ್ತ ತಿದ್ದುಪಡಿ ಮಾಡುವುದು, ಪ್ರೂಫ್ ಕರೆಕ್ಷನ್ ಮಾಡುವುದು ಮೊದಲಾದ ಕೆಲಸಗಳನ್ನು ಸಂಸ್ಥಾನಪೀಠದ ಮೇಲಿನ ಭಕ್ತಿ ಕಾರಣವಾಗಿ ಶ್ರದ್ಧೆಯಿಂದ ಮಾಡುತ್ತಿದ್ದಾರೆ.

ಋಷಿಸ್ವರಂ ಪತ್ರಿಕೆಗೆ ಸಂಪಾದಕ ಮಂಡಳಿಯೂ ಇದೆ. ಟಿ. ಸುಧಾಕರ ಆಚಾರ್ಯ ತ್ರಾಸಿ, ಕೆ. ಕೇಶವ ಆಚಾರ್ಯ ಮಂಗಳೂರು, ಬಿ. ಸೂರ್ಯಕುಮಾರ್ ಆಚಾರ್ಯ ಹಳೆಯಂಗಡಿ, ಬಿ. ಪ್ರಕಾಶ ಆಚಾರ್ಯ ಕಾರ್ಕಳ, ಪಿ.ವಿ. ಗಂಗಾಧರ ಆಚಾರ್ಯ ಉಡುಪಿ, ಬೆಳುವಾಯಿ ಸುಂದರ ಆಚಾರ್ಯ ಮಂಗಳೂರು ಅವರು ಕಾರ್ಯನಿರ್ವಹಿಸುತ್ತಿದ್ದಾರೆ.

ಶಿವಮೊಗ್ಗದಿಂದ ಪ್ರಕಟವಾಗುವ ವಿಶ್ವಬ್ರಾಹ್ಮಣ ಪತ್ರಿಕೆಗೆ ಸಂಪಾದಕರಾಗಿ ಮೋಹನರಾವ್ ಅವರು ಕಾರ್ಯನಿರ್ವಹಿಸಿದರೆ, ಗೌರವ ಸಂಪಾದಕರಾಗಿ ಶಿವಾನಂದ ಪತ್ತಾರ್, ಉಪಸಂಪಾದಕರಾಗಿ ಎ.ಎಂ. ವಿಜಯಕುಮಾರ ಅವರು ಕಾರ್ಯನಿರ್ವಹಿಸುತ್ತಿದ್ದಾರೆ.

ಉಡುಪಿ ಜಿಲ್ಲೆಯ ಪಣಿಯೂರಿನಿಂದ ಪ್ರಕಟವಾಗುವ ಆತ್ಮೀಯ ಬೋಧಕ ಪತ್ರಿಕೆಯ ಪ್ರಧಾನ ಸಂಪಾದಕರು ಮಂಜುನಾಥ ಆಚಾರ್ಯ ಅವರು. ಸಂಪಾದಕರಾಗಿ ಬೇಲಾಡಿ ರಾಮಚಂದ್ರ ಆಚಾರ್ಯ ಅವರು. ಉಪಸಂಪಾದಕರಾಗಿ ಎಂ.ಎಲ್.ಭಾರತಿ, ಪ್ರಸಾದ ಪುರೋಹಿತ ಅವರು ಕಾರ್ಯನಿರ್ವಹಿಸುತ್ತಿದ್ದಾರೆ.

ಶಿರಸಂಗಿಯಿಂದ ಪ್ರಕಟವಾಗುವ ವಿಶ್ವಕರ್ಮ ಸಂದೇಶದ ಸಂಪಾದಕರು ಮತ್ತು ಪ್ರಕಾಶಕರು ಜಗನ್ನಾಥರಾವ್ ಬಡಿಗೇರ ಅವರು. ಈ ಪತ್ರಿಕೆಯ ಏಳ್ಗೆಯಲ್ಲಿ ಸಂಪಾದಕ ಮಂಡಳಿಯವರ ಶ್ರಮವೂ ಇದೆ. ಈ ಪತ್ರಿಕೆಯ ಗೌರವ ಸಂಪಾದಕರಾಗಿ ಇತಿಹಾಸ ತಜ್ಞರಾದ ಡಾ.ಎಸ್.ಕೆ.ಜೋಶಿ ಅವರು ಕಾರ್ಯನಿರ್ವಹಿಸುತ್ತಿದ್ದರೆ, ಪ್ರೊ. ವ್ಹಿ.ಜಿ. ದೀಕ್ಷಿತ, ಡಾ. ವಿರೂಪಾಕ್ಷ ಬಡಿಗೇರ, ಡಾ. ಶೀಲಾಕಾಂತ ಪತ್ತಾರ, ಸಿ.ಪಿ.ಮಾಯಾಚಾರಿ, ಪಾ.ವಿ. ಅರಕೇರಿ, ರಾಜೇಂದ್ರ ಬಡಿಗೇರ ಅವರು ಸಂಪಾದಕ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸುತ್ತ ಪತ್ರಿಕೆಯ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಮಂಗಳೂರಿನಿಂದ ೧೯೮೭ರಿಂದ ಪ್ರಕಟವಾಗುತ್ತಿರುವ ಸಹಚಿಂತನ ಪತ್ರಿಕೆಯ ಸಂಪಾದಕರಾಗಿ ಪ್ರಕಾಶ ಆಚಾರ್ ಅವರು ಕಳೆದ ೩೩ ವರುಷಗಳಿಂದ ನಿರಂತರವಾಗಿ ಮುನ್ನಡೆಸಿದ್ದಾರೆ. ೧೯೮೭ರಲ್ಲಿ ಗೌರವ ಸಂಪಾದಕರಾಗಿ ಬೈಕಾಡಿ ಜನಾರ್ದನ ಆಚಾರ್ ಅವರು ನೇಮಕವಾದರೆ, ಗೌರವ ಸಹ ಸಂಪಾದಕರಾಗಿ ಪ್ರಭಾಕರ ಆಚಾರ್, ಬಿ.ಎ. ಆಚಾರ್ಯ ಅವರು ಕೆಲಸ ಮಾಡಿದರು. ಸಂಪಾದಕ ಮಂಡಳಿಯಲ್ಲಿ ಕಾ.ವಾ. ಆಚಾರ್ಯ, ಪಾಲ್ತಾಡಿ ರಾಮಕೃಷ್ಣ ಆಚಾರ್, ಕೆ. ಪ್ರಭಾಕರ ಆಚಾರ್, ಎಚ್.ವಿ.ದಾಸ, ಎ. ಮಾಧವ ಆಚಾರ್ಯ, ಪೆರ್ಲ ಅನಂತ ಆಚಾರ್ಯ ಇವರೆಲ್ಲ ಸಂಪಾದಕ ಮಂಡಳಿ ಸದಸ್ಯರಾಗಿ ಪತ್ರಿಕೆಗೆ ಜೀವ ತುಂಬುವ ಕೆಲಸ ಮಾಡಿದ್ದಾರೆ. ಈಗ ಪ್ರಕಟವಾಗುತ್ತಿರುವ ಪತ್ರಿಕೆಗೆ ಬಿ.ಎ.ಆಚಾರ್ಯ ಅವರು ಗೌರವ ಪ್ರಧಾನ ಸಂಪಾದಕರಾಗಿ, ಸಹ ಸಂಪಾದಕರಾಗಿ ಮ.ಯೋಗೀಶ ಆಚಾರ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ಈಗ ಸಂಪಾದಕ ಮಂಡಳಿಯ ಸದಸ್ಯರು ಯಾರೂ ಇಲ್ಲ.

ಕಾಳಿಕಾ ಸಂದೇಶ ಪತ್ರಿಕೆ ಶಿರಸಂಗಿಯ ಶ್ರೀ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆಯ ಮೂಲಕ ಕಳೆದ ೧೭ ವರುಷಗಳಿಂದ ಪ್ರಕಟವಾಗುತ್ತಿದೆ. ಪ್ರಸ್ತುತ ಪತ್ರಿಕೆಯು ಈಗ ಸಾಕಷ್ಟು ಜನಪ್ರಿಯವಾಗಿ ಬೆಳೆದಿದೆ. ಅದು ಕರ್ನಾಟಕದ ವಿಶ್ವಬ್ರಾಹ್ಮಣರ ಬದುಕಿನ ಕಾರ್ಯನಿರ್ವಾಹಕ ವಾಗಿದೆ. ಈ ಪತ್ರಿಕೆಯು ಅಧ್ಯಾತ್ಮದ ಹಿರಿಮೆ ಹೊಂದಿದ್ದು, ಸಕಲರಿಗೂ ದಾರಿದೀಪವಾಗಿದೆ. ಈ ಪತ್ರಿಕೆಯ ಅಭಿವೃದ್ಧಿಗೆ, ಜನಮನದ ಕಲ್ಯಾಣಕ್ಕೆ ಬೆನ್ನೆಲುಬಾಗಿ 'ಸಂಪಾದಕ ಮಂಡಳಿ'ಯವರ

ಪರಿಶ್ರಮ ಅಪಾರವಾಗಿದೆ. ಈ ಮಂಡಳಿಯಲ್ಲಿ ಒಟ್ಟು ೧೨ ಜನ ಮಹನೀಯರು ಕಾಳಿಕಾ ಸಂದೇಶ ಕನ್ನಡ ಮಾಸಪತ್ರಿಕೆಗೆ ಜೀವನಾಡಿಯಾಗಿ ತಮ್ಮ ಅನುಪಮ ಸೇವೆ, ಮಾರ್ಗದರ್ಶನ ನೀಡುತ್ತಿದ್ದಾರೆ. ಪ್ರಧಾನ ಸಂಪಾದಕರೂ ಪ್ರಕಾಶಕರೂ ಆದ ಜಗನ್ನಾಥರಾವ್ ಬಡಿಗೇರ ಅವರು ಈ ಪತ್ರಿಕೆಯ ಕಾರ್ಯವಿಸ್ತರಣೆಗಾಗಿ ಹಗಳಿರುಳು ಶ್ರಮಿಸುತ್ತಿದ್ದಾರೆ. ಗೌರವ ಸಂಪಾದಕರಾದ ಎಸ್.ಕೆ. ಜೋಶಿ ಅವರ ಸೇವೆ ವಿಶ್ವಕರ್ಮ ಸಮುದಾಯಕ್ಕೆ ಅಲಂಕೃತವಾಗಿದೆ. ಪತ್ರಿಕೆಯ ಗೌರವ ಸಹ ಸಂಪಾದರು ಇಲ್ಲಿ ಏಳು ಜನ ವಿದ್ವಾಂಸರಿದ್ದು ಪ್ರತಿಯೊಬ್ಬರೂ ಶ್ರೇಷ್ಠರು, ಸಂಶೋಧಕರು ಹಾಗೂ ಆದರ್ಶ ವ್ಯಕ್ತಿಗಳಾಗಿದ್ದಾರೆ.

ವಿಶ್ವಕರ್ಮ ಸಮುದಾಯವು ಸ್ವಾತಂತ್ರ್ಯದ ನಂತರ ಪತ್ರಿಕಾ ಮಾಧ್ಯಮವನ್ನು ಬಳಸಿಕೊಂಡು ಅಂದಿನ ಪ್ರಚಲಿತವಾದ ರಾಷ್ಟ್ರೀಯ, ಅಂತರಾಷ್ಟ್ರೀಯ, ನಾಡು ನುಡಿಯ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ, ಹಾಗೂ ಮಾಸ ಭವಿಷ್ಯದಂತಹ ವಿಷಯಗಳನ್ನು ಪ್ರಸಾರ ಮಾಡುತ್ತಾ ಓದುಗರ ಮನಮುಟ್ಟಿವೆ. ಮೈಸೂರಿನಿಂದ ಪ್ರಸಾರವಾಗುತ್ತಿದ್ದ 'ವಿಶ್ವಕರ್ಮಾ' ಪತ್ರಿಕೆಯ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಓದುಗರಿಂದ ಜನಮನ್ನಣೆ ಪಡೆದು ವಿವಿಧ ರಾಜ್ಯಗಳಿಂದ ವಿವಿಧ ಸಮುದಾಯದವರು ತಮ್ಮ ಪತ್ರಿಕೆಗಳನ್ನು ವಿಶ್ವಕರ್ಮಾ ಪತ್ರಿಕೆಗೆ ವಿನಿಮಯ ರೂಪದಲ್ಲಿ ಸಂಪಾದಕರಿಗೆ ತಮ್ಮ ತಮ್ಮ ಪತ್ರಿಕೆಗಳನ್ನು ಕಳಿಸುತ್ತಿದ್ದರು. ಉದಾಹರಣೆಯಾಗಿ 'ವಿಶ್ವಕರ್ಮಾ' ಪತ್ರಿಕೆಯ (ಸಂಪುಟ ೪, ಸಂಚಿಕೆ ೧, ಪುಟ ೩೫, ನವಂಬರ್ ೧೯೫೧) ರಲ್ಲಿ ಪ್ರಕಟಿಸಿದ ಪಟ್ಟಿಯನ್ನು ಕೆಳಗಿನಂತೆ ನೀಡಲಾಗಿದೆ.

| **ಅ.ನಂ ಪತ್ರಿಕೆಯ ಹೆಸರು** | **ಊರು** |
|---|---|
| ೧. ಅಂತರಂಗ (ಮಾಸಪತ್ರಿಕೆ) | ಉಡುಪಿ |
| ೨. ಅರಣೋದಯ (ಮಾಸಪತ್ರಿಕೆ) | ದುವ್ವೂರ,ಕಡಪ |
| ೩. ಆದರ್ಶ (ಮಾಸಪತ್ರಿಕೆ) | ಬೊಂಬಾಯಿ |
| ೪. ಆಯುರ್ವೇಷ (ಮಾಸಪತ್ರಿಕೆ) | ಹಿರಿಯಡಕ, ದ.ಕ |
| ೫. ಕನ್ನಡ ನುಡಿ (ಮಾಸಪತ್ರಿಕೆ) | ಬೆಂಗಳೂರು |
| ೬. ಗ್ರಾಮಾಭ್ಯುದಯ (ಮಾಸಪತ್ರಿಕೆ) | ಬೆಂಗಳೂರು |
| ೭. ಚಿತ್ರಾಂಗಿ (ತೆಲಗು,ಮಾಸಪತ್ರಿಕೆ) | ಮದರಾಸು |
| ೮. ನಂದಿನಿ (ಮಾಸಪತ್ರಿಕೆ) | ಶಿವಮೊಗ್ಗ |
| ೯. ಪುಸ್ತಕ ಪ್ರಪಂಚ (ಮಾಸಪತ್ರಿಕೆ) | ಮೈಸೂರು |
| ೧೦. ಮೈಸೂರು ಇನ್‌ಫರ್‌ಮೇಷನ್ ಬುಲಿನ್ | ಬೆಂಗಳೂರು (ಇಂಗ್ಲೀಷ್) |
| ೧೧. ಮೈಸೂರು ವೈಶ್ಯಪತ್ರಿಕೆ (ಮಾಸಪತ್ರಿಕೆ) | ಮೈಸೂರು |

೧೨. ಮೈಸೂರು ಸಕ್ಕರೆ (ಮಾಸಪತ್ರಿಕೆ) ಮಂಡ್ಯ
೧೩. ಯುಗಪುರುಷ (ಮಾಸಪತ್ರಿಕೆ) ಕಿನ್ನಿಗೋಳ, ದ.ಕ
೧೪. ಯುಗಾಂತರ (ಮಾಸಪತ್ರಿಕೆ) ಬೆಂಗಳೂರು
೧೫. ವಿಕಟವಿನೋದಿನಿ (ಮಾಸಪತ್ರಿಕೆ) ಬೆಂಗಳೂರು
೧೬. ವಿಶ್ವಕರ್ಮವಿಜಯ (ಮರಾಠಿ,ಮಾಸಪತ್ರಿಕೆ) ಬೊಂಬಾಯಿ
೧೭. ವಿಶ್ವಕಲಾನಿಧಿ (ತಮಿಳು,ಮಾಸಪತ್ರಿಕೆ) ಮದರಾಸು
೧೮. ವಿಶ್ವಬ್ರಹ್ಮವೃತ್ತ (ಮರಾಠಿ,ಮಾಸಪತ್ರಿಕೆ) ಪೂನ
೧೯. ವೀರಬ್ರಹ್ಮಪ್ರಬೋಧಿನೀ (ತೆಲಗು,ಮಾಸಪತ್ರಿಕೆ) ಕಂದಿಮಲ್ಲಯಪಲ್ಲೆ ಪೋತಲೂರು
೨೦. ಶಕ್ತಿ (ಮಾಸಪತ್ರಿಕೆ) ಮೈಸೂರು
೨೧. ಸರಸ್ವತಿ (ಮಾಸಪತ್ರಿಕೆ) ಬೆಂಗಳೂರು
೨೨. ಸಾರ್ವಜನಿಕ (ಪಬ್ಲಿಕ್ ಅಫೇರ್ಸ್) (ಮಾಸಪತ್ರಿಕೆ) ಬೆಂಗಳೂರು
೨೩. ಸುಖಾಶ್ರಯ ಪ್ರಬೋಧಾ(ಮಾಸಪತ್ರಿಕೆ) ರಾಯದುರ್ಗ, ಬಳ್ಳಾರಿ
೨೪. ಪ್ರಕಾಶ (ವಾರಪತ್ರಿಕೆ) ಉಡುಪಿ
೨೫. ರ್‍ಯಾಷನಲಿಸ್ಟ್ (ಇಂಗ್ಲೀಷ್) (ವಾರಪತ್ರಿಕೆ) ಮೈಸೂರು
೨೬. ಸರ್ವೋದಯ(ವಾರ ಪತ್ರಿಕೆ) ಮಂಗಳೂರು
೨೭. ಶ್ರೀ ಭಾರತಿ (ಪಕ್ಷ ಪತ್ರಿಕೆ) ಹೈದರಾಬಾದು
೨೮. ಸಹಕಾರ ಸಮಾಚಾರ (ಪಕ್ಷ ಪತ್ರಿಕೆ) ಮೈಸೂರು
೨೯. ಕನ್ನಡ ಗುಡಿ (ತ್ರೈಮಾಸಿಕ) ದೆಹಲಿ
೩೦. ಸಂಸ್ಕೃತ ಪಾಠಶಾಲಾ ಪತ್ರಿಕೆ(ಸಂಸ್ಕೃತ) (ತ್ರೈಮಾಸಿಕ) ಮೈಸೂರು
೩೧. ಉಷಾ ಸಾಹಿತ್ಯ ಮಾಲೆ (ಕಾದಂಬರಿ ಗ್ರಂಥಗಳು) ಮೈಸೂರು[೨೮]

ಮೈಸೂರಿನಿಂದ ಪ್ರಸಾರವಾಗುತ್ತಿರುವ 'ವಿಶ್ವಕರ್ಮಾ' ಮಾಸ ಪತ್ರಿಕೆಯ ಸಂಪಾದಕರಿಗೆ ರಾಷ್ಟ್ರದ ಬೇರೆ ಬೇರೆ ರಾಜ್ಯಗಳಿಂದ ಮತ್ತು ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಂದ ವಿಶ್ವಕರ್ಮಾ ಪತ್ರಿಕೆಗೆ ವಿನಿಮಯ ರೂಪದಲ್ಲಿ ಕಳಿಸಿಕೊಡುತ್ತಿದ್ದರು. ಇದರಿಂದ ಭಾರತದ ವಿಶ್ವಕರ್ಮ ಸಮುದಾಯವು ಕೇವಲ ತನ್ನ ಸಮುದಾಯಕ್ಕೆ ಮೀಸಲಿರದೆ, ವಿಶ್ವವ್ಯಾಪಿಯಾದ ಸುದ್ದಿ ಸಮಾಚಾರಗಳನ್ನು ಪ್ರಕಟಿಸುವದರಿಂದ ತನ್ನ ಪತ್ರಿಕಾಭಿಮಾನವನ್ನು ಜನಮಾನಸದಲ್ಲಿ ಮೂಡಿಸಿರುವುದನ್ನು ಗುರುತಿಸಲಾಗಿದೆ. ಕ್ಷೇತ್ರ ಕಾರ್ಯದಿಂದ ದೊರೆತ ವಿಶ್ವಕರ್ಮ ಸಮುದಾದ ಒಟ್ಟು ಪತ್ರಿಕೆಗಳನ್ನು ಸಂಗ್ರಹಿಸಿ ಅವುಗಳ ಚಾರಿತ್ರಿಕ ಕಥನವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ಕೊನೆ ಟಿಪ್ಪಣಿ

೧. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೧೦, ಪುಟ–೩೩–೩೪, ಆಗಸ್ಟ್ ೧೯೫೧

೨. ವಿಶ್ವದರ್ಶನ ಸಂಪಾದಕೀಯ, ಸಂಪುಟ–೧೨, ಸಂಚಿಕೆ–೨೫–೨೬, ಪುಟ–೪, ಜನವರಿ ೧೯೮೬

೩. ಜಗನ್ನಾಥರಾವ ಬಡಿಗೇರ: ವಿಶ್ವಕರ್ಮ ಸಂದೇಶ ಪತ್ರಿಕೆಯ ಸಂಪಾದಕೀಯ, ಪುಟ–೩, ಏಪ್ರಿಲ್ ೨೦೦೬

೪. ಕಾಳಿಕಾ ಸಂದೇಶ, ಸಂಪುಟ–೧, ಸಂಚಿಕೆ–೫, ಪುಟ–೨, ಅಕ್ಟೋಬರ್ ೨೦೧೨

೫. ಕಾಳಿಕಾ ಸಂದೇಶ ಸಂಪುಟ–೨, ಸಂಚಿಕೆ–೪, ಪುಟ–೧೨, ಅಗಷ್ಟ ೨೦೧೩

೬. ವಿಶ್ವಕರ್ಮ ನುಡಿ, ವಿಶ್ವಕರ್ಮ ಸಮಾಜದ ಮುಂದಿರುವ ಸವಾಲುಗಳು ಪುಟ–೧೬ ಸೆಪ್ಟಂಬರ್ ೨೦೧೩

೭. ಬೈಕಾಡಿ ಜನಾರ್ಧನ ಆಚಾರ್: ರೂವಾರಿ ಪತ್ರಿಕೆಯ ಸಂಪಾದಕೀಯ ಪುಟ–೩, ಫೆಬ್ರವರಿ ೨೦೦೫

೮. ಡಾ. ಮೋಹನ್‌ರಾವ್ : ವಿಶ್ವಬ್ರಾಹ್ಮಣ ಪತ್ರಿಕೆಯ ಸಂಪಾದಕೀಯ, ಪುಟ–೧, ಜನವರಿ ೨೦೦೫

೯. ಸುರೇಶ ಸಿ. ಅರ್ : ವಿಶ್ವಕರ್ಮೋದಯ ಪತ್ರಿಕೆಯ ಸಂಪಾದಕೀಯ ಪುಟ–೪, ಫೆಬ್ರುವರಿ ೨೦೦೮

೧೦. ಮಂಜುನಾಥ ಆಚಾರ್: ಪ್ರಬೋಧಕ ಪತ್ರಿಕೆಯ ಸಂಪಾದಕೀಯ, ಪುಟ–೪. ಡಿಸೆಂಬರ್ ೨೦೦೯

೧೧. ವಿಶ್ವಕರ್ಮ ಕಲಾ ಸಂಪಾದಕೀಯ: ಸಂಪುಟ–೧೩, ಸಂಚಿಕೆ–೭, ಪುಟ–೧, ಮೇ ೨೦೦೦

೧೨. ಸಹಚಿಂತನ ಸಂಪಾದಕೀಯ: ಸಂಪುಟ–೩೨, ಸಂಚಿಕೆ–೯, ಡಿಸೆಂಬರ್ ೨೦೧೮

೧೩. ಋಷಿಸ್ವರಂ ಸುದ್ದಿನೋಟ:ಸಂಪುಟ–೪, ಸಂಚಿಕೆ–೪, ಪುಟ–೧೫, ಅಕ್ಟೋಬರ್–ಡಿಸೆಂಬರ್ ೨೦೧೬

೧೪. ವಿಶ್ವಕರ್ಮ ವಿಶೇಷ ಸಂಚಿಕೆ: ಸಂಪುಟ–೩೨, ಸಂಚಿಕೆ–೯, ಪುಟ–೫, ಡಿಸೆಂಬರ್–ಫೆಬ್ರವರಿ ೧೯೮೪

೧೫. ವಿಶ್ವಕರ್ಮ ಜ್ಞಾನವಾಹಿನಿ : ಸಂಪುಟ–೧, ಸಂಚಿಕೆ–೩, ಪುಟ–೨೪, ಡಿಸೆಂಬರ್ ೧೯೯೪

೧೬. ಸುಗ್ಗಿಸುದ್ದಿ : ಸಂಪಾದಕೀಯ, ಸಂಪುಟ–೧೨, ಸಂಚಿಕೆ–೧, ಪುಟ–೫, ಜನೆವರಿ ೨೦೧೦

೧೭. ಚಿಂತನಶೀಲ ಬುದ್ಧಿ ಜೀವಿ ಯುಗಾದಿ ವಿಶೇಷಾಂಕ: ಪುಟ–೨ ಮತ್ತು ೩ ೨೦೦೨.

೧೮. ನಾ.ಭಾ.ಚಂದ್ರಶೇಖರಾಚಾರ್ಯರ ಭಾಷಣ: ವಿಶ್ವಕರ್ಮಾ, ಸಂಪುಟ–೪, ಸಂಚಿಕೆ–೨, ಪುಟ–೩೦, ಡಿಸೆಂಬರ್ ೧೯೫೧

೧೯. ಸಂಪಾದಕೀಯ: ವಿಶ್ವಕರ್ಮಾ ಸಂಪುಟ–೪, ಸಂಚಿಕೆ–೧, ಪುಟ–೯,೧೦, ನವೆಂಬರ್ ೧೯೫೧

೨೦. ವಿಶ್ವಕರ್ಮಾ: ಸಂಪುಟ–೪, ಸಂಚಿಕೆ–೨, ಪುಟ–೧೯, ಡಿಶಂಬರ್ ೧೯೫೧,

೨೧. ವಿಶ್ವಕರ್ಮಾ ಸಂಪುಟ–೪, ಸಂಚಿಕೆ–೨, ಪುಟ–೧೯, ಡಿಶಂಬರ್ ೧೯೫೧,

೨೨. ಬಿ. ಹರಿಶ್ಚಂದ್ರ ಆಚಾರ್ಯ: ಸಂಪಾದಕೀಯ ವಿಶ್ವಕರ್ಮ ಪತ್ರಿಕೆ, ಪುಟ–೨, ಮೇ ೧೯೬೦

೨೩. ವಿಶ್ವಕರ್ಮೋದಯ : ಪುಟ–೧೩, ಸೆಪ್ಟಂಬರ್ ೨೦೦೭

೨೪. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ :ಸಾಮಾಜಿಕ ಧುರೀಣ ಹರಿಶ್ಚಂದ್ರ ಆಚಾರ್ಯ:ನೂರರ ಮೇರು ಹರಿಶ್ಚಂದ್ರ ಆಚಾರ್ಯ ಅಭಿನಂದನ ಸಂಪುಟ, ಪುಟ–೯

೨೫. ಜೀವಣ್ಣ ಮಸಳಿ :ಮೌನೇಶ್ವರ ವಚನಗಳು, ಪುಟ–೨೪

೨೬. ಎಂ. ಎಂ. ಕಲಬುರ್ಗಿ :ಬಸವಣ್ಣನವರ ವಚನ ಸಂಪುಟ, ಪುಟ–೩೬

೨೭. ಎನ್.ಸಿ. ಛಾಯಾಪತಿ :ಸಂಪಾದಕೀಯ, ವಿಧಾತ್ರ, ಸಂಪುಟ–೬, ಸಂಚಿಕೆ–೧, ಪುಟ–೩, ಫೆಬ್ರವರಿ ೨೦೧೫

೨೮. ವಿಶ್ವಕರ್ಮಾ, ಸಂಪುಟ–೪, ಸಂಚಿಕೆ–೧, ಪುಟ–೩೫, ನವಂಬರ್ ೧೯೫೧

# ಅಧ್ಯಾಯ–ನಾಲ್ಕು
# ವಿಶ್ವಕರ್ಮ ಪತ್ರಿಕೆಗಳ ವಿವಿಧ ಆಯಾಮಗಳು

೪.೧ ಸಾಮಾಜಿಕ ಆಯಾಮ

೪.೨ ಧಾರ್ಮಿಕ ಆಯಾಮ

೪.೩ ರಾಜಕೀಯ ಆಯಾಮ

೪.೪ ಸಾಂಸ್ಕೃತಿಕ ಆಯಾಮ

೪.೫ ಲಲಿತ ಕಲೆಗಳು

# ಅಧ್ಯಾಯ–ನಾಲ್ಕು

## ವಿಶ್ವಕರ್ಮ ಪತ್ರಿಕೆಗಳ ವಿವಿಧ ಆಯಾಮಗಳು

ವಿಶ್ವಕರ್ಮ ಪತ್ರಿಕೆಗಳು ತನ್ನ ಧ್ಯೇಯ ಧೋರಣೆಗಳನ್ನು ಬಹಳ ಸ್ಪಷ್ಟವಾಗಿ ಮುಖ್ಯ ಶೀರ್ಷಿಕೆಯ ಕೆಳಗೆ ಉಪಶೀರ್ಷಿಕೆಯಾಗಿ (ಟ್ಯಾಗ್‌ಲೈನ್) ಘೋಷಿಸಿಕೊಂಡಿವೆ. ಪತ್ರಿಕೆಗಳು ನಮ್ಮ ಪ್ರಾಚೀನ ಧರ್ಮಗ್ರಂಥಗಳಿದ್ದಂತೆ. ಅವು ಜನತೆಯಲ್ಲಿ ಪ್ರಸಾರವಾದಷ್ಟು ನಮ್ಮ ಧರ್ಮ ಸಂಸ್ಕೃತಿಗಳು ಉದ್ಧಾರವಾಗುತ್ತವೆಂಬ ಬಲವಾದ ನಂಬಿಕೆ ಹೊಂದಿವೆ. 'ಶಿಲ್ಪ, ಕಲೆ, ಕೈಗಾರಿಕೆ, ಧರ್ಮ, ಕರ್ಮಗಳಿಗಾಗಿಯೇ ಮೀಸಲಾದ ಮಾಸಪತ್ರಿಕೆ' (ವಿಶ್ವಕರ್ಮಾ) 'ವಿಶ್ವಕರ್ಮ ಕಲಾ ಪ್ರಕಾರಗಳಿಗೆ ಮೀಸಲಾದ ಪತ್ರಿಕೆ' (ರೂವಾರಿ) 'ಧಾರ್ಮಿಕ ಮತ್ತು ಸಾಮಾಜಿಕ ಮಾಸ ಪತ್ರಿಕೆ'(ಕಾಳಿಕಾದೇವಿ ವಾಣಿ) 'ಸಮಕಾಲೀನ ಕನ್ನಡಿಗರ ವೈಚಾರಿಕ, ಧಾರ್ಮಿಕ ಸಾಂಸ್ಕೃತಿಕ ಸಂದೇಶ' (ಚಿಂತನಶೀಲ ಬುದ್ಧಿಜೀವಿ) 'ವೈಶ್ವಕರ್ಮಣ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಾಸಪತ್ರಿಕೆ' (ವಿಶ್ವಕರ್ಮ ವಿಕಾಸವಾಣಿ) 'ಶೈಕ್ಷಣಿಕ, ವೈದಿಕೀಯ ಶಿಲ್ಪಕಲೆಗಳ ಸಂವರ್ಧನೆ ಏಕೀಕೃತ, ಸಶಕ್ತ, ಸಮೃದ್ಧ ಸಮಾಜ ನಿರ್ಮಾಣ ಇದು ನಮ್ಮ ಆಶಯ' (ಋಷಿಸ್ವರಂ) 'ಧಾರ್ಮಿಕ,ಸಾಮಾಜಿಕ, ಶೈಕ್ಷಣಿಕ ಮಾಸಪತ್ರಿಕೆ' (ಆತ್ಮೀಯ ಬೋಧಕ) 'ಧಾರ್ಮಿಕ ಮಾಸಪತ್ರಿಕೆ' (ಶ್ರೀಕ್ಷೇತ್ರ ಚಿಕ್ಕಲ್ಲೂರು ಸಿದ್ಧಪ್ಪಾಜಿ ಮಹಿಮಾ ಮಂಜರಿ) 'ರಾಷ್ಟ್ರೀಯ ಕನ್ನಡ ಮಾಸಪತ್ರಿಕೆ' (ಸಹಚಿಂತನ) 'ಕನ್ನಡ ರಾಷ್ಟ್ರೀಯ ಮಾಸಪತ್ರಿಕೆ' (ವಿಶ್ವಕರ್ಮಾ) 'ರಾಜ್ಯಾದಂತ ಪ್ರಸಾರವುಳ್ಳ ಧಾರ್ಮಿಕ, ತಾತ್ವಿಕ, ಸಾಹಿತ್ಯಕ, ಸರ್ವಧರ್ಮ ಸಮನ್ವಯ , ಸರ್ವೋದಯ ಪಕ್ಷಪತ್ರಿಕೆ'(ಜಗತ್ ಕಲ್ಯಾಣ) 'ಸಾಹಿತ್ಯ ,ಕಲೆ, ವೈಚಾರಿಕತೆ, ಸಂಘಟನೆ' (ವಿಶ್ವಕರ್ಮ ಜ್ಞಾನ ವಾಹಿನಿ) 'ವಿಶ್ವಬ್ರಾಹ್ಮಣ ಜನಾಂಗದ ಪ್ರಗತಿ ಮತ್ತು ಸಾಧನೆಯೇ ನಮ್ಮ ಗುರಿ'( ವಿಶ್ವಕರ್ಮ ಕಲಾ) 'ಸಂಸ್ಕೃತಿ, ಸಾಹಿತ್ಯ ಹಾಗೂ ಕಲೆಗೆ ಮೀಸಲಾದ ಏಕೈಕ ಪತ್ರಿಕೆ' (ವಿಧಾತೃ) 'ಸಾಹಿತ್ಯ ಸಂಸ್ಕೃತಿಗೆ ಮೀಸಲಾದ ತ್ರೈಮಾಸಿಕ' (ಸ್ಥಿತಿ ಗತಿ) ಹೀಗೆ ಆಧುನಿಕ ಮಾನವ ಸಮಾಜದಲ್ಲಿ ಪತ್ರಿಕೆಯ ಪಾತ್ರ, ಸುದ್ದಿ ಸಮಾಚಾರಗಳಷ್ಟೇ ಅಲ್ಲ, ಜ್ಞಾನ, ವಿಜ್ಞಾನ, ಧರ್ಮ, ಸಂಸ್ಕೃತಿ, ಕಲೆ, ಮುಂತಾದ ಎಲ್ಲಾ ವಿಷಯಗಳನ್ನು ಪತ್ರಿಕೆಗಳು

ಜನಕ್ಕೆ ಬೇರೆ ಬೇರೆ ಆಯಾಮಗಳಲ್ಲಿ ಮುಟ್ಟಿಸುತ್ತಾ ಬಂದಿವೆ. ಜನತೆಯಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ, ಕ್ರಾಂತಿಗಳಿಗೂ ಕಾರಣೀಭೂತವಾಗುತ್ತವೆ. ವಿಧವಿಧವಾದ ಲೇಖನಗಳೂ, ಕವಿತೆಗಳೂ, ಜನರಲ್ಲಿ ರಂಜನೆಯನ್ನು ಮೂಡಿಸಿ, ತನ್ಮೂಲಕ ಅವರಲ್ಲಿ ಜ್ಞಾನದ ಬೆಳಕನ್ನು ನೀಡಿ, ತಮ್ಮನ್ನು ತಾವು ತಿದ್ದಿಕೊಳ್ಳುವಂತೆ ಮಾಡುತ್ತವೆ. ಅಭಿಪ್ರಾಯ ಸ್ವಾತಂತ್ರ್ಯ ವಿರುವದರಿಂದ ಪತ್ರಿಕೆಯಲ್ಲಿ ನಿರ್ಭಯವಾಗಿ ಬರೆಯುವವರಿಗೆ ಹೆಚ್ಚಿನ ಪ್ರೋತ್ಸಾಹವು ಇದೆ. ಪತ್ರಿಕಾ ಸಂಪಾದಕರಾದವರು ಜನಾಭಿಪ್ರಾಯವನ್ನು ನಿಯಂತ್ರಿಸುವಲ್ಲಿ ಹಾಗೂ ರೂಪಿಸುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಬೇಕಾಗುತ್ತದೆ.

ಎಲ್ಲಾ ಪತ್ರಿಕೆಗಳಿಗೂ ಅದರದ್ದೇ ಆದ ಧ್ಯೇಯೊದ್ದೇಶಗಳಿರುತ್ತವೆ. .ಕೇಲವು ರಾಜಕೀಯ ವಿಷಯಕ್ಕೆ ಮಹತ್ವ ನೀಡಿದರೆ, ಕೆಲವು ಸಾಮಾಜಿಕ ಸಮಗ್ರತೆಗೆ ಒತ್ತು ನೀಡುತ್ತವೆ. ಕೆಲವು ಪತ್ರಿಕೆಗಳು ಧಾರ್ಮಿಕ ಜಾಗೃತಿಗಾಗಿ ಶ್ರಮಿಸಿದರೆ, ಕೆಲವು ವಿಜ್ಞಾನ, ಸಂಗೀತ, ಕಲೆ, ಹಾಗೂ ಸ್ಥಳೀಯ ವಿಷಯಗಳ ಪ್ರಸಾರಕ್ಕೆ ಮಿಸಲಾಗಿರುತ್ತವೆ. ಸಮುದಾಯಗಳ ಪರೋಭಿವೃದ್ಧಿಗಾಗಿಯೂ ನಡೆಯುವ ಪತ್ರಿಕೆಗಳುಂಟು. ಸಾಮಾಜಿಕ, ಧಾರ್ಮಿಕ ನೈತಿಕ ವಿಕಾಸದಿಂದ ಆಯಾಯಾ ಸಮುದಾಯದವರ ಜನ ಮುಂದೆ ಬರಲಿ ಎಂಬ ಧ್ಯೇಯದಿಂದಲೂ, ಆರ್ಥಿಕವಾಗಿ ಬಲಗೊಳ್ಳಲಿ ಎಂಬ ಗುರಿಸಾಧನೆಗೂ, ಸರಕಾರದಲ್ಲಿ ರಾಜಕೀಯವಾಗಿ ಪ್ರಾತಿನಿಧ್ಯ ಸಾಧಿಸುವ ಸಲುವಾಗಿಯೂ ಪತ್ರಿಕೆಗಳು ಪ್ರಕಟವಾಗುತ್ತವೆ. ಈ ಸಾಲಿನಲ್ಲಿ ವಿಶ್ವಕರ್ಮ ಸಮುದಾಯವು ತನ್ನ ಸಾಂಸ್ಕೃತಿಕ ಉನ್ನತಿಗಾಗಿ ಮತ್ತು ನಾಡು, ನುಡಿಗಾಗಿ, ಸಾಮಾಜಿಕ ನ್ಯಾಯದ ಪರ ಧ್ವನಿಯಾಗಿ, ರಾಷ್ಟ್ರೀಯ ಜಾಗೃತಿಗಾಗಿ, ಜ್ಯಾತ್ಯಾತೀತವಾಗಿ ಕನ್ನಡ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಪತ್ರಿಕೆಗಳನ್ನು ಪ್ರಕಟಿಸಿ ಪ್ರಸಾರ ಮಾಡುತ್ತಾ ಬಂದಿದೆ. ಪತ್ರಿಕೆಗಳು ಹಾಕಿಕೊಂಡ ಸಾರ್ಥಕ ಉದ್ದೇಶಗಳನ್ನು ಅಭ್ಯಾಸದ ಅನುಕೂಲಕ್ಕಾಗಿ ಕೆಳಕಂಡಂತೆ ವಿಂಗಡಿಸಿ ವಿವರಿಸಿಕೊಳ್ಳಲಾಗಿದೆ.

**೪.೧. ಸಾಮಾಜಿಕ ಆಯಾಮ :**

ಶ್ರೇಣೀಕೃತ ಸಮಾಜದಲ್ಲಿ ಮೈಕೊಡವಿಕೊಂಡು ಮೇಲೇಳಬೇಕೆಂಬ ಅದಮ್ಯ ಆಸೆಯಿಂದ ವಿಶ್ವಕರ್ಮ ಸಮಾಜವು ಸಂಘಟಿತವಾಗಿ ಕಾರ್ಯಮಾಡಲು ಸಭೆ ಸಮ್ಮೇಳನಗಳನ್ನು ಆಯೋಜಿಸಿ, ಜನಮಾನಸದಲ್ಲಿ ಬೆಳಕು ಬೀರುವ ಕೆಲಸವನ್ನು ಮಾಡಿದೆ. ದಿನಾಂಕ ೫-೨-೨೦೧೨ರಂದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಕಲ್ಸಂಕದಲ್ಲಿ ವಿಶ್ವಕರ್ಮ ಸಮ್ಮೇಳನ ಜರುಗಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ೨೦೦ಕ್ಕೂ ಅಧಿಕ ವಿಶ್ವಬ್ರಾಹ್ಮಣ ಸಂಸ್ಥೆ-ಸಂಘಗಳ ಕೇಂದ್ರದ ವಿಶ್ವಕರ್ಮ ಒಕ್ಕೂಟದ ರಜತಮಹೋತ್ಸವ ನಿಮಿತ್ಯ ಈ ಸಮ್ಮೇಳನವನ್ನು ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ವಿಶ್ವಕರ್ಮ ಸಾಮಾಜಿಕ ಸ್ಥಿತಿಗತಿಗಳ ಪುನರಾವಲೋಕನ ಮತ್ತು ಸಮುದಾಯವನ್ನು ಅವಹೇಳನ ಮಾಡುವುದರ ವಿರುದ್ಧ ಜಾಗೃತಿ ಮತ್ತು ಅರಿವು ಮೂಡಿಸಬೇಕೆನ್ನುವ ಹೊಣೆಯನ್ನು ಆಸಮುದಾಯದ ಪತ್ರಿಕೆಗಳು ಹುಟ್ಟಿದ್ದು ಗಮನಾರ್ಹ

"ಸಾರ್ವಜನಿಕ ಪ್ರತಿಯೊಂದು ವಿಶಿಷ್ಟ ಆಗು ಹೋಗುಗಳಿಗೂ ವಿಶ್ವಕರ್ಮರ ವೃತ್ತಿಗಳ ಉತ್ಪನ್ನಗಳು ಅತೀ ಅಗತ್ಯ ತನ್ನಿಮಿತ್ಯ ಈ ಸಮುದಾಯಕ್ಕೆ ಅನ್ಯರ ನಿಕಟ ಜನಸಂಪರ್ಕವು ಬಹಳಷ್ಟಿದೆ. ಅಂತೆಯೇ ಆಚಾರ ವಿಚಾರ ಸಂಪ್ರದಾಯಗಳಲ್ಲಿ ತನ್ನದೇ ವೈಶಿಷ್ಟ್ಯಗಳನ್ನು ಬಹಳ ಹಿಂದಿನಿಂದಲೂ ಉಳಿಸಿ ಬೆಳೆಸಿಕೊಂಡು ಬಂದಿದೆ. ಎಲ್ಲರೊಂದಿಗೂ ಕಷ್ಟ ಸುಖಗಳಲ್ಲಿ ಸಹಭಾಗಿಗಳಾಗುವ ಪ್ರವೃತ್ತಿಯೂ ಬಹಳ. ತಮ್ಮ ಕುಲಕಸುಬುಗಳನ್ನು ಉಳಿದೆಲ್ಲಾ ಸಮುದಾಯಗಳ ಆಸಕ್ತರಿಗೆ ಕಲಿಸಿಕೊಟ್ಟು ಅವರ ಜೀವನೋಪಾಯಕ್ಕೆ ನೆರವಾಗಿದ್ದಾರೆ. ಇದೊಂದು ಔದಾರ್ಯದ ಗುಣವೆಂದೇ ಹೇಳಬೇಕು. ಆದರೆ ಇಂದಿನ ಆಧುನಿಕ ಪ್ರತಿಕೂಲತೆಯಿಂದಾಗಿ ತಮ್ಮ ವೃತ್ತಿಯ ಬರವನ್ನು ಎದುರಿಸುವಂತಾಯಿತು. ಇದರ ಜೊತೆಯಲ್ಲಿ ವಿಶ್ವಬ್ರಾಹ್ಮಣರ ವೇದ ಪ್ರತಿಪಾದಿತ ಸ್ಥಾನ-ಮಾನಗಳು, ಶಿಲ್ಪಶಾಸ್ತ್ರಜ್ಞನಾದ ಪ್ರಾವೀಣ್ಯ ಮತ್ತು ಸುಸಂಸ್ಕೃತ ಜೀವನ ಶೈಲಿಯನ್ನು ಅರ್ಥೈಸಿಕೊಳ್ಳಲು ವಿಫಲರಾದ ಇಲ್ಲವೇ ಪರಿಜ್ಞಾನವಿಲ್ಲದ ಕೆಲವಿದ್ವಾಂಸರುಗಳೆನಿಸಿದವರು ಸಮುದಾಯದ ಬಗ್ಗೆ ನಿಂದನೀಯ ಟೀಕೆಗಳನ್ನು ಕಳೆದ ಐದು ದಶಕಗಳಿಂದ ವಿವಿಧ ಮಾಧ್ಯಮಗಳಲ್ಲಿ ನೀಡುತ್ತಿರುವುದನ್ನು ಗಮನಿಸುತ್ತಿದ್ದು ಸಮಾಜವು ನೊಂದಿರುವುದು ಸತ್ಯ ಸಂಗತಿ. ಈ ಕುರಿತು ಈ ಸಮ್ಮೇಳನವು ನಿರ್ಧಾರಾತ್ಮಕ ನಿಲುವನ್ನು ತಾಳುವುದು ಅಪೇಕ್ಷೆಯಾಗಿರುತ್ತದೆ. ಪಂಚ ಕಲೆಗಳ ಹೊರತಾಗಿ ಅನ್ಯಕ್ಷೇತ್ರಗಳಲ್ಲೂ ಹುಟ್ಟು ಪ್ರತಿಭೆ ಮೆರೆದ ಜನಾಂಗ ವಿಶ್ವಕರ್ಮ. ಆದರೆ ಕಾಲಗತಿಯಿಂದಾಗಿ ಕುಲಕಸುಬಿನ ಅನುತ್ಪಾದಕತೆ ಕ್ಷಾಮ, ಆರ್ಥಿಕ ಹಿಂಜರಿತ, ರಂಗದ ಬಳಲಿಕೆ, ಸಂಘಟನಾ ದೌರ್ಬಲ್ಯ, ತನ್ನಿಮಿತ್ತ ರಾಜಕೀಯ ನಿಶ್ಶಕ್ತತೆ ಮತ್ತು ತುಲನಾತ್ಮಕವಾಗಿ ಸ್ಥಾನಮಾನಗಳ ಅಡಚಣೆ ಗೋಚರಿಸಿದೆ. ಈ ಸಮ್ಮೇಳನವು ಇವೆಲ್ಲವುಗಳ ಕೊರತೆಗಳನ್ನು ತುಂಬಲು ಖಂಡಿತಾ ಯಶಸ್ಸು ಕಾಣಬಹುದೆಂಬ ಆಶಯವೇ ಇದರ ಆಯೋಜನೆಗೆ ಪ್ರೇರಣೆಯಾಗಿದೆ".[೧]

ಹೀಗೆ ಬೃಹತ್ ಸಭೆ ಸಮ್ಮೇಳನಗಳನ್ನು ಮಾಡುವ ಮೂಲಕ ವಿಶ್ವಕರ್ಮರ ಸಾಮಾಜಿಕ ಸ್ಥಿತಿ ಗತಿಗಳು ಉನ್ನತೀಕರಣಗೊಳ್ಳಬೇಕು, ಆರ್ಥಿಕ ಸಬಲತೆಯಾಗಬೇಕು ನಿಟ್ಟಿನಲ್ಲಿ ವಿಶ್ವಕರ್ಮ ಪತ್ರಿಕೆಗಳು ಸಂಪೂರ್ಣ ಬೆಂಬಲ ಕೊಟ್ಟಿರುವುದು ಕಂಡುಬರುತ್ತದೆ.

ಸರಕಾರಿದಿಂದ ಸಿಗುವ ಹಕ್ಕುಬಾಧ್ಯತೆಗಳ ಬಗ್ಗೆ ಜಾಗೃತಿ ಮೂಡಿಸುವ ಅಗ್ರಲೇಖನಗಳನ್ನು ಪತ್ರಿಕೆಗಳು ಪ್ರಕಟಿಸಿವೆ.ವಿಶ್ವಕರ್ಮರನ್ನು ಹಿಂದುಳಿದ ವರ್ಗಗಳ ೨ಎ ನಲ್ಲಿ ಗುರುತಿಸಲಾಗಿದೆ.ಅವರು ಸರಕಾರದಿಂದ ಸಿಗುವ ನೆರವು ಕುರಿತು ಅಷ್ಟೊಂದು ಪರವೆ ಇಲ್ಲದಿರುವುದನ್ನು ಗುರುತಿಸಿ, 'ವಿಶ್ವಕರ್ಮ ಸಮಾಜದ ಉದ್ಧಾರ ಹೇಗೆ?' ಎಂಬ ವಿಷಯ ಕುರಿತು ನಲ್ಲ ಗೋಪಾಲಕೃಷ್ಣ ಆಚಾರ್ ಎಂಬುವರು ಸುದೀರ್ಘವಾದ ಲೇಖನ ಬರೆದಿದ್ದಾರೆ. ಸರಕಾರದಿಂದ ಲಭ್ಯವಿರುವ ಹಿಂದುಳಿದ ವರ್ಗಗಳ ಸೌಲಭ್ಯಗಳನ್ನು ಗಳಿಸುವುದರಲ್ಲಿ ವಿಶ್ವಕರ್ಮ ಸಮುದಾಯವೂ ಕಟ್ಟಕಡೆಯ ಸ್ಥಾನದಲ್ಲೇ ಮುಂದುವರಿದ ಬಗ್ಗೆ ಅವರಿಗೆ ಅಸಮಾಧಾನವಿದೆ. ಅದಕ್ಕಾಗಿ ಸಮಾಜದ ಪುರೋಗತಿಗಾಗಿ ಸ್ಥಾಪನೆಗೊಂಡ ವಿಶ್ವಕರ್ಮ ಸಂಘಟನೆಗಳು ಅನೇಕ ಆಂತರಿಕ ಬಿಕ್ಕಟ್ಟುಗಳಿಂದಾಗಿ ತಮ್ಮ

ಸಾಮರ್ಥ್ಯವನ್ನು ಕಳೆದುಕೊಂಡು, ಪ್ರಗತಿಯ ವೇಗವನ್ನು ಕಳೆದುಕೊಂಡಿವೆ. ಈ ಸಂಘಟನೆಗಳ ಬಳಲಿಕೆ ಕಾರಣಗಳು, ಆದಾಯ ಮತ್ತು ಆರ್ಥಿಕತೆ ಕುರಿತಾದ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯ ಮಾಡಿದ್ದಾರೆ. ಅಂದರೆ ವಿಶ್ವಕರ್ಮ ಸಮಾಜದ ಧಾರಣಶಕ್ತಿಯ ಕೊರತೆ ಮತ್ತು ಆ ಕಾರಣದಿಂದ ಸಮಾಜವು ಅನುಭವಿಸುತ್ತಿರುವ ವಿವಿಧ ಸಮಸ್ಯೆಗಳತ್ತ ಗಮನ ಸೆಳೆಯುತ್ತಾರೆ.

ವಿಶ್ವಕರ್ಮ ಸಮಾಜವು ಆಧುನಿಕ ಶಿಕ್ಷಣಕ್ಕೆ ತೆರೆದ ಕೊಳ್ಳಬೇಕು. ವೃತ್ತಿ ಶಿಕ್ಷಣದ ಜೊತೆಗೆ ಆಧುನಿಕ ಶಿಕ್ಷಣವನ್ನು ಪಡೆಯಬೇಕು ಅದಕ್ಕಾಗಿ ವಿದ್ಯಾರ್ಥಿಗಳಿಗೆ ಬೇಕಾದ ಮೂಲಭೂತ ಸೌಲಭ್ಯಗಳು, ಶಿಕ್ಷಣ ನೀತಿಗಳ ಕುರಿತು ಸರಕಾರದ ಮತ್ತು ಆ ಸಮಾಜದ ಜವಾಬ್ದಾರಿಗಳ ಕುರಿತು ಸಹಚಿಂತನ ಪತ್ರಿಕೆಯು ಸರಣಿ ಸಂಪಾದಕೀಯ ಮತ್ತು ಲೇಖನಗಳನ್ನು ಪ್ರಕಟಿಸುತ್ತಾ ತನ್ನ ಸಾಮಾಜಿಕ ಉತ್ತರದಾಯಿತ್ವವನ್ನು ವರೆಗೆ ಹಚ್ಚುತ್ತಾ ಬಂದಿದೆ. ಬಿ. ಹರಿಶ್ಚಂದ್ರ ಆಚಾರ್ಯರು ವಿಶ್ವಕರ್ಮ ಸಮಾಜದ ಒಬ್ಬ ಪ್ರಮುಖ ಚಿಂತಕರು. ಶಿಕ್ಷಕರಾಗಿ, ವಿಶ್ವಕರ್ಮ ಪತ್ರಿಕೆಯ ಸಂಪಾದಕರಾಗಿ, ಪ್ರಕಾಶಕರಾಗಿ, ನಗರ ಸಭಾ ಸದಸ್ಯರಾಗಿ, ಧಾರ್ಮಿಕ–ಸಾಂಸ್ಕೃತಿಕ, ಸಾಮಾಜಿಕ ಕಾಳಜಿಯ ನೇತಾರರಾಗಿ, ಸಹಕಾರಿ ಬಂಧುವಾಗಿ ಜೀವನಪೂರ್ತಿ ಸಮಾಜಕ್ಕಾಗಿ ದುಡಿಯುತ್ತ ಬಂದವರು. ಅವರ ಜನ್ಮಶತಮಾನೋತ್ಸವ ನಿಮಿತ್ಯ ವಿಶ್ವಕರ್ಮ ಸಮಾಜದ ಬಡಮಕ್ಕಳು ಬದುಕು ಕಟ್ಟಿಕೊಳ್ಳಲು ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದ ಸಂಗತಿಯನ್ನು ಬಿ. ಎ. ಆಚಾರ್ಯ ಅವರು ತಮ್ಮ ಚಿಂತನ ಪತ್ರಿಕೆಯ ಸಂಪಾದಕೀಯದಲ್ಲಿ ಬರೆದು ಸಮಾಜದ ಪ್ರಗತಿಯಾಗಲು ಇಂಥ ಕೆಲಸಗಳು ಮತ್ತೆ ಮತ್ತೆ ನಡೆಯಬೇಕೆಂದು ಆಶಿಸಿದ್ದಾರೆ. ಈ ಕುರಿತು ಸಂಪಾದಕೀಯದ ನುಡಿಗಳು ಹೀಗಿವೆ:

"ಶತಮಾನೋತ್ಸವ ಸಮಿತಿಯವರು ಬಿ. ಹರಿಶ್ಚಂದ್ರ ಆರ್ಯರ ನೆನಪಿನಲ್ಲಿ ಒಂದು ವಿದ್ಯಾರ್ಥಿ ನಿಲಯ ಸ್ಥಾಪಿಸಲು ಯೋಜಿಸಿರುವುದು ಬಹಳ ಸಂತೋಷದ, ಅಭಿಮಾನದ ವಿಚಾರ. ಸುಮಾರು ೩೩ ಲಕ್ಷ ಅಂದಾಜು ವೆಚ್ಚದ ಯೋಜನೆ. ಬದುಕು ಕಟ್ಟಿಕೊಳ್ಳುವುದಕ್ಕೆ ನೆಲೆ ಒದಗಿಸುವ ವಿದ್ಯಾರ್ಥಿ ನಿಲಯವು ದೇವಸ್ಥಾನ, ಗುರುಮಠ, ಸಮುದಾಯ ಭವನ, ಸಮ್ಮೇಳನಕ್ಕಿಂತ ಹೆಚ್ಚಿನದು. 'ಬಿ.ಹರಿಶ್ಚಂದ್ರ ಆಚಾರ್ಯ ವಿದ್ಯಾರ್ಥಿಧಾಮ' ಸಾಕಾರಗೊಳ್ಳಲು ಸಮಾಜ ಬಂಧುಗಳ ತುಂಬು ಹೃದಯದ ಸಹಕಾರ ಧನ ಸಹಾಯ ಹರಿದು ಬರಬೇಕು. ಸಕಾರಾತ್ಮಕ ನಿರೀಕ್ಷೆ ನಮ್ಮೆಲ್ಲರದ್ದು".[೨]

ಬಿ.ಎ.ಆಚಾರ್ಯರು ತಮ್ಮ ಸಮಾಜದ ಒಬ್ಬ ವ್ಯಕ್ತಿಗೆ ಅತ್ಯುನ್ನತ ಪ್ರಶಸ್ತಿ ಬಂದಾಗ ತುಂಬ ಸಂಭ್ರಮಪಟ್ಟು ಸಂಪಾದಕೀಯಗಳನ್ನು ಬರೆದಿದ್ದಾರೆ. ತೆಲುಗು ಸಾಹಿತ್ಯ ಸಾರಸ್ವತ ಪ್ರಪಂಚದ ದಿಗ್ಗಜ, ವಿಶ್ವಬ್ರಾಹ್ಮಣ ಸಮುದಾಯದ ಡಾ. ರಾವೂರಿ ಭರದ್ವಾಜರಿಗೆ ೨೦೧೩ರ ಸಾಲಿನ ಭಾರತೀಯ ಜ್ಞಾನಪೀಠಪ್ರಶಸ್ತಿ ಪ್ರಾಪ್ತವಾದ ಕಾರಣ ಅವರನ್ನು ಅಭಿನಂದಿಸುತ್ತ, ಸಮಾಜದ ಹಿತದೃಷ್ಟಿಯಿಂದ ಅವರ ಮಾತುಗಳನ್ನು ಮೆಲುಕು ಹಾಕಿದ್ದಾರೆ: "ಈ ಲೋಕದಲ್ಲಿ ಸಾವಿರಾರು

ವರ್ಷಗಳಿಂದ ಕೋಟ್ಯಂತರ ಸಾಮಾನ್ಯರು ಮೂಕರಾಗಿದ್ದಾರೆ; ತಮಗೇನು ಬೇಕೆಂದು ಹೇಳಲಾಗದ ಸ್ಥಿತಿಯಲ್ಲಿ ಇದ್ದಾರೆ. ಶಬ್ದವಾಗಿ ಅವರ ಧ್ವನಿಪೆಟ್ಟಿಗೆ ತೆರೆಯಬೇಕೆಂಬ ಆಸೆ ನನ್ನದು' ಎಂದು ಡಾ. ರಾವೂರಿ ಹೇಳಿಕೊಂಡಿದ್ದಾರೆ. 'ನನಗೆ ಹಸಿವು, ಅವಿದ್ಯೆ, ಅವಮಾನ ಗೊತ್ತಿದೆ. ನಿರುದ್ಯೋಗ ಅನುಭವಿಸಿದ್ದೇನೆ. ಅನ್ಯಾಯ–ಅಧರ್ಮ–ಆಕ್ರಮಗಳ ಪರಿಚಯ ಇದೆ. ಇವುಗಳಿಲ್ಲದ ಸಮಾಜಬೇಕೆಂದು ಬಯಸುತ್ತೇನೆ' ಎಂದು ಡಾ. ರಾವೂರಿ ಭರದ್ವಾಜರ ಈ ಆಶಯ ಅರ್ಥಪೂರ್ಣ. ವೇಶ್ಯೆಯರ ಕಣ್ಣೀರ ಬದುಕಿನ ಒಳನೋಟಗಳನ್ನು ಕಥಾನಕಗಳಾಗಿ ಪರಿವರ್ತಿಸಿ, ಸಮಾಜದ ಮುಂದಿಟ್ಟು, ಸಮಾಜ ಸುಧಾರಣೆಗೆ ಪ್ರೇರಣೆ ನೀಡಿದ ಡಾ. ಭರದ್ವಾಜರ ಕಾದಂಬರಿಯನ್ನು ಶ್ರೀಮತಿ ಸರಿತಾ ಜ್ಞಾನಾನಂದರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಕೃತಿ ಬಿಡುಗಡೆಯ ಸಮಾರಂಭದಲ್ಲಿ ಡಾ. ರಾವೂರಿಯವರ ಜೊತೆಗಿರುವ ಅವಕಾಶ 'ಸಹಚಿಂತನಕ್ಕೆ ಸಿಕ್ಕಿದ ಗೌರವ. ಪತ್ರಿಕೆಯ ಪರವಾಗಿ ಡಾ. ರಾವೂರಿ ಭರದ್ವಾಜರಿಗೆ ಅನಂತ ನಮನಗಳು".[೩]

ವಿಶ್ವಕರ್ಮ ಸಮಾಜವು ಸಂಘಟಿತವಾಗ ಬೇಕೆಂದು ಒಂದು ಒಕ್ಕೂಟ ಮಾಡಿಕೊಂಡಿದೆ. ಅದಕ್ಕಾಗಿ ೫–೨–೨೦೧೨ರಂದು ಬೃಹತ್ ಸಮ್ಮೇಳನವನ್ನು ಆಯೋಜಿಸಿತು. ಈ ಸಂದರ್ಭದಲ್ಲಿ ವಿಶ್ವಕರ್ಮ ಸಮಾಜ ಬಾಂಧವರ ನಿರೀಕ್ಷೆಗಳು ಗರಿಗೆದರಿದವು. ವಿಶ್ವಕರ್ಮ ಸಮಾಜದ ಎಲ್ಲ ಪತ್ರಿಕೆಗಳು ಈ ಸಮ್ಮೇಳನಕ್ಕೆ ಬೆಂಬಲ ನೀಡಿದವು. ಸಮ್ಮೇಳನದ ವರದಿಯನ್ನು ವಿಸ್ತಾರವಾಗಿ ಪ್ರಕಟಿಸಿದವು. ಸಮ್ಮೇಳನ ಪೂರ್ವದಲ್ಲಿಯೇ ತಮ್ಮ ನಿರೀಕ್ಷೆಗಳು ಏನಿದ್ದವು ಎಂಬುದನ್ನು ಪತ್ರಿಕೆಗಳಲ್ಲಿ ಪ್ರಕಟಿಸುವ ಕಾರ್ಯ ನಡೆಯಿತು. ಹಿರಣ್ಯ ಎಂಬುವರು ಸಹಚಿಂತನ ಪತ್ರಿಕೆಗೆ ಬರೆದ 'ಸಾಮಾಜಿಕ ಅಭಿವೃದ್ಧಿಗಾಗಿ ಸ್ಪರ್ಧಾತ್ಮಕ ಧೋರಣೆ ತಾಳುವುದು ಉಚಿತವಲ್ಲವೇ?' ಎಂಬ ಕಿರು ಲೇಖನದಲ್ಲಿ ತುಂಬ ಅರ್ಥಪೂರ್ಣವಾಗಿ ದಾಖಲಿಸಿದ್ದಾರೆ.

"ವಿಶ್ವಕರ್ಮ ಸಮಾಜಕ್ಕೆ ಸಂಘಟನಾ ಶಕ್ತಿ ಇದೆ. ಆದರೆ ಸಾಲದು. ಅದಕ್ಕೆ ಪೂರಕವಾದ ಪ್ರಭಾವ ಶಕ್ತಿ ಮಾತ್ರ ಇಲ್ಲ. ಸಂಘಟನಾ ಶಕ್ತಿಯೊಂದಿಗೆ ಪ್ರಭಾವಲಯವೂ ಬೆಳೆಯಬೇಕು. ಅದಕ್ಕಾಗಿ ನಿಶ್ಚಿತ ಗುರಿಯೊಂದಿರಲಿ. ಅದರ ಸಾಕಾರಕ್ಕಾಗಿ ಶ್ರಮವಿರಲಿ. ಸ್ವಲ್ಪವೇ ಮಂದಿ ಹೆಚ್ಚು ಸಮಯ ಹಾಕಿ ಗುರಿ ಸೇರುವ ಪ್ರಯತ್ನದ ಬದಲು, ಹೆಚ್ಚಿನ ಮಂದಿ ಸ್ವಲ್ಪ ಸಮಯ ಹಾಕಿ ಗುರಿ ಸೇರುವ ಪ್ರಯತ್ನದತ್ತ ಸಾಗುವುದು ಒಳಿತು. ಅದಕ್ಕಾಗಿ ಕಾರ್ಯಯೋಜನೆಗಳು ರೂಪಿತವಾಗಬೇಕು. ಫೆಬ್ರುವರಿ ೫ರಂದು ಯೋಜಿಸಲಾದ ಬೃಹತ್ ಸಮಾವೇಶ ಯಶಸ್ವಿಯಾಗಬೇಕಾದರೆ ಕೇವಲ ಜನಸಾಗರ ಸೇರಿದರಷ್ಟೇ ಸಾಲದು. ಅದು ಸಾಮಾಜಿಕ ಜಾಗೃತಿಯ ಘಂಟಾನಾದವಾಗಿ ಬೆಳೆದು, ಸಾಮಾಜಿಕ ಶಕ್ತಿಯ ಪ್ರಭಾವಲಯ ಹರಡುವಂತಾಗಬೇಕು. ಅಂದರೆ ರಜತ ಸಂಭ್ರಮಕ್ಕಾಗಿ ಸಮಾವೇಶ ಅಲ್ಲ. ಸಮಾಜದ ಅಭಿವೃದ್ಧಿಯಲ್ಲಿ ಮೂಲ ಪ್ರೇರಕವಾಗಿ ಹೊಸ ಶಕೆಯೊಂದು ಮೂಡಿ ಬೆಳಗುವಂತಾಗುವಲ್ಲಿ ಈ ಸಮಾವೇಶ ಕಾರಣವಾಗಬೇಕು. ಪ್ರಭಾವಲಯ ವರ್ಧನೆಗಾಗಿ ಪರಿಸರದ ಪ್ರತಿಯೊಂದು ಸಾರ್ವಜನಿಕ ಸಂಘಟನೆಯಲ್ಲೂ ವಿಶ್ವಕರ್ಮ ಸಾಮಾಜಿಕರು ಸ್ಪರ್ಧಾತ್ಮಕ

ರೀತಿಯಲ್ಲಿ ತೊಡಗಿಸಿಕೊಂಡು ಕಾರ್ಯತತ್ಪರರಾಗಬೇಕು. ಸಂಖ್ಯಾತ್ಮಕವಾಗಿ ಗುರುತಿಸಿಕೊಳ್ಳಬೇಕು. ಸದರಿ ಸಂಘಟನೆಗಳ ಮೂಲಕ ಪರಿಸರದಲ್ಲಿ ನಿತ್ಯ ಸಂಪರ್ಕ, ಚಟುವಟಿಕೆಗಳ ಮೂಲಕ ಸಾರ್ವಜನಿಕ ರಂಗದ ಆಪ್ತವಲಯದವರಾಗಬೇಕು. ತಮ್ಮ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ನಿಭಾಯಿಸಿ ಬೆಳಕಿಗೆ ಬರಬೇಕು. ಆಗ ಮಾತ್ರ ಹಾಗಾದಾಗ ಮಾತ್ರ ರಾಜಕೀಯ ಪಕ್ಷದವರು ಚುನಾವಣೆಗೆ ಹುರಿಯಾಳಾಗಿ ಕರೆಯುವಲ್ಲಿ ಮುಂದೆ ಬಂದಾರು. ಅಕಾಡೆಮಿ, ನಿಗಮ ಮಂಡಳಿ, ಪರಿಷತ್‌ಗಳ ಸದಸ್ಯರನ್ನಾಗಿ ನಿಯುಕ್ತಿಗೊಳಿಸುವಲ್ಲಿ, ಸಾರ್ವಜನಿಕ ಸಂಘಟನೆಯ ಜವಾಬ್ದಾರಿಯುತ ಸ್ಥಾನಗಳನ್ನು ಅಲಂಕರಿಸುವಲ್ಲಿ ವಿಶ್ವಕರ್ಮ ಸಮಾಜದವರಿಗೆ ಮಣೆ ಹಾಕಿಯಾರು. ಅದಕ್ಕಾಗಿ ಆಶಾವಾದಿಗಳಾಗಿ ಸಾಗಬೇಕು".[೪]

ಸಮೃದ್ಧವಾದ ಸಮಾಜ ವಿಶ್ವಬ್ರಾಹ್ಮಣ ಸಮಾಜ. ಎಷ್ಟೆಲ್ಲ ಸಮೃದ್ಧವಾಗಿದ್ದರೂ ಒಗ್ಗಟ್ಟಿಲ್ಲದ ಕಾರಣಕ್ಕಾಗಿ ಸಮಾಜ ಮುಂದೆ ಬರುತ್ತಿಲ್ಲ ಎಂಬ ಕೊರಗು ವಿಶ್ವಕರ್ಮ ಚಿಂತಕರದು. ಚಿತ್ರಕಲೆ, ಛಾಯಾಗ್ರಹಣ, ಮೂರ್ತಿರಚನೆ, ವಾಹನಯಂತ್ರ ರಿಪೇರಿ, ಎನಿಮೇಷನ್ ಕಲೆ ಮುಂತಾದವುಗಳ ಬಗ್ಗೆ ವಿಶ್ವಬ್ರಾಹ್ಮಣರಲ್ಲಿ ಅನೇಕ ಪ್ರತಿಭೆಗಳಿದ್ದು, ಇವುಗಳನ್ನು ಜೀವನೋಪಾಯಕ್ಕಾಗಿ ಬಳಸಿ ಸಾಧನೆ ಮಾಡುತ್ತಿದ್ದಾರೆ. ಸಮಾಜದಲ್ಲಿ ಇವುಗಳನ್ನು ಉದ್ದಿಮೆಯಾಗಿ ಮಾರ್ಪಡಿಸಿ ನೂರಾರು ನವಪ್ರತಿಭೆಗಳಿಗೆ ಉದ್ಯೋಗಾವಕಾಶದ ಜೊತೆಗೆ ಆರ್ಥಿಕ ಪ್ರಗತಿಗೆ ಉಪಯುಕ್ತವಾಗುವಂತೆ ಮಾಡಬೇಕೆಂಬ ಕನಸು ವಿಶ್ವಕರ್ಮ ಪತ್ರಿಕೆಗಳದ್ದು. ಸರ್ಜಿಕಲ್ ಉಪಕರಣಗಳ ತಯಾರಿಯಲ್ಲಿ ಅತ್ಯಂತ ಪರಿಣತರೂ ವಿಶ್ವಕರ್ಮ ಸಮಾಜದಲ್ಲಿದ್ದಾರೆ. ಅತ್ಯಂತ ಬೇಡಿಕೆಯಿರುವ ಈ ಲಾಭದಾಯಕ ಉತ್ಪನ್ನವನ್ನು ಅತಿದೊಡ್ಡ ಉದ್ದಿಮೆಯಾಗಿ ಸಮಾಜದಲ್ಲಿ ಪರಿವರ್ತಿಸಿ ಸಾವಿರಾರು ಮಂದಿಗೆ ಅತ್ಯುತ್ತಮ ಉದ್ಯೋಗವನ್ನು ಸೃಷ್ಟಿಸುವಂತಾಗಬೇಕು ಎಂಬುದು ಪತ್ರಿಕೆಗಳ ಸಾಮಾಜಿಕ ಕಾಳಜಿಯಾಗಿದೆ.

**೪..೨. ಧಾರ್ಮಿಕ ಆಯಾಮ :**

ಇಂದು ಭಾರತದಲ್ಲಿ ಏಳು ಲಕ್ಷಕ್ಕೂ ಮಿಕ್ಕಿ ಹಳ್ಳಿಗಳಿದ್ದು ಪ್ರತಿಯೊಂದು ಹಳ್ಳಿಗೆ ಬಡಗಿ ಒಬ್ಬ ಕಮ್ಮಾರ, ಒಬ್ಬ ಅರ್ಕಸಾಲಿಯಂತೆ ಹಿಡಿದು ಅವರ ಕುಟುಂಬ ವರ್ಗ ಬೆಳೆಯುತ್ತ ಬಂದಿರುವುನ್ನು ನೋಡುತ್ತೇವೆ. ಪಂಚ ಕಸಬುಗಳು ಅಂದರೆ ಬಡಿಗತನ, ಕಮ್ಮಾರಿಕೆ, ಚಿನ್ನ, ಬೆಳ್ಳಿ, ಕೆಲಸ, ತಾಮ್ರ ಹಿತ್ತಾಳೆಗಳ ಪಾತ್ರೆಗಳನ್ನು ಮಾಡುವುದು. ಶಿಲ್ಪ ಹೀಗೆ ಮನು, ಮಯ, ತ್ವಷ್ಟ, ಶಿಲ್ಪಿ, ದೈವಜ್ಞರೆಂದು ಸಾನಗ, ಸನಾತನ, ಅಹಭುವನ, ಪ್ರತ್ನಸ, ಸುಪರ್ಣಸರೆಂದು ಪಂಚಗೋತ್ರಗಳನ್ನು ಹೇಳುವವರೇ ನಿಜವಾದ ವಿಶ್ವಕರ್ಮರು. ಭಾರತದ ಒಟ್ಟು ಜನಸಂಖ್ಯೆಯ ದೃಷ್ಟಿಯಲ್ಲಿ ವಿಶ್ವಕರ್ಮ ಜನಾಂಗ ೬ ಕೋಟಿಗಿಂತಲೂ ಹೆಚ್ಚಾಗಿದೆ. ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜದ ಜನಸಂಖ್ಯೆ ೬-೭ ಲಕ್ಷವಿದೆ.

ವಿಶ್ವಕರ್ಮ ಜನಾಂಗವು ತಮ್ಮ ಕುಲಕಸುಬುಗಳಿಗೆ ಅಂಟಿಕೊಂಡು ಪೂರ್ವಕಾಲದಿಂದಲೂ ನೆಮ್ಮದಿಯಿಂದ ಜೀವನ ಸಾಗಿಸುತ್ತ ಬಂದಿದ್ದಾರೆ. ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿಯು

ಬದಲಾಗುತ್ತ ನಡೆದಂತೆ ಸಾಮಾಜಿಕ ಪರಿಸ್ಥಿತಿಯೂ ಪರಿವರ್ತನೆಗೊಳ್ಳುತ್ತ ಅನ್ಯಸಮಾಜಗಳು ಮುಂದೆ ಬರತೊಡಗಿದವು.

ವೇದಗಳ ಆರಂಭ ಕಾಲದಲ್ಲಿ ವಿಶ್ವಕರ್ಮ ಬ್ರಾಹ್ಮಣರೇ ಚಾತುರ್ವರ್ಣಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರಾಗಿದ್ದರು. ಯಜನ, ಯಾಜನ ಅಧ್ಯಯನ, ಅಧ್ಯಾಪನ, ದಾನ ಪ್ರತಿಗ್ರಹಗಳೆಂಬ ಷಟ್ಕರ್ಮಗಳಿಗೆ ಬಾಧ್ಯರಾಗಿ ಶಿಲ್ಪಶಾಸ್ತ್ರದಲ್ಲಿ ಪಾರಂಗತರಾಗಿ ಜೋತಿಷ್ಯ ಸಂಗೀತ ಕಲೆಗಳಲ್ಲಿ ನೈಪುಣ್ಯತೆಯನ್ನು ಪಡೆದಿದ್ದರು. ಇಂದು ಬ್ರಾಹ್ಮಣರೆಂದು ಹೇಳಿಕೊಳ್ಳುವ ಋಷಿ ಸಂತತಿಯ ವಿಪ್ರರು ಇತಿಹಾಸದ ಮಧ್ಯ ಕಾಲದಲ್ಲಿ ವಿಶ್ವಕರ್ಮ ಬ್ರಾಹ್ಮಣರಿಗೆ ವೇದಾಧಿಕಾರವಿಲ್ಲ ಕೇವಲ ಕೈಗಾರಿಕಾ ಜನಾಂಗದವರೆಂದು ಹೀಗಳೆಯುತ್ತ ಬಂದರು. ಐದು ನೂರು ವರ್ಷಗಳ ಹಿಂದೆ ವಿಜಯನಗರದ ರಾಮರಾಯನ ಕಾಲಕ್ಕೆ ಆಂಧ್ರದಲ್ಲಿ ವಿಶ್ವಕರ್ಮ ಪಂಡಿತರಾದ ಕನುಪರ್ತಿ ಬಸವಾಚಾರ್ಯ ಎಂಬುವರಿಗೂ ಗುಂಡಾಭಟ್ಟ ಜೋಯಿಷಿ ಎಂಬುವರಿಗೂ ವಾದ ವಿವಾದ ಬೆಳೆದು, ವಿಜಯನಗರದ ಅರಸವರೆಗೂ ವ್ಯಾಜ್ಯ ಹೋಗಿ ವಿಶ್ವಕರ್ಮ ಬ್ರಾಹ್ಮಣರೇ ನಿಜವಾದ ಬ್ರಾಹ್ಮಣರೆಂದು ತೀರ್ಮಾನಿಸಿದ ಬಗ್ಗೆ ರಥಾಕಾರಾಧಿಕರಣ ವಿಚಾರವೆಂಬ ಗ್ರಂಥದಿಂದ ತಿಳಿಯುತ್ತದೆ. ಪುಣೆಯ ಪೇಶ್ವೆ ಮಾಧವರಾಯನ ಕಾಲದಲ್ಲಿಯೂ ಬ್ರಾಹ್ಮಣರಿಗೂ ವಿಶ್ವಕರ್ಮರಿಗೂ ವ್ಯಾಜ್ಯ ನಡೆದು ವಿಶ್ವಕರ್ಮ ಬ್ರಾಹ್ಮಣರಿಗೆ ವೇದಾಧಿಕಾರವಿದೆ ಎಂದು ತೀರ್ಮಾನಿಸಲಾಯಿತು. ಬ್ರಿಟಿಷ್ ಸರಕಾರದಲ್ಲಿಯೂ ಕೂಡ ಪ್ರದೇಶದಲ್ಲಿ ವ್ಯಾಜ್ಯ ನಡೆದು ಚಿತ್ತೂರು ಜಿಲ್ಲಾ ತೀರ್ಪು ಆಗಿ ವಿಶ್ವಕರ್ಮ ಬ್ರಾಹ್ಮಣರೇ ನಿಜವಾದ ಬ್ರಾಹ್ಮಣರೆಂದು ತೀರ್ಮಾನಿಸಲಾಯಿತು. ಕಳೆದ ೫೦ ವರುಷಗಳ ಇತಿಹಾಸದಲ್ಲಿ ಗೋಕರ್ಣದಲ್ಲಿ ಹವ್ಯಕ ಬ್ರಾಹ್ಮಣರಿಗೂ ಕಾರವಾರ ಜಿಲ್ಲೆಯಲ್ಲಿರುವ ದೈವಜ್ಞ ಸಮಾಜದವರಿಗೂ ಕ್ಷೇತ್ರವಿಧಿಗಳನ್ನು ಮಾಡಿಸಲಿಕ್ಕೆ ವಿಶ್ವಕರ್ಮ ದೈವಜ್ಞ ಪುರೋಹಿತರಿಗೆ ಅಧಿಕಾರವಿಲ್ಲವೆಂದು ವ್ಯಾಜ್ಯ ನಡೆದಾಗ ವಿಶ್ವಕರ್ಮ ಬ್ರಾಹ್ಮಣ ಪಂಡಿತರಾದ ಆಂಧ್ರಪ್ರದೇಶದ ಒಡ್ಡೇಪಾಠಿ ನಿರಂಜನ ಶಾಸ್ತ್ರಿಗಳು ಹಾಗೂ ಪುಣೆಯ ಬಾಳಾಶಾಸ್ತ್ರೀ ಕ್ಷೀರಸಾಗರ ಮೈಸೂರಿನ ಶಿಲ್ಪ ಸಿದ್ಧಾಂತಿ ಸಿದ್ಧಲಿಂಗ ಸ್ವಾಮಿಗಳವರಿಂದ ಮಹತ್ತರ ಸಾಕ್ಷಿಗಳಾಗಿ ಕುಮಟಾ ಕೋರ್ಟಿನಲ್ಲಿ ವಿಶ್ವಕರ್ಮ ಬ್ರಾಹ್ಮಣರಿಗೆ ವೇದಾಧಿಕಾರವಿದೆ, ಕ್ಷೇತ್ರ ವಿಧಿ ಮಾಡಿಸಲಿಕ್ಕೆ ಅಡ್ಡಿ ಇಲ್ಲವೆಂದು ನಿರ್ಣಯ ನೀಡಿತು. ಇಷ್ಟೆಲ್ಲ ಆದರೂ ವಿಶ್ವಕರ್ಮ ಸಮಾಜ ಬಾಂಧವರು ತಮ್ಮ ಧರ್ಮ ಸಂಸ್ಕೃತಿಗಳ ವಿಷಯವಾಗಿ ಹೆಚ್ಚು ಅಧ್ಯಯನ ಮಾಡದೆ ಇರುವುದರಿಂದ ಅವರಲ್ಲಿ ಜಾಗೃತಿ ಮಾಡಬೇಕೆಂಬ ಕಾರಣಕ್ಕಾಗಿ ವಿಶ್ವಕರ್ಮ ಪತ್ರಿಕೆಗಳು ಪರಿಶ್ರಮಿಸುತ್ತ ಬಂದಿರುವುದನ್ನು ಕಾಣುತ್ತೇವೆ.

ವಿಶ್ವಕರ್ಮ ಸಮಾಜವು ಧಾರ್ಮಿಕವಾಗಿ ಸದಾ ಜಾಗೃತಿಯಾಗಬೇಕೆಂದು ಸಮಾಜದ ಹಿರಿಯರು ಬಯಸಿ, ತಮ್ಮ ಅಭಿಪ್ರಾಯಗಳನ್ನು ಪತ್ರಿಕೆ ಮೂಲಕ ಕಾಲಕಾಲಕ್ಕೆ ಪ್ರಕಟಿಸುತ್ತ ಬಂದಿದ್ದಾರೆ. ಧರ್ಮ ಕ್ಷೀಣಿಸಿ ಅಧರ್ಮ ವೃದ್ಧಿಯಾದಾಗ ಕೆಟ್ಟವರ ನಿರ್ನಾಮ ಮತ್ತು ಒಳ್ಳೆಯವರ ಉದ್ಧಾರಕ್ಕಾಗಿ ಹಾಗೂ ಧರ್ಮವನ್ನು ಪುನರುತ್ಥಾನ ಗೊಳಿಸಲು ನಾನು ಹುಟ್ಟಿ

ಬರುತ್ತೇನೆ ಎಂದು ಭಗವದ್ಗೀತೆಯಲ್ಲಿ ಕೃಷ್ಣ ಹೇಳುತ್ತಾನೆ. ಜೈನ ಬೌದ್ಧ ಧರ್ಮಗಳು ಪ್ರಚಾರಕ್ಕೆ ಬಂದಂತೆ, ಚಾರ್ವಾಕಾದಿ ಪಂಥಗಳು ಹೆಚ್ಚು ಪ್ರಸಾರವನ್ನು ಗಳಿಸಿಕೊಂಡವು. ಆಸಕ್ತಿಕ ಬುದ್ಧಿ ಕ್ಷಯಿಸಿ, ವೇದ-ದೇವ-ಪಿತೃಗಳ ಬಗ್ಗೆ ಜನರ ಶ್ರದ್ಧೆ ಕಡಿಮೆಯಾಗುತ್ತ ಬಂತು. ಈ ಕಾಲಘಟ್ಟದಲ್ಲಿ ಆದಿ ಶಂಕರಾಚಾರ್ಯರು ಇಡೀ ಭಾರತವನ್ನು ಸುತ್ತಿ ದೇಶದ ನಾಲ್ಕು ಕಡೆ ಮಠ ಸ್ಥಾಪನೆ ಮಾಡಿ ಸನಾತನ ಹಿಂದೂ ಧರ್ಮದ ಪುನರುತ್ಥಾನ ಮಾಡಿರುವುದು ಇತಿಹಾಸ. ಆರ್ಯರು ಧಾರ್ಮಿಕ ಜ್ಞಾನ ಸಂಪಾದನೆ ಹಾಗೂ ಧಾರ್ಮಿಕ ಸಂಸ್ಕಾರಗಳು ಮನುಷ್ಯನ ಜನ್ಮಸಿದ್ಧ ಹಕ್ಕುಗಳೆಂದು ಪರಿಗಣಿಸಿದ್ದರು. ಚಾತುರ್ವರ್ಣ್ಯ ವ್ಯವಸ್ಥೆ ಒಂದೇ ಕುಟುಂಬದ ಪ್ರತ್ಯೇಕ ವ್ಯಕ್ತಿಗಳೆಂದು ಇದ್ದದ್ದು ಸತ್ಯ. ಕ್ರಿ.ಶ. ೬ನೇ ಶತಮಾನದಲ್ಲಿ 'ವರ್ಣ' ವ್ಯವಸ್ಥೆ 'ಜಾತಿ'ಯ ಸ್ವರೂಪ ಹೊಂದಿದರೂ ಹಲವು ಶತಮಾನಗಳ ಕಾಲ ತೀವ್ರ ಸ್ವರೂಪ ಪಡೆದುಕೊಳ್ಳಲಿಲ್ಲ. ಮನುವಿನ ಕಾಲದಲ್ಲಿ ಬ್ರಾಹ್ಮಣನಾದವನು ಅಧ್ಯಾಪನದಂತೆ ಶಿಲ್ಪಕರ್ಮವನ್ನೂ ಮಾಡುತ್ತಿದ್ದ. ಆಗ ಬ್ರಾಹ್ಮಣನು ದಯೆ, ಶಾಂತಿ, ಇಂದ್ರಿಯ ನಿಗ್ರಹ, ಜ್ಞಾನ-ವಿಜ್ಞಾನಗಳ ಪ್ರತೀಕವಾಗಿದ್ದ. ಕ್ರಮೇಣ ಜ್ಞಾನ-ಕರ್ಮಗಳ ನಡುವೆ ಪೈಪೋಟಿ ನಡೆದು, ಶಿಲ್ಪಜ್ಞಾನಕ್ಕೆ ಆದ್ಯತೆ ನೀಡಿ, ಶಿಲ್ಪ ಕೆಲಸದಲ್ಲಿ ನಿರತರಾಗಿದ್ದವರು 'ವಿಶ್ವಬ್ರಾಹ್ಮಣ'ರೆಂದು ಗುರುತಿಸಿಕೊಂಡರೆಂದು ಜಿ. ಜ್ಞಾನಾನಂದರು ಅಭಿಪ್ರಾಯ ಪಡುತ್ತಾರೆ.

ಭಾರತದ ಎಲ್ಲಾ ಪ್ರದೇಶಗಳಲ್ಲಿ ವಿಶ್ವಬ್ರಾಹ್ಮಣರಿದ್ದಾರೆ. ಕಾಯಕವೇ ಕೈಲಾಸ ಎಂದು ನಂಬಿ ಬದುಕುವ ಇವರು ದೇಶದ ಜನಸಂಖ್ಯೆಯ ಶೇ ೧೦% ಇರಬಹುದೆಂದು ಅಂದಾಜು. ಕರ್ನಾಟಕದಲ್ಲಿ ಇರುವ ವಿಶ್ವಬ್ರಾಹ್ಮಣರು ವಿವಿಧತೆಯಲ್ಲಿ ಏಕತೆಯನ್ನು ರೂಢಿಸಿಕೊಳ್ಳಲು ವಿಫಲರೆಂದು ಹೇಳಿದರೆ ತಪ್ಪಾಗದು. ಈ ಕಾರಣಕ್ಕಾಗಿ ಅರೆಮಾದನ ಹಳ್ಳಿಯ ವಿಶ್ವಕರ್ಮ ಜಗದ್ಗುರು ಶ್ರೀ ಸುಜ್ಞಾನ ಪ್ರಭು ಪೀಠದ ಶ್ರೀ ಗುರುಶಿವಸುಜ್ಞಾನ ತೀರ್ಥ ಸ್ವಾಮೀಜಿಯವರು ಧರ್ಮದ ಚೌಕಟ್ಟಿನಲ್ಲಿ ಸಮಾಜ ಜಾಗೃತಿಯ ಪ್ರಯತ್ನ ಮಾಡಿದ ವಿಷಯವನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಕರಾವಳಿ ಕರ್ನಾಟಕದ ಉತ್ತರ ಕನ್ನಡ, ಉಡುಪಿ, ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಜಿಲ್ಲೆಗಳಲ್ಲಿ ಧರ್ಮಜಾಗೃತಿ ಪ್ರವಾಸ ಮಾಡಿ ಸಮಾಜದ ೧೫ ದೇವಸ್ಥಾನಗಳಿಗೆ ಭೇಟಿ ನೀಡಿ, ಧರ್ಮಜಾಗೃತಿಯ ಕಾರ್ಯ ಮಾಡಿದ್ದಾರೆಂದು ಸಹಚಿಂತನ ಸಂಪಾದಕರು ಬರೆಯುತ್ತಾ ಶ್ರೀಗಳ ಹೇಳಿಕೆಯನ್ನು ಉಲ್ಲೇಖಿಸುತ್ತಾ- "ಇತರ ಬ್ರಾಹ್ಮಣ ವರ್ಗಗಳಲ್ಲಿ ಒಂದೆರಡು ಬ್ರಾಹ್ಮಣರು ಕೆಟ್ಟಿರಬಹುದು. ಆದರೆ ಬ್ರಾಹ್ಮಣ್ಯ ಗಟ್ಟಿಯಾಗಿಯೇ ಇದೆ. ವಿಶ್ವಬ್ರಾಹ್ಮಣರಲ್ಲಿ ಬ್ರಾಹ್ಮಣ್ಯ ದುರ್ಬಲವಾಗುತ್ತಿದೆ. ಇದರ ಪುನರುತ್ಥಾನದ ಕೆಲಸ ತುರ್ತಾಗಿ ನಡೆಯಬೇಕು. ಈ ನಿಟ್ಟಿನಲ್ಲಿ ನಮ್ಮ ಮಠಗಳು, ದೇವಾಲಯಗಳು, ಸಂಘಟನೆಗಳು ಸಮರೋಪಾದಿಯಲ್ಲಿ ಕೆಲಸ ಮಾಡಬೇಕು' ಎಂಬ ಶ್ರೀಗಳವರ ಸಂದೇಶಕ್ಕೆ ಎಲ್ಲರ ಸ್ಪಂದನ ಸಿಗುವಂತಾಗಲಿ"[೫] ಎಂದು ಆಶಿಸಿದ್ದಾರೆ. ಪತ್ರಿಕೆಗಳು ಮತ್ತು ಧರ್ಮಗುರುಗಳು ಜೊತೆಗಿಯೇ ಧರ್ಮೋನ್ನತಿಗೆ ಶ್ರಮಿಸಿದ್ದನ್ನು ವಿಶ್ವಕರ್ಮ ಪತ್ರಿಕೆಗಳ ಮೂಲಕ ಅರಿಯಬಹುದು.

೨೦೧೩ ಏಪ್ರಿಲ್ ೨೧ರಂದು ಮಂಗಳೂರಿನಲ್ಲಿ ಬ್ರಾಹ್ಮಣ ಜಾಗೃತಿ ಸಮ್ಮೇಳನ ಜರುಗಿತು. ಆದರೆ ಈ ಸಮ್ಮೇಳನದಲ್ಲಿ ವಿಶ್ವಕರ್ಮ ಬ್ರಾಹ್ಮಣರನ್ನು ಸೇರಿಸಿಕೊಂಡಿರಲಿಲ್ಲ. ಈ ಕುರಿತು ಸಹಚಿಂತನ ಸಂಪಾದಕರು ಆಕ್ಷೇಪಿಸಿ ಮೇ ೨೦೧೩ರ ಸಹಚಿಂತನ ಸಂಪಾದಕೀಯದಲ್ಲಿ ಬರೆದಿದ್ದರು. ಸಂಪಾದಕರ ಈ ಮಾತುಗಳನ್ನು ಒಪ್ಪದ ಉಡುಪಿಯ ಕೆ. ಮುರಳೀಧರ ಎಂಬುವರು ಸಂಪಾದಕರಿಗೆ ಒಂದು ಪತ್ರ ಬರೆದಿದ್ದಾರೆ. "ಈ ಪ್ರಶ್ನೆಯನ್ನು ವಿಶ್ವಬ್ರಾಹ್ಮಣ ಸಮಾಜದ ಪತ್ರಿಕೆಯ ಮೂಲಕ ವಿಶ್ವಬ್ರಾಹ್ಮಣ ಸಮಾಜದ ಮುಂದೆ ಪ್ರಶ್ನಿಸುವ ಅಗತ್ಯವಿದೆಯೆ? ಎಂಬುದು ನ್ನನ ಜಿಜ್ಞಾಸೆ. 'ವಿಶ್ವಬ್ರಾಹ್ಮಣ'ರನ್ನು ಸೇರಿಸಬೇಕೆ? ಬೇಡವೇ? ಎಂದು ತೀರ್ಮಾನಿಸಬೇಕಾದವರು ಬ್ರಾಹ್ಮಣ ಜಾಗೃತಿ ಸಮ್ಮೇಳನ ಸಂಘಟಿಸಿದವರು. ಆ ಸಮ್ಮೇಳನದಲ್ಲಿ ವಿಶ್ವಬ್ರಾಹ್ಮಣರನ್ನು ಸೇರಿಸಿಲ್ಲದಿದ್ದುದರಿಂದ ವಿಶ್ವಬ್ರಾಹ್ಮಣ ಸಮುದಾಯಕ್ಕೆ ಏನಾದರೂ ನಷ್ಟ ಅಥವಾ ಕುಂದು ಇದೆಯಾ? ಅದಕ್ಕಾಗಿ ನಾವ್ಯಾಕೆ ಚಿಂತಿಸಬೇಕು? ವ್ಯಥೆ ಪಡಬೇಕು?"[೬] ಎನ್ನುವಲ್ಲಿ ಧಾರ್ಮಿಕ ಅಸ್ಮಿತೆಯ ಪ್ರಶ್ನೆಯನ್ನು ಬಲವಾಗಿ ಪ್ರತಿಪಾದಿಸುವುದನ್ನು ಕಾಣುತ್ತೇವೆ.

ವಿಶ್ವಕರ್ಮರು ದ್ವೈತ ಮತ್ತು ಅದ್ವೈತ ಎರಡೂ ಸಂಪ್ರದಾಯಗಳಿಗೆ ನಡೆದುಕೊಂಡ ಉದಾಹರಣೆಗಳಿವೆ. ಹೀಗಾಗಿ ಪ್ರಚಲಿತವಿರುವ ಸಪ್ತಾರ್ಷೇಯ ಬ್ರಾಹ್ಮಣರು ಹಾಗೂ ಪಂಚಾರ್ಷೇಯರಾದ ವಿಶ್ವಬ್ರಾಹ್ಮಣ (ವಿಶ್ವಕರ್ಮ ಬ್ರಾಹ್ಮಣರು) ಒಂದೇ ಮೂಲದವರೆಂದು ಅನೇಕ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿದೆ. ವಿದ್ವಾಂಸರಾದ ಸಿ. ರಾಮಾಚಾರ್ಯ, ಮುತ್ತಾಚಾರ್ಯ, ಜಿ. ಜ್ಞಾನಾನಂದ, ದೊರೆಸ್ವಾಮಿ, ಶಿವಸುಜ್ಞಾನ ತೀರ್ಥ ಸ್ವಾಮೀಜಿ ಮೊದಲಾದವರು ಇದನ್ನೇ ಪ್ರತಿಪಾದಿಸಿದ್ದಾರೆ. ಚಿತ್ತೂರು ಜಿಲ್ಲಾ ಅದಾಲತ್ ಕೋರ್ಟು, ಗುಂಟೂರು ಜಿಲ್ಲಾ ಅದಾಲತ್ ಕೋರ್ಟುಗಳು ಈ ವಾದವನ್ನು ಎತ್ತಿ ಹಿಡಿದಿವೆ. ಕರ್ನಾಟಕ ಸರಕಾರವು ವಿಶ್ವಕರ್ಮರಿಗೆ ಇರುವ ಪರ್ಯಾಯ ನಾಮ 'ವಿಶ್ವಬ್ರಾಹ್ಮಣ' ಎನ್ನುವುದನ್ನು ಅಧಿಕೃತವಾಗಿ ಮಾನ್ಯಮಾಡಿದೆ.

ಕರ್ನಾಟಕದಲ್ಲಿ ಇರುವ ವಿಶ್ವಬ್ರಾಹ್ಮಣರ ಎರಡು-ಮೂರು ಮಠಗಳು ಅದ್ವೈತ ಪೀಠಕ್ಕೆ ಹತ್ತಿರವಾಗಲು ಪ್ರಯತ್ನಿಸಿದರು. ಸಪ್ತಾರ್ಷೆಯರಲ್ಲಿ ಹೆಣ್ಣು ಸಂತಾನದ ಕೊರತೆಯಿಂದಾಗಿ ಅವರು ವಿಶ್ವಕರ್ಮರೊಂದಿಗೆ ಅನ್ನ-ಕನ್ಯಾ ಸಂಬಂಧಕ್ಕೆ ಮುಂದಾಗುತ್ತಿದ್ದಾರೆ. ಅವರ ವೇದಗಳೂ ಉದಾರತೆ ತೋರುತ್ತಿರುವುದು ನಿಜ. ಇನ್ನು ವಿಶ್ವಬ್ರಾಹ್ಮಣರಲ್ಲಿ ಒಂದು ಪಂಗಡವೆಂದು ಹೇಳುತ್ತಿರುವ ದೈವಜ್ಞರು ಸ್ವಂತ ಗುರುಪೀಠ ಸ್ಥಾಪಿಸಿಕೊಂಡಿದ್ದರೂ ಕೆಲವರು ದ್ವೈತ(ಮಾಧ್ವ)ಪೀಠಕ್ಕೆ ನಡೆದುಕೊಳ್ಳುತ್ತಿದ್ದಾರೆ. ಈ ವಿದ್ಯಮಾನಗಳು ಯುವಜನರಲ್ಲಿ ಮತ್ತು ಮುಖ್ಯವಾಗಿ ಸಮಾಜ ಶಾಸ್ತ್ರದ ವಿದ್ಯಾರ್ಥಿಗಳಲ್ಲಿ ಗೊಂದಲವಾಗುತ್ತಿರುವುದನ್ನು ಗಮನಿಸಿ 'ಸಹಚಿಂತನ' ಪತ್ರಿಕೆ ಈ ಕುರಿತು ಚರ್ಚೆ ಆರಂಭಿಸಿ, ಒಂದು ನಿರ್ಣಯಕ್ಕೆ ಬರಲು ಪ್ರಯತ್ನಿಸಿದ್ದನ್ನು ಗುರುತಿಸಬಹುದು.

ಧಾರ್ಮಿಕವಾಗಿ ಒಂದು ಸ್ಥಾನಮಾನವನ್ನು ಪಡೆಯಬೇಕೆಂಬ ಹಂಬಲ ವಿಶ್ವಕರ್ಮ ಬಾಂಧವರದು. ಒಂದು ಕಡೆ ತಾವು ಶ್ರೇಷ್ಠ ಧರ್ಮ ಬ್ರಾಹ್ಮಣ್ಯದ ಅಂಗವೆಂದು ಕೆಲವರು

ವಾದಿಸಿದರೆ, ಕೆಲವರು ನಾವು ಹಿಂದುಳಿದವರಾಗಿ ಎಸ್.ಸಿ, ಎಸ್.ಟಿ. ಸವಲತ್ತುಗಳನ್ನು ಪಡೆಯಬೇಕೆಂದು ಕೆಲವರು ವಾದಿಸುತ್ತಾರೆ. ಹೀಗಾಗಿ ಧಾರ್ಮಿಕವಾಗಿ ಅನೇಕ ವಾದ-ವಿವಾದಗಳು ಇನ್ನೂ ಸಮಾಜದ ಮುಂದಿರುವುದನ್ನು ವಿಶ್ವಕರ್ಮ ಪತ್ರಿಕೆಗಳು ಗಮನಿಸಿ, ಅವುಗಳಿಗೆ ಪರಿಹಾರ ಹುಡುಕುವ ಕಾರ್ಯವನ್ನು ಮಾಡಿವೆ. ಒಂದು ಪ್ರಬಲ ಇಚ್ಛಾಶಕ್ತಿಯಿಂದ ಧರ್ಮದ ಒಳಗೆ ಹೇಗೆ ಪರಿವರ್ತನೆ ತರಬಹುದು ಎಂಬುದಕ್ಕೆ ಸಹಚಿಂತನ ಸಂಪಾದಕರು ಏಪ್ರಿಲ್ ೨೦೦೯ರ ಸಂಚಿಕೆಯ ಸಂಪಾದಕೀಯದಲ್ಲಿ ಒಂದು ಘಟನೆಯನ್ನು ಪ್ರಸ್ತಾಪ ಮಾಡಿದ್ದಾರೆ. "ದ.ಕ.ಜಿಲ್ಲೆಯ ಕೊಲಕಾಡಿ ಶ್ರೀ ಕಾಳಿಕಾಂಬ ದೇವಸ್ಥಾನದ ವ್ಯಾಪ್ತಿಯಲ್ಲಿದ್ದೂ ಕೂಡುವಳಿಕೆಯ ಹೊರಗಿದ್ದ ೫-೬ ಕುಟುಂಬಗಳನ್ನು ಇತ್ತೀಚೆಗೆ ಶುದ್ಧೀಕರಿಸಿ ಶ್ರೀ ಸ್ವಾಮೀಜಿಯವರ ಕೃಪಾಶೀರ್ವಾದದಿಂದ ಒಳಗೆ ಸೇರಿಸಿಕೊಂಡಿದ್ದಾರೆ. ಹಲವು ವರ್ಷಗಳ ಹಿಂದೆ ಕೇರಳದಿಂದ ಬಂದು ಕಬ್ಬಿಣದ ಕೆಲಸ ನಿರ್ವಹಿಸುತ್ತಾ ವಿಶ್ವಕರ್ಮರೆಂದ ಗುರುತಿಸಿಕೊಂಡ ಬಂಧುಗಳಿಗೆ ಜನಿವಾರ ತೊಡಿಸಿ, ಅವರ ಮಕ್ಕಳಿಗೆ ಉಪನಯನವನ್ನು ಶಾಸ್ತ್ರ ಸಮ್ಮತವಾದ ರೀತಿಯಲ್ಲಿ ನಡೆಸಿ, ಎಲ್ಲರೂ ಒಂದಾಗುವ ಪ್ರಕ್ರಿಯೆಗೆ ಚಾಲನೆ ದೊರಕಿದೆ. ಶ್ರೀಕ್ಷೇತ್ರದ ಆಡಳಿತ ಮೊಕ್ತೇಸರ ಸೂರ್ಯಕುಮಾರ ಹಾಗೂ ಅವರ ಬಳಗದ ಎಲ್ಲರೂ ತಮ್ಮ ದಿಟ್ಟ ಹೆಜ್ಜೆಗಳಿಂದ ಅಭಿನಂದನಾರ್ಹರು. ಇದು ಇತರ ಭಾಗದವರಿಗೂ ಪ್ರೇರಣೆ ನೀಡಲಿ"[೭] ಎನ್ನುವಲ್ಲಿ ವಿಶ್ವಕರ್ಮರ ಆತಂರಿಕ ಮತ್ತು ಬಾಹ್ಯ ಸಮಸ್ಯೆಗಳನ್ನು ಬಿಡಿಸಿ ತೋರಿಸುತ್ತಾರೆ.

ನಲ್ಲ ಗೋಪಾಲಕೃಷ್ಣ ಆಚಾರ್ ಅವರು ವಿಶ್ವಬ್ರಾಹ್ಮಣ ಸದ್ಗುರು ಪರಂಪರೆ ಎಂಬ ಲೇಖನ ಮಾಲೆಯನ್ನು ಸಹಚಿಂತನ ಪತ್ರಿಕೆಯ ನಾಲ್ಕೈದು ಸಂಚಿಕೆಗಳಲ್ಲಿ ಸುದೀರ್ಘವಾಗಿ ವಿವರಿಸಿ ಧಾರ್ಮಿಕವಾಗಿ ಈ ಗುರುಪರಂಪರೆಯ ಮಠಗಳು ಮಾಡಿದ ಸೇವೆಯನ್ನು ದಾಖಲಿಸಿದ್ದಾರೆ.

ವಿಶ್ವಕರ್ಮರು ವಿಶಾಲ ಹೃದಯಿಗಳು. ಸಾಧುಗೆ ಸಾಧುಗಳಾದವರು, ಮಾಧುರ್ಯಕ್ಕೆ ಮಾಧುರ್ಯವಾದವರು. ಹೀಗಾಗಿ ಕಾಲಗತಿಯಲ್ಲಿ ಅವರ ಸ್ಥಾನಮಾನ ಗೌರವಗಳನ್ನು ಇತರರು ಕಿತ್ತುಕೊಂಡಾಗಲೂ ಅವರು ಸಹನಶಕ್ತಿಯಿಂದ ಇದ್ದವರು. ಹೀಗಾಗಿ ವಿಶ್ವಬ್ರಾಹ್ಮಣ-ದೈವಜ್ಞ ಬ್ರಾಹ್ಮಣದ ಗೊಂದಲ ಕರಾವಳಿ ಕಡೆ ಇದ್ದರೆ, ಉತ್ತರ ಕರ್ನಾಟಕದಲ್ಲಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಶಿರಸಂಗಿ ಕ್ಷೇತ್ರದ ಬಗ್ಗೆಯೂ ಗೊಂದಲವಿತ್ತು. ಈ ವಿಷಯವನ್ನು ಕುರಿತು ವಿಶ್ವಕರ್ಮೋದಯ ಪತ್ರಿಕೆ ಸಂಪಾದಕರು ತಮ್ಮ ಸಂಪಾದಕೀಯದಲ್ಲಿ ಪ್ರಸ್ತಾಪಿಸುತ್ತ, ಇಬ್ಬರ ಜಗಳ ಮೂರನೆಯವನಿಗೆ ಲಾಭವಾಗುತ್ತದೆ. ಆದ್ದರಿಂದ ನಮ್ಮ ಜಗಳವನ್ನು ನಮ್ಮಲ್ಲೇ ಬಗೆಹರಿಸಿಕೊಳ್ಳಬೇಕೆಂಬ ಸಲಹೆಯನ್ನು ನೀಡಿದ್ದಾರೆ. ಅವರ ವಿಚಾರಗಳು ಹೀಗಿವೆ:

"ವಿಶ್ವಕರ್ಮ ಸಮಾಜವು ಹಿಂದಿನಿಂದಲೂ ತಮ್ಮ ಗುರುಪೀಠ ಮತ್ತು ಮಹತ್ವದ ಸ್ಥಾನಗಳನ್ನು ಕಳೆದುಕೊಳ್ಳುತ್ತ ಬರುತ್ತಲಿದೆ. ವೇದ, ಪುರಾಣ ಕಾಲದಲಲಿ ಶಿಲ್ಪ ಮತ್ತು ಬ್ರಾಹ್ಮಣ್ಯ ಎರಡನ್ನು ಹೊಂದಿದ್ದು, ನಂತರ ತಮ್ಮ ಜೀವನ ನಿರ್ವಹಣೆಗಾಗಿ ಶಿಲ್ಪವನ್ನು ಮಾತ್ರ ಆಶ್ರಯಿಸಿ ಬ್ರಾಹ್ಮಣ್ಯವನ್ನು

ಕಡೆಗಣಿಸಿದ ಕಾರಣ ನಮಗೂ ಬ್ರಾಹ್ಮಣತ್ವವಿದೆ ಎಂಬುದನ್ನು ನಿರೂಪಿಸಲು ನ್ಯಾಯಾಲಯದ ಮೊರೆ ಹೋದ ಪ್ರಕರಣವೂ ನಡೆದಿದೆ. ಆದರೂ ಬ್ರಾಹ್ಮಣ್ಯದ ಆಚರಣೆಗಳು ಇಂದಿಗೂ ತಿರಸ್ಕೃತಿಯಲ್ಲಿವೆ. ಜಕಣಾಚಾರ್ಯರ ವಿಷಯದಲ್ಲೂ ಕೆಲವರು ಜಕಣಾಚಾರ್ಯರು ಐತಿಹಾಸಿಕ ವ್ಯಕ್ತಿಯಲ್ಲ, ಕೇವಲ ಕಾಲ್ಪನಿಕ ವ್ಯಕ್ತಿ ಎನ್ನುವ ಹುನ್ನಾರಗಳಿಗೂ ನಮ್ಮವರ ಜಾಗೃತಿಯು ಅಷ್ಟಕಷ್ಟೆ. ಇದಕ್ಕೆ ನಮ್ಮಲ್ಲಿ ಒಮ್ಮತವಿಲ್ಲದೆ ಗುಂಪುಗಾರಿಕೆಯೇ ಕಾರಣ. ಒಂದು ವೇದಿಕೆ ಒಂದು ಸಮಸ್ಯೆಗೆ ಸ್ಪಂದಿಸಿದರೆ, ಉಳಿದ ವೇದಿಕೆಗಳು ಸಹಕಾರ ನೀಡದೆ ಸುಮ್ಮನಿದ್ದು, ಅದರ ವಿಫಲತೆಯ ಮತ್ತು ಅವರ ತೇಜೋವಧೆಯನ್ನೆ ನಿರೀಕ್ಷಿಸುವ ಹವ್ಯಾಸ ನಮ್ಮವರಲ್ಲಿದೆ. ಇದಕ್ಕೆ ನಮ್ಮಲ್ಲಿನ ಗುಂಪುಗಾರಿಕೆ ಅಸೂಯೆ ಭಾವವೇ ಕಾರಣ. ನಮ್ಮ ಸಮಾಜಕ್ಕೆ ಯಾವುದೇ ಸಂಕಷ್ಟಗಳು ಬಂದರೂ ಎಲ್ಲಾ ವೇದಿಕೆಗಳು ತಮ್ಮ ತಮ್ಮ ಸಣ್ಣ ಪುಟ್ಟ ವೈಮನಸ್ಸುಗಳನ್ನು ಬದಿಗಿಟ್ಟು, ಒಮ್ಮತದಿಂದ ಸಾಗುವುದು ನಿಜವಾದ ಸಂಘಟನೆ ಮತ್ತು ಸಮಾಜ ಸೇವೆ ಆಗಿರುತ್ತದೆ. ಈ ಎಲ್ಲಾ ವಿಚಾರಗಳು ನಮ್ಮ ಸಮಾಜದಲ್ಲಿ ಪ್ರಸ್ತುತ ಕಾಣುತ್ತಿರುವ ವಾಸ್ತವ. ಆದರೆ ಇದರ ಪ್ರಸ್ತಾಪವನ್ನು ತೀಕ್ಷ್ಣವಾಗಿ ಯಾರೂ ಸಹ ಪರಿಗಣಿಸದೆ ಇರುವುದು ಈ ಅನಿಷ್ಟ ಪದ್ಧತಿ ಮುಂದುವರಿಯಲು ದಾರಿಯಾಗಿದೆ. ನಮ್ಮ ನಾಯಕರಿಗೂ, ಸಮಾಜದಲ್ಲಿ ಬುಗಿಲೆದ್ದಿರುವ ಗುಂಪುಗಾರಿಕೆಗೂ ಕಡಿವಾಣವಿಲ್ಲದಂತಾಗಿದೆ.

ಮೇಲಿನ ವಿಚಾರಗಳ ಪ್ರಸ್ತಾಪಕ್ಕೂ ಕಾರಣವಿದೆ. ಈಗ ಶಿರಸಂಗಿ ಕ್ಷೇತ್ರವೂ ಗೊಂದಲದ ಗೂಡಾಗಿದ್ದು, ಬಹು ವರ್ಷಗಳಿಂದ ಇದ್ದ ಸಮಸ್ಯೆಯು ಈಗ ವಿಕೋಪದ ಸ್ಥಿತಿ ತಲುಪಿದೆ. ಇಲ್ಲಿಯ ವಿಶ್ವಕರ್ಮರ ಎರಡೂ ಬಣಗಳ ಹಠ, ವೈಮನಸ್ಸು, ಅಪಾರ್ಥಗಳು, ಸ್ವಾರ್ಥ ನೀತಿ, ಅಧಿಕಾರ ದಾಹಗಳಿಂದ ಇಲ್ಲಿನ ಆಡಳಿತಾಧಿಕಾರವೂ ಸರ್ಕಾರಿ ನಿಯೋಜಿತ ಆಡಳಿತಾಧಿಕಾರಿಯವರಿಗೆ ಹಸ್ತಾಂತರವಾಗುವ ಅತಿರೇಖಕ್ಕೆ ಬಂದು ತಲುಪಿದೆ. ಹಿಂದೆ ನಾವು ಏನೇ ಕಳೆದುಕೊಂಡಿದ್ದರೂ, ಅಂದು ನಮ್ಮವರಲ್ಲಿ ವಿದ್ಯಾಭ್ಯಾಸದ ಕೊರತೆ, ಸಂಘಟನಾ ಕೊರತೆ, ಸಮಾಜದ ಹಿತಚಿಂತಕರ ಕೊರತೆ ಹಾಗೂ ಸಮಾಜ ಜಾಗೃತಿ ಕಡಿಮೆ ಇದ್ದಿರಬಹುದು. ಆದರೆ ಇಂದು ನಮ್ಮ ಸಂಘಟನೆ, ಜಾಗೃತಿಯನ್ನು ಸರ್ಕಾರ ಮತ್ತು ಸಮಗ್ರ ಸಮಾಜದ ಕಣ್ಣಿಗೆ ಕಾಣುತ್ತಿರುವ ಈ ಸಂದರ್ಭದಲ್ಲೂ ಇಂತಹ ವಿಪರ್ಯಾಸ ಸಂಗತಿಗಳು ನಡೆಯುತ್ತಲಿವೆ ಎಂದರೆ ನಮ್ಮವರಲ್ಲಿ ಸ್ವಾರ್ಥ ಮತ್ತು ಸ್ವಪ್ರತಿಷ್ಠೆಯ ಅತಿರೇಕ ಯಾವ ಮಟ್ಟದಲ್ಲಿದೆ ಯೋಚಿಸಿ? ವಿಶ್ವಕರ್ಮರಲ್ಲಿ ಹುಟ್ಟಿದ ಪ್ರತಿಯೊಬ್ಬರಿಗೂ ಈ ವಿಚಾರದಲ್ಲಿ ಚಿಂತಿಸುವ ಮತ್ತು ನಮ್ಮ ಶಕ್ತಿಪೀಠವನ್ನು ಉಳಿಸಿಕೊಳ್ಳುವ ಬಾಧ್ಯತೆ, ಜವಾಬ್ದಾರಿ ನಮ್ಮದಾಗಿದೆ. ನಮ್ಮ ನಾಯಕರು, ಸಮಾಜದ ಹಿತಚಿಂತಕರು ಹಾಗೂ ಯುವಶಕ್ತಿಗಳು ತಮ್ಮ ಕರ್ತವ್ಯ ತಿಳಿದು, ಸೂಕ್ತ ಕ್ರಮವನ್ನು ಕೈಗೊಳ್ಳದಿದ್ದಲ್ಲಿ ಇಬ್ಬರ ಜಗಳದಲ್ಲಿ ಮೂರನೆಯವರಿಗೆ ಲಾಭ ಖಂಡಿತ. ಈಗ ಇಲ್ಲಿರುವವರು ತಮ್ಮ ವಿರೋಧಿಗಳಿಗೆ ತೊಂದರೆಯಾದರೆ ಸಾಕು ಎಂದು ಕಾಯುತ್ತಿದ್ದಾರೆ ವಿನಃ ನಾಳೆ ನಮ್ಮ ಸ್ಥಿತಿ ಏನು? ಸಮಾಜಕ್ಕೇನು ನಷ್ಟ? ಇಂದು ಬದಲಾದ ವ್ಯವಸ್ಥೆ ಮುಂದೆ ಸರಿಪಡಿಸಲು ಅಸಾಧ್ಯ ಸಂಗತಿ ಎಂಬುದರ ಬಗ್ಗೆ ಚಿಂತಿಸುತ್ತಲೇ

ಇಲ್ಲ. ಈಗಿನವರು ಮಾಡಿದ ತಪ್ಪು ಇತಿಹಾಸವಾಗಿ ಉಳಿದು ಮುಂದಿನ ನಮ್ಮ ಪೀಳಿಗೆಯು ಶಕ್ತಿಪೀಠವು ನಮ್ಮಿಂದ ದೂರವಾಗಲು ಕಾರಣರಾದವರನ್ನು ಶಪಿಸುವುದು ಖಂಡಿತ. ಈ ವಿಚಾರದಲ್ಲಿ ನಮ್ಮ ರಾಜ್ಯಮಟ್ಟದ ಮತ್ತು ಜಿಲ್ಲಾ ಮಟ್ಟದ ಸಂಘಟನೆಗಳು ಏಕೆ ಸ್ಪಂದಿಸುತ್ತಿಲ್ಲ? ಅಥವಾ ಇವರ ಸ್ಪಂದನೆಗೆ ಇಲ್ಲಿ ಅವಕಾಶವಿಲ್ಲವೆ? ಸಮಾಜದ ಪ್ರಗತಿಗಾಗಿ ಶ್ರಮಿಸುತ್ತಿರುವ ಈ ಪತ್ರಿಕೆಗೆ ಬಾಂಧವರು ತಮ್ಮ ಸಲಹೆ, ಸೂಚನೆಗಳೊಂದಿಗೆ ಲೇಖನ ಮತ್ತು ಅನಿಸಿಕೆ ಪತ್ರಗಳಿಂದ ನಮ್ಮ ಮುಂದಿನ ಪ್ರಯತ್ನಗಳಿಗೆ ಸ್ಫೂರ್ತಿದಾಯಕ ರಾಗಬೇಕಾಗಿ ತಮ್ಮಲ್ಲಿ ಪ್ರಾರ್ಥನೆ".[೮]

ವಿಶ್ವಕರ್ಮ ಧರ್ಮಸ್ವರೂಪಕ್ಕೆ ಸಂಬಂಧಿಸಿದಂತೆ ಅನೇಕ ವಿಚಾರಗಳು ಇಲ್ಲಿಯ ಪತ್ರಿಕೆಗಳಲ್ಲಿ ಲೇಖನ ರೂಪದಲ್ಲಿ ಪ್ರಕಟಗೊಂಡು, ಜನಸಾಮಾನ್ಯರಿಗೂ ಧಾರ್ಮಿಕ ವಿಚಾರ ಸಂಹಿತೆ ತಿಳಿಯುವಂತಾದುದು ಗಮನಾರ್ಹ ಅಂಶವಾಗಿದೆ. 'ವಿಶ್ವಕರ್ಮನ ವಿಶ್ವರೂಪ', 'ವಿಶ್ವಕರ್ಮ ಎಂದರೆ ಯಾರು?', 'ವಿಶ್ವಕರ್ಮ ತತ್ವ', 'ವೈಶ್ವಕರ್ಮಣ ಧರ್ಮ', 'ವಿಶ್ವಕರ್ಮ–ವಿಶ್ವಬ್ರಾಹ್ಮಣ', 'ಗಾಯತ್ರಿ ಮಂತ್ರದ ರಹಸ್ಯಾರ್ಥ', 'ಬ್ರಹ್ಮರ್ಷಿ ವಿಶ್ವರೂಪಾಚಾರ್ಯರು' 'ವಿಶ್ವಕ್ಕೆ ವಿಶ್ವಬ್ರಾಹ್ಮಣರ ಕೊಡುಗೆ', 'ವಿಶ್ವಕರ್ಮರ ಇತಿಹಾಸ', 'ಪಂಚಾಲ ಬ್ರಾಹ್ಮಣರು', 'ದೈವಜ್ಞ ಬ್ರಾಹ್ಮಣರು', 'ಭಗವಾನ್ ವಿಶ್ವಕರ್ಮ ಮತ್ತು ಅವನ ವಂಶಜರು' ಮೊದಲಾದ ವಿಷಯ ಕುರಿತು ನೂರಾರು ಲೇಖನಗಳು ವಿಶ್ವಕರ್ಮ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಈ ಎಲ್ಲ ಲೇಖನಗಳ ಉದ್ದೇಶ ಸಮಾಜದ ಸಾಮಾನ್ಯ ಜನರಿಗೂ ಧರ್ಮದ ತತ್ವಗಳು ತಿಳಿಯಲಿ ಎಂಬುದೇ ಆಗಿತ್ತು. ಕೆಲವು ವಿಚಾರಗಳನ್ನು ಎಷ್ಟು ಸರಳವಾಗಿ ಅವರು ನಿರೂಪಿಸುತ್ತಾರೆ ಎಂಬುದಕ್ಕೆ ಒಂದು ಉದಾಃ

**ವಿಶ್ವಕರ್ಮ ವಿಶ್ವಬ್ರಾಹ್ಮಣ** : ವೇದ ಕಾಲದಲ್ಲಿ ಇಂದ್ರ, ವರುಣ, ಅಗ್ನಿ, ಉಷಃ, ಪೃಥ್ವಿ– ಹೀಗೆ ಹಲವು ದೇವರನ್ನು ಪೂಜಿಸುತ್ತಿದ್ದರು. ಆದರೆ, ಇವರು ಯಾರು ಈ ಪ್ರಪಂಚವನ್ನು ಸೃಷ್ಟಿಸಿದ ದೇವರಲ್ಲ. ಈ ಪ್ರಪಂಚವನ್ನು ಸೃಷ್ಟಿಸಿದ ದೇವರು ಯಾರು? ಯಾರಿಗೂ ಗೊತ್ತಿಲ್ಲ. ವೇದಕಾಲದ ಅರಸ, ಮಹಾಶಿಲ್ಪಿ ಭವನ, ಇವರ ಮಗ ಮಹಾಶಿಲ್ಪಿ ಭೌವನ, ಒವನು ತಪಸ್ಸಿಗೆ ಕಾಡಿಗೆ ಹೋದನು. ಕಠಿಣ ತಪಸ್ಸು ಮಾಡಿದನು. ವಿಶ್ವಕರ್ಮ ದೇವರು ಇವನಿಗೆ ಪ್ರತ್ಯಕ್ಷನಾದನು. ಭೌವನು ನಗರಕ್ಕೆ ಹಿಂತಿರುಗಿದನು. ವೇದಕಾಲದಲ್ಲಿ ಋಷಿಗಳದ್ದೇ ದೊಡ್ಡ ಸಂಘ ಇತ್ತು. ಇದಕ್ಕೆ 'ಋಷಿ ಮಹಾಮಂಡಲ' ಎಂಬ ಹೆಸರಿತ್ತು. ಈ ಋಷಿ ಮಹಾಮಂಡಲದ ಋಷಿಗಳನ್ನು ಮಹರ್ಷಿ ಭೌವನನು ಕರೆದನು. ಈ ಪ್ರಪಂಚವನ್ನು ಸೃಷ್ಟಿಸಿದವನು ವಿಶ್ವಕರ್ಮ ಎಂದು ವಿಶ್ವಕರ್ಮ ದೇವರ ವಿಚಾರವನ್ನೆಲ್ಲ ಋಷಿಗಳಿಗೆ ಹೇಳಿದನು. ವಿಶ್ವಕರ್ಮ ದೇವರ ವಿಚಾರ ಕೇಳಿ ಋಷಿಗಳೆಲ್ಲರಿಗೂ ಮಹಾ ಆನಂದವಾಯಿತು. ಅವರಿಗೆಲ್ಲ ಅಪಾರ ಶಾಂತಿ ಸಿಕ್ಕಿತು. ಮಹರ್ಷಿ ಭೌವನನನ್ನು ಋಷಿ ಮಂಡಲದ ಅಧ್ಯಕ್ಷ ಸ್ಥಾನದಲ್ಲಿ ಕುಳ್ಳಿರಿಸಿ, 'ಭೌವನ ವಿಶ್ವಕರ್ಮ' ಎಂದು ಜಯಕಾರ ಮಾಡಿದರು. ವಿಶ್ವಕರ್ಮ ದೇವರನ್ನು ಕಂಡದ್ದರಿಂದ ಮಹರ್ಷಿ ಭೌವನನಿಗೆ 'ವಿಶ್ವಕರ್ಮ ಬ್ರಾಹ್ಮಣ' ಎಂಬ ಹೆಸರು ಬಂದಿತು. ವಿಶ್ವಕರ್ಮನಿಗೆ ವಿಶ್ವಬ್ರಹ್ಮ ಎಂಬ ಹೆಸರೂ

ಇದೆ. ಆದ್ದರಿಂದ ಈ ಕುಲಕ್ಕೆ ವಿಶ್ವಬ್ರಾಹ್ಮಣ ಕುಲ, ವಿಶ್ವಕರ್ಮ ಬ್ರಾಹ್ಮಣರ ಕುಲ, ವಿಶ್ವಕರ್ಮ ಕುಲ ಎಂಬ ಹೆಸರುಗಳು ಬಂದವು.

**ವಿಶ್ವಕರ್ಮ ತತ್ವ :** ವಿಶ್ವಕರ್ಮನು ಈ ಪ್ರಪಂಚವನ್ನು ಎಲ್ಲ ದೇವರುಗಳನ್ನು, ಜೀವಿಗಳನ್ನು ಸೃಷ್ಟಿಸಿ, ಅವುಗಳೊಳಗೆ ಪ್ರವೇಶಿಸಿದನು. ವಿಶ್ವಕರ್ಮನು ಅವುಗಳೊಳಗೆಲ್ಲ 'ಕರ್ಮ' 'ಚೈತನ್ಯ'ವಾಗಿ ಉಳಿದನು. ಸೂರ್ಯ, ಚಂದ್ರರ ತಿರುಗಾಟ, ಗಾಳಿಯ ಸಂಚಾರ, ಗಿಡಮರಗಳು ಬೆಳೆಯುವುದು, ನಮ್ಮ ಉಸಿರಾಟ ಎಲ್ಲವೂ ಕೆಲಸ. ಇದನ್ನೆ ಕರ್ಮ ಎನ್ನುವರು. ಈ ಪ್ರಪಂಚದ ಶಕ್ತಿ ಚೈತನ್ಯವೇ ಕರ್ಮ. ಕರ್ಮವಿಲ್ಲದಲ್ಲಿ ಜೀವ, ಚೈತನ್ಯವಿಲ್ಲ. ಹೀಗೆ ಪ್ರಪಂಚವೆಲ್ಲ 'ಕರ್ಮ–ಚೈತನ್ಯ'ವಾಗಿರುವ ಅವನು, ಈ ಕರ್ಮಕ್ಕೆಲ್ಲ ಒಡೆಯನು. ಪ್ರಪಂಚದ ತಂದೆ, ಅವನು ವಿಶ್ವಕರ್ಮ ಎಲ್ಲಾ ದೇವರನ್ನು ಸೃಷ್ಟಿಸಿ ಅವರಿಗೆಲ್ಲ ಹೆಸರಿಟ್ಟವನು ವಿಶ್ವಕರ್ಮ. ಅನೇಕ ದೇವರುಗಳಾಗಿ ಕಂಡರೂ ಅವೆಲ್ಲವೂ ಒಂದೇ–ಅವನೇ ವಿಶ್ವಕರ್ಮ. ಕಾಳಿಕಾಂಬೆ, ಗಾಯತ್ರಿ ವಿಶ್ವಕರ್ಮನದೇ ರೂಪಗಳು. ಕರ್ಮವನ್ನು ಪ್ರೀತಿಯಿಂದ ದೇವರ ಪೂಜೆಯಂತೆ ಶ್ರದ್ಧೆಯಿಂದ, ಶುದ್ಧವಾಗಿ, ಶುಚಿಯಾಗಿ ಮಾಡು, ಎಲ್ಲದರಲ್ಲೂ ವಿಶ್ವಕರ್ಮನಿದ್ದಾನೆ. ಆದ್ದರಿಂದ ಎಲ್ಲವನ್ನೂ, ಎಲ್ಲರನ್ನೂ ಪ್ರೀತಿಸು ಯಾರಲ್ಲೂ ಮತ್ಸರ ಬೇಡ, ಯಾರಲ್ಲೂ ಸಿಟ್ಟು ಬೇಡ. ಈ ಪ್ರಪಂಚದಲ್ಲಿ ಸತ್ಕರ್ಮ ಮಾಡುತ್ತ ಎಲ್ಲರಿಗೂ ಆನಂದ ಕೊಡುತ್ತ ಬಹುಕಾಲ ಬಾಳು. ಇದು ವಿಶ್ವಕರ್ಮ ತತ್ವ.

**ಬ್ರಾಹ್ಮಣ–ವಿಶ್ವಕರ್ಮ ಬ್ರಾಹ್ಮಣ (ಜಗದ್ಗುರು):** ವೇದಕಾಲದಲ್ಲಿ ದೇವರನ್ನು ಕಂಡವರಿಗೆ ಜ್ಞಾನಿಸ 'ಬ್ರಾಹ್ಮಣ' ಎಂದು ಕರೆಯುತ್ತಿದ್ದರು. ದೇವರನ್ನು ಕಂಡು, ಈ ಬ್ರಾಹ್ಮಣ ಸ್ಥಾನವನ್ನು ಪ್ರಥಮವಾಗಿ ಪಡೆದವರು ಭೌವನ. ವಿಶ್ವಕರ್ಮನ ಹಿರಿಯರಾದ ಅಂಗೀರಸರೂ, ಭೃಗುಗಳೂ, ಋಭುಗಳು ಇವರೆಲ್ಲ ಮಹಾಶಿಲ್ಪಿಗಳು. ಪ್ರಾರಂಭದಲ್ಲಿ ಇವರು 'ಬ್ರಾಹ್ಮಣ' ಎಂದು ಪ್ರಸಿದ್ಧಿಯಾದರು. ಮಹರ್ಷಿ ಭೌವನನು 'ವಿಶ್ವಕರ್ಮ' ದೇವರನ್ನು ಕಂಡ ಮೇಲೆ 'ವಿಶ್ವಕರ್ಮ ಬ್ರಾಹ್ಮಣ' ಎಂಬ ಹೆಸರು ಬಂತು. ಆ ಕಾಲದಲ್ಲಿ ವಿಶ್ವಕರ್ಮ ಬ್ರಾಹ್ಮಣರು ಮಹಾಜ್ಞಾನಿಗಳಾಗಿದ್ದರು. ಆದ್ದರಿಂದ ಇವರು ವಿಶಾಲ ಸಮಾಜಕ್ಕೆ ಧರ್ಮಗುರುಗಳಾಗಿದ್ದರು.

'ಜಗದ್ಗುರು' ಎಂಬ ಪಟ್ಟ ೧. ಹಂಪೆ ಆನೆಗುಂದಿ ಮೂಲ ಸಂಸ್ಥಾನ ಸರಸ್ವತಿ ಮೂಲ ಪೀಠಾಧಿಪತಿ ಶ್ರೀ ಶಿವಶಂಕರ ಮಹಾಸ್ವಾಮಿಗಳು ಹಿರೇಹಾಳು–ದೇವದುರ್ಗ ೨.ಶ್ರೀ ವೀಪೂರಿ ಗಾಯತ್ರಿಪೀಠ ವರವೆಂಕಟಾಚಾರ್ಯರು ಹಸ್ತಿನಾವತಿ ಕರ್ನಾಟಕ, ೩.ಶ್ರೀಮತ್ ಪರಮಹಂಸ ಶ್ರೀ ಶಾರದಾಪೀಠ ಶ್ರೀ ಶಂಕರಾಚಾರ್ಯರು ಶೃಂಗೇರಿ ಕರ್ನಾಟಕ ೪.ಶ್ರೀಮತ್ ಕನಕಪರ್ತಿ ಸಾವಿತ್ರಿಪೀಠ ಕಾಳಹಸ್ತಾಚಾರ್ ಶ್ರೀ ಕಾಶಿ ಉತ್ತರಪ್ರದೇಶ, ೫.ಶ್ರೀಮತ್ ಕಂಚರ್ಲ ಅಥಮಕಂದ ನೂಲಿ ಶ್ರೀ ಸಂಜ್ಞಪೀಠ ಪ್ರೌಢಾಚಾರ್ಯರು ಶ್ರೀ ಕಾಳಹಸ್ತಿ ಆಂಧ್ರಪ್ರದೇಶ–ಈ ಐದು ಪಂಚಪೀಠಗಳಿಗೆ ಮಾತ್ರ ಇತ್ತು.

**ಪಂಚಋಷಿಗಳು:** ವೇದಕಾಲದಲ್ಲಿ ದೇವರನ್ನು ಯಜ್ಞದ ಮೂಲಕ ಪೂಜಿಸುತ್ತಿದ್ದರು. ಯಜ್ಞವನ್ನು ಯಜ್ಞಕುಂಡದಲ್ಲಿ ಮಾಡುತ್ತಿದ್ದರು. ಈ ಯಜ್ಞಕುಂಡವನ್ನು ಇಟ್ಟಿಗೆಗಳಿಂದ ನಿರ್ಮಿಸುತ್ತಿದ್ದರು. ಮೊದಲನೆಯ ಇಟ್ಟಿಗೆಯನ್ನು ಇಡುವಾಗ ಸಾನಗ ಬ್ರಹ್ಮಋಷಿಯ ಧ್ಯಾನ ಮಂತ್ರವನ್ನು ಹೇಳುತ್ತಾರೆ. ಎರಡನೆಯ ಇಟ್ಟಿಗೆಯನ್ನು ಸನಾತನ ಬ್ರಹ್ಮಋಷಿಯ ಧ್ಯಾನ ಮಂತ್ರವನ್ನು ಹೇಳುತ್ತ ಇಟ್ಟಿಗೆಗಳನ್ನು ಜೋಡಿಸುತ್ತಾರೆ. ಈ ಐದು ಬ್ರಹ್ಮಋಷಿಗಳು ಪ್ರಸಿದ್ಧರು. ಇವರನ್ನು ಮನುಬ್ರಹ್ಮ, ಮಯಬ್ರಹ್ಮ, ತ್ವಷ್ಟ್ರ, ಬ್ರಹ್ಮ, ಶಿಲ್ಪಿ ಬ್ರಹ್ಮ, ವಿಶ್ವಜ ಬ್ರಹ್ಮ ಎಂಬ ಹೆಸರು. ಈ ಐದು ಮಂದಿ ಐದು ರೀತಿಯ ಶಿಲ್ಪವನ್ನು ಕಂಡು ಹುಡುಕಿದವರು. ಈ ಐದುಮಂದಿ ಮಹಾಜ್ಞಾನಿ, ಮಹಾಶಿಲ್ಪಿಗಳು ವಿಶ್ವಕರ್ಮ ಬ್ರಾಹ್ಮಣ ಕುಲದವರು.

ಹೀಗೆ ವಿಶ್ವಕರ್ಮ ಸಂಸ್ಕೃತಿಯ ಸಮಗ್ರ ವಿವರಗಳು ಇಲ್ಲಿಯ ಪತ್ರಿಕೆಗಳಲ್ಲಿ ಲೇಖನ ರೂಪದಲ್ಲಿ ಪ್ರಕಟಗೊಂಡಿವೆ.

ಶಿಕ್ಷಣದ ಅರಿವು ಹೆಚ್ಚಿದಂತೆ, ತಮ್ಮ ಧರ್ಮ ಸಂಸ್ಕೃತಿಗಳ ಕುರಿತಾದ ಮಾಹಿತಿಗಳು ತಿಳಿದು ಬಂದ ನಂತರ ವಿಶ್ವಕರ್ಮರು ಜಾಗೃತರಾಗುವ ಕೆಲಸವನ್ನು ಮಾಡಿದ್ದಾರೆ. ಎಲ್ಲ ಪತ್ರಿಕೆಗಳು ತಮ್ಮನ್ನು ತಾವು ಆತ್ಮಾವಲೋಕ ಮಾಡುವ ನಿಟ್ಟಿನಲ್ಲಿ ಮೊದಲು ನಮ್ಮ ಹಿಂದುಳಿದಿರುವಿಕೆಗೆ ಏನು ಕಾರಣ ಎಂಬುದನ್ನು ಅರಿತುಕೊಳ್ಳುವ ಪ್ರಯತ್ನ ಮಾಡಿದವು. ಪ್ರಕಾಶ ಆಚಾರ್ಯ ಅವರು ಸಹಚಿಂತನ ಪತ್ರಿಕೆಯಲ್ಲಿ 'ವಿಶ್ವಬ್ರಾಹ್ಮಣರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಿಂದುಳಿಕೆಗೆ ಕಾರಣ ಪರಿಹಾರ' ಎಂಬ ಸುದೀರ್ಘ ಲೇಖನವನ್ನೇ ಬರೆದಿದ್ದಾರೆ. ಧಾರ್ಮಿಕ ನೆಲೆಯಲ್ಲಿ ಅವರ ವಿಚಾರಗಳು ಹೀಗಿವೆ.

"೧. ವಿಶ್ವಬ್ರಾಹ್ಮಣರಲ್ಲಿ ಅನೇಕ ಪಂಗಡಗಳಿದ್ದು ಅವುಗಳಲ್ಲಿ ಒಗ್ಗಟ್ಟಿಲ್ಲದಿರುವುದು ಇದಕ್ಕೆ ಪರ್ಯಾಯವಾಗಿ ವಿಶ್ವಕರ್ಮರೆಲ್ಲರೂ ಒಂದೇ ಭಾವನೆಯಿಂದ 'ವಿಶ್ವಕರ್ಮ' ಅಥವಾ 'ಆಚಾರ್ಯ' ಎಂಬ ಒಂದೇ ಪದದಿಂದ ಗುರುತಿಸುವಂತಾಗಬೇಕು. ೨. ವಿಶ್ವಬ್ರಾಹ್ಮಣ ಎನ್ನುವ ಹೆಸರಿದ್ದರೂ ಧಾರ್ಮಿಕ ಆಚರಣೆಗಳನ್ನು ಮಾಡದೆ ಇರುವುದು ಇದಕ್ಕೆ ಉತ್ತರವಾಗಿ ಬ್ರಾಹ್ಮಣ ಪದಕ್ಕನುಗುಣವಾಗಿ ತ್ರಿಕಾಲಸಂಧ್ಯಾವಂದನೆ, ನಿತ್ಯ ತುಳಸೀಪೂಜೆ ಕ್ರಮಬದ್ಧದೇವರ ಪೂಜೆ ಇತ್ಯಾದಿ ಮಾಡುವುದು. ೩.ಬ್ರಾಹ್ಮಣ ಎನ್ನುವ ಹಣೆಪಟ್ಟಿ ಮಾತ್ರ ಹೊಂದಿ ಬ್ರಾಹ್ಮಣ್ಯವನ್ನು ಬಿಟ್ಟು ದುರಭ್ಯಾಸಗಳನ್ನು ಮೈಗೂಡಿಸಿಕೊಂಡಿರುವುದು. ಇದನ್ನು ತಪ್ಪಿಸಲು ಎಲ್ಲಾ ದುರಭ್ಯಾಸಗಳನ್ನು ಬಿಟ್ಟು ಸಂಸ್ಕಾರಯುತವಾಗಿ ಜೀವನ ನಡೆಸುವುದರಿಂದ ಸಾಮಾಜಿಕವಾಗಿ ಆರ್ಥಿಕವಾಗಿ ಗೌರವ ಪ್ರಾಪ್ತಿಯಾಗುತ್ತದೆ. ೪. ವಿಶ್ವಬ್ರಾಹ್ಮಣರ ಮಠಗಳು, ದೇವಸ್ಥಾನಗಳು, ಶ್ರೀಮಂತರು ಅಧಿಕಾರಿಗಳು ಸಮಾಜದ ಇತರೇ ಕೆಳಮಟ್ಟದವರನ್ನು ಮೇಲಕ್ಕೆತ್ತಲು ಸಹಕರಿಸದಿರುವುದು. ಆದರೆ ಬ್ರಾಹ್ಮಣ, ವೀರಶೈವ, ಜಿ.ಎಸ್.ಬಿ. ಒಕ್ಕಲಿಗ ಮಠಗಳು ತಮ್ಮ ಸಮಾಜದವರಿಗೋಸ್ಕರ ಅನೇಕ ಗುಣಾತ್ಮಕ ಕಾರ್ಯಗಳನ್ನು ಹಮ್ಮಿಕೊಳ್ಳುತ್ತಿರುವುದನ್ನು ಆದರ್ಶವಾಗಿಟ್ಟುಕೊಳ್ಳಬೇಕು"[7]. ಹೀಗೆ ವಿಶ್ವಕರ್ಮ ಸಂಸ್ಕೃತಿಯ ಧಾರ್ಮಿಕ ನೆಲೆಯ ವಿಚಾರಗಳನ್ನು ಈ ಪತ್ರಿಕೆಗಳಲ್ಲಿ ಗುರುತಿಸುತ್ತೇವೆ.

ವಿಶ್ವಕರ್ಮ ಧರ್ಮಕ್ಕೆ ಸಪ್ತಾರ್ಷೇಯ ಬ್ರಾಹ್ಮಣರಿಂದ ಬಲಾಢ್ಯ ಸಮಾಜಗಳ ವಿಶ್ವಕರ್ಮರ ಧಾರ್ಮಿಕ ಹಕ್ಕುಗಾರಿಕೆಯನ್ನು ಕಿತ್ತುಕೊಂಡು ಇಲ್ಲವೆ ಮೊಟಕುಗೊಳಿಸಿದ್ದ ಇಲ್ಲವೇ ಅವಮಾನಿಸಿದ ಅಥವಾ ಇನ್ನಾವುದೋ ರೂಪದಲ್ಲಿ ತನ್ನ ಧಾರ್ಮಿಕ ಹಿತಾಸಕ್ತಿಗಳಿಗೆ ಧಕ್ಕೆ ಬಂದಾಗ ಪತ್ರಿಕೆಗಳು ಆ ಸಮಾಜದ ಮಠಾದೀಶರು, ಸಮಾಜದ ಹಿರಿಯರು ಒಟ್ಟಾಗಿ ಪ್ರತಿಕ್ರಿಯಿಸಿದ, ಪ್ರತಿಭಟಿಸಿದ ಸಂಗತಿಗಳನ್ನು ಈ ಪತ್ರಿಕೆಗಳು ದಾಖಲಿಸಿವೆ. ಆ ಮೂಲಕ ತನ್ನ ಧಾರ್ಮಿಕ ಹಕ್ಕುದಾರಿಕೆಯನ್ನು ಸಮರ್ಥಿಸಿಕೊಂಡದ್ದನ್ನು ಕಾಣಬಹುದು.

**೪.೩. ರಾಜಕೀಯ ಆಯಾಮ :**

ವಿಶ್ವಕರ್ಮ ಸಮಾಜವು ಕರ್ನಾಟಕದಲ್ಲಿ ಒಂದು ರಾಜಕೀಯ ಶಕ್ತಿಯಾಗಿ ರೂಪುಗೊಳ್ಳಬೇಕೆಂಬ ಹಿನ್ನೆಲೆಯಲ್ಲಿ ಸಮಾಜ ಬಾಂಧವರು ಅನೇಕ ದಶಕಗಳಿಂದ ಪರಿಶ್ರಮಿಸುತ್ತ ಬಂದಿದ್ದಾರೆ. ಈ ವಿಷಯವಾಗಿ ವಿಶ್ವಕರ್ಮ ಪತ್ರಿಕೆಗಳು ಕೂಡ ಅನೇಕ ಬಗೆಯ ಲೇಖನಗಳನ್ನು ಪ್ರಕಟಿಸುವ ಮೂಲಕ ರಾಜಕೀಯ ಜಾಗೃತಿಯನ್ನುಂಟು ಮಾಡುವ ಕಾರ್ಯವನ್ನು ಅತ್ಯಂತ ಪ್ರಾಮಾಣಿಕತೆಯಿಂದ ಮಾಡುತ್ತ ಬಂದಿವೆ.

೧೯೫೦ರ ದಶಕದಲ್ಲಿ ಪ್ರಕಟವಾಗುತ್ತಿದ್ದ 'ವಿಶ್ವಕರ್ಮಾ' ಪತ್ರಿಕೆಯು ಈ ವಿಷಯವಾಗಿ ಮೊದಲು ಧ್ವನಿ ಎತ್ತಿದೆ. ರಾಜಕೀಯ ಕ್ಷೇತ್ರದಲ್ಲಿ ವಿಶ್ವಕರ್ಮರು ಸಕ್ರಿಯವಾಗಿ ಭಾಗವಹಿಸಬೇಕು, ರಾಷ್ಟ್ರೀಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಸಮಾಜ ಬಾಂಧವರು ಸರ್ವಾರ್ಪಣ ಮನೋಭಾವದಿಂದ ಭಾಗವಹಿಸಿ, ರಾಜಕೀಯದಲ್ಲಿ ಮುನ್ನಲೆಗೆ ಬರಬೇಕೆಂಬ ಆಶಯ ವಿಶ್ವಕರ್ಮ ಪತ್ರಿಕೆಗಳದ್ದಾಗಿದೆ. ಈ ವಿಷಯವಾಗಿ ಪತ್ರಿಕೆಗಳು ಕಾಲಕಾಲಕ್ಕೆ ಲೇಖನ–ಸಂಪಾದಕೀಯಗಳನ್ನು ಬರೆಯುತ್ತ ಜಾಗೃತಿಯ ಕೆಲಸವನ್ನು ಮಾಡುತ್ತ ಬಂದಿವೆ.

ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜವನ್ನು ರಾಜಕೀಯವಾಗಿ ಮುನ್ನಲೆಗೆ ತರುವಲ್ಲಿ 'ಮೈಸೂರು ವಿಶ್ವಕರ್ಮ ಸಮಾಜ' 'ಕರ್ನಾಟಕ ರಾಜ್ಯ ವಿಶ್ವಕರ್ಮ ಸಮಾಜ, ಬೆಂಗಳೂರು', 'ರಾಷ್ಟ್ರೀಯ ವಿಶ್ವಬ್ರಾಹ್ಮಣ ಸಮಾಜ, ಮಂಗಳೂರು', 'ಅಖಿಲ ಭಾರತ ವಿಶ್ವಕರ್ಮ ಮಹಾಸಭಾ, ದೆಹಲಿ' ಈ ಸಂಘಟನೆಗಳು ಅನೇಕ ವರ್ಷಗಳಿಂದ ರಾಜಕೀಯ ವಿಚಾರವಾಗಿ ಸಮಾಜ ಬಾಂಧವರಲ್ಲಿ ತಿಳಿವಳಿಕೆ ನೀಡುತ್ತ ಬಂದಿವೆ. ವಿಶ್ವಕರ್ಮ ಧರ್ಮಗುರುಗಳಾದ ವಿಪೂರಿ ಗಾಯತ್ರಿ ಮಠದ ಅಂದಿನ ಪೂಜ್ಯರಾದ ಶ್ರೀ ವರವೆಂಕಟಾಚಾರ್ಯ ಪಾದಂಗಳವರು, ಪೂಜ್ಯ ಸಿದ್ಧಲಿಂಗ ಮಹಾಸ್ವಾಮಿಗಳು, ಶಿಲ್ಪ ಸಿದ್ಧಾಂತಿ ಮಹಾದೇವ ಸ್ವಾಮಿಗಳು, ಆನೆಗುಂದಿ ಪೀಠಾಧಿಪತಿಗಳು ಶಿವಮೊಗ್ಗ ಮತ್ತು ಮಂಗಳೂರು ಪ್ರಾಂತಗಳಲ್ಲಿ ಪ್ರವಾಸ ಮಾಡಿ ಉಪನ್ಯಾಸಗಳನ್ನು ಏರ್ಪಡಿಸಿ ವಿಶ್ವಕರ್ಮ ಧರ್ಮದ ಕಲ್ಪವೃಕ್ಷಕ್ಕೆ ಆಳವಾಗಿ ಬೇರೂ ಹೋಗುವಂತೆ ಜ್ಞಾನದ ನೀರನ್ನೆರೆದು, ಬಿತ್ತಿ, ಬೆಳೆಸಿ ಫಲ ಕೊಡುವಂತೆ ಸಮಗ್ರ ವಿಶ್ವಕರ್ಮ ಸಮುದಾಯದ ಜಾಗೃತಿಯನ್ನು

ಮಾಡಿದರು. ಈ ಸ್ವಾಮೀಜಿಗಳ ಮಾರ್ಗದರ್ಶನದ ಪರಿಣಾಮವಾಗಿ ರಾಜ್ಯಾದ್ಯಂತ ಸಂಘ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಹೀಗಾಗಿ ಅಂದಿನ ಮುಖ್ಯಮಂತ್ರಿ ದೇವರಾಜ ಅರಸು ಮತ್ತು ಪಂಜಾಬಿನ ಮುಖ್ಯಮಂತ್ರಿ ಜೈಲ್‌ಸಿಂಗ್ ಅವರನ್ನು ಆಹ್ವಾನಿಸಿ ರಾಷ್ಟ್ರಮಟ್ಟದ ವಿಶ್ವಕರ್ಮ ಮಹಾ ಸಮ್ಮೇಳನವನ್ನು ಏರ್ಪಡಿಸಿ ವಿಶ್ವಕರ್ಮ ಸಮಾಜವನ್ನು ಹಿಂದುಳಿದ ಆಯೋಗ (ಹಾವನೂರು ಆಯೋಗ, ವೆಂಕಟಸ್ವಾಮಿ ಆಯೋಗ, ಹಿಂದುಳಿದ ವರ್ಗಗಳ ಆಯೋಗ), ಸೇರಿಸಬೇಕೆಂದು ಸರ್ಕಾರದ ಸೌಲಭ್ಯಗಳನ್ನು ನೀಡಬೇಕೆಂದು ಮನವಿಯನ್ನು ಅರ್ಪಿಸಿದರು. ಶಿಕ್ಷಣ, ಕೈಗಾರಿಕೆ, ಸಾಲ ಸೌಲಭ್ಯಗಳು, ಚಿನ್ನ, ಬೆಳ್ಳಿ ಕೆಲಸಗಾರರಿಗೆ ಚಿನ್ನ ನಿಯಂತ್ರಣ ಕಾಯಿದೆ ಸಡಿಲಗೊಳಿಸಬೇಕೆಂದು ಮನವಿ ಮಾಡಿಕೊಂಡರು. ಅಂದಿನ ಅ.ಭಾ. ವಿಶ್ವಕರ್ಮ ಮಹಾಸಭಾ ಅಧ್ಯಕ್ಷರಾದ ಶ್ರೀ ನೀಲಕಂಠನ್, ಶ್ರೀ ಚಂದ್ರಶೇಖರ, ಬಿ. ಹರಿಶ್ಚಂದ್ರಾಚಾರ್ (ವಿಶ್ವಕರ್ಮ ಪತ್ರಿಕೆಯ ಸಂಪಾದಕರು), ನಾ. ಭ. ಚಂದ್ರಶೇಖರಾಚಾರ್ಯರು, ಮೊದಲಾದವರು ಈ ಸಮ್ಮೇಳನವನ್ನು ಯಶಸ್ವಿಗೊಳಿಸಿದರು.

೧೯೮೩ರಲ್ಲಿ ರಾಮಕೃಷ್ಣ ಹೆಗಡೆ ಅವರು ಮುಖ್ಯಮಂತ್ರಿಯಾದಾಗ ವಿಶ್ವಕರ್ಮ ಸಮಾಜ ಮುಖಂಡರು ಭೇಟಿಯಾಗಿ ಸ್ವರ್ಣ ನಿಯಂತ್ರಣ ಕಾಯ್ದೆಗಳನ್ನು ಸಡಿಲಗೊಳಿಸಿ, ಚಿನ್ನ ಬೆಳ್ಳಿ ಕೆಲಸಗಾರರಿಗೆ, ವ್ಯಾಪಾರಿಗಳಿಗೆ ಅನುಕೂಲಗಳನ್ನು ಸರಕಾರ ಮಾಡಿಕೊಟ್ಟಿತು.

ನಂತರ ವೀರೇಂದ್ರ ಪಾಟೀಲ ಅವರು ಮುಖ್ಯಮಂತ್ರಿಗಳಾದ ಸಂದರ್ಭದಲ್ಲಿ ವಿಶ್ವಕರ್ಮ ಸಮಾಜ ಬಾಂಧವರು ಭೇಟಿಯಾಗಿ, ನಮ್ಮ ಸಮಾಜದ ಒಬ್ಬ ವ್ಯಕ್ತಿಗೆ ರಾಜಕೀಯ ಸ್ಥಾನಮಾನ (ಎಂ.ಎಲ್.ಸಿ.) ನೀಡಬೇಕೆಂದು ವಿನಂತಿಸಿಕೊಂಡರು. ಆಗ ವೀರೇಂದ್ರ ಪಾಟೀಲರು "ಬೆಂಗಳೂರಿನಲ್ಲಿ ನಿಮ್ಮ ಸಮಾಜದ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳು ಇವರಿಗೆ, ಅವರಿಗೆ ನಾಮಿನೇಷನ್ ಮಾಡಿ ಎಂದು ಅನೇಕ ಮನವಿಗಳು ಬಂದಿವೆ. ನಾನು ಯಾರಿಗೆ ಕೊಡುವುದು, ಯಾರಿಗೆ ಬಿಡುವುದು ಎಂಬ ಗೊಂದಲ ಉಂಟಾಗಿದೆ. ಆದ ಪ್ರಯುಕ್ತ ತಾವೆಲ್ಲರೂ ಸೇರಿ ಒಂದು ಸಂಸ್ಥೆಯಡಿಯಲ್ಲಿ ಒಗ್ಗಟ್ಟಾಗಿ ಬನ್ನಿ"[೧೦] ಎಂಬ ಭರವಸೆ ನೀಡಿದರು. ಆಗಲೂ ಸರ್ವಸಮ್ಮತ ನಿರ್ಧಾರ ಆಗಲಿಲ್ಲ. ಇಂದಿಗೂ ಆ ಪ್ರಶ್ನೆ ಬಗೆಹರಿದಿಲ್ಲವೆಂಬುದು ವಿಷಾದ ಪಡುವ ಸಂಗತಿಯಾಗಿದೆ.

ಇತ್ತೀಚೆಗೆ ಬೆಂಗಳೂರಿನ ಹೆಸರಾಂತ ಚಿನ್ನ, ಬೆಳ್ಳಿ ವರ್ತಕರಾದ ಕೆ.ಪಿ.ನಂಜುಂಡಿ, ಶ್ರೀ ಶೇಖರ ಸುಜ್ಞಾನಮೂರ್ತಿ ಸ್ವಾಮಿ ಮೊದಲಾದವರು ರಾಜ್ಯಾದ್ಯಂತ ವಿಶ್ವಕರ್ಮ ಸಮಾಜ ಸಂಘಟನೆ ಮಾಡಬೇಕೆಂದು ಭಾವಿಸಿ ರಾಜಕೀಯದಲ್ಲಿ ಮುಂದಾಗಬೇಕೆಂದು ಪ್ರತಿ ಜಿಲ್ಲಾ, ತಾಲೂಕು ಮತ್ತು ಮುಖ್ಯ ನಗರಗಳಲ್ಲಿ ವಿಶ್ವಕರ್ಮ ಸಮ್ಮೇಳನ ನಡೆದವು. ಹೀಗಿದ್ದೂ ರಾಜಕೀಯವಾಗಿ ಏನೂ ಸಾಧನೆ ಸಾಧ್ಯವಾಗಿಲ್ಲವೆಂಬ ಕೊರಗು ಸಮಾಜ ಬಾಂಧವರನ್ನು ಕಾಡುತ್ತಿದೆ. ಅದಕ್ಕಾಗಿ ಶ್ರೀ ಕೆ.ಆರ್. ದತ್ತಾತ್ರಿ ಅವರು 'ರಾಜಕೀಯದಲ್ಲಿ ವಿಶ್ವಕರ್ಮ ಸಮಾಜ ಅಂದು–ಇಂದು–ಮುಂದು'[೧೧] ಎಂಬ ಲೇಖನ ಬರೆದು ಎಚ್ಚರಿಸಿರುವುದು ಸಕಾಲಿಕವಾಗಿದೆ.

ಕೆ.ಪಿ. ನಂಜಂಡಿ ಅವರು ಹೀಗೆ ಸಮಾವೇಶ-ಸಮ್ಮೇಳನಗಳನ್ನು ಆಯೋಜಿಸಿದ ಮಾತ್ರಕ್ಕೆ ನಮ್ಮ ಸಮಾಜ ಬಾಂಧವರು ರಾಜಕೀಯದಲ್ಲಿ ಮುನ್ನಡೆ ಸಾಧಿಸಲು ಸಾಧ್ಯವಿಲ್ಲ ಎಂಬ ಅರಿವು ಈ ಸಮಾಜದ ಮುಖಂಡರಿಗೆ ಇದೆ. ಈ ಕುರಿತು ಚಿಂತನ ಪತ್ರಿಕೆಯಲ್ಲಿ ಹಿರಣ್ಯ ಎಂಬುವರು 'ರಾಜಕೀಯದಲ್ಲಿ ವಿಶ್ವಕರ್ಮರು' ಎಂಬ ಲೇಖನ ಬರೆದು, ತಾವು ಸಾಗಬೇಕಾದ ದಾರಿಯನ್ನು ಕುರಿತು ಹೀಗೆ ವಿವರಿಸುತ್ತಾರೆ:

"ಇಷ್ಟಕ್ಕೂ ವಿಶ್ವಕರ್ಮ ಸಮುದಾಯದವರಿಗೆ ಪ್ರಾತಿನಿಧ್ಯ ಸಿಗಬೇಕು. ಸಮಾಜದ ಮಂದಿ ವಿಧಾನ ಸಭೆಯಲ್ಲಿರಬೇಕು ಎಂದು ಪ್ರತಿಪಾದಿಸುವ, ಅದಕ್ಕಾಗಿ ಸಮಾವೇಶಗಳ ಮೂಲಕ ಜಾಗೃತಿ ಮೂಡಿಸುವ ಸಂಘಟನೆಗಳು, ಸಾಮಾಜಿಕರು ಸ್ಥಳೀಯವಾಗಿ ಸ್ಪರ್ಧಿಸಿದಾಗ ಅಂತಹವರಿಗೆ ಸಂಪನ್ಮೂಲ ಶಕ್ತಿ ತುಂಬಿಸುವ, ಕಾರ್ಯಕರ್ತರಾಗಿ ಜೋಡಿಸಿಕೊಂಡು ದುಡಿಯುವ, ಸಂಘಶಕ್ತಿ ಮೆರೆಸುವ ಸಂಘಟನೆಗಳು, ಸಾಮಾಜಿಕರು ಎಷ್ಟಿರುವರು ಎಂದು ಇತ್ತೀಚೆಗೆ ಜರುಗಿದ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ ಎದುರಿಸಿದವರಿಗೆ ವೇದ್ಯವಾಗದಿರದು. ಹಾಗಾಗಿ ಚುನಾವಣೆ ಎದುರಿಸಿ ವಿಧಾನಸಭೆ ಪ್ರವೇಶಿಸುವ ಮಾತಿರಲಿ, ಕನಿಷ್ಠ ಗ್ರಾಮ ಪಂಚಾಯತಿ, ಪಟ್ಟಣ ಪಂಚಾಯತಿ, ಪುರಸಭೆ, ನಗರಸಭೆ, ಮಹಾನಗರ ಪಾಲಿಕೆಯನ್ನು ಪ್ರವೇಶಿಸುವಷ್ಟಕ್ಕಾದರೂ ಜನ-ಧನ ಬಲದ ಸಹಕಾರದ ಶ್ರೀರಕ್ಷೆ ಸಿಗದಿದ್ದಲ್ಲಿ ಸಮಾವೇಶದ ಸಾರ್ಥಕ್ಯವೇನು ಎಂಬ ಪ್ರಶ್ನೆ ಹಲವರನ್ನು ಕಾಡಬಹುದು. ಸ್ಥಳೀಯವಾಗಿ ಗುರುತಿಸಿಕೊಂಡು, ಸಾಮಾಜಿಕವಾಗಿ, ರಾಜಕೀಯವಾಗಿ, ಔದ್ಯಮಿಕ ಶಿಕ್ಷಣ-ಸಹಕಾರಿ ಕ್ಷೇತ್ರದಲ್ಲಿ ಪ್ರಭಾವಿಯಾಗಿ ಬೆಳೆದು ಸಂಪರ್ಕಜಾಲ, ಸಂಘಟನಾ ಸಾಮರ್ಥ್ಯ, ಸಂಚಲನಾ ಶ್ರಮ, ಸನ್ನುಡಿ, ಸನ್ನತೆ ಹಾಗೂ ಸಾಮರಸ್ಯ ಜೀವನ ಭರಿತ ವ್ಯಕ್ತಿ ತಾಜಕೀಯ ಪಕ್ಷದಿಂದ ಆಹ್ವಾನಿಸಲ್ಪಡುವಷ್ಟು ಉತ್ತುಂಗಕ್ಕೆ ಬೆಳೆದ, ಬೆಳೆಯುವ ಸಾಮಾಜಿಕರು ವಿಶ್ವಕರ್ಮ ಸಮಾಜದವರಾಗಬೇಕು".[೧೨]

ಕರ್ನಾಟಕದ ವಿಶ್ವಕರ್ಮ ಸಮಾಜದವರು ಒಗ್ಗಟ್ಟಿನ ಮಂತ್ರವನ್ನು ಜಪಿಸಿದರೆ, ರಾಜಕೀಯವಾಗಿ ಪ್ರಬಲರಾಗಿ ಬೆಳೆಯುವ ಎಲ್ಲ ಸಾಧ್ಯತೆಗಳಿದ್ದವು. ಹಾವನೂರು ಆಯೋಗದ ಶಿಫಾರಸ್ಸಿನ ಅನ್ವಯ ವಿಶ್ವಕರ್ಮ ಜನಾಂಗ ಹಿಂದುಳಿದ ವರ್ಗದಲ್ಲಿ ಸೇರ್ಪಡೆಗೊಂಡು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪ್ರಗತಿಯ ಸಾಧ್ಯತೆಗಳು ದೊರಕಿದಾಗ ಕೆಲವರು ಸಮಾಜ ಸರ್ವತೋಮುಖ ಪ್ರಗತಿ ಸಾಧಿಸುತ್ತದೆಂದು ಕನಸು ಕಂಡರು. ಆದರೆ ಹೆಚ್ಚೇನೂ ಸಾಧಿಸಲ್ಪಡಲಿಲ್ಲ. ಹಾಗೆಯೇ ಕರಾವಳಿಯ ವಿಶ್ವಕರ್ಮರು ತಮ್ಮ ಗುರುಪೀಠವು ಅಭಿವೃದ್ಧಿಯಾದರೆ ಬ್ರಾಹ್ಮಣ್ಯ ಗುರುತಿಸಲ್ಪಡುತ್ತದೆ ಹಾಗೂ ಸಮಾಜದ ಸರ್ವಾಂಗೀಣ ಅಭಿವೃದ್ಧಿ ಸಾಧ್ಯವೆಂದು ಕನಸು ಕಂಡರು. ಆದರೆ ಹೆಚ್ಚಿನ ಸಾಧನೆ ಆದ ಹಾಗೆ ಕಾಣುತ್ತಿಲ್ಲ. ವಿಶ್ವಕರ್ಮ ಸಮಾಜಕ್ಕೆ ರಾಜಕೀಯ ಸ್ಥಾನಮಾನಗಳು ಸಿಗಬೇಕೆಂಬ ಆಶಯದಿಂದ ಬೃಹತ್ ವಿಶ್ವಕರ್ಮ ಸಮ್ಮೇಳನ ಆಯೋಜಿಲ್ಪಟ್ಟಿತು. ಮುಖ್ಯಮಂತ್ರಿಗಳು ಖುದ್ದಾಗಿ ಬಂದು ಭರವಸೆ ಕೊಟ್ಟರು. ಆದರೆ ಅದು ಕೂಡ ಈಡೇರಲಿಲ್ಲ ಎಂಬ ಕೊರಗು ಸಮಾಜದವರನ್ನು

ಕಾಡಿದೆ. ಅದಕ್ಕಾಗಿ ಸಿದ್ಧರಾಮಯ್ಯ ಮುಖ್ಯಮಂತ್ರಿಯಾದ ಸಂದರ್ಭದಲ್ಲಿ ಅವರನ್ನು ಭೇಟಿಯಾಗಿ ವಿಶ್ವಕರ್ಮ ಸಮಾಜಕ್ಕೊಂದು ನಿಗಮ ಮಂಡಳಿ ಸ್ಥಾಪಿಸಲು ಮನವಿ ಮಾಡಿಕೊಂಡರು. ಮುಖ್ಯಮಂತ್ರಿ ಸಿದ್ಧರಾಮಯ್ಯ ಅವರು ಒಂದು ನಿಗಮ ಮಂಡಳಿಯನ್ನು ಸ್ಥಾಪಿಸಲು ಅನುಮೋದಿಸಿದರು. ಹೀಗಿದ್ದೂ ಸಮಾಜದ ಒಬ್ಬ ವ್ಯಕ್ತಿಯಾದರೂ ಶಾಸಕ, ವಿಧಾನ ಪರಿಷತ್ ಸದಸ್ಯ ಆಗಬೇಕೆಂಬ ವಿಶ್ವಕರ್ಮ ಸಮಾಜದ ಕೂಗು ಇನ್ನೂ ಕೂಗಾಗಿಯೇ ಉಳಿದಿದೆ. ಅದಕ್ಕಾಗಿ ಕೆ.ಪಿ. ನಂಜುಂಡಿ ಅವರ ಮೇಲೆ ನಂಬಿಕೆ ಇಟ್ಟ ಸಮಾಜ ಬಾಂಧವರು ಪತ್ರಿಕೆಗಳ ಮೂಲಕ ಅವರಿಗೆ ಶುಭ ಹಾರೈಸಿದ್ದಾರೆ. ಈ ಕುರಿತು ಸಹಚಿಂತನ ಸಂಪಾದಕರು ಹೀಗೆ ಬರೆಯುತ್ತಾರೆ:

"ವಿಶ್ವಕರ್ಮ ಸಮುದಾಯದ ನಂಜುಂಡಿಯವರು ಕಾಂಗ್ರೆಸ್ ಪಕ್ಷದಲ್ಲಿ ಪ್ರಭಾವಿ. ಅವರು ಮುಖ್ಯಮಂತ್ರಿಯವರಿಗೆ ಆಪ್ತರು. ನಂಜುಂಡಿಯವರು ತನ್ನ ಕಾರ್ಯವೈಖರಿಯನ್ನು ಪ್ರಜಾಪ್ರಭುತ್ವ ಮಾದರಿಯಲ್ಲಿ ರೂಢಿಸಿಕೊಂಡರೆ ಹೆಚ್ಚು ಸಮಾಜಸ್ನೇಹಿ ಆಗಬಹುದು. ಈ ಹಂತದಲ್ಲಿ ವಿಶ್ವಕರ್ಮ ಸಮುದಾಯದವರು ಹೆಚ್ಚು ಜಾಗೃತೆಯಿಂದ ಕೆಲಸ ಮಾಡಿಸಿಕೊಳ್ಳಬೇಕು. ನಮ್ಮಲ್ಲಿನ ಅಭಿಪ್ರಾಯ ಭೇದಗಳನ್ನು ಮರೆತು, ಜನಾಂಗದ ಕ್ಷೇಮಚಿಂತನೆ ಮಾಡಬೇಕು. ನಿಗಮದ ರೂಪರೇಷೆಗಳು ಸರಿಯಾಗಿ ಮೂಡಿಬರಬೇಕು. ಪಾರಂಪರಿಕ ಕಸುಬುಗಳ ಅಭಿವೃದ್ಧಿಗೆ ಕ್ರಿಯಾ ಯೋಜನೆ ಸಿದ್ಧಪಡಿಸಬೇಕು. ಡಾ. ಜ್ಞಾನಾನಂದ, ಡಾ. ಚಂದ್ರಶೇಖರ ಕಂಬಾರ, ಶಿವಣ್ಣ ಬಡಿಗೇರ, ಪಿ.ಬಿ.ಬಡಿಗೇರ, ಚಂದ್ರಕಾಂತ ಸೋನಾರ್, ನಿರಂಜನಮೂರ್ತಿ, ಬಿ.ಉಮೇಶ, ಎಲ್.ನಾಗರಾಜ, ವಿಠ್ಠಲ ಆಚಾರ್ಯ, ಜಿ.ರಾಮಕೃಷ್ಣ ಆಚಾರ್ಯ ಮೊದಲಾದ ಸಮಾಜ ಬಂಧುಗಳು ಒಟ್ಟಾಗಿ ಕೆಲಸ ಮಾಡಬೇಕಾದ ಅನಿವಾರ್ಯತೆ ನಮ್ಮ ಮುಂದಿದೆ".[೧೩]

ದಿನಾಂಕ ೫-೨-೨೦೧೨ರಂದು ಅವಿಭಜತ ದಕ್ಷಿಣ ಕನ್ನಡ ಜಿಲ್ಲೆಯಿಂದ ಒಂದು ಲಕ್ಷಕ್ಕೂ ಮೀರಿದ ಸಂಖ್ಯೆಯಲ್ಲಿ ಕೂಡಿದ ಜನರ ಮಧ್ಯೆ ವಿಶ್ವಕರ್ಮ ಸಮ್ಮೇಳನ ಅತ್ಯಂತ ಅದ್ದೂರಿಯಾಗಿ ಜರುಗಿತು. ಈ ಸಂದರ್ಭದಲ್ಲಿ ರಾಜಕೀಯ ಸ್ಥಾನಮಾನ ಗಳಿಕೆಗೆ ಪರಾಮರ್ಶೆಯೊಂದಿಗೆ ವಸ್ತುಸ್ಥಿತಿಯ ಅವಲೋಕನ ಮಾಡುವ ಉಪನ್ಯಾಸಗಳು ಜರುಗಿದವು. ಈ ಸಮ್ಮೇಳನದ ರಾಜಕೀಯ ಉದ್ದೇಶಗಳ ಕುರಿತು ಸಹಚಿಂತನ ಪತ್ರಿಕೆ ಹೀಗೆ ವರದಿ ಮಾಡಿದೆ.

"ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿ ಹಳ್ಳಿ ಮತ್ತು ನಗರಗಳಲ್ಲಿ ಎರಡು ಲಕ್ಷಕ್ಕೂ ಮೀರಿ, ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳನ್ನೊಳಗೊಂಡು ಸುಮಾರು ೩೮ ಲಕ್ಷವನ್ನೂ ಮಿಕ್ಕಿ, ದೇಶದ ಎಲ್ಲಾ ರಾಜ್ಯಗಳನ್ನೊಳಗೊಂಡು ಅಂದಾಜು ೬ ಕೋಟಿಗಿಂತಲೂ ಅಧಿಕ ವಿಶ್ವಬ್ರಾಹ್ಮಣರ ಜನಬಲವಿದ್ದರೂ ಲೋಕಸಭೆ, ರಾಜ್ಯಸಭೆ, ವಿಧಾನಸಭೆ, ವಿಧಾನ ಪರಿಷತ್ತುಗಳಲ್ಲಿ ವಿಶ್ವಬ್ರಾಹ್ಮಣ ಸಮುದಾಯಕ್ಕೆ ಪ್ರಾತಿನಿಧ್ಯವಿರುವುದು ತೀರಾ ಅತ್ಯಲ್ಪ ಮಾತ್ರವಲ್ಲ; ಕರ್ನಾಟಕ ರಾಜ್ಯದಲ್ಲಿ 'ಶೂನ್ಯ'ವೆಂಬ ಕೊರಗು ಸಮುದಾಯದ್ದು. ಸರ್ವ ಕ್ಷೇತ್ರಗಳಲ್ಲಿ ಸರ್ವರಿಗೂ ಸಕಲ ಆಗು ಹೋಗುಗಳಿಗೆ ಅನಿವಾರ್ಯವಾಗಿ ಬೇಕಾಗುವ ವಿಶ್ವಬ್ರಾಹ್ಮಣರ ಪಂಚಶಿಲ್ಪಗಳ ಉಪಯುಕ್ತತೆಗಳ

ಪರಿಜ್ಞಾನವಿದ್ದರೂ, ಸಮರ್ಥತೆ ಸಾಧನೆಗಳಲ್ಲಿ ಪ್ರತಿಭಾವಂತರೆನಿಸಿದ್ದರೂ, ದೇಶದ ಕೀರ್ತಿಯನ್ನು ದಾರು ಮತ್ತು ಶಿಲಾಶಿಲ್ಪದ ಪ್ರೌಢಿಮೆಯ ಮೂಲಕ ವಿಶ್ವಕ್ಕೆ ಪಸರಿಸಿದ ಜನಾಂಗವಿದಾದರೂ ರಾಜಕೀಯ ಪಕ್ಷಗಳು ಉಮೇದುವಾರರ ಆಯ್ಕೆಯ ಸಂದರ್ಭಗಳಲ್ಲಿ ವಿಶ್ವಬ್ರಾಹ್ಮಣರನ್ನು ಕಡೆಗಣಿಸಿರುವುದನ್ನು ಕಳೆದ ೨-೩ ದಶಕಗಳಿಂದ ಸಮಾಜ ಮನಗಂಡಿದೆ. ಸಮಾಜದ ಸಂಕಷ್ಟಗಳನ್ನು ಸರಕಾರಕ್ಕೆ ನೇರ ತಲುಪಿಸುವರೆ ಪ್ರಾತಿನಿಧ್ಯವೇ ಇಲ್ಲದ ದುಃಸ್ಥಿತಿಗೆ ಈ ಮನೋಭಾವವೇ ಕಾರಣವೆಂಬುದು ಮರುಕವನ್ನುಂಟು ಮಾಡಿರುವ ಹಿನ್ನೆಲೆಯಲ್ಲಿ ಸಮ್ಮೇಳನವು ತೀವ್ರ ಚಿಂತನೆಯೊಂದಿಗೆ ತನ್ನ ಮುಂದಿನ ಹಾದಿನ ನಿರ್ಣಯ ತೆಗೆಯಲಿದೆ. ಕರ್ನಾಟಕ ವಿಧಾನ ಪರಿಷತ್ತಿನಲ್ಲೂ ಪ್ರತಿನಿಧಿ ಸ್ಥಾನಗಳಿಸುವರೆಗೆ ತೀವ್ರ ಹೋರಾಟದ ಗುರಿ ಸಮ್ಮೇಳನದ್ದು".[೧೪]

ವಿಶ್ವಕರ್ಮ ಸಮಾಜದಿಂದ ಒಬ್ಬ ವ್ಯಕ್ತಿಯಾದರೂ ಎಂ.ಎಲ್.ಎ, ಸಂಸದರು, ಸಚಿವರಾಗಬೇಕೆಂಬುದು ಸಮಾಜ ಬಾಂಧವರ ಬಹಳ ದಿನದ ಕನಸು. 'ವಿಶ್ವಕರ್ಮ ನಿಗಮ' ಸ್ಥಾಪನೆಯಾದ ಸಂದರ್ಭದಲ್ಲಿ 'ವಿಶ್ವಕರ್ಮ ನಿಗಮ ಸ್ಥಾಪನೆ ಬಹುಕಾಲದ ಬೇಡಿಕೆ' ಎಂಬ ಲೇಖನ ಬರೆದ ಪಿ. ದಿನೇಶ ಕುಮಾರ ಅವರು ಈ ಸಮಾಜದ ಸಾಂಸ್ಕೃತಿಕ ಅಧ್ಯಯನಕ್ಕಾಗಿ ಕರ್ನಾಟಕದಲ್ಲಿರುವ ೧೮ ವಿಶ್ವವಿದ್ಯಾಲಯಗಳ ಪೈಕಿ ಒಂದೆರಡು ವಿಶ್ವವಿದ್ಯಾಲಯಗಳಲ್ಲಿ 'ವಿಶ್ವಕರ್ಮ ಅಧ್ಯಯನ ಪೀಠ' ಸ್ಥಾಪನೆಯಾಗಬೇಕೆಂದು ಒತ್ತಾಯಿಸುತ್ತಾರೆ. "ವಿಶ್ವಕರ್ಮ ಅಧ್ಯಯನ ಪೀಠ ವಿಶ್ವವಿದ್ಯಾಲಯದಲ್ಲಿ ಸ್ಥಾಪನೆಯಾದರೆ ವಿಶ್ವಕರ್ಮ ಸಮುದಾಯದ ಬಗ್ಗೆ ವೈಜ್ಞಾನಿಕ ಅಧ್ಯಯನ ನಡೆದು ವಿಶ್ವಕರ್ಮರ ಪ್ರತಿಭೆ, ಸಂಸ್ಕೃತಿ ಬೆಳಕಿಗೆ ಬರಲು ಸಾಧ್ಯವಾಗುತ್ತದೆ".[೧೫] ಎಂದು ಆಶಿಸಿದ್ದಾರೆ.

"ಭರತಖಂಡದ ಸ್ವಾತಂತ್ರ್ಯ ಸಾಧನೆಯಲ್ಲಿ ಭರತಖಂಡವನ್ನು ಹಿಂದುಸ್ಥಾನ ಪಾಕೀಸ್ಥಾನಗಳೆಂದು ಎರಡಾಗಿ ಒಡೆದುದು ಬ್ರಟಿಷರು ಅಲ್ಪಸಂಖ್ಯಾತರಲ್ಲಿ ಜಾತೀಯತೆಯನ್ನು ನೆಟ್ಟಿ ಬೆಳೆಸಿದುದರ ಫಲವೆಂದು ಈಗಲೂ ಮಹಾಮಹಾ ನಾಯಕರು ಹೇಳುತ್ತಿರುವುದು ರೂಢಿಯಲ್ಲಿದೆ. ಈ ಎರಡು ದೇಶಗಳಲ್ಲಿಯೂ ಅಲ್ಪಸಂಖ್ಯಾತ ಸಮಸ್ಯೆ ಇದ್ದೇ ಇದೆ. ಪಾಕೀಸ್ಥಾನವು ಮುಸ್ಲಿಮೇತರರನ್ನು ಹೇಗೋ ಹೊರಕ್ಕೆ ದೂಡಿ ಅಲ್ಪಸಂಖ್ಯಾತ ಸಮಸ್ಯೆಯನ್ನು ನಿವಾರಿಸಿಕೊಂಡಿದೆ. ಭಾರತದಲ್ಲಿಯಾದರೋ ಬಹುಸಂಖ್ಯಾತರಾದ ಹಿಂದುಗಳು ಅಲ್ಪಸಂಖ್ಯಾತರಾದ ಮುಸ್ಲಿಂ, ಸಿಕ್, ಕ್ರಿಸ್ತಿ ಜನ ಗುಂಪುಗಳಿಗೆ ಅವರ ನ್ಯಾಯವಾದ ಹಕ್ಕು ಬಾಧ್ಯತೆಗಳನ್ನುಳಿಸಿ, ಎಲ್ಲರೂ ಎಲ್ಲಾ ಅವಕಾಶಗಳಿಗೂ ಸಮಾನರು ಎಂದು ರಾಜ್ಯಾಂಗದಲ್ಲಿ ನಿರೂಪಿಸಿದೆ. ರಾಜ್ಯ ಪಾಲನೆ ಮಾಡುತ್ತಿದೆ".[೧೬] ಈ ವಿಚಾರವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇಂದು ನಮ್ಮ ದೇಶದಲ್ಲಿಯ ರಾಜಕೀಯವಾದ ಚುನಾವಣೆಗಳಲ್ಲಿ ನಮ್ಮ ಮಹಾನಾಯಕರುಗಳು ಧರ್ಮ ಮತ್ತು ಜಾತಿಗಳ ಆಧಾರದ ಮತಗಳನ್ನು ಕೇಳುತ್ತಿರುವವುದು ನೋಡಿದರೆ, ನಮ್ಮ ಪ್ರಜಾಪ್ರಭುತ್ವವನ್ನು ಪುನಃ ಅರಿತುಕೊಳ್ಳುವ ಸಮಯ ಬಂದಿದೆ.

ಸ್ವಾತಂತ್ರ್ಯ ನಂತರ ನಮ್ಮ ದೇಶದ, ರಾಜ್ಯದ, ಹಾಗೂ ಪ್ರಾದೇಶಿಕ ಪರಿಸರದಲ್ಲಿ ನಡೆಯುವ ರಾಜಕೀಯ ಚಿಂತನೆಗಳು ಭಿನ್ನವಾಗಿವೆ. ಭಾರತದಲ್ಲಿ "ಈ ಜಾತೀಯತೆಯು ಇಂದು ನಿನ್ನೆಯದಲ್ಲ. ಬ್ರಿಟಿಷರು ಮಾಡಿಟ್ಟುದಲ್ಲ. ಮುಸ್ಲಿಮರು ಬಂದುದರಿಂದ ಇದು ಹೆಚ್ಚಿಲ್ಲ, ಅದಕ್ಕಿಂತ ಹಿಂದೆ ಸಹಸ್ರಾರು ವರ್ಷಗಳಿಂದ ಹಿಂದೂಗಳಲ್ಲಿ ಬೇರುಬಿಟ್ಟು ಬೆಳೆದ ಬಂದಿರುವ ವಿಷವೃಕ್ಷ. ಇದನ್ನು ನಾಶಮಾಡಬೇಕಾದರೆ ಎಲ್ಲಾ ಹಿಂದೂಪಂಗಡಗಳಿಗೂ ನ್ಯಾಯವಾದ ಸಮಾನ ಸ್ಥಾನ ಸಿಗುವಂತಾಗಬೇಕು.ಅಥವಾ ಜಾತಿ ಶಬ್ದವೇ ಇಲ್ಲದಂತೆ ವಿವಾಹ ಸಂಬಂಧಗಳಿಂದ ಐಕ್ಯಗೊಂಡ ಒಂದೇ ಜನಾಂಗವಾಗಬೇಕು. ರಾಷ್ಟ್ರನಾಯಕರೂ ಶಾಸನಸಭಾ ಸದಸ್ಯರೂ ಮತದಾರರೂ ಇದನ್ನು ಆಲೋಚಿಸುವರೇ?"[೧೭] ಈ ಸಂಗತಿಯೂ ರಾಜಕೀಯದಲ್ಲಿ ಸಮಾನತೆಯ ಸಂಕೇತವಾಗಿದೆ. ಒಟ್ಟಿನಲ್ಲಿ ಸಮಾಜ ಉದ್ಧಾರವಾಗಬೇಕಾದರೆ ರಾಜಕೀಯ ಪ್ರಾತಿನಿಧ್ಯದ ಅವಶ್ಯಕತೆ ಇದೆ ಎಂಬುದನ್ನು ಪತ್ರಿಕೆಗಳು ಎತ್ತಿ ತೋರಿಸಿವೆ.

**೪.೪. ಸಾಂಸ್ಕೃತಿಕ ಆಯಾಮ :**

ವಿಶ್ವಕರ್ಮ ಸಮಾಜವು ಅತ್ಯಂತ ಪ್ರಾಚೀನವಾದ ಇತಿಹಾಸ ಸಂಸ್ಕೃತಿಯನ್ನು ಹೊಂದಿದೆ. ಭಾರತೀಯ ಅಥವಾ ಕರ್ನಾಟಕ ಸಂಸ್ಕೃತಿ ಎಂದರೆ ಅದು ಶಿಲ್ಪಸಂಸ್ಕೃತಿ. ಶಿಲ್ಪಸಂಸ್ಕೃತಿ ಎಂದರೆ ಕೇವಲ ಶಿಲಾಶಿಲ್ಪ ಮಾತ್ರವಲ್ಲ, ಎಲ್ಲಾ ಧಾತುಗಳಲ್ಲಿ ಎಲ್ಲಾ ರೀತಿಯ ಆಕೃತಿಗಳನ್ನು ನಿರ್ಮಾಣ ಮಾಡುವುದು. ಶಿಲ್ಪ ಸಂಸ್ಕೃತಿಯನ್ನು ಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನವೆಂದು ವೇದಾಗಮಗಳು ಭಗವದ್ಗೀತೆ ಹೇಳಿದೆ.

ಜ್ಞಾನ ವಿಜ್ಞಾನ ತೃಪ್ತಾತ್ಮಾಕೂಟಸ್ಥೋ ವಿಜಿತೇಂದ್ರೀಯ:
ಯುಕ್ತ ಇತ್ಯುಚ್ಯತೆ ಯೋಗಿ ಸಮತೋಷ್ಠಾಸ್ಮಕಾಂಚನಃ॥

ಅಂದರೆ ಜ್ಞಾನ ವಿಜ್ಞಾನಗಳಿಂದ ಆವೃತ್ತನಾದವನು ತೃಪ್ತನಾದವನು ಅವನೇ ಶಿಲ್ಪಿ. ಅಮರಕೋಶವು ಶಿಲ್ಪಿವನ್ನು ವಿಜ್ಞಾನವೆಂದು ಹೇಳುತ್ತದೆ. ವಿಶ್ವಕರ್ಮನು ಆತ್ಮ ಸಂಸ್ಕೃತಿಯ ಪ್ರತೀಕ. ಆತ್ಮ ಸಂಸ್ಕೃತಿಯ ಪ್ರತೀಕವಾದ ಶಿಲ್ಪಿಗಳ ಆರಾಧನೆಯಿಂದ ಆರಾಧಕ, ತನ್ನನ್ನು ತಾನು ಸಂಸ್ಕಾರ ಮಾಡಿಕೊಳ್ಳಬೇಕೆಂದು ಐತ್ಯರ ಬ್ರಾಹ್ಮಣದಲ್ಲಿ ಹೇಳಲಾಗಿದೆ. ಅಂದರೆ ವಿಶ್ವಕರ್ಮ ಸಂಸ್ಕೃತಿ ಎನ್ನುವುದು ಲೋಕ ಸಂಸ್ಕೃತಿಯಾಗಿದೆ. ಲೋಕದ ಜ್ಞಾನ ಮತ್ತು ಕರ್ಮ ಮಾರ್ಗಗಳನ್ನು ಆಗು ಮಾಡುತ್ತಾ, ಆಯಾ ಮತ ಮತ್ತು ವೃತ್ತಿಯವರು ತಮ್ಮ ತಮ್ಮ ಕೆಲಸಗಳ ಮೂಲಕ ತಮ್ಮ ಬದುಕಿನ ಕ್ರಮಗಳನ್ನು ರೂಪಿಸಿಕೊಳ್ಳಲು ಪ್ರೇರಕವಾದ ಜೀವಪರತತ್ವ ಈ ತತ್ವವನ್ನು ಶಿಲ್ಪಿಗಳ ಮೂಲಕ, ಸಂತರ ಬೋಧನೆಗಳ ಮೂಲಕ, ಅನುಭಾವಿಗಳ ಮೂಲಕ, ಸಿದ್ಧಿಪುರುಷರ ಮೂಲಕ, ವಿವಿಧ ಬಗೆಯ ಲಲಿತಕಲೆಗಳ ಮೂಲಕ ಬೋಧನೆ ಮಾಡುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ. ವಿಶ್ವಕರ್ಮ ಪತ್ರಿಕೆಗಳು ಇಂತಹ ಮಹಾನ್ ನಾಗರಿಕ ಸಂಸ್ಕೃತಿಯ ವೈಭವ

ಮತ್ತು ಅದರ ಅಧಪತನ ಕಾರಣಗಳನ್ನು ನಿರ್ಭಿಡೆಯಿಂದ ಹೇಳಿದ್ದನ್ನು ಈ ಅಧ್ಯಾಯದಲ್ಲಿ ಗಮನಿಸಿದ್ದೇನೆ.

ಬ್ರಿಟಿಷರ ಆಳಿಕೆ ಕಾರಣವಾಗಿ ಶೋಷಣೆ–ತುಳಿತಕ್ಕೆ ಒಳಗಾಗಿದ್ದ ಈ ಸಮಾಜವು ಸ್ವಾತಂತ್ರ್ಯಾನಂತರ ಮತ್ತೆ ಮೈಕೊಡವಿಕೊಂಡು ಎದ್ದಿತು. ದೇಶದ ಒಟ್ಟು ಸಾಂಸ್ಕೃತಿಕ ಕ್ಷೇತ್ರಕ್ಕೆ ವಿಶ್ವಕರ್ಮರ ಕಾಣಿಕೆ ಅಪಾರವೂ ಅನುಪಮವೂ ಆಗಿದೆ. ಒಳ್ಳೆಯ ಗುಣಗಳು ಬುದ್ಧಿವಂತಿಕೆ ಪ್ರತಿಭೆ ಪಾಂಡಿತ್ಯ ಇವೆಲ್ಲವೂ ಅಜ್ಜನಿಂದ ಮಗ, ಮಗನಿಂದ ಮೊಮ್ಮಗನಿಗೆ ಹುಟ್ಟಿನಿಂದಲೇ ರಕ್ತಗತವಾಗಿ ಬರುತ್ತವೆ. ವಿಶೇಷ ಬುದ್ಧಿವಂತಿಕೆಯನ್ನು ಪ್ರತಿಭೆ ಎನ್ನುತ್ತಾರೆ. ತಮ್ಮಲ್ಲಿರುವ ವಿಶೇಷವಾದ ಪ್ರತಿಭೆಯನ್ನು ಬೆಳೆಸಿಕೊಂಡು ಪ್ರಸಿದ್ಧರಾಗಿ ಸಾಂಸ್ಕೃತಿಕ ನಾಯಕತ್ವದ ರೂವಾರಿಗಳಾದ ಕೆಲವರ ಹೆಸರುಗಳನ್ನು ಕೆಳಗೆ ಉಲ್ಲೇಖಿಸಿದ್ದೇನೆ.

ವಿಶ್ವಕರ್ಮ ಬ್ರಾಹ್ಮಣ ಕುಲ 'ಶಿಲ್ಪಿಗಳ ಕುಲ' ಎಂದೇ ಹೆಸರನ್ನು ಪಡೆದಿತ್ತು. ಈ ಕುಲದ ಶಿಲ್ಪಿಗಳಲ್ಲಿ ರಾಜಗುರು, ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಶಿಲ್ಪಸಿದ್ಧಾಂತಿ ಶ್ರೀ ಮಹಾದೇವ ಸ್ವಾಮಿಗಳು, ರಾಷ್ಟ್ರಪ್ರಶಸ್ತಿ ವಿಜೇತ ಶಿಲ್ಪಿ ಶ್ರೀನಿವಾಸಾಚಾರ್ಯ, ವಿಧಾನಸೌಧದ ಕಲಶದ ಬೃಹತ್ ಸಿಂಹಗಳ ಲೋಹಶಿಲ್ಪಿ ಶಾಮಾಚಾರ್, ಅಂತರಾಷ್ಟ್ರೀಯ ಪ್ರಶಸ್ತಿ ವಿಜೇತ ಗಣಪತಿ ಸ್ಥಪತಿ, ಗೌರೀಶಂಕರ ಸ್ಥಪತಿ, ರಾಷ್ಟ್ರಪ್ರಶಸ್ತಿ ವಿಜೇತ ಶಿಲ್ಪಿ ಪರಮೇಶ್ವರಾಚಾರ್, ರಾಷ್ಟ್ರಪ್ರಶಸ್ತಿ ವಿಜೇತ ಶಿಲ್ಪಿ ವೆಂಕಟರಮಣ ಆಚಾರ್ಯ, ರಾಷ್ಟ್ರಪ್ರಶಸ್ತಿ ವಿಜೇತ ಶಿಲ್ಪಿ ಗಂಗಾಧರ ಆಚಾರ್ಯ, ಚೆನ್ನಾಚಾರ್, ಎನ್.ಕೆ. ಮೃತ್ಯುಂಜಯಾಚಾರ್ಯ, ರಾಷ್ಟ್ರಪ್ರಶಸ್ತಿ ವಿಜೇತ ರಥಕಾರ ಕೋಟೇಶ್ವರ ಲಕ್ಷ್ಮೀನಾರಾಯಣ ಆಚಾರ್ಯ, ರಾಜ್ಯಪ್ರಶಸ್ತಿ ವಿಜೇತ ಸುಬ್ಬಣ್ಣಾಚಾರ್ಯ, ಕಾರ್ಕಳದ ರಾಜ್ಯಪ್ರಶಸ್ತಿ ವಿಜೇತ ಶಿಲ್ಪಿ ಶ್ಯಾಮರಾಯ ಆಚಾರ್ಯ ಮೊದಲಾದವರು ವಿಶ್ವಕರ್ಮ ಸಮಾಜಕ್ಕೆ ಭೂಷಣಪ್ರಾಯರಾಗಿದ್ದಾರೆ.

ಚಿತ್ರಕಾರರಲ್ಲಿ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪದ್ಮಶ್ರೀ ಎಸ್.ಎನ್.ಸ್ವಾಮಿ, ಡಾ.ಎಸ್. ಎಂ. ಪಂಡಿತ್, ಎನ್. ಮರಿಶಾಮಾಚಾರ್, 'ಸುಧಾ' ಪತ್ರಿಕೆಯ ಚಂದ್ರನಾಥ್, ಮನೋಹರ್, ಕಾಳಿದಾಸ ಪತ್ತಾರ್; ಸಂಗೀತಗಾರರಲ್ಲಿ ಲಯವಾದ್ಯ ಧುರೀಣ, ಮೃದಂಗ ವಿದ್ವಾನ್ ಎಚ್. ಪುಟ್ಟಾಚಾರ್, ಮೃದಂಗ ಖಂಜೀರ ವಿದ್ವಾಣ್ ಎಚ್.ಪಿ. ರಾಮಾಚಾರ್ಯ, ಮೃದಂಗ ವಿದ್ವಾನ್ ಟಿ.ವಿ. ಭದ್ರಾಚಾರ್, ವಾಗ್ಗೇಯಕಾರ ಟಿ.ವಿ.ಮುತ್ತಾಚಾರ್ಯ, ಭಾಸ್ಕರಾಚಾರ್ಯ, ಎನ್.ಕೆ. ಸುಂದರಾಚಾರ್ಯ, ಪೂರ್ವಾಚಾರ್, ಕೆ.ಬಿ. ಹೈಮಾವತಮ್ಮ ಪ್ರಮುಖರು.

ಸಾಹಿತಿಗಳಲ್ಲಿ ಖ್ಯಾತ ಸಂಶೋಧಕ ಕೆ.ಜಿ.ಕುಂದಣಗಾರ, ಗಂಗಾಧರಮೂರ್ತಿಗಳು, ಬಿ.ಕಾ.ಸುಬ್ಬರಾಯಾಚಾರ್, ಡಾ.ಚಂದ್ರಶೇಖರ ಕಂಬಾರ, ಡಾ.ವಿರೂಪಾಕ್ಷ ಬಡಿಗೇರ, ಡಾ.ವೀರೇಶ ಬಡಿಗೇರ, ಡಾ.ಸಿ.ಆರ್. ಚಂದ್ರಶೇಖರ, ಎನ್.ಮರಿಶಾಮಾಚಾರ್, ನಾ.ಭಾ.ಚಂದ್ರಶೇಖರಾಚಾರ್ಯ, ವಿ.ಜಿ.ದೀಕ್ಷಿತ, ಡಾ.ಕೆ.ಪಿ. ಈರಣ್ಣ, ಜೀವಣ್ಣ ಮಸಳಿ, ಪಾಲ್ತಾಡಿ ರಾಮಕೃಷ್ಣ ಆಚಾರ್,

ಟಿ.ವಿ.ಮುತ್ತಾಚಾರ್ಯ, ಡಾ.ಜಿ. ಜ್ಞಾನಾನಂದ, ಕಾದಂಬರಿಗಾರ್ತಿ ಸರಿತಾ ಜ್ಞಾನಾನಂದ, ಕಾ.ವಾ.ಆಚಾರ್ಯ. ಅಭಿನಯ ರಂಗದಲ್ಲಿ ಎಂ.ಕೆ. ತ್ಯಾಗರಾಜ ಭಾಗವತರ್, ಪಿ.ಕನ್ನಂಬಾ, ಹಾಸ್ಯನಟ ಕೆ.ಎ.ತಂಗವೇಲು, ಮುರಾರಾಚಾರ್, ಚಲನಚಿತ್ರ ನಿರ್ದೇಶಕ ಟಿ.ಜನಾರ್ದನ, ಛಾಯಾಗ್ರಹಣ ನಿರ್ದೇಶಕ ಕೆ. ಮಲ್ಲಿಕ್, ನಟಿ ಎಂ.ವಿ. ರಾಜಮ್ಮ, ನಟಿ ಭವ್ಯಾ, ನಟ ಮೈಸೂರು ಲೋಕೇಶ, ನಟ ರಮೇಶ ಅರವಿಂದ, ಸಂಗೀತ ನಿರ್ದೇಶಕ ಹಂಸಲೇಖ; ಪತ್ರಕರ್ತರಲ್ಲಿ ಪ್ರಜಾವಾಣಿ ಪತ್ರಿಕೆಯಲ್ಲಿ ಸೇವೆ ಸಲ್ಲಿಸುತ್ತಿರುವ ಕೆ. ಶ್ರೀಧರ ಆಚಾರ್, ಗಣೇಶ ಕಾಸರಗೋಡು, ನಾಗರಾಜರು, ಚಂದ್ರಶೇಖರ ಮೊದಲಾದವರು ಸಾಂಸ್ಕೃತಿಕ ನಾಯಕತ್ವದ ಪ್ರತಿನಿಧಿಗಳಾಗಿ ವಿಶ್ವಕರ್ಮ ಸಮಾಜಕ್ಕೆ ಒಂದು ಘನತೆ ಗೌರವವನ್ನು ತಂದುಕೊಟ್ಟಿದ್ದಾರೆ.

ಶ್ರೀ ಚಂದ್ರಶೇಖರಾಚಾರ್ಯರು ವಿಶ್ವಕರ್ಮಾ ಪತ್ರಿಕೆಗೆ ನೀಡಿರುವ ಕಲಾ ಕ್ಷೇತ್ರದ ಲೇಖನದಲ್ಲಿ "ಸಾಹಿತ್ಯ ಮತ್ತು ಮತತತ್ವಗಳ ಕ್ಷೇತ್ರಗಳಲ್ಲಷ್ಟೇ ಅಲ್ಲದೆ, ನಾಳಂದವು ಕಲಾ ಕ್ಷೇತ್ರದಲ್ಲಿಯೂ ಖ್ಯಾತಿಯನ್ನು ಪಡೆದಿತ್ತು. ಇದರ ಕಲೆಗಳ ಪ್ರಭಾವವು ನೇಪಾಳ, ಟಿಬೆಟ್, ಇಂಡೋನೇಷಿಯಾ ಮತ್ತು ಮಧ್ಯ ಏಷ್ಯಾಕ್ಕೂ ಮುಟ್ಟಿತ್ತು. ನಾಳಂದದ ಕಂಚಿನ ವಿಗ್ರಹಗಳು ಬಹಳ ಸುಂದರವಾದುವು ಮತ್ತು ಪರಿಣಾಮಕಾರಿಯಾದುವು. ಕೂರ್ಕಿಹಾರಿನಲ್ಲಿ ಸಿಕ್ಕಿರುವ ಬೌದ್ಧ ಪ್ರತಿಮೆಗಳ ಮೇಲೆ ನಾಳಂದದ ಪ್ರಭಾವವಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಶಿಲ್ಪ-ವ್ಯಾಕರಣ, ಧರ್ಮ-ತತ್ವ ಇವುಗಳ ಮಿಳನವೇ ನಾಳಂದದ ಸರ್ವತೋಮುಖ ಪ್ರಗತಿಗೆ ನಿಜವಾದ ಕಾರಣವು. ಈ ನಮ್ಮ ಪ್ರಾಚೀನ ಶಿಕ್ಷಣ ಸಂವಿಧಾನವು ನಮಗೀಗ ಕಣ್ಣು ತೆರೆಯಿಸಬೇಕು. ನಾಳಂದವು ಈಗಲೂ ಎಲ್ಲಾ ಕಲೆ, ಶಿಲ್ಪ, ಕೈಕೆಲಸ, ಸಾಹಿತ್ಯ, ಧರ್ಮ, ತತ್ವ, ವಿಜ್ಞಾನಗಳನ್ನು ಕಲಿಸುವ ಕೇಂದ್ರವಾಗಬೇಕು. ಮಗಧ ಸಂಶೋಧನೆ ಸಂಸ್ಥೆಯು ಇನ್ನೂ ಚಿಕ್ಕ ಗಿಡ, ನಾವು ಶ್ರದ್ಧೆಯಿಂದ ನಮ್ಮ ಈಗಿನ ಅವಶ್ಯಕತೆಗಳನ್ನನುಸರಿಸಿ, ಅದಕ್ಕೆ ನಿರಂತರ ನೀರೆರೆಯುತ್ತ ಬಂದರೆ ಅದು ನಮಗೆ ಕಲ್ಪವೃಕ್ಷವಾಗುವುದರಲ್ಲಿ ಸಂದೇಹವಿಲ್ಲ".[೧೮] ೨೦-೧೧-೧೯೫೧ ರಲ್ಲಿ ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ನಳಂದದಲ್ಲಿ ಮಗಧ ಸಂಶೋಧನಾ ಸಂಸ್ಥೆಯ ಅಸ್ತಿಭಾರಶಿಲೆಯನ್ನು ಪ್ರತಿಷ್ಠಿಸಿದಾಗ ಮಾಡಿದ ಭಾಷಣದಿಂದ ಸಂಗ್ರಹ ಮಾಡಿದ್ದಾರೆ. ಈ ಪತ್ರಿಕೆಯ ಪ್ರಕಟಿಸುವ ಲೇಖನಗಳು ಸಾಂಸ್ಕೃತಿಕ ಲೋಕದ ಹೆಗ್ಗಳಿಕೆಯೆಂದು ಗುರುತಿಸಲಾಗಿದೆ.

ವಿಶ್ವಕರ್ಮ ಪತ್ರಿಕೆಗಳು ಸಾಂಸ್ಕೃತಿಕ ಚಿಂತನೆಗಳನ್ನು ಪ್ರಕಟಿಸುತ್ತ ಕರ್ನಾಟಕ ಸಂಸ್ಕೃತಿಗೆ ತನ್ನ ಕೊಡುಗೆಯನ್ನು ನೀಡುತ್ತ ಬಂದಿವೆ. ಉದಾಃ ವಿಶ್ವಕರ್ಮಾ ಪತ್ರಿಕೆಯು ಅಕ್ಟೋಬರ್ ೧೯೫೦ರಲ್ಲಿ ಮಹಾನವಮಿ ಹಬ್ಬದ ಪೂರ್ವದಿನದ "ಆಯುಧ ಪೂಜೆಯನ್ನು" ಕುರಿತು ಲೇಖನವನ್ನು ಪ್ರಕಟಿಸಿದೆ. "ನವರಾತ್ರಿ ಬಂದಿತು ನಮ್ಮ ನಾಡು ಹಬ್ಬ ಅದು. ಆ ಒಂಭತ್ತು ದಿವಸಗಳ ವಿಶೇಷ ವಿಜೃಂಭನೆಯ ಉತ್ಸವಗಳಲ್ಲಿ ಆಯುಧ ಪೂಜೆ ಒಂದಾಗಿದೆ. ವರವಿಯ ಮಾನೇಶ್ವರ ದೇವಾಲಯದಲ್ಲಿ ಅಲ್ಲಿಯ ಗರ್ಭಗುಡಿಯ ಪೂಜಾ ಮೂರ್ತಿಯ ಜೊತೆಗೆ ಉಳಿ.

ಹತ್ತರಿ, ಗರಗಸ ಮುಂತಾದ ಆಯುಧಗಳಿಗೆ ನಿತ್ಯ ಪೂಜೆ ನಡೆಯುತ್ತದೆ. ಆ ಆಯುಧಗಳನ್ನು ಶ್ರೀ ಶ್ರೀ ಮೌನಪ್ಪ ಸ್ವಾಮಿಗಳೇ ಉಪಯೋಗಿಸುತ್ತರೆಂದು ಪ್ರತೀತಿ. ಮೈಸೂರು ಅರಮನೆಯಲ್ಲಿ ಈ ಉತ್ಸವ ಬಹಳ ಚೆನ್ನಾಗಿ ನಡೆಯುತ್ತದೆ. ಆಯುಧಗಳೆಂದರೆ, ರಾಜ್ಯದ ರಕ್ಷಣೆ. ಮಾನವನಿಗೆ ಬದುಕಿನ ದಾರಿಯೆಂದೆ ಜನರು ಮಾನ್ಯತೆಯನ್ನಿತ್ತಿದ್ದಾರೆ. ಆಯುಧಗಳು ಜನರ ಜೀವನೋಪಾಯಕ್ಕೆ ಪ್ರತಿನಿತ್ಯದ ಉಪಯುಕ್ತ ವಸ್ತುವಾಗಿದೆಯಲ್ಲದೇ, ಕಲೆಯ ಪ್ರಗತಿಗೆ ಉತ್ತಮೋತ್ತಮವಾದ ಸಾಧನವಾಗಿದೆ".[೧೯]

ಕರ್ನಾಟಕ ದೇವಾಲಯಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಶ್ರೀಮಂತಿಕೆಯು ಬೇರೆ ಯಾವ ರಾಜ್ಯದಲ್ಲಿಯೂ ಆವು ಕಾಣಲಾರೆವು. ಅಂದರೆ, ವಿಶ್ವಕರ್ಮರ ಈ ಸಂಸ್ಕೃತಿಗೆ ನೀಡಿದ ಸೇವೆ ಅನುಪಮ. ಜಯದೇವಪ್ಪ ಜೈನಕೇರಿ ಅವರ ವಿಶ್ವಕರ್ಮ ಸಂದೇಶ ಪತ್ರಿಕೆಯಲ್ಲಿ ಪ್ರಕಟಿಸಿದ ಲೇಖನವು ಉದಾಹರಣೆಯಾಗಿದೆ. "ಕಲ್ಯಾಣದ ಚಾಲುಕ್ಯರ ನಸುಗೆಂಪಿನ ಮರಳು ಶಿಲೆಯನ್ನು ಮತ್ತು ಬಾದಾಮಿ ಚಾಲುಕ್ಯರ ಗುಹದೇವಾಲಯ ರಚನೆಯನ್ನು ಪೂರ್ಣ ಕೈಬಿಟ್ಟು ಹಸಿರುಬೆರೆತ ಕಪ್ಪು ಕಲ್ಲುಗಳನ್ನು ಬೆರೆಸಿ ದೇವಾಲಯಗಳನ್ನು ನಿರ್ಮಿಸಲು ಪ್ರಾರಂಭಿಸಿದರು. ದ್ರಾವಿಢ ಮತ್ತು ನಾಗರ ಶೈಲಿಯ ಮಿಶ್ರ ಶೈಲಿಯನ್ನು ರೂಢಿಸಿಕೊಂಡರು. ಕರ್ನಾಟಕದ ಸಂಸ್ಕೃತಿಯಲ್ಲಿ ಇಂದಿಗೂ ಪ್ರಮುಖವಾಗಿರುವ ಶೈವಧರ್ಮವು ಬಹುಪುರಾತನವಾದದ್ದು. ಅದರ ಮೂಲ ಯಾವುದು ಎಂದು ನಿರ್ಧರಿಸುವುದು ಕಷ್ಟ. ಶೈವವು ವೈಧ್ಯಕೀಯ ಪೂರ್ವಕಾಲದ್ದೆಂದೂ ದ್ರಾವಿಡ ಮೂಲವೆಂದು ವಿದ್ವಾಂಸರು ಪ್ರತಿಪಾದಿಸುತ್ತಾರೆ".[೨೦]

ವಿಶ್ವಕರ್ಮಾ ಪತ್ರಿಕೆಗೆ ಶ್ರೀ ತಾ.ವೆಂ.ಮುತ್ತಾಚಾರ್ಯರು ಬರೆದ ಸಾಂಸ್ಕೃತಿಕ ಲೇಖನವಾದ ವೈಶ್ವಕರ್ಮಣ ಸಂಸ್ಕೃತಿ. ಈ ಲೇಖನದಲ್ಲಿ "ಭಾರತ ಕಲಾ ಶ್ರೀ ಯ ಅಮರ ವೈಭವಕ್ಕೆ ಅಮಿತ ಕಾಣಿಕೆಯನ್ನು ಅನಂತವಾಗಿ ಸಲ್ಲಿಸಿರುವ ಸಂಸ್ಕೃತಿಯೆಂದರೆ, ವೈಶ್ವಕರ್ಮನ ಸಂಸ್ಕೃತಿ. ಉತ್ತಮ ಸಂಸ್ಕಾರ ಮತ್ತು ಧಾರ್ಮಿಕ ಮನೋವೃತ್ತಿ ಇವುಗಳ ವಿದ್ಯುದಾಲಿಂಗನದಿಂದ ಪ್ರಚೋದಿತವಾದ ಕಲಾ ನಿಷ್ಠೆ ಮತ್ತು ಕಲಾನುಭವಕ್ಕೆ ರೂಪದಾನ ಮಾಡುವ ಉದ್ಯೋಗಶೀಲತೆ ಇವೇ ವೈಶ್ವಕರ್ಮಣ ಸಂಸ್ಕೃತಿಯಲ್ಲಿ ನಾವು ಪ್ರಧಾನವಾಗಿ ಅರಿಯಬೇಕಾಗಿದೆ. ಸೂಕ್ಷವಾಗಿ ಪರಿಭಾವಿಸಿ ನೋಡುವುದಾದರೆ ನಾಡಿನ ಸುಸಂಸ್ಕೃತ ನಾಗರಿಕತಾಯುಕ್ತ ಪ್ರಜಾ ಕೋಟಿಯ ಸತ್ವಗುಣೋತ್ಕರ್ಷತೆಗೂ ನಿಜಾತ್ಮ ಸೌಂದರ್ಯಕರ ಆದರ್ಶಕಲಾಭಿ ವೃದ್ಧಿಗೂ ಇವೇ ಪ್ರಧಾನ ಸಾಧನ ಹೌದು. ಮೈಸೂರನ್ನು ವಿಶೇಷ ರೀತಿಯಲ್ಲಿ ಅಂತಹ ಕಥೆಯ ಮಧುರವನ್ನಾಗಿ ಮೆರೆಸಿರುವ ವೈಶ್ವಕರ್ಮಣ ಸಂಸ್ಕೃತಿಯ ಶಿಲ್ಪವು ಪ್ರತಿಯೊಬ್ಬ ಕನ್ನಡಿಗನ ಹೆಮ್ಮೆಯ ವಿಷಯ".[೨೧] ಇದು ವಿಶ್ವಕರ್ಮರ ಸಂಸ್ಕೃತಿಗೆ ಕೈಗನ್ನಡಿಯಾಗಿದೆ.

**೪.೫. ಲಲಿತ ಕಲೆಗಳು :**

ವಿಶ್ವಕರ್ಮ ಸಮಾಜವು ಶಿಲ್ಪಕಲೆ ಮತ್ತು ಇತರ ಕಲೆಗಳಿಗೆ ಮಹತ್ವ ಕೊಟ್ಟಂತೆ, ಲಲಿತ ಕಲೆಗಳಿಗೂ ಪ್ರಾಮುಖ್ಯತೆ ಕೊಟ್ಟಿದೆ. ಆದರೆ ವಿಶ್ವಕರ್ಮ ಸಮಾಜದ ಎಲ್ಲ ಪತ್ರಿಕೆಗಳನ್ನು ಕೂಲಂಕಷವಾಗಿ ನಾನು ಅಧ್ಯಯನ ಮಾಡಿದ ಸಂದರ್ಭದಲ್ಲಿ ಲಲಿತ ಕಲೆಗಳಿಗೆ ಸಂಬಂಧಿಸಿದ ಲೇಖನಗಳು ಕ್ವಚಿತ್ತಾಗಿ ಕಾಣಸಿಗುತ್ತವೆ. ಇತ್ತೀಚೆಗೆ ಝೀ ಕನ್ನಡ ಸರಿಗಮಪ ಸೀಜನ್ ೧೬ರ ಸ್ಪರ್ಧಿಗಳಲ್ಲಿ ಒಬ್ಬರಾದ ಓಂಕಾರ ಪತ್ತಾರ ವಿಶ್ವಕರ್ಮ ಸಮಾಜದವರು. ಎಳೆಯ ವಯಸ್ಸಿನಲ್ಲಿಯೇ ಇಡೀ ಕರ್ನಾಟಕದ ಗಮನ ಸೆಳೆದವರು. ಕಳೆದ ವರ್ಷ ವಿಪರೀತ ಮಳೆಯಾಗಿ, ಓಂಕಾರ ಪತ್ತಾರ ಅವರ ಮನೆ ಬಿದ್ದು, ತಂದೆ ತಾಯಿಗಳು ನಿರಾಶ್ರಿತರಾದರು. ಇಂಥ ಕಠಿಣ ಸಂದರ್ಭದಲ್ಲೂ ಓಂಕಾರ ಪತ್ತಾರ ತನ್ನ ಶ್ರದ್ಧೆ ನಿಷ್ಠೆಯ ಅಧ್ಯಯನದಿಂದ ಸಂಗೀತ ಕಲೆಯ ಸಾಧನೆ ಮಾಡಿ, ಮೊದಲ ಸ್ಥಾನ ಪಡೆದದ್ದು ಒಂದು ಕಡೆಯಾದರೆ, ಅದರಿಂದ ಬಂದ ಹಣದಲ್ಲಿ ಸ್ವಲ್ಪ ಭಾಗವನ್ನು ಮಳೆಯಿಂದ ಹಾನಿಗೊಳಗಾದ ಸಂತ್ರಸ್ತರಿಗೆ ಕೊಟ್ಟದ್ದು ಮಾನವೀಯ ಔದಾರ್ಯಕ್ಕೆ ಸಾಕ್ಷಿಯಾಯಿತು. ಇದೇ ವಿಶ್ವಕರ್ಮ ಧರ್ಮ ಸಂಸ್ಕೃತಿಯ ಸಂಸ್ಕಾರವೆಂದೇ ಹೇಳಬೇಕು. ಸಂಗೀತ ಮತ್ತು ಲಲಿತ ಕಲೆಗಳಲ್ಲಿ ವಿಶ್ವಕರ್ಮರು ಅನನ್ಯವಾದ ಸಾಧನೆ ಮಾಡಬಲ್ಲರು ಎಂಬುದಕ್ಕೆ ಓಂಕಾರ ಪತ್ತಾರ ಉಜ್ವಲ ನಿದರ್ಶನವಾಗಿದ್ದಾರೆ.

ಸಂಗೀತಕ್ಕೆ ಕರಗದೇ ಇರುವ ಹೃದಯ ಪಾಷಾಣವಾದುದು ಎಂದು ಒಬ್ಬ ಕವಿ ಹೇಳಿದ್ದಾನೆ. ಪ್ರೀತಿಯ ನಾದಸ್ವರೂಪ ಸಂಗೀತ ಮನಸ್ಸಿನ ಭಾವನೆಗಳ ಹಾಗೆಯೇ ಸಂಗೀತ ವೈವಿಧ್ಯಮಯವಾಗಿದೆ. 'ಓಂ' ಕಾರ ಆದಿಯಲ್ಲಿ ಹೊರಟ ನಾದ. ಇಡೀ ವಿಶ್ವದ ಚೈತನ್ಯ. ಈ ಶ್ರುತಿಗೆ ಈ ಲಯಕ್ಕೆ ಹೊಂದಿಕೊಂಡಿದೆ. ಸಂಗೀತದ ಕ್ಷೇತ್ರ ತುಂಬಾ ವಿಸ್ತಾರವಾದುದು, ಅನಂತವಾದುದು. ಆದರೂ ಶಾಸ್ತ್ರರೂಪಿಯಾದ ಬಳಕೆಯಾದ ಮೇಲೆ ಅದಕ್ಕೊಂದು ಪರಿಮಿತಿ, ಕಟ್ಟುಪಾಡು ಏರ್ಪಟ್ಟಿತು.

ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ಕೆಲವೇ ಕೆಲವು ಲೇಖನಗಳು ವಿಶ್ವಕರ್ಮ ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದು ನನ್ನ ಗಮನಕ್ಕೆ ಬಂದಿತು. ಎಸ್. ಯು. ಪೋತದಾರ ಅವರ 'ಶಾಸ್ತ್ರೀಯ ಸಂಗೀತ ಮತ್ತು ಶಾಸ್ತ್ರ' ಎಂಬ ಸಂಶೋಧನ ಲೇಖನ ರೂವಾರಿ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.[೨೨]

ಎಸ್.ಯು. ಪೋತದಾರ ಅವರೆ ಕಾಳಿಕಾ ಸಂದೇಶ ಪತ್ರಿಕೆಯಲ್ಲಿ 'ತಬಲಾವಾದನ ಪ್ರಸ್ತುತೀಕರಣ ಕೌಶಲ್ಯ ಹಾಗೂ ಸೌಂದರ್ಯ'[೨೩] ಎಂಬ ಅಪರೂಪದ ಸಂಶೋಧನಾತ್ಮಕ ಲೇಖನವನ್ನು ಬರೆದಿದ್ದಾರೆ.

ರೂವಾರಿ ಪತ್ರಿಕೆಯಲ್ಲಿ ಮಾತ್ರ ಸಂಗೀತ ಕಲಾವಿದರ ಜೀವನ ಸಾಧನೆಯ ಅನೇಕ ಲೇಖನಗಳು ಪ್ರಕಟವಾಗಿವೆ. ಅವುಗಳಲ್ಲಿ ಕೇವಲ ವಿಶ್ವಕರ್ಮ ಸಮಾಜದಲ್ಲಿ ಜನಿಸಿದವರ ಸಾಧನೆಗೆ ಮಾತ್ರ ಮೀಸಲಾಗದೆ, ಎಲ್ಲ ವರ್ಗದ ಪ್ರತಿಭೆಗಳನ್ನು ಪರಿಚಯಿಸುವ ಕಾರ್ಯ ಮಾಡಿದ್ದಾರೆ.

**ಕೊನೆ ಟಿಪ್ಪಣಿ**

೧. ಗೋಪಾಲಕೃಷ್ಣ ಆಚಾರ್: ವಿಶ್ವಕರ್ಮ ಸಮ್ಮೇಳನ–೨೦೧೨: ಸಹಚಿಂತನ ಪತ್ರಿಕೆ, ಪುಟ–೮, ಜನವರಿ ೨೦೧೨

೨. ಬಿ. ಎ. ಆಚಾರ್ಯ : ಸಹಚಿಂತನ, ಪುಟ–೧, ಏಪ್ರಿಲ್ ೨೦೦೧೩

೩. ಬಿ. ಎ. ಆಚಾರ್ಯ : ಸಹ ಚಿಂತನ, ಪುಟ–೧, ಮೇ ೨೦೧೩

೪. ಹಿರಣ್ಯ : ಸಾಮಾಜಿಕ ಅಭಿವೃದ್ಧಿಗಾಗಿ ಸ್ಪರ್ಧಾತ್ಮಕ ಧೋರಣೆ ತಾಳುವುದು ಉಚಿತವಲ್ಲವೇ? ಸಹಚಿಂತನ, ಪುಟ–೬, ಜನೇವರಿ ೨೦೧೨,

೫. ಬಿ. ಎ. ಆಚಾರ್ಯ : ಸಹಚಿಂತನ, ಪುಟ–೩, ಜುಲೈ ೨೦೧೩

೬. ಕೆ. ಮುರಳೀಧರ : ಸಹಚಿಂತನ, ಪುಟ–೧೦, ಜುಲೈ ೨೦೧೩

೭. ಬಿ. ಎ. ಆಚಾರ್ಯ : ಸಹಚಿಂತನ, ಪುಟ–೩, ಏಪ್ರಿಲ ೨೦೦೯

೮. ಶಿಲ್ಪಿ ಸಿ. ಆರ್. ಸುರೇಶ : ಸಂಪಾದಕೀಯ : ವಿಶ್ವಕರ್ಮೋದಯ, ಪುಟ–೪, ಜುಲೈ ೨೦೦೦೬

೯. ಪ್ರಕಾಶ ಆಚಾರ್ಯ : ವಿಶ್ವಬ್ರಾಹ್ಮಣರ ಸಾಮಾಜಿಕ, ಧಾರ್ಮಿಕ ಆರ್ಥಿಕ ಹಿಂದುಳಿಕೆಗೆ ಕಾರಣ ಪರಿಹಾರ ಸಹಚಿಂತನ, ಪುಟ–೧೦, ಜೂನ್ ೨೦೦೭

೧೦. ಕಾಳಿಕಾದೇವಿ ವಾಣಿ, ಪುಟ–೫, ಜನವರಿ ೨೦೧೪

೧೧. ಕಾಳಿಕಾದೇವಿ ವಾಣಿ ಪುಟ–೪–೬, ಜನವರಿ ೨೦೧೪

೧೨. ಹಿರಣ್ಯ : ಚಿಂತನ, ಪುಟ–೬, ಎಪ್ರೀಲ್ ೨೦೧೩

೧೩. ಬಿ. ಎ. ಆಚಾರ್ಯ : ಸಹಚಿಂತನ, ಪುಟ–೩, ಆಗಸ್ಟ್ ೨೦೧೩

೧೪. ಗೋಪಾಲಕೃಷ್ಣ ಆಚಾರ್ : ವಿಶ್ವಕರ್ಮ ಸಮ್ಮೇಳನ ೨೦೧೨ ಸಹಚಿಂತನ, ಪುಟ–೭, ಜನವರಿ ೨೦೧೨

೧೫. ಪಿ.ದಿನೇಶಕುಮಾರ:ವಿಶ್ವಕರ್ಮ ನಿಗಮ ಸ್ಥಾಪನೆ ಬಹುಕಾಲದ ಬೇಡಿಕೆ: ಸಹಚಿಂತನ, ಪುಟ–೪, ಆಗಸ್ಟ್ ೨೦೧೩

೧೬. ವಿಶ್ವಕರ್ಮಾ ಸಂಪುಟ ೪, ಸಂಚಿಕೆ ೧, ಪುಟ–೧೦ ನವೆಂಬರ್ ೧೯೫೧

೧೭. ವಿಶ್ವಕರ್ಮಾ ಸಂಪುಟ ೪, ಸಂಚಿಕೆ ೧, ಪುಟ–೧೧ ನವೆಂಬರ್ ೧೯೫೧

೧೮. ವಿಶ್ವಕರ್ಮಾ ಸಂಪುಟ ೪, ಸಂಚಿಕೆ ೩, ಪುಟ–೧೮ ಜನವರಿ ೧೯೫೨

೧೯. ವಿಶ್ವಕರ್ಮಾ ಸಂಪುಟ ೨, ಸಂಚಿಕೆ ೧೨, ಪುಟ–೨೧ ಅಕ್ಟೋಬರ್ ೧೯೫೦

೨೦. ವಿಶ್ವಕರ್ಮ ಸಂದೇಶ, ಸಂಪುಟ ೨, ಸಂಚಿಕೆ ೮, ಪುಟ–೪,೫, ನವಂಬರ್ ೨೦೦೬

೨೧. ವಿಶ್ವಕರ್ಮಾ ಸಂಪುಟ ೪, ಸಂಚಿಕೆ ೪, ಪುಟ–೨೪, ಫೆಬ್ರವರಿ ೧೯೫೨

೨೨. ಎಸ್.ಯು. ಪೋತದಾರ : ಶಾಸ್ತ್ರೀಯ ಸಂಗೀತ ಮತ್ತು ಶಾಸ್ತ್ರ : ರೂವಾರಿ ಮಾಸಪತ್ರಿಕೆ ಸಂಪುಟ ೧, ಸಂಚಿಕೆ ೬, ಪುಟ–೭–೮, ಜನವರಿ ೨೦೦೫

೨೩. ಎಸ್.ಯು.ಪೋತದಾರ : ತಬಲಾವಾದನ ಪ್ರಸ್ತುತೀಕರಣ ಕೌಶಲ್ಯ ಹಾಗೂ ಸೌಂದರ್ಯ–ಕಾಳಿಕಾ ಸಂದೇಶ, ಪುಟ–೧೩–೧೪ ಮೇ ೨೦೧೯

# ಅಧ್ಯಾಯ–ಐದು
# ವಿಶ್ವಕರ್ಮ ಪತ್ರಿಕೆಗಳು: ಸಂಶೋಧನೆ ಮತ್ತು ಸೃಜನಶೀಲ ಅನುಸಂಧಾನ

## ಅಧ್ಯಾಯ-ಐದು

# ವಿಶ್ವಕರ್ಮ ಪತ್ರಿಕೆಗಳು : ಸಂಶೋಧನೆ ಮತ್ತು ಸೃಜನಶೀಲ ಅನುಸಂಧಾನ

ಕನ್ನಡ ಸಾಹಿತ್ಯ ಸಂಗೋಪನೆ ಮತ್ತು ಸಂವರ್ಧನೆಗೊಳ್ಳುವಲ್ಲಿ ವಿಶ್ವಕರ್ಮ ಪತ್ರಿಕೆಗಳ ಪಾತ್ರ ಬಲುದೊಡ್ಡದಿದೆ. ಅದೇ ರೀತಿ ಕನ್ನಡದಲ್ಲಿ ತನ್ನ ವಾಙ್ಮಯವನ್ನು ಕಟ್ಟಿಕೊಳ್ಳುವಲ್ಲಿ ವಿಶ್ವಕರ್ಮ ಪತ್ರಿಕೆಗಳು ತೋರಿದ ಪ್ರಬುದ್ಧತೆ ಗಮನಿಸುವಂಥದ್ದು. ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಸಬಲ ಚಾರಿತ್ರಿಕ ಪಾರಂಪರೆ ಇದ್ದಾಗಲೂ ಆಧುನಿಕ ಮುದ್ರಣ ಮಾಧ್ಯಮವನ್ನು ಬಳಸಿಕೊಂಡು ಬೆಳೆದಿದ್ದು ವಿಶ್ವಕರ್ಮ ಪತ್ರಿಕೆಯ ರೋಚಕ ಸಂಗತಿಯಾಗಿದೆ. ಈ ಅರ್ಥದಲ್ಲಿ ವಿಶ್ವಕರ್ಮ ಪತ್ರಿಕೆಗಳ ಲೋಕದೃಷ್ಟಿ ವಿಶಿಷ್ಟವಾದದ್ದು.

ವಿಶ್ವಕರ್ಮ ಧರ್ಮದ ಲೋಕದೃಷ್ಟಿಯೇ ವಿಶಾಲವಾದದ್ದು. 'ವಿಶ್ವಂ ಕೃತ್ಸ್ನಂ ಕರ್ಮ ಕ್ರಿಯಾವ್ಯಾಪಾರೇ ಯಸ್ಯಸಃ ವಿಶ್ವಕರ್ಮಾ' ಎಂದು ವೇದವಾಙ್ಮಯಗಳಲ್ಲಿ ಹೇಳಲಾಗಿದೆ. ಅಂದರೆ ವಿಶ್ವದ ಸೃಜನ, ರಕ್ಷಣೆ, ಕ್ರಿಯೆ, ಆಗು ಹೋಗುಗಳು ಯಾವನಿಂದ ಆಗುತ್ತವೆಯೋ ಅವನೇ ವಿಶ್ವಕರ್ಮನು. ತನ್ನ ಸಂಕಲ್ಪ ಮಾತ್ರದಿಂದಲೇ ಸಕಲವನ್ನು ಸಕಲರ ಹಿತಕ್ಕಾಗಿ ಸೃಷ್ಟಿಸುವರು ವಿಶ್ವಕರ್ಮರು. ಇವರು ಸ್ವಭಾವತಃ ಸೃಷ್ಟಿಶೀಲರು. ಹಾಗಾಗಿ ವಿಶ್ವಕರ್ಮ ಪ್ರಕಟಿಸುತ್ತಿರುವ ಪತ್ರಿಕೆಗಳು ವೈವಿಧ್ಯಮಯವಾಗಿದ್ದಂತೆ ವೈವಿಧ್ಯಮಯ ಸಾಹಿತ್ಯಾಂಶಗಳನ್ನು ಬೆಳೆಸುವಲ್ಲಿ ಅವು ತೋರಿದ ಪ್ರೌಢತೆ ಮಹತ್ವದ್ದು. ತಾನೂ ಬೆಳೆಯುತ್ತ ತನ್ನೊಂದಿಗೆ ತನ್ನವರನ್ನು ಅನ್ಯರನ್ನು ಬೆಳೆಸಿದ ಕೀರ್ತಿ ಈ ಪತ್ರಿಕೆಗಳಿಗಿದೆ. ಕನ್ನಡ ಸಾಹಿತ್ಯದ ಸೃಜನಶೀಲ ಸಾಹಿತ್ಯಕ್ಕೆ ಮತ್ತು ಕನ್ನಡ ಗದ್ಯದ ವಿಕಾಸಕ್ಕೆ, ಸಂಶೋಧನೆಗೆ ವಿಶ್ವಕರ್ಮ ಪತ್ರಿಕೆಗಳು ನೀಡಿದ ಕೊಡುಗೆಯನ್ನು ಮರೆಯುವಂತಿಲ್ಲ. ಅದೊಂದು ವಿಭಿನ್ನ ಲೋಕದೃಷ್ಟಿ ಕಥನವಾಗಿದೆ. ಇಂತಹ ಲೋಕದೃಷ್ಟಿಯನ್ನು ಬೆಳೆಸುವಲ್ಲಿ ಕಾರಣರಾದ ಅನೇಕ ವಿದ್ವಾಂಸರು ವಿಶ್ವಕರ್ಮ ಸಮಾಜದಲ್ಲಿ ಆಗಿ ಹೋಗಿದ್ದಾರೆ. ಅಂಥವರಲ್ಲಿ ಪ್ರಮುಖವಾದವರು ಗಂಗಾಧರ ಮೂರ್ತಿಗಳು, ಪ್ರೊ. ಕೆ. ಜಿ. ಕುಂದಣಗಾರ, ಬಿ. ಹರಿಶ್ಚಂದ್ರಾಚಾರ್ಯರು, ಟಿ.ವಿ.ಮುತ್ತಾಚಾರ್ಯ (ಇವರು ವೇದಜ್ಞರೂ ಸಂಗೀತ ವಿದ್ವಾಂಸರೂ ಕವಿಗಳೂ ಆಗಿದ್ದರು),

ವಿದ್ಯಾಲಂಕಾರ ನಾ.ಭಾ.ಚಂದ್ರಶೇಖರಾಚಾರ್ಯ, ಜೀವಣ್ಣ ಮಸಳಿಯವರು, ಡಾ.ಜಿ.ಜ್ಞಾನಾನಂದ, ಕಾ.ವಾ.ಆಚಾರ್ಯ, ಡಾ.ಚಂದ್ರಶೇಖರ ಕಂಬಾರ, ಡಾ.ರಾಜಶೇಖರ ಬಡಿಗೇರ, ಡಾ.ಕೆ.ಪಿ.ಈರಣ್ಣ, ಡಾ.ಶಿಲಾಕಾಂತ ಪತ್ತಾರ, ಹೊಸತಲಮಾರಿನ ಡಾ.ವೀರೇಶ ಬಡಿಗೇರ, ಡಾ.ಕಲವೀರ ಮನ್ವಾಚಾರ್ಯ, ಡಾ.ವಾಸುದೇವ ಬಡಿಗೇರ, ಡಾ. ಗಂಗಾಧರ ದೈವಜ್ಞ ಇವರನ್ನು ಪ್ರಮುಖವಾಗಿ ಗುರುತಿಸಬಹುದು. ಇವರ ಪರಿಶ್ರಮದ ಫಲವಾಗಿ ವಿಶ್ವಕರ್ಮ ಸಮಾಜದ ಪತ್ರಿಕೆಗಳು ಘನವಾಗಿ ಬೆಳೆದು ಬಂದುದ್ದಲ್ಲದೇ, ಸೃಜಶೀಲ ಮತ್ತು ಸಂಶೋಧನಾ ಕ್ಷೇತ್ರಕ್ಕೆ ಅನುಪಮ ಸೇವೆಯನ್ನು ನೀಡಿದ್ದಾರೆ.

**೫.೧. ಸಂಶೋಧನೆ :**

ವಿಶ್ವಕರ್ಮ ಪತ್ರಿಕೆಗಳು ತನ್ನನ್ನು ತಾನು ಸಂಘಟಿಸಿಕೊಳ್ಳಲು ಪ್ರಯತ್ನಿಸಿದಂತೆ ಶೋಧಿಸಿಕೊಳ್ಳಲು ಮುಂದಾಗಿದ್ದನ್ನು ಗುರ್ತಿಸಬಹುದು. ತನ್ನ ಸಮುದಾಯ ಮತ್ತು ಶಿಲ್ಪ ಸಂಸ್ಕೃತಿಯ ನೆಲೆಗಳನ್ನು ಗುರುತಿಸಿಕೊಳ್ಳುವುದಲ್ಲದೇ, ವಿಜ್ಞಾನ-ತಂತ್ರಜ್ಞಾನಕ್ಕೆ ನೀಡಿದ ಕೊಡುಗೆಗಳನ್ನು ಹುಡುಕಿ ಕಟ್ಟಿಕೊಳ್ಳುವದನ್ನು ಕಾಣಬಹುದು. ಬಹುಮುಖ್ಯವಾಗಿ ತನ್ನ ಮೂಲದ ಶೋಧನೆಯಲ್ಲಿ ಎರಡು ರೀತಿಯ ವ್ಯಾಖ್ಯಾನಗಳನ್ನು ಕಾಣುತ್ತೇವೆ. ಒಂದು ವೈದ್ಯಕೀಯ ಮೂಲದ ಹಿನ್ನಲೆ. ಮತ್ತೊಂದು ವೃತ್ತಿ ಅಥವಾ ಸಮುದಾಯದ ಹಿನ್ನಲೆ. ಉದಾಹರಣೆಯಾಗಿ ಪಾಂಚಾಳ ಪದದ ಪ್ರಾಚೀನತೆಯನ್ನು ಮತ್ತು ಅದರ ಕುಲಮೂಲದ ವಿನ್ಯಾಸಗಳನ್ನು ಎರಡು ನೆಲೆಯಲ್ಲಿ ಚರ್ಚಿಸಿದ್ದು, ಇದುವೆರೆಗಿನ ವಿಶ್ವಕರ್ಮ ಸಾಹಿತ್ಯ ಮತ್ತು ಪತ್ರಿಕಾ ಸಾಹಿತ್ಯದಿಂದ ಅವಲೋಕಿಸಬಹುದು. ೧. ಮಾನವ ಚಾರಿತ್ರೆಯ ಬೆಳವಣಿಗೆಯ ಮೂಲವಾಗಿ, ೨. ಬ್ರಾಹ್ಮಣಗೋತ್ರ ವಾಚಿಯಾಗಿ.

ಮೊದಲನೆಯ ಗುಂಪಿನ ವಾದದಲ್ಲಿ ಶ್ರೀ ಚಿಲಕೂರು ವೀರಭದ್ರರಾವ್, ಜೀವಣ್ಣ ಮಸಳಿ, ಡಾ.ಎಸ್.ಕೆ.ಕುಮಾರಸ್ವಾಮಿ, ಡಾ.ವೀರೇಶ ಬಡಿಗೇರ ಇಂತಹ ವಿದ್ವಾಂಸರು ಪ್ರಮುಖವಾದರೆ, ಎರಡನೇ ಗುಂಪಿನ ವಾದದಲ್ಲಿ ಪಂಡೀತ್ ವಡ್ಡೇಪಾಟಿ, ನಿರಂಜನ ಶಾಸ್ತ್ರಿ, ಪಂಡಿತ್ ಹರೆ ಕೃಷ್ಣ ಶರ್ಮಾ, ಡಾ.ಜಿ.ಜ್ಞಾನಾನಂದ, ಶ್ರೀ ನಾ.ಭಾ.ಚಂದ್ರಶೇಖರ ಶಾಸ್ತ್ರೀಯಂತಹ ವಿದ್ವಾಂಸರನ್ನು ಗುರ್ತಿಸಬಹುದು.

ಬಹುಮುಖ್ಯವಾಗಿ ಅಂಡಿ ಭೂತದ ಮೂಲಕ ಪಾಂಚಾಳ ಪದ ಮತ್ತು ಜನಾಂಗ ನಿರ್ವಚನ ಮಾಡುವ ಜೀವಣ್ಣ ಮಸಳಿಯವರು 'ಆಣ್ಣ, ಅಣ್ಣು ಎಂಬ ಜನಾಂಗ ಪಂಚ ಉದ್ಯೋಗಗಳನ್ನು ಮಾಡುತ್ತಿದ್ದ ಕಾರಣ, ಪಂಚ-ಅಣ್ಣ-ಪಂಚಾಣ್ಣು>ಪಂಚಾಳ>ಪಾಂಚಾಳ>ಪಾಂಚಾಳರು' ಎಂದು ಗುರ್ತಿಸುತ್ತಾರೆ. ಇವರು ಆರ್ಯರಿಗಿಂತ ಮೊದಲೇ ಭಾರತದಲ್ಲಿದ್ದವರು. (ಸಿಂಧೂ ಕೊಳ್ಳದ ಪರಿಸರ) ಎಂದು ಹೇಳುತ್ತಾರೆ. ಇತ್ತೀಚಿಗೆ ಪ್ರಕಟವಾದ ಡಾ.ಕೆ.ಎಸ್.ಕುಮಾರಸ್ವಾಮಿ ಅವರ 'ಸೈಂದವ ಸಂಸ್ಕೃತಿ ಮತ್ತು ರಾಕ್ಷಸರು' ಕೃತಿಯಲ್ಲಿ ಈ ಕುರಿತು ಸಾಕಷ್ಟು ನಿದರ್ಶನಗಳನ್ನು ಕೊಡುತ್ತಾರೆ.

ವೇದಪೂರ್ವ ಕಾಲದಲ್ಲಿ ಪಂಚಕರ್ಮಗಳಾದ ಬಡಿಗ, ಕಮ್ಮಾರ, ಕಂಚುಗಾರ ಮತ್ತು ಪತ್ತಾರರ ಸಮುದಾಯ ಬದುಕಿನ ವಿವರಗಳು ಸಿಗುತ್ತವೆ. ಸಿಂಧೂ ಬಯಲು ವಿಶ್ವಕರ್ಮ ಸಂಸ್ಕೃತಿಯ ದಟ್ಟ ಪ್ರಭಾವದಿಂದ ಕೂಡಿತ್ತು. ಇಲ್ಲಿನ ನಗರಗಳು, ನದಿಗಳು, ಋಷಿಗಳು, ದೇವತೆಗಳು, ಮಂತ್ರಗಳು, ಆಚರಣೆಗಳು, ಪೌರಾಣಿಕ ವ್ಯಕ್ತಿಗಳು, ರಾಮಾಯಣ ಮತ್ತು ಮಹಾಭಾರತದ ಅನೇಕ ಅರಸರು ಮತ್ತು ವ್ಯಕ್ತಿಗಳು, ಶಿಲ್ಪಿಗಳು, ಪುರತತ್ವ ಉತ್ಖನನಗಳು ಹೀಗೆ ಹಲವು ಆಕಾರಗಳಲ್ಲಿ ವಿಶ್ವಕರ್ಮ ಪಂಚ ಕಸಬುಗಳ ಪ್ರಚೀನ ಗುರುತುಗಳಿವೆ. ವಿಷ್ಣುವಿನ ದಶಾವತಾರಗಳಲ್ಲಿ ಒಂದಾದ ಮತ್ಸ್ಯಾವತಾರದಲ್ಲಿ ಪುರಾಣಗಳ ಪ್ರಕಾರ ಮೀನನ್ನು ಬೆಳೆಸುವವನು ಮನು ವಿಶ್ವಕರ್ಮ. ಪುರಾಣಗಳ ವಿಶ್ವಕರ್ಮ ಮತ್ತು ಮಯನನ್ನು ಶಿಲ್ಪಿಗಳೆಂದು ಕರೆಯುತ್ತೇವೆ. ವಿಶ್ವಕರ್ಮನನ್ನು ದೇವತೆಗಳ ಶಿಲ್ಪಿಯೆಂದು ಅನೇಕ ಪುರಾಣಗಳು ಹೇಳುತ್ತವೆ. ಆದರೆ ಮನಬಗ್ಗೆ ವೇದಗಳು ಮೌನವಹಿಸುತ್ತವೆ. ಪುರಾಣಗಳಲ್ಲಿ ಮಾತ್ರ ಮಯನ ಅಸುರ ಹಿನ್ನಲೆ ಪ್ರಸ್ತಾಪವಾಗುತ್ತದೆ.

ಪಂಚಾಣ್ಣುಗಳು ತಮ್ಮ ಸಂಸ್ಕೃತಿಯನ್ನು ವಿಸ್ತರಿಸುತ್ತ ಮಧ್ಯ ಏಷ್ಯಾ ಖಂಡದಲ್ಲಿಯ ತಖ್ಯರೆಂಬುವವರ ಸಂಸ್ಕೃತಿಗಳೊಂದಿಗೆ ಸಂಬಂಧ ಬೆಳೆಸಿಕೊಂಡರು. ಪಂಚಂಭೂತ ಜಾತಿಯವರಿಂದ ರೂಪಗೊಂಡ ತ್ವಷ್ಟ ಅಥವಾ ತಸ್ಸು ಎನ್ನುವವರು, ಕೂರೂಖೂ ಎಂಬ ಉತ್ತರ ಕುರುಜನ ಏಷ್ಯಾಖಂಡದ ಪಶ್ಚಿಮ ಭಾಗದಲ್ಲಿರುವವರು. ಇವರನ್ನು ದಹ್ಯು ಎಂದು ಕರೆಯುತ್ತಾರೆ. ಈ ಗುಂಪುಗಳ ನಾಯಕರನ್ನು ಮೇಲೇಜ್, ಮೇಲೆಖ್ ಎಂದು ಕರೆಯುತ್ತಾರೆ. ಮೆಲೇಜ್ ಶಬ್ದವು ಸಂಸ್ಕೃತದಲ್ಲಿ 'ಮ್ಲೆಚ್ಚ' ಶಬ್ದವಾಯಿತು. ಪಾಶ್ಚಾತ್ಯರು ಈ ಜನಾಂಗವನ್ನು 'ವ್ಹೆರ್ಕವೋ ಧಂಗವೂ'(ಅಂದರೆ ಶುನಕಜಾತಿ ಅಥವಾ ತೋಳಜಾತಿ) ಎಂದು ಕರೆದರು. ಈ ಪಂಚಾಣ್ಣುಗಳನ್ನು ಸಪ್ತಸಿಂಧೂ ಪ್ರದೇಶದಲ್ಲಿ ಮೊದಲಬಾರಿಗೆ ತಖ್ವೆರೊಂದಿಗೆ ಐಕ್ಯರಾದನಂತರವೇ ಇವರ ಪಂಚ ಶಿಲ್ಪಿಗಳ ಕುರಿತು ವೇದಗಳಲ್ಲಿ ಉಲ್ಲೇಖಿಸಲಾಯಿತು. ಈ ವೈದ್ಯಕೀಯ ಯುಗದಲ್ಲಿ ಬೆಳೆದ ಕುರು-ಪಾಂಚಾಳ ವಿಭೇದಗಳು ಆರ್ಯ ಸಂಸ್ಕಾರಯುತ ಕುರುಶಾಖೆಯವರಲ್ಲಿ ಕುಲ ಮದವನ್ನು ಹುಟ್ಟು ಹಾಕಿದವು. ಈ ಕುಲಮದ ತನ್ನ ಸೋದರ ಕುಲದೇವರನ್ನೇ ಉಪೇಕ್ಷಿಸುವ ಮಟ್ಟಕ್ಕೆ ಬೆಳೆಯಿತು. ಚಾತುರ್ವರ್ಣ ಪ್ರತಿಪಾದಕ ಸಂದರ್ಭಕ್ಕಿಂತ ಮೊದಲು ಮುಕ್ತವಾಗಿದ್ದ ಪಾಂಚಾಳರು ವೇದಗಳಲ್ಲಿಯೇ ಪಂಚಜನರಾಗಿ, ಕುರುಗಳ ದ್ರುಹ್ಯುಗಳು, ತರ್ವಸರು, ಅಣುಗಳು ಎಂದಾಗಿ ಪರಿಗಣಿತವಾಗುವಂತಾಯಿತು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಪಾಂಚಾಳ ಎನ್ನುವ ಜನವರ್ಗ ಆದಿಕಾಲದಿಂದಲೂ ಪಂಚ ವೃತ್ತಿಗಳಲ್ಲಿ ನಿರತರಾಗಿ ವಿವಿಧ ಜನವರ್ಗಗಳ ಸಂಸರ್ಗದಿಂದ ಚಲನಶೀಲವಾಗುತ್ತಾ ಭೇದಮುಕ್ತ ಸ್ಥಿತಿಯಲ್ಲಿ ಬದುಕುತ್ತಿದ್ದರು. ಇಂಥ ಸಮುದಾಯ ಪ್ರಜ್ಞೆಯ ಬದುಕನ್ನು ವೈದಿಕ ಯುಗದಲ್ಲಿ ಶ್ರೇಣೀಕರಣಕ್ಕೊಳಪಡಿಸಲಾಯಿತು. ಆಗ ಪಾಂಚಾಳ ವೃತ್ತಿ ಮತ್ತು ಸಮಸ್ಕೃತಿಗಳು ಸಮಸ್ಕೃತೀರಣಕ್ಕೊಳಗಾದವು ಮತ್ತು ಮೇಲು ಕೀಳುಗೊಂಡವು.

ಈ ಕುರಿತು ಜೀವಣ್ಣ ಮಸಳಿಯವರು ವಿಶ್ವಕರ್ಮ ಕಲಾ, ವಿಶ್ವಕರ್ಮ ಪತ್ರಿಕೆಗಳಲ್ಲಿ ಲೇಖನ, ಚರ್ಚೆ, ಸಂವಾದ ಮಾಡಿದ್ದನ್ನು ಜೀವಣ್ಣ ಮಸಳಿಯವರು ಈ ಕುರಿತು 'ಶಿವಾನುಭ' ಪತ್ರಿಕೆಯಲ್ಲಿ ಬರೆದದ್ದು ಗಮನಿಸುವ ಸಂಗತಿ.

ತಿಂತಿಣಿ ಮೌನೇಶ್ವರ ವಚನಗಳ ಕುರಿತು ಜೀವಣ್ಣ ಮಸಳಿಯವರ ಹೊಸ ಶೋಧಗಳು ಪ್ರಕಟಿಸುವಲ್ಲಿ ವಿಶ್ವಕರ್ಮ ಪತ್ರಿಕೆಗಳು ತುಂಬಾ ಆಸಕ್ತಿ ತೊರಿಸಿವೆ. ತಿಂತಿಣಿ ಮೌನೇಶ್ವರ ಅವರ ಕಾಲದ ವಿಚಾರ, ಅವರ ಜೀವನ ಕ್ರಮ, ಅವರ ತತ್ವ ಸಿದ್ದಾಂತ, ಅವರ ವಚನಗಳ ಸಂಖ್ಯೆ, ಅವರ ವಚನ 'ಬಸವಣ್ಣ' ಅಂಕಿತ, ಹೀಗೆ ಹಲವು ಹತ್ತು ವಿಚಾರಗಳ ಕುರಿತು ಬರೆದ ಲೇಖನಗಳನ್ನು, ಮಾಡಿದ ಸಂಶೋಧನೆಗಳನ್ನು ವಿಶ್ವಕರ್ಮ ಪತ್ರಿಕೆಗಳು ಪ್ರಕಟಿಸಿ, ಓದುಗರಿಗೆ ತಲುಪಿಸಿವೆ.[೨]

ಪ್ರೊ.ವಿ.ಜಿ.ದೀಕ್ಷಿತ್ 'ವಿಶ್ವಕರ್ಮ ಮೂಲದ' ಬಗ್ಗೆ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಚರ್ಚೆ ಮಾಡಿದ್ದಾರೆ. 'ಕಾಳಾಮುಖರ ಶಕ್ತಿ ಪೀಠ' ಶಿರಸಂಗಿ ಡಾ.ಎಸ್.ಕೆ.ಜೋಷಿಯವರ ಶಿರಸಂಗಿ:ಪುರಾತತ್ವ ಅನ್ವೇಷಣೆಯಲ್ಲಿ (ಕಾಳಿಕಾ ಪ್ರಭ, ಸಂಪುಟ-೧, ಸಂಚಿಕೆ-೩, ಜೂನ್ ೨೦೦೫), ಡಾ.ವೀರೇಶ ಬಡಿಗೇರವರ 'ಪಾಂಚಾಳ ಮತ್ತು ವಿಶ್ವಕರ್ಮ ಪದಗಳೊಂದಿಗೆ ಒಂದು ಅನುಸಂಧಾನ' (ಕಾಳಿಕಾ ಸಂದೇಶ, ಸಂಪುಟ-೩, ಸಂಚಿಕೆ-೧೨, ೨೦೧೫), ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ವಿಶ್ವಕರ್ಮ ವೃತ್ತಿ ಮತ್ತು ಸಂಸ್ಕೃತಿಗಳ ಬಗ್ಗೆ ಚರ್ಚಿಸಿದ್ದು ಗಮನಿಸುವ ಸಂಗತಿ. ಇದೇ ವಿಚಾರವನ್ನು (ಸಹಚಿಂತನ, ಸಂಪುಟ-೧೦, ಸಂಚಿಕೆ-೮, ೧೯೯೫) ಚರ್ಚಿಸಿದ್ದಾರೆ.

ಶ್ರೀ ಟಿ.ವಿ.ಮುತ್ತಾಚಾರ್ಯ ಅವರ 'ವಿಶ್ವಧರ್ಮ ಜನಕ ವೈಶ್ವಕರ್ಮನ ಧರ್ಮ' (ವಿಶ್ವಕಮಾ, ಸಂಪುಟ-೪, ಸಂಚಿಕೆ-೬, ಪುಟ-೨೩,೨೮, ಏಪ್ರಿಲ್ ೧೯೫೨), ಮೋಹನ್‌ರಾವ್ ಎ.ಎಫ್ ಅವರ ಧರ್ಮ ಮತ್ತು ಸಂಸ್ಕೃತಿ (ವಿಶ್ವಕರ್ಮ ಸಂದೇಶ, ಸಂಪುಟ-೨, ಸಂಚಿಕೆ-೫, ಪುಟ-೮,೯, ಜೂನ್ ೨೦೦೬), ಆಚಾರ್ಯ ಮೋಹನ್ ಅವರ 'ವಿಶ್ವಮಾನ್ಯ ವಿಶ್ವಕರ್ಮ ಬ್ರಹ್ಮಣ್ಯರು' (ಪ್ರಬೋಧಕ, ಸಂಪುಟ-೩, ಸಂಚಿಕೆ-೯, ಪುಟ-೧೨-೧೫, ಜುಲೈ ೨೦೧೦), ಡಾ.ಜಿ.ಜ್ಞಾನಾನಂದ 'ಗಣಪತಿಗೇಕೆ ಅಗ್ರಪೂಜೆ' (ವಿಧಾತೃ, ಸಂಪುಟ-೨, ಸಂಚಿಕೆ-೭, ಪುಟ-೧೦-೧೭, ಆಗಷ್ಟ್ ೨೦೧೧), ನಾ.ಭಾ.ಚಂದ್ರಶೇಖರಾಚಾರ್ಯ 'ವಿಶ್ವಕರ್ಮರು ಯಾರು'(ವಿಶ್ವಕರ್ಮೋದಯ, ಸಂಪುಟ-೫, ಸಂಚಿಕೆ-೬-೭, ಪುಟ-೬-೮, ಸಪ್ಟಂಬರ್ ೨೦೦೭), ಹೆಚ್.ಬಿ.ದೊರೆಸ್ವಾಮಿಯವರ 'ಬ್ರಹ್ಮಣ್ಯವೂ ಮತ್ತು ವಿಶ್ವಬ್ರಾಹ್ಮಣ್ಯವೂ ಕಠೋರ ಸತ್ಯಗಳು' (ವಿಶ್ವಕರ್ಮಾ ಸಂದೇಶ, ಸಂಪುಟ-೬, ಸಂಚಿಕೆ-೧೦, ಪುಟ-೫-೬, ಡಿಸೆಂಬರ್ ೨೦೧೦), ಶ್ರೀ ಹೆಬ್ಬಾರ್ ಹರಿದಾಸ್ ಅವರ 'ನಾಗಾರಾಧನೆ' (ಕೃತಿ ಗತಿ, ಪುಟ-೧೬-೨೦, ಜುಲೈ ೨೦೧೪), ಉ.ಜೈ. ಭಾಸ್ಕರಾಚಾರ್ಯ ಅವರ 'ಬೆಳಗುತ್ತಿ ಮಠದ ಗುರುಪರಂಪರೆ ಅವಲೋಕನ' (ವಿಶ್ವಕರ್ಮೋದಯ, ಸಂಪುಟ-೨, ಸಂಚಿಕೆ-೧೧,

ಪುಟ–೭–೯, ಫೆಬ್ರವರಿ ೨೦೦೫), ಡಾ.ರಾಜಶೇಖರ ಬಡಿಗೇರ ಅವರ 'ವಾಜೀವಂಶ ಕಮ್ಮೆ ಬ್ರಾಹ್ಮಣರು' (ಕಾಳಿಕಾ ಸಂದೇಶ, ಸಂಪುಟ–೪, ಸಂಚಿಕೆ–೧, ಪುಟ–೪, ಆಗಸ್ಟ್ ೨೦೦೫).

ಹೀಗೆ ಹಲವು ಮಹತ್ವದ ಹೊಸ ಶೋಧಗಳನ್ನು ವಿಶ್ವಕರ್ಮ ವಿದ್ವಾಂಸರುಗಳಿಂದ ಬರೆಯಿಸಿ ಪ್ರಕಟಿಸಿದ್ದು, ವಿಶ್ವಕರ್ಮ ಪತ್ರಿಕೆಗಳ ಸಾಹಿತ್ಯ ಪೋಷಣೆ ಹಿಡಿದ ಕನ್ನಡಿಯಾಗಿದೆ. ಸಮಾಜದ ಸಂತ ಮತ್ತು ಅನುಭಾವಿಗಳಾದ ತಿಂತಿಣಿ ಮೌನೇಶ್ವರರು, ಹೊಳೆ ಆಲೂರು ಎಚ್ಚರಸ್ವಾಮಿ, ಮುರನಾಳದ ಮಳಿಯಪ್ಪಯ್ಯ, ನವಲಗುಂದದ ನಾಗಲಿಂಗಪ್ಪಜ್ಜ, ಪೋತಲೂರು ವೀರಭ್ರಮೇಂದ್ರರು, ಮೂರುಜಾವಿ ಚಿಕ್ಕಪ್ಪಯ್ಯ, ಶರಣರಾದ ಹಾವಿನಾಳ ಕಲ್ಲಯ್ಯ, ಬಾಚಿ ಕಾಯಕದ ಬಸವಯ್ಯ, ಕಿನ್ನರಿ ಬೊಮ್ಮಯ್ಯ, ಲಚ್ಯಾಣದ ಸಿದ್ದಪ್ಪ ಮಹರಾಜರು, ವರದಾನಿ ಗುಡ್ಡವ್ವೆ, ವಿಶ್ವಕರ್ಮ ಮಠಗಳಾದ ಯಾದಗಿರಿ, ಶಹಪುರ, ಏಕದಂಡಗಿ ಮಠಗಳು, ಆನೇಗುಂದಿ ಸರಸ್ವತಿ ಪೀಠ ಹೀಗೆ ಮುಂತಾದವುಗಳ ವಿಚಾರಗಳ ಕುರಿತಾದ ಸಂಶೋಧನಾತ್ಮಕ ಲೇಖನಗಳನ್ನು ವಿಶ್ವಕರ್ಮ ಪತ್ರಿಕೆಗಳು ಪ್ರಕಟಿಸಿರುವುದನ್ನು ಗಮನಿಸಿರಬಹುದು.

ವಿಶೇಷವಾಗಿ ಶಾಸನಗಳನ್ನಾಧಾರವಾಗಿಟ್ಟುಕೊಂಡು ಕಾಳಾ ಮುಖ, ಕಪಾಲಿಕ, ಪಶುಪತ, ಯತಿ ಪರಂಪರೆಯ ಬಗ್ಗೆ ಪ್ರೊ.ವಿ.ಜಿ.ದಿಕ್ಷಿತ್ ಅವರು ಮಾಡಿದ ಸಂಶೋಧನೆಗಳನ್ನು ಬೆಳಕು ಕಾಣಿಸುವಲ್ಲಿ ವಿಶ್ವಕರ್ಮ ಪತ್ರಿಕೆಗಳ ಪಾತ್ರ ಬಹಳ ದೊಡ್ಡದಿದೆ.

ಇತ್ತೀಚಿಗೆ ಕೊಪ್ಪಳ ತಾಲ್ಲೂಕು ಲೇಬಗಿರಿ ಮಠದ ಮತ್ತು ಮುದ್ದಾಬಳ್ಳಿ ಮಠದ ಹಸ್ತಪ್ರತಿಗಳ ಹೊಸ ಶೋಧ ಕುರಿತು ಡಾ.ವೀರೇಶ ಬಡಿಗೇರ ಅವರು (ಕಾಳಿಕಾ ಸಂದೇಶ, ಸಂಪುಟ–೫, ಸಂಚಿಕೆ–೨, ಏಪ್ರಿಲ್ ೨೦೧೬), ಕಾಳಿಕಾ ಸಂದೇಶ ಪತ್ರಿಕೆಯಲ್ಲಿ ಸಂಶೋಧನಾ ಲೇಖನವನ್ನು ಬರೆದಿದ್ದಾರೆ. ಅದೇ ವಿಶ್ವಕರ್ಮ ಸಂದೇಶ ವಿಶೇಷ ಸಂಚಿಕೆ (೨೦೦೭) ಕನ್ನಡ ಹಸ್ತಪ್ರತಿಗಳಲ್ಲಿ ಮೂಡಿದ ಪಾಂಚಾಳ ಲಿಪಿಕಾರರು ಹಾಗೂ ಪೋಷಕರ ಸಾಂಸ್ಕೃತಿಕ ಸಂಕಥನ ಲೇಖನವಾಗಬಹುದು, ಸಹ ಚಿಂತನ ಪತ್ರಿಕೆಯಲ್ಲಿ ಬರೆದ 'ಅಧುನಿಕ ಕನ್ನಡದ ಅಕ್ಷರ ಶಿಲ್ಪಿ ಅನಂತಾಚಾರಿ' ಇವು ಇತ್ತೀಚಿನ ಶೋಧದ ದೃಷ್ಟಿಯಿಂದ ಮಹತ್ವ ಸಂಗತಿಗಳಾಗಿವೆ. ಕಾ.ವಾ. ಆಚಾರ್ಯ ಅವರ ಸಹ ಚಿಂತನ, ವಿಶ್ವಕರ್ಮ ಕಲಾ ಹಾಗೂ ವಿಶ್ವಕರ್ಮ ವಿಕಾಸವಾಣಿ, (ಸಂಪುಟ–೩, ಸಂಚಿಕೆ–೮, ೨೦೧೯), ವಿಶ್ವಕರ್ಮ ಸಾಹಿತ್ಯ ಚರಿತ್ರೆ ಕುರಿತು ಬರೆದ ಲೇಖನಗಳ ಸರಣಿ ಹೊಸ ಶೋಧಗಳಿಗೆ ನೆಲೆ ಕಲ್ಪಿಸಿವೆ.

ವಿಶ್ವಕರ್ಮ ಸಮಾಜದ ಪತ್ರಿಕೆಗಳ ಪ್ರಮುಖ ಉದ್ದೇಶವೇ ಧಾರ್ಮಿಕ ಜಾಗೃತಿಯನ್ನುಂಟು ಮಾಡುವುದಾಗಿದೆ. ಧಾರ್ಮಿಕ ಜಾಗೃತಿಗಾಗಿ ಪ್ರಾಚೀನ ಧಾರ್ಮಿಕ ಗ್ರಂಥಗಳ ಅವಲೋಕನ–ಅಧ್ಯಯನ ಜೊತೆಗೆ ಕಾಲಕ್ಕೆ ತಕ್ಕಂತೆ ಬದಲಾಗುವ ಪ್ರಕ್ರಿಯೆ ಕುರಿತಾದ ಮಹತ್ವದ ಸಂಶೋಧನೆಯ ಚಿಂತನೆಗಳು ಪ್ರಕಟವಾಗಿವೆ.

ನಾ.ಭ.ಚಂದ್ರಶೇಖರಾಚಾರ್ಯರ 'ವಿಶ್ವಕರ್ಮ ಯಾರು ಸಂಪ್ರಶ್ನೆ' ಎಂಬ ಲೇಖನ ಮಾಲೆ ವಿಶ್ವಕರ್ಮೋದಯ ಪತ್ರಿಕೆಗಳಲ್ಲಿ ಹತ್ತಾರು ಸಂಚಿಕೆಗಳಲ್ಲಿ ಪ್ರಕಟವಾಗಿದೆ. ಪಿ.ಸಿ. ದೇವರಾಜ ವಿಶ್ವಕರ್ಮ ಅವರು 'ಮೂರ್ತಿಪೂಜೆ ಒಂದು ವಿಶ್ಲೇಷಣೆ' ಎಂಬ ಲೇಖನದಲ್ಲಿ ವಿಶ್ವಕರ್ಮರು ನಿರ್ಮಿಸಿದ ಮೂರ್ತಿಗಳ ಪೂಜಾ ವೈಶಿಷ್ಟ್ಯವನ್ನು, ಭಕ್ತರ ಮನಸ್ಥಿತಿಯನ್ನು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ.[೩] ಇದೇ ಪತ್ರಿಕೆಯ ಡಿಸೆಂಬರ್ ಸಂಚಿಕೆಯಲ್ಲಿ 'ನಾವು ಮತ್ತು ನಮ್ಮ ದೇವಾಲಯಗಳು' ಎಂಬ ಲೇಖನವೂ ಧಾರ್ಮಿಕ ಪ್ರಜ್ಞೆಯನ್ನು ಬೆಳೆಸುವಲ್ಲಿ ದೇವಾಲಯಗಳ ಪಾತ್ರವೇನು ಎಂಬುದರ ಔಚಿತ್ಯವನ್ನು ಕುರಿತು ವಿವರಿಸಲಾಗಿದೆ.

ವಿಶ್ವಕರ್ಮ ಧರ್ಮದ ತತ್ವಜ್ಞಾನದ ಹಿನ್ನೆಲೆಯಲ್ಲಿ ಅನೇಕ ಮಹತ್ವದ ಲೇಖನಗಳು ಈ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಉದಾ: ವಿ.ಗುರುಲಿಂಗಾಚಾರ್ಯ ಅವರು 'ಮೋಕ್ಷದ ಸಾಕ್ಷಾತ್ಕಾರದೆಡೆಗೆ' ಎಂಬ ಅಮೂಲ್ಯ ಲೇಖನವೊಂದನ್ನು 'ವಿಶ್ವಕರ್ಮಾ' ಪತ್ರಿಕೆಯ ಏಪ್ರಿಲ್ ೧೯೮೦ರ ಸಂಚಿಕೆಯಲ್ಲಿ ಬರೆದಿದ್ದಾರೆ.

ಸುತಾರ ಎಂ.ಬಿ. ಅವರು 'ವಿಶ್ವಕರ್ಮಧರ್ಮಸಾರ'[೪] ಎಂಬ ಲೇಖನದಲ್ಲಿ ಅತ್ಯಂತ ಪ್ರಾಚೀನ ಧರ್ಮವಾದ ವಿಶ್ವಕರ್ಮ ಧರ್ಮವು ವಿಶ್ವಧರ್ಮದ ಲಕ್ಷಣಗಳನ್ನು ಒಳಗೊಂಡ ಒಂದು ಸಾರ್ವತ್ರಿಕ ಧರ್ಮವಾಗಿದೆ ಎಂಬುದನ್ನು ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ. ವಿಶ್ವಕರ್ಮಾ ಪತ್ರಿಕೆಯಲ್ಲಿ ಇದೇ ಲೇಖಕರು 'ವಿಶ್ವಕರ್ಮದ ಧರ್ಮ ಸಿದ್ಧಾಂತ'[೫] ಎಂಬ ವಿಷಯ ಕುರಿತು ಲೇಖನ ಮಾಲೆಯನ್ನೇ ಬರೆದಿದ್ದಾರೆ. "ಭಾರತೀಯ ಬಹುವಿಧ ಪಂಗಡಗಳು ತಮ್ಮದೇ ತತ್ವ ಪ್ರಣಾಳಿಕೆಯನ್ನು ಇರಿಸಿಕೊಂಡಿವೆ. ಅವೆಲ್ಲ ವಿಶ್ವಕರ್ಮನ ಶೂನ್ಯವಾದವನ್ನೇ ಹಿಂಬಾಲಿಸಿ ವಿಶ್ವಕರ್ಮನ ಸಿದ್ಧಾಂತವನ್ನು ಬದಿಗೆ ಸರಿಸಿ ಅದನ್ನು ಹಾಳು ಮಾಡಲು ಪ್ರಯತ್ನ ಪಟ್ಟಿವೆ. ವಿಶ್ವಕರ್ಮರಾದ ನಾಗಾರ್ಜುನರ ಶೂನ್ಯವಾದವನ್ನು ತಿಳಿದುಕೊಂಡು ನಾಗಾರ್ಜುನರ ಹೆಸರನ್ನು ಅಳಿಸಲು ಪ್ರಯತ್ನಿಸುತ್ತಿವೆ. ಶೂನ್ಯವೆಂದರೆ ವಿಶ್ವಕರ್ಮನ ಸ್ವರೂಪವಾಗಿದೆ.

ವಿಶ್ವಕರ್ಮ ಧರ್ಮದ ಪ್ರಾಚೀನತೆಯನ್ನು ಶೋಧಿಸುವ ಪ್ರಯತ್ನದಲ್ಲಿ ಅನೇಕ ವಿದ್ವಾಂಸರು ಸಂಶೋಧನಾತ್ಮಕ ಲೇಖನಗಳನ್ನು ಬರೆದಿರುವುದು ನನ್ನ ಗಮನಕ್ಕೆ ಬಂದಿದೆ. ಈ ವಿಷಯದಲ್ಲಿ ನಾ.ಭಾ. ಚಂದ್ರಶೇಖರಾಚಾರ್ಯ ಅವರ ಲೇಖನಗಳು ಮೌಲಿಕವಾಗಿವೆ. 'ಈಶ್ಯಾವಾಸ್ಯವು ವಿಶ್ವಕರ್ಮೋಪನಿಷತ್ತು'[೬] ಎಂಬ ಲೇಖನದಲ್ಲಿ ವಿಶ್ವಕರ್ಮನ ಮಗಳಾದ ಸಂಜ್ಞಾದೇವಿಯನ್ನು ಸೂರ್ಯದೇವನು ಮದುವೆಯಾಗಿದ್ದು ಪುರಾಣಗಳಲ್ಲಿ ಉಲ್ಲೇಖವಾದಂತೆ, ಶುಕ್ಲ ಯುಜುರ್ವೇದದ ದ್ರಷ್ಟಾರನಾದ ಯಜ್ಞವಲ್ಕನಿಗೆ ಸೂರ್ಯನೆ ಕುದುರೆಯ ರೂಪದಲ್ಲಿ ಸಂಹಿತೆಯೊಂದನ್ನು ನೀಡಿದನೆಂಬ ಪ್ರತೀತಿ ಇದೆ. ಆ ಸಂಹಿತೆಯನ್ನು ವಾಜಸನೇಯೋಪನಿಷತ್ತು ಎಂದು ಕರೆಯಲಾಗುತ್ತದೆ. ಕರ್ಮಜ್ಞಾನ ಸಮುಚ್ಚಯಾತ್ಮಕವಾದ ಶುಕ್ಲಯಜುರ್ವೇದದ ಮಹತ್ವವನ್ನು ಗುರುತಿಸಿದ ಶಿಲ್ಪ ಪರಂಪರೆಯವರು ಅದನ್ನು ಪ್ರಣವವೇದವೆಂದು ಸರ್ವವೇದಗಳ ಮೂಲ ತತ್ತ್ವವೆಂದು ಗೌರವಿಸಿದ್ದಾರೆ.

ಹೀಗಾಗಿ ಈಶ್ಯಾವಾಸ್ಯ ಉಪನಿಷತ್ತುವು ವಿಶ್ವಕರ್ಮ ಉಪನಿಷತ್ತುವೂ ಆಗಿದೆ ಎಂಬುದನ್ನು ಇಲ್ಲಿ ಎಳೆಎಳೆಯಾಗಿ ಬಿಡಿಸಿ ವಿವರಿಸಿದ್ದಾರೆ.

ವಿಶ್ವಕರ್ಮ ಧರ್ಮದ ಅಭಿವೃದ್ಧಿಗಾಗಿ ಪರಿಶ್ರಮಿಸಿದ ಕೀರ್ತಿ ಗುರುಮಠಗಳಿಗೆ ಸಲ್ಲುತ್ತದೆ. ಕರ್ನಾಟಕದಲ್ಲಿ ಎಲ್ಲೆಲ್ಲಿ ವಿಶ್ವಕರ್ಮಮಠಗಳು ಅಸ್ತಿತ್ವದಲ್ಲಿವೆ, ಅವುಗಳ ಕ್ರಿಯಾಶೀಲ ಚಟುವಟಿಕೆಗಳ ಸಮಗ್ರವಾದ ವಿವರಗಳು ಈ ಪತ್ರಿಕೆಗಳ ಲೇಖನಗಳಿಂದ ನಮಗೆ ಸಿಗುತ್ತವೆ. ಅಲ್ಲದೆ ಈ ಮಠಗಳು ಆಗಾಗ ಕೈಕೊಂಡ ಧಾರ್ಮಿಕ–ಸಾಮಾಜಿಕ–ಶೈಕ್ಷಣಿಕ ಕಾರ್ಯಚಟುವಟಿಕೆಗಳ ವರದಿಗಳು ಕೆಲವು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಈ ಪತ್ರಿಕೆಗಳ ಅಧ್ಯಯನ ಮಾಡುವುದರಿಂದ ಸ್ವಾತಂತ್ರೋತ್ತರ ಕನ್ನಡ ನಾಡಿನಲ್ಲಿ ವಿಶ್ವಕರ್ಮ ಸಮಾಜವು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಮಾಡಿದ ಸಾಧನೆ ಸಿದ್ಧಿಗಳ ಸಮೃದ್ಧ ವಿವರಗಳು ಕಾಣುತ್ತವೆ. ಋ.ಸಿ.ನಾಗರಾಜಾಚಾರ್ ಎಂಬುವರು 'ವಿಶ್ವಕರ್ಮ ಗುರುಮಠಗಳು'[೭] ಎಂಬ ಲೇಖನ ಕರ್ನಾಟಕದಲ್ಲಿರುವ ವಿಶ್ವಕರ್ಮ ಮಠಗಳ ಸಂಕ್ಷಿಪ್ತ ಇತಿಹಾಸವನ್ನು ತಿಳಿಸುತ್ತವೆ.

ವಿಶ್ವಕರ್ಮರ ಸಮಸ್ತ ಬದುಕೇ ಒಂದು ರೀತಿಯಲ್ಲಿ ಆಧ್ಯಾತ್ಮೀಕರಣಗೊಂಡಿರುವಂಥದ್ದು. ಅವರು ಮಾಡುವ ಕಾಯಕವೂ ದೈವೀಕ್ರಿಯೆಯಿಂದ ಕೂಡಿರುವಂಥದ್ದು. ಈ ಹಿನ್ನೆಲೆಯಲ್ಲಿ ಕೊಂಡೂರು ವೀರರಾಘವಾಚಾರ್ಯ ಎಂಬುವರು 'ವೇದ ವಾಙ್ಮಯದಲ್ಲಿ ಶಿಲ್ಪ ಪರಂಪರೆ'[೮] ಎಂಬ ಸಂಶೋಧನಾತ್ಮಕ ಲೇಖನವೊಂದನ್ನು ಸಾದರಪಡಿಸಿದ್ದಾರೆ.

ವಿಶ್ವಕರ್ಮರು ವೈದಿಕ ಸಂಸ್ಕೃತಿಯ ಪ್ರಭಾವಲಯದಿಂದ ರೂಪುಗೊಂಡಿರುವುದಕ್ಕೆ ಋಗ್ವೇದದ ಅನೇಕ ಸೂಕ್ತಗಳು ಸಾಕ್ಷಿ ಒದಗಿಸುತ್ತವೆ. ಈ ಕುರಿತು ಕನ್ನಡ ನಾಡಿನಲ್ಲಿ ಮೊದಲು ಸಂಶೋಧನೆ ನಡೆಸಿದವರು ಶಂ.ಬಾ. ಜೋಶಿ ಅವರು. ಶಂ.ಬಾ. ಅವರ ಈ ಲೇಖನಗಳ ಸಂಕಲನ ಇತ್ತೀಚಿಗೆ ಪುಸ್ತಕ ರೂಪದಲ್ಲಿ ಪ್ರಕಟವಾಗಿದ್ದರು. ನಾಲ್ಕು ದಶಕಗಳ ಹಿಂದೆ ವಿಶ್ವಕರ್ಮ ಸಮಾಜದ ಪತ್ರಿಕೆಗಳಲ್ಲಿ ಮೊದಲ ಬಾರಿಗೆ ಬೆಳಕು ಕಂಡು, ಆ ಸಮಾಜ ಜನರಲ್ಲಿ ಅಭಿಮಾನವನ್ನುಂಟು ಮಾಡಿದವು. 'ವಿಶ್ವಬ್ರಾಹ್ಮಣರು–ಒಂದು ವೈದಿಕ ವಿಶ್ಲೇಷಣೆ'[೯] ಎಂಬ ಲೇಖನ ಇದಕ್ಕೆ ನಿದರ್ಶನವಾಗಿದೆ.

ಶಿಲ್ಪ ಸಿದ್ಧಾಂತಿ ಶಿವಯೋಗಿ ಸಿದ್ಧಲಿಂಗ ಸ್ವಾಮಿಗಳು ವಿಶ್ವಕರ್ಮ ಮತ ತತ್ವಗಳ ಕುರಿತು ಅಧಿಕೃತವಾಗಿ ಬರೆಯಬಲ್ಲವರು, ಮಾತನಾಡಬಲ್ಲವರು. ಅವರ ಅನೇಕ ಚಿಂತನೆಗಳು ಆಯಾ ಕಾಲದ ವಿಶ್ವಕರ್ಮ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. 'ವಿಶ್ವಕರ್ಮ ಮತದ ಮೂಲ ತತ್ತ್ವ–ಪ್ರಾಶಸ್ತ್ಯ'[೧೦] ಎಂಬ ಸಂಶೋಧನಾತ್ಮಕ ಧಾರ್ಮಿಕ ಲೇಖನವು ಎರಡು ಸಂಚಿಕೆಗಳಲ್ಲಿ ಪ್ರಕಟಗೊಂಡಿದೆ.

ಕಾಲ ಬದಲಾದಂತೆ ಜಗತ್ತು ಬದಲಾವಣೆಯತ್ತ ಮುಖ ಮಾಡುತ್ತದೆ. ವಿಶ್ವಕರ್ಮ ಸಮಾಜದವರು ಈ ವರೆಗೆ ಮಾಡಿಕೊಂಡ ಬಂದ ಧಾರ್ಮಿಕ ವಿಧಿವಿಧಾನಗಳಾದ ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಸಮಾವರ್ತನೆ, ವಿವಾಹ, ಗರ್ಭದಾನ, ಸೀಮಂತ

ಇತ್ಯಾದಿಗಳು ಮತ್ತು ದೇವತಾ ಕಾರ್ಯಗಳು ಈ ಕಾರ್ಯಗಳಲ್ಲಿ ಬದಲಾವಣೆಗಳನ್ನು ಮಾಡಿದರೆ ಮೂಲ ಸ್ವರೂಪಕ್ಕೆ, ಶಾಸ್ತ್ರದ ಅಸ್ತಿಭಾರಕ್ಕೆ ದಕ್ಕೆಯಾಗಬಹುದೇ? ಎಂಬ ವಿಷಯ ಕುರಿತು ಕೆ. ಶಾಂತಾರಾಮ ಆಚಾರ್ಯ ಅವರು 'ಧಾರ್ಮಿಕ ವಿಧಿಗಳಲ್ಲಿ ಬದಲಾವಣೆ ಸಾಧ್ಯವೇ? ಸಾಧುವೇ...?'[೧೧] ಎಂಬ ಲೇಖನದಲ್ಲಿ ವಾಸ್ತವಿಕ ತಳಹದಿಯ ಮೇಲೆ ಚಿಂತಿಸಿದ್ದಾರೆ.

ಧಾರ್ಮಿಕ ಸಂಘರ್ಷಗಳು ಆದಿಕಾಲದಿಂದಲೂ ನಡೆಯುತ್ತಲೇ ಬಂದಿವೆ. ಯಾವ ಸಮಾಜದ ಪ್ರಭುತ್ವ ಹೆಚ್ಚಾಗುವುದೋ ಆಗ ಸಹಜವಾಗಿಯೇ ಸಂಘರ್ಷಕ್ಕೆ ಎಡೆಮಾಡಿಕೊಡುತ್ತವೆ. ೧೯೨೩–೨೪ರಲ್ಲಿ ಗೋಕರ್ಣದ ದೈವಜ್ಞ ಬ್ರಾಹ್ಮಣ ಸಮಾಜ ಮತ್ತು ಕೋಟಾ ಹವ್ಯಕ ಉಪಾಧಿವಂತರ ನಡುವೆ ವ್ಯಾಜ್ಯವೊಂದು ನಡೆಯಿತು. ಸುಮಾರು ವರ್ಷಗಳ ಕಾಲ ಕೋರ್ಟಿನಲ್ಲಿ ಕೇಸ್ ನಡೆಯಿತು. ೧೬–೮–೧೯೪೦ರಂದು ಮುಂಬೈ ಹೈಕೋರ್ಟು ಮಹತ್ವದ ತೀರ್ಪು ನೀಡಿತು. ದೇವಜ್ಞ ಬ್ರಾಹ್ಮಣರಿಗೆ ಅಲ್ಲಿಯ ಬ್ರಾಹ್ಮಣ ಸಮುದಾಯ ಯಾವುದೇ ಧಾರ್ಮಿಕ ಕ್ರಿಯೆಗಳಿಗೆ ಅಡಚಣೆ ಮಾಡಬಾರದೆಂಬ ಆದೇಶವನ್ನು ಕೋರ್ಟು ನೀಡಿತು. ವಿಶ್ವಕರ್ಮ ಬ್ರಾಹ್ಮಣರು ಪಂಚ ಕರ್ಮಗಳನ್ನು ಮಾಡುವುದರಿಂದ ಅವರನ್ನು ಪಂಚಾಲ ಬ್ರಾಹ್ಮಣರೆಂದು ಕರೆಯುತ್ತಾರೆ. ಅವರನ್ನು ಪರ್ಯಾಯವಾಗಿ ದೈವಜ್ಞ ಬ್ರಾಹ್ಮಣರೆಂದು ಕರೆಯಲಾಗುತ್ತದೆ. ಈ ದೈವಜ್ಞ ಬ್ರಾಹ್ಮಣರಿಗೆ ಪೂಜೆಯ ಹಕ್ಕನ್ನು ನಿರಾಕರಿಸಿದ ಕೋಟ ಹವ್ಯಕ ಬ್ರಾಹ್ಮಣರ ವಿರುದ್ಧ ಮುಂಬೈ ಹೈಕೋರ್ಟಿನಲ್ಲಿ ವಿಜಯ ಸಾಧಿಸಿದ ಒಂದು ಮಹತ್ವದ ಘಟನೆಯನ್ನು ಕುರಿತು 'ಗೋಕರ್ಣ ವ್ಯಾಜ್ಯ ಕೋರ್ಟು ತೀರ್ಪಿನ ಸಾರಾಂಶ'[೧೨] ಎಂಬ ಲೇಖನದಲ್ಲಿ ಕೊಟ್ಟಿದ್ದಾರೆ. ಆ ಕಾಲದ ಧಾರ್ಮಿಕ ಸಂಘರ್ಷಗಳ ಒಂದು ಚಿತ್ರಣ ಈ ಪತ್ರಿಕೆಗಳಿಂದ ನಮಗೆ ಮೊದಲ ಬಾರಿಗೆ ತಿಳಿದುಬರುತ್ತದೆ ಎಂದರೆ ಅತಿಶಯೋಕ್ತಿಯಲ್ಲ.

ವಿಶ್ವಕರ್ಮ ಪತ್ರಿಕೆಗಳಿಗೆ ಲೇಖನ ಬರೆಯುವ ಪ್ರಮುಖ ಸಂಶೋಧಕರೆಂದರೆ, ಡಾ.ಶಿಲಾಕಾಂತ ಪತ್ತಾರ(ಬಾದಾಮಿ), ಡಾ.ಕೆ.ಪಿ.ಈರಣ್ಣ (ಧಾರವಾಡ), ಶ್ರೀ ಹರಿಶ್ಚಂದ್ರಾಚಾರ್ಯ(ಮಂಗಳೂರು), ಶ್ರೀ ಮೌನೇಶ ಆಚಾರ್ಯ (ರಾಣೆ ಬೆನ್ನೂರು), ಶ್ರೀ ಭೀಮಸೇನ ಬಡಿಗೇರ(ಹುಬ್ಬಳ್ಳಿ), ಶ್ರೀ ವಿರೂಪಾಕ್ಷಿ ಬಡಿಗೇರ (ಧಾರವಾಡ), ಶ್ರೀ ಸಿ.ಪಿ.ಮಾಯಾಚಾರ (ಹುಬ್ಬಳ್ಳಿ), ಶ್ರೀ ಆನಂದ ಮಸಳಿ (ಬಾಗಲಕೋಟ), ಶ್ರೀ ವಾಯಯ್ ಎಂ.ಬಡಿಗೇರ (ಬೆಂಗಳೂರು), ಶ್ರೀ ಬಿ.ಎ. ಆಚಾರ್ಯ (ಉಡುಪಿ), ಶ್ರೀ ಪ್ರಭಾಕರ ಆಚಾರ್ಯ (ಮಂಗಳೂರು) ಹೊಸ ತಲೆಮಾರಿನ ಸಂಶೋಧಕರಲ್ಲಿ ಇವರನ್ನು ಹೆಸರಿಸಬಹುದು. ಡಾ. ಗೀತಾಬಾಯಿ ಬಡಿಗೇರ (ಬಾಗಲಕೋಟ), ಡಾ. ಶೇಖರಾಚಾರ್ಯ ಕಮ್ಮಾರ (ಬಳ್ಳಾರಿ), ಡಾ.ರಾಜು ಕಮ್ಮಾರ (ಗೋಕಾಕ), ಡಾ. ಲಕ್ಷ್ಮೀಕಾಂತ ಪಾಂಚಾಳ (ಬೀದರ), ಡಾ.ಗುರುನಾಥ ಬಡಿಗೇರ (ಧಾರವಾಡ), ಡಾ. ಶುಭಕರ ಆಚಾರಿ (ಕುಂದಾಪುರ), ಡಾ. ರಮೇಶ ಆಚಾರಿ (ಉಡುಪಿ) ಇವರೆಲ್ಲರೂ ವಿಶ್ವಕರ್ಮ ಪತ್ರಿಕೆಗಳಲ್ಲಿ, ಅಭಿನಂದನ ಗ್ರಂಥಗಳಲ್ಲಿ ಸ್ಮರಣ ಸಂಚಿಕೆಗಳಲ್ಲಿ ವಿಶ್ವಕರ್ಮ ವಾಙ್ಮಯ ಬೆಳೆಯುವಲ್ಲಿ ಗಣನೀಯ ಕೊಡುಗೆ ನೀಡಿದ್ದಾರೆ.

೫.೨. ಸೃಜನಶೀಲ ಸಾಹಿತ್ಯ :

ವಿಶ್ವಕರ್ಮ ಸಮುದಾಯವು ತನ್ನ ವಾಙ್ಮಯ ಜ್ಞಾನದ ಸೃಜನಶೀಲತೆಯನ್ನು ಅಭಿವ್ಯಕ್ತಗೊಳಿಸಲು ಪತ್ರಿಕಾ ಮಾಧ್ಯಮವನ್ನು ಉಪಯೋಗಿಸಿಕೊಂಡಿದೆ. ಇಲ್ಲಿ ಪ್ರಾದೇಶಿಕವಾಗಿರುವ ವಿಷಯ ವಸ್ತುಗಳನ್ನು ತನ್ನ ವಾಙ್ಮಯ ಜ್ಞಾನದ ಸೃಜನಶೀಲ ಸಾಹಿತ್ಯ ಬೆಳಸಿಕೊಂಡು ಬಂದಿದೆ. ಇದರಲ್ಲಿ ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಪುಸ್ತಕ ಪರಿಚಯ, ವ್ಯಕ್ತಿ ಪರಿಚಯ, ವಿಜ್ಞಾನ ತಂತ್ರಜ್ಞಾನ, ವೈದ್ಯಕೀಯ, ಮಾಹಿಳಾ ಸಂವೇದನೆ, ಗಾದೆಗಳು, ನುಡಿಮುತ್ತುಗಳು ಹೀಗೆ ಹಲವಾರು ಕನ್ನಡ ಸಾಹಿತ್ಯದ ಪ್ರಕಾರದಲ್ಲಿ ತನ್ನ ಸೃಜನಶೀಲ ಸಾಹಿತ್ಯವನ್ನು ಸಹೃದಯರಿಗೆ ತಲುಪಿಸಲು ಪ್ರಬಲ ಮಾಧ್ಯಮವಾದ ಪತ್ರಿಕಾ ಮಾಧ್ಯಮವನ್ನು ಬಳಸಿಕೊಂಡಿದೆ. ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ಪತ್ರಿ ಸಂಚಿಕೆಯಲ್ಲಿ ವಾರದ ಭವಿಷ್ಯ, ಚಂದಾದಾರರ ಮಾಹಿತಿ ಮತ್ತು ಓದುಗರ ಪತ್ರತಿಕ್ರಿಯೆ ಕೂಡಾ ಪ್ರಸಾರವನ್ನು ಮಾಡುತ್ತಾ ಬಂದಿದ್ದು ಗುರುತಿಸಬಹುದು.

೫.೨.೧. ಕಾವ್ಯ :

ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ಕನ್ನಡ ಸಾಹಿತ್ಯದ ಕಾವ್ಯ ಪ್ರಕಾರವನ್ನು ಪ್ರಕಟಿಸುವ ಮೂಲಕ ಸಹೃದಯರಿಗೆ ಕಾವ್ಯದ ಅಭಿರುಚಿಯನ್ನು ಉಣಬಡಿಸಿದ್ದಾರೆ. ನಾಡಿನ ವಿವಿಧ ಕವಿಗಳು ವಿಶ್ವಕರ್ಮ ಸಮುದಾಯದ ಪತ್ರಿಕೆಗಳಿಗೆ ತಮ್ಮ ಕವನಗಳನ್ನು ನೀಡುತ್ತಾ ಬಂದಿದ್ದಾರೆ.

ಪ್ರಮುಖ ಕವಿಗಳಾದ ಮೂರ್ತಿ, 'ಮಹಾತ್ಮ ಗಾಂಧಿ' (ವಿಶ್ವಕರ್ಮಾ, ಸಂಪುಟ-೨, ಸಂಚಿಕೆ-೫, ಪುಟ-೫, ಮಾರ್ಚ್ ೧೯೫೦), ಉ.ಕಾ.ಸು 'ಸುಂದರ ಸಂಜೆ' (ವಿಶ್ವಕರ್ಮಾ, ಸಂಪುಟ-೨, ಸಂಚಿಕೆ-೫, ಪುಟ-೪, ಮಾರ್ಚ್ ೧೯೫೦), ಕೆ.ರಾಮಚಂದ್ರ ಆಚಾರ್ಯ, 'ನೀವಿಲ್ಲದಿನ್ನಾರು ದೇವರೆನಗೆ' (ವಿಶ್ವಕರ್ಮಾ, ಸಂಪುಟ-೨, ಸಂಚಿಕೆ-೬, ಪುಟ-೩, ಏಪ್ರಿಲ್ ೧೯೫೦), ಎ. ಗಂಗಾಧರಯ್ಯನವರು, 'ವಿಶ್ವಕರ್ಮ ಹಿತಬೋಧೆ' (ವಿಶ್ವಕರ್ಮಾ ಸಂಪುಟ-೨, ಸಂಚಿಕೆ-೮, ಪುಟ-೨೪-೨೬, ಜೂನ್ ೧೯೫೦), ಟಿ.ವಿ.ಮುತ್ತಾಚಾರ್ಯ, 'ದೀಕ್ಷೆಯ ತೊಡಿ ಬೇಗ' (ವಿಶ್ವಕರ್ಮಾ ಸಂಪುಟ-೨, ಸಂಚಿಕೆ-೯, ಪುಟ-೨೯-೩೦, ಜುಲೈ ೧೯೫೦), ಭೋಜಕುಮಾರ, 'ಮಳೆಯರಾಯ ಬಾರ' (ವಿಶ್ವಕರ್ಮಾ ಸಂಪುಟ-೨, ಸಂಚಿಕೆ-೯, ಪುಟ-೩೧, ಜುಲೈ ೧೯೫೦) ಹೀಗೆ, ಮುಂತಾದ ಕವಿಗಳು ತಮ್ಮ ಕಾವ್ಯಗಳನ್ನು, ವಿಶ್ವಕರ್ಮ ಪತ್ರಿಕೆಗಳಿಗೆ ನೀಡಿ ಪ್ರಕಟಿಸಿರುವುದು. ಸಹೃದಯರನ್ನು ಸಂತೃಪ್ತಿಗೊಳಿವೆ ಎಂಬುದು ಗುರ್ತಿಸಲಾಗಿದೆ.

ಉದಾಹಣೆ: ಎ. ಗಂಗಾಧರಯ್ಯ ಅವರ 'ವಿಶ್ವಕರ್ಮ ಹಿತಬೋಧೆ' ಎಂಬ ಸುದೀರ್ಘ ಕವನ ಪ್ರಕಟವಾಗಿದೆ. ಪಧ್ಯ ಸಾಹಿತ್ಯ ಹೀಗಿದೆ.

ಬಾಲರಾದಿ ಬಹು ಪರಿತರಿಗೆ ನಾ
ಶೀಲವನೊರೆಯುವೆ ಬಹು ಮುದದೊಳ್

ಮೇಲೆನಿಸುವ ನೀವ್ ಭೌವನ ಧರ್ಮವ
ಪಾಲಿಸುತಿಳೆಯೊಳ್ ಬಾಳುವುದು
ವಿಶ್ವದೊಳುತ್ತಮಕುಲನೆಂದೆನಿಪುದು
ವಿಶ್ವಕರ್ಮವೆಂದೆನಿಸುವುದು
ವಶ್ಯರಲ್ಲವೀ ಜನಗಳು ಪರರಿಗೆ
ವಿಶ್ವಸೇವೆಯೊಳ್ಬಾಳುವರು[೧೩]

ಹೀಗೆ ಕಾವ್ಯದುದ್ದಕ್ಕೂ ವಿಶ್ವಕರ್ಮ ಶ್ರೇಷ್ಠತೆಯನ್ನು ಶ್ಲಾಘಿಸುವ ಮಹತ್ವದ ಕವನ ಇದಾಗಿದೆ.

ವಿ. ಗುರುಲಿಂಗಾಚಾರ್ಯ ಅವರು ಶ್ರೀಗುರುಸ್ತುತಿ ಎಂಬ ಜಾನಪದ ತ್ರಿಪದಿಯ ಸುದೀರ್ಘ ಕವನವೊಂದು ವಿಶ್ವಕರ್ಮೋದಯ ಪತ್ರಿಕೆಯ ಏಪ್ರಿಲ್ ೨೦೦೭ರ ಸಂಚಿಕೆಯಲ್ಲಿ ಪ್ರಕಟವಾಗಿದೆ. ಲೋಕಾಚಾರ್ ಅವರ ವಿಶ್ವಕರ್ಮೋದಯ ಪತ್ರಿಕೆಗೆ ಐದು ವರ್ಷಗಳು ಸಂದ ಸಂದರ್ಭದಲ್ಲಿ 'ಬಾಗಿನ ಭಾವನ' ಮತ್ತು 'ಪಂಚಮ ವರ್ಷ' ಎಂಬ ಶುಭ ಹಾರೈಕೆಯ ಕವನಗಳು ಪ್ರಕಟವಾಗಿವೆ.

ಮಂಗಳೂರಿನಿಂದ ಪ್ರಸಾರವಾಗುತ್ತಿರುವ ವಿಶ್ವಕರ್ಮಾ ಪತ್ರಿಕೆಯಲ್ಲಿ ಕಳಸ ರಮೇಶ ಅವರ ಕವನ 'ಮಿನುಗದ ತಾರೆ' ನಮ್ಮ ಜೀವನವು ನಿರ್ಸಗಮಯವಾಗಿರಬೇಕೆಂದು ವಿಚಾರವನ್ನು ತಿಳಿಸುತ್ತದೆ.

'ಬದುಕೆಂಬ ಬಾನಿನಲಿ,
ತಾರೆಯಾಗಿ ಮಿನುಗಿ,
ಕಣ್ಣ ಕೋರೈಸುವ ಮಿಂಚಾಗದೆ,
ಮೊಡ ಮುಸುಕಿನಲಿ,
ಮುಖ ಹುದುಗಿಸಿ ನಕ್ಕು,
ಜನ ಮನದಲಿ,
ಕವಿಯಾಗಿ ಹೊಕ್ಕು,
ಮನದಣಿಯೆ......ನಕ್ಕು,
ಮರೆಯಾಗಬೇಕೆಂದಿದ್ದೆ. ಆದರೆ?
ಬಿರಿವ ಮುನ್ನವೇ ಮೊಗ್ಗು ಬಾಡಿತು
ಬರೆವ ಮುನ್ನವೇ ಹಾಳೆ ಒರಯಿತು.

ಒಂಟಿ ಮರದಲಿದ್ದ,
ಒಂಟಿ ಚಿಗುರೂ,
ಕರಟ ತೂಗಿದಾಗ, ಅಲ್ಲಿದ್ದ ಹಕ್ಕಿಯೂ
ಒಂಟಿಯಾಗಿ ಎತ್ತಲೋ ಹೊರಟು,
ರೆಕ್ಕೆ ಹರಿದಂತಾಗಿ
ನೆಲವ ಕಂಡಿತು.[೧೪] .....

ಈ ಕವನವು ಮನುಷ್ಯನ ಭಾವನೆಯ ಸಹೃದಯತೆಗೆ ಪ್ರಕೃತಿಯ ಮೊಗ್ಗು, ಮರದ ಚಿಗುರು, ಹಕ್ಕಿಯ ಬದುಕು, ನೆಲವು ಕಂಡಿರುವುದು ನಾವು ತಿಳಿದುಕೊಳ್ಳಬೇಕಾದ ಮಹತ್ವದ ಸಂಗತಿಯಾಗಿದೆ.

ಸುಂದರ ಸಂಜೆ ಕವನ :

ಎಂತಹ ಸುಂದರ ಸಂಜೆ ಇದು!
ಶಾಂತಿಯು ತುಂಬಿದ ಸ್ವರ್ಗವಿದು!
ದೂರದ ಹಸುರಿನ ಗುಡ್ಡದ ಸಾಲು
ಮೌನದಿ ನಿಂತಿದೆ ಬಾನ್ಗೆದುರಾಗಿ,
ಕುಕ್ಕನ ಹಳ್ಳಿಯ ಕೆರೆಯಾ ನೀರು
ಸಂಜೆಯ ಬೆಳಕು ಓಕುಳಿಯಾಗಿ
ಹಕ್ಕಿಯ ಗಾನದಿ ತೆರೆತೆರೆಯಾಗಿ[೧೫] ...

ಈ ಕವನದಲ್ಲಿ ಕವಿ ಹೃದಯವು ಮುಳಗುತ್ತಿರುವ ಸೂರ್ಯ ನಸುಗೆಂಪನು ಕಂಡು ಸುಂದರ ಸಂಜೆಯ ಆಗಮನವನ್ನು ಮಾಡುತ್ತಿರುವುದು ಸೇರೆ ಹಿಡದಿದ್ದಾನೆ. ಇಲ್ಲಿ ಗುಡ್ಡ, ಬಾನು, ಕೆರೆ, ಹಕ್ಕಿಯ ಚಿಲಿಪಿಲಿಯ ಕಲರವ ಧ್ವನಿಪೂರ್ಣವಾಗಿ ಹಿಡಿದಿಟ್ಟಿದ್ದಾನೆ.

ಬೋಜಕುಮಾರ ಕವಿಯ ಕಾವ್ಯ: ಶಿಲ್ಪಿ

ಕಾಡಕಲ್ಲ ತಂದು ಮನೆಗೆ
ಮಾಡಿ ನೀಡುತಿರುವ ನಮಗೆ
ನೋಡೆ ಕಂಗಳೆರಡು ಸಾಲವೀ ವಿಚಿತ್ರವ ॥
ಬಳಗಿನಿಂದ ಸಂಜೆಯವರೆಗೆ
ಕುಳಿತು ಬೇಸರಿಲ್ಲವವಗೆ

ಕಳೆಯ ತುಂಬಿ ಕಡೆದನೆನಿತೊ ಜೀವ ಚಿತ್ರವ ॥
ಎದೆಗೆ ಮಗುವ ತಾಯಿ ತಬ್ಬಿ
ಮುದದಿ ಹಾಲನೀಯುವಳುಬ್ಬಿ
ಮುದದಿ ನಗುವ ಸೂಸುತಿಹುದು ಎಳೆಯ ಕೂಸದು ॥
ಗೊಲ್ಲ ಬಾಲೆ ಬೆಣ್ಣೆ ತರಲು
ಕಳ್ಳ ಕೃಷ್ಣನೋಡಿಬಂದು
ಗೊಲ್ಲಬಾಲೆಗರಿಯದಂತೆ ಕದ್ದು ತಿನ್ನುವನು ॥[೧೬] ....

ಈ ಮೇಲಿನ ಪದ್ಯದಲ್ಲಿ ಒಬ್ಬ ಶಿಲ್ಪಿಯ ಮನೋಭಾವದಲ್ಲಿ ಮೂಡಿರುವ ತಾಯಿ ಮಗುವಿನ ಪ್ರೀತಿಯನ್ನು ಅಭಿವ್ಯಕ್ತಗೊಳಿದ್ದಾನೆ. ತಾಯಿಯ ಹೃದಯ ವಿಶಾಲವಾದದ್ದು, ಅವಳಿಗೆ ಎಷ್ಟೇ ಕಷ್ಟ ಬಂದರೂ, ಮಗನ ಮುಖವನ್ನು ನೋಡಿದಾಗ ತನ್ನ ಕಟ್ಟವನ್ನು ಮೆರೆಯುತ್ತಾಳೆ. ಇದನ್ನುಶಿಲ್ಪಿ ಕವನವು ಅರ್ಥಪೂರ್ಣ ಮಾಡಿವೆ.

ದಕ್ಷಿಣ ಕನ್ನಡ ಜಿಲ್ಲಾ ವಿಶ್ವಬ್ರಾಹ್ಮಣ ಯುವ ಜನ ಸಭಾದವರು ಅನೇಕ ಸಲ ವಿಶ್ವರ್ಮ ಸಮಾಜದ ಮಕ್ಕಳಿಗಾಗಿ ಕವಿಗೋಷ್ಠಿಗಳನ್ನು ಹಮ್ಮಿಕೊಂಡಿದ ವಿವರಗಳು ಇಲ್ಲಿವೆ. ಜುಲೈ ೧೯೮೧ರಲ್ಲಿ ೧೪ರಿಂದ ೧೭ ವರ್ಷದ ಒಳಗಿನ ಮಕ್ಕಳಿಗಾಗಿ ಕವಿಗೋಷ್ಠಿ ಏರ್ಪಡಿಸಿದ್ದರು. ಆ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಕು. ಮಂಜುಳಾದೇವಿ ಅವರ 'ಬೆಳಗು' ಎಂಬ ಕವನವನ್ನು ವಿಶ್ವಕರ್ಮಾ ಪತ್ರಿಕೆ ಪ್ರಕಟಿಸಿದೆ.[೧೭]

ಉ.ಕಾ. ಸುಬ್ಬರಾಯಾಚಾರ್ ಅವರು ಮೈಸೂರು ವಿಶ್ವವಿದ್ಯಾಲಯದ ಪ್ರತಿಭಾನ್ವಿತ ಪ್ರಾಧ್ಯಾಪಕರು. ಮೈಸೂರು ವಿಶ್ವವಿದ್ಯಾಲಯದಿಂದ ಸಂಸ್ಕೃತದ ಅನೇಕ ಕೃತಿಗಳ ಕುರಿತು ಅಧಿಕೃತವಾಗಿ ಗ್ರಂಥಗಳನ್ನು ರಚಿಸಿದವರು. ಅವರಲ್ಲಿ ಕವಿತಾಶಕ್ತಿಯೂ ಇತ್ತು ಎಂಬುದಕ್ಕೆ ಸಾಕ್ಷಿಯನ್ನು ನೀಡುತ್ತದೆ 'ವಿಶ್ವಕರ್ಮಾ' ಪತ್ರಿಕೆ. ಅವರು ಬರೆದ 'ಶ್ರೀ ವಿಶ್ವಕರ್ಮ ಸ್ತುತಿಃ'[೧೮] ಎಂಬ ಸಂಸ್ಕೃತ ಪದ್ಯರೂಪದ ಸ್ತುತಿ ಅವರ ಅಪಾರ ಪಾಂಡಿತ್ಯಕ್ಕೆ ನಿದರ್ಶನವಾಗಿದೆ.

**೫.೨.೨. ಕಥೆ :**

ಪ್ರಾಚೀನ ಕನ್ನಡ ಸಾಹಿತ್ಯದ ಅಧ್ಯಾಯನ ಮಾಡುವಾಗ ಸಾಹಿತ್ಯದ ವಿವಿಧ ಪ್ರಕಾರಗಳು ಬೆಳೆದು ಬಂದಿರುವುದು ಗಮನಿಸಲಾಗುವುದು. ಪ್ರಾಚೀನ ಕನ್ನಡ ಸಾಹಿತ್ಯದ ಚಂಪೂ ಮಿಶ್ರಿತ ಗದ್ಯ, ಪದ್ಯ ಪ್ರಕಾರವು ಬೆಳೆದು ಬಂದಿದೆ. ಅದರಂತೆ ನಡುಗನ್ನಡ ಕಾಲಘಟ್ಟದಲ್ಲಿ ವಚನ, ಕೀರ್ತನೆ, ಷಟ್ಪದಿ, ರಗಳೆ, ತ್ರಿಪದಿ, ಕಂದ ಪದ್ಯಗಳಂತಹ ಪ್ರಕಾರಗಳನ್ನು ಗುರ್ತಿಸಲಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಥೆ, ಕವನ, ಕಾದಂಬರಿ, ಗಾದೆಗಳು, ಪ್ರವಾಸ ಸಾಹಿತ್ಯ, ಜೀವನ ಚರಿತ್ರೆ, ಆತ್ಮಚರಿತ್ರೆ, ಪ್ರಬಂಧ, ವಿಜ್ಞಾನ ಸಾಹಿತ್ಯ, ಮಕ್ಕಳ ಸಾಹಿತ್ಯ, ಪರಿಸರ ಸಾಹಿತ್ಯ ಹೀಗೆ

ಹಲವು ಪ್ರಕಾರಗಳು ಬೆಳೆದು ಬಂದಿರುತ್ತವೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ಪತ್ರಿಕಾ ಮಾಧ್ಯಮವನ್ನು ಗಮನಿಸಿದಾಗ ವಿವಿಧ ಸಮುದಾಯಗಳ ಸಾಹಿತ್ಯ, ಸಂಸ್ಕೃತಿಗಳಂತಹ ಲೇಖನಗಳು, ನಾಡು ನುಡಿಯ ವಿಚಾರಗಳು, ಶೈಕ್ಷಣಿಕ ಚಿಂತನೆಗಳು, ರಾಷ್ಟ್ರೀಯ ಪ್ರೇಮ, ಮಹಿಳಾ ಚಿಂತನೆಯಂತಹ ವಿಷಯ ವಸ್ತುಗಳನ್ನೊಳಗೊಂಡ ಕಥೆಗಳನ್ನು ಪ್ರಸಾರ ಮಾಡುತ್ತಿದ್ದವು. ವಿಶ್ವಕರ್ಮ ಸಮುದಾಯದ ಕನ್ನಡ ಪತ್ರಿಕೆಗಳು ಕೂಡ ತನ್ನ ವಾಙ್ಮಯ ಸೃಜನಶೀಲ ಸೃಷ್ಟಿಯೊಂದಿಗೆ, ಪ್ರಸಿದ್ಧ ಕನ್ನಡ ಕಥೆಗಳನ್ನು, ಕಥೆಗಾರರನ್ನು ಪರಿಚಯಿಸುವ ಕೆಲಸ ಈ ಪತ್ರಿಕೆಗಳು ಮಾಡಿರುವುದನ್ನು ಕಾಣುತ್ತೇವೆ.

ಎಸ್. ವೆಂಕಟಸ್ವಾಮಿಯವರ 'ಕಲೆಯ ಬೆಲೆ'[೧೯] ಅಮರ ಶಿಲ್ಪಿ ಜಕ್ಕಣಾಚಾರ್ಯರ ಜೀವನದ ಘಟನೆಯ ವಾಸ್ತವ ಚಿತ್ರಣವನ್ನು ತಿಳಿಸುವ ಮಹತ್ವದ ಕತೆಯಾಗಿದೆ.

ಯು. ಕೆ. ಸುಬ್ಬರಾಚಾಚಾರ್ಯರ 'ಹಣದ ಸೋಲು'[೨೦]

ಕೆ. ರಾಮಚಂದ್ರ ಆಚಾರ್ಯ ಅವರ 'ಸುಖದ ಶೋಧನೆಯಲ್ಲಿ...'[೨೧]

ಯು. ಕೆ. ಸುಬ್ಬರಾಯಾಚಾರ್ಯರ 'ವಿಧಿಯ ವಿಲಾಸ'[೨೨]

ಆನಾರ್ ಅವರ 'ಪ್ರಾರ್ಥನಾ' ಎಂಬ ಕಿರುಕತೆಯು 'ಫಾರ್ಗಟನ್ ಏಂಪೈರ್ ಎಂಬ ಕೃತಿಯಲ್ಲಿ ಬರುವ ಗೋಲ್ಡ್‌ಸ್ಮಿತ್ ಡಾಟರ್ ವಾರ್' ಎಂಬ ಕತೆಯ ಆಧಾರದಿಂದ ಬರೆದ ಕತೆಯಾಗಿದೆ.[೨೩]

ಭೋಜಕುಮಾರ್ ಅವರ 'ಹೃದಯಗಳೆರಡು' ಕಥೆ[೨೪]

ಎನ್. ಎಸ್. ನಾರಾಯಣಸ್ವಾಮಿ 'ಕೂಗು' ಕತೆ[೨೫]

ಧನಂಜಯ ಆಚಾರ್ಯ ಅವರ 'ಬಣ್ಣದ ಹುಚ್ಚಿ'[೨೬] ಹಾಸನದ ಸುಮಂತ ಆಚಾರ್ ಅವರ 'ಶಿಲ್ಪ ಅದ್ಭುತವಾಗಿ ಆದರೆ...'[೨೭] ಎಂಬ ಕಥೆ ತುಂಬ ಸ್ವಾರಸ್ಯವಾಗಿದೆ.

ಕೆ.ಪಿ. ವೀರಾಚಾರ್ಯ 'ಕುಸುಮ' ಕಥೆ[೨೮]

ಕೆ. ರಾಮಚಂದ್ರ ಆಚಾರ್ಯ 'ಮಗನ ಮದುವೆ' ಕಥೆ[೨೯]

ಯು.ಕೆ. ಸುಬ್ಬರಾಯಾಚಾರ್ಯ ಅವರ 'ತಪಸ್ವಿನಿ' ಕಥೆ,[೩೦]

ಕೃಷ್ಣ ಶಿವಶಂಕರ ದೇವಪೂರ 'ಆದರ್ಶ ಸವತಿ'[೩೧]

ಬೋಜಕುಮಾರರ 'ಸಮಾಜದ ಹೃದಯ' ಕಥೆ[೩೨]

ರಾಮಚಂದ್ರ ಆಚಾರ್ ಅವರ 'ನನ್ನ ತಂಗಿ'[೩೩]

ಓ. ಜೀವನ ಅವರ 'ಅಮರನಾದ ಶಿಲ್ಪಿ' ಕಥೆ[೩೪]

ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ರಾಜಕೀಯ ಕ್ಷೇತ್ರದಲ್ಲಿ ಅದ್ವಿತೀಯ ಸಾಧನೆ ಮಾಡಿದ ಗೋವಿಂದ ವಲ್ಲಭ ಪಂತ್ ಅವರು ಕಥೆಗಾರರಾಗಿದ್ದರು ಎಂಬುದು ಇಂದಿನ ಪೀಳಿಗೆಯ ಜನಕ್ಕೆ ಗೊತ್ತಿಲ್ಲದ ವಿಷಯ. ಆದರೆ ಕಾರ್ಕಳದ ದೇವಪ್ಪ ಆಚಾರ್ಯ ಅವರು ಪಂತ್ ಅವರ ಒಂದು ಕಥೆಯನ್ನು 'ಮಿಲನ ಮುಹೂರ್ತ'[೩೫] ಎಂಬ ಹೆಸರಿನಲ್ಲಿ ವಿಶ್ವಕರ್ಮಾ ಪತ್ರಿಕೆಯಲ್ಲಿ ಪ್ರಕಟಿಸಿರುವುದು ಗಮನಾರ್ಹ ಅಂಶವಾಗಿದೆ. ಇದೇ ಸಂಚಿಕೆಯಲ್ಲಿ ಆನಂದಕುಮಾರ ಅವರ 'ಬಡವರ ಮಗಳು' ಎಂಬ ಸ್ವತಂತ್ರ ಸಣ್ಣಕತೆಯೂ ಪ್ರಕಟವಾಗಿದೆ.

ಆರ್. ಕೆ. ನಾರಾಯಣ್ ಅವರು ದಿ ಇಲ್‌ಸ್ಟ್ರೇಟೆಡ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಪ್ರಕಟಿಸಿದ 'ರಿಸ್ಟೋರ್ಡ್ ಆರ್ಮ್' ಎಂಬ ಇಂಗ್ಲಿಷ್ ಕಥೆಯನ್ನು ಬು. ಶಿ. ನಾಗರಾಜಾಚಾರ್ ಅವರು 'ಮರಳಿ ಪಡೆದ ಕೈ' ಎಂಬ ಹೆಸರಿನಲ್ಲಿ ಅನುವಾದಿಸಿ ಪ್ರಕಟಿಸಿದ್ದಾರೆ.[೩೬]

ಬಿ. ಪಾರ್ವತಿ ಆಚಾರ್ಯ ಅವರ 'ತಿರುಮಂತ್ರ'[೩೭] ಎಂಬ ಕಥೆ ದಕ್ಷಿಣ ಕನ್ನಡ ಜಿಲ್ಲಾ ವಿಶ್ವಬ್ರಾಹ್ಮಣ ಯುವಜನ ಸಭಾ ಏರ್ಪಡಿಸಿದ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಕಥೆಯಾಗಿದೆ.

ನಿಂಜೂರು ಹರಿಶ್ಚಂದ್ರ ಅವರ 'ಮುಖವಾಡಗಳು'[೩೮] ಎಂಬ ಕಿರುಕತೆ ಕಿರಿದರೊಳು ಪಿರಿದರ್ಥ ತುಂಬಿದೆ.

ಎಂ.ಯೋಗೀಶ ಅವರ 'ಅಪರಿಚಿತ'[೩೯] ಕಿರುಕತೆ ಪ್ರಕಟವಾಗಿದೆ.

ರಾಘವ ಸಿದ್ದಕಟ್ಟೆ ಅವರ 'ಬೆಳಕು ಹರಿದಾಗ'[೪೦] ಎಂಬ ಕಿರುಕತೆ ಪ್ರಕಟವಾಗಿದೆ.

ಹೀಗೆ ಸೃಜನಶಿಲ ಸಾಹಿತ್ಯದಲ್ಲಿ ಕಥೆಯು ಮಾನವನ ಬದುಕಿನ ಚಿತ್ರಣವನ್ನು ಚಿತ್ರಿಸುತ್ತದೆ. ವಿಶ್ವಕರ್ಮ ಸಮುದಾಯದ ಪತ್ರಿಕೆಗಳಲ್ಲಿ ಪರಿಸರ, ಕುಟುಂಬ, ಸಾಮಾಜಿಕ, ಧಾರ್ಮಿಕ ವಿಷಯಳನ್ನಾಧರಿಸಿ ವಿವಿಧ ಕಥೆಗಳನ್ನು ಕಟ್ಟಿಕೊಟ್ಟಿದ್ದಾರೆ.

ಕೆಲವು ಲೇಖಕರು ತಾವು ಪ್ರವಾಸ ಕೈಕೊಂಡ ನಿಮಿತ್ಯ ಅನುಭವಗಳನ್ನು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಎಂ. ಗಂಗಾಧರಮೂರ್ತಿ ಅವರು 'ಶಿಲ್ಪಕಲೆಯ ದಿವ್ಯ ಸೌಂದರ್ಯ ಚಿಮ್ಮುತ್ತಿದೆ ಈ ಬೇಲೂರಿನಲ್ಲಿ'[೪೧] ಎಂಬ ಕಥೆ ಒಂದು ಪ್ರವಾಸ ಕಥನವಾಗಿದ್ದು, ಬೇಲೂರಿನ ಸಮಗ್ರ ಪರಿಚಯ ಮಾಡಿಕೊಡುತ್ತದೆ. ಎಸ್.ಕೆ.ಪತ್ತಾರ ಅವರ 'ನನ್ನ ಹಂಪೆಯಾತ್ರೆ'[೪೨] ಒಂದು ಸುಂದರ ಪ್ರವಾಸಕಥನವಾಗಿದೆ. ವಿಶ್ವಕರ್ಮಾ ಪತ್ರಿಕೆಯ ಸಂಪಾದಕ ಎಂ. ಗಂಗಾಧರ ಮೂರ್ತಿ ಅವರು 'ಎಚ್ಚೆತ್ತ ಭಾರತೀಯ ವಿಶ್ವಕರ್ಮರು'[೪೩] ಎಂಬ ಲೇಖನ ಮಾಲೆಯ ಮೂಲಕ ತಾವು ಇಡೀ ಭಾರತದ ಪ್ರವಾಸ ಮಾಡಿದ ವಿವರಗಳನ್ನು ಪ್ರಕಟಿಸಿದ್ದಾರೆ. ಪಂಜಿಕಲ್ ಶಾಮರಾಯ ಆಚಾರ್ಯ ಎಂಬುವರು ೧೯೭೦ರಲ್ಲಿ ವಿಶ್ವಹಿಂದೂ ಪರಿಷತ್ತಿನ ವತಿಯಿಂದ ದಕ್ಷಿಣ ಭಾರತದ ಪ್ರವಾಸ ಕೈಕೊಂಡ ನಿಮಿತ್ಯ ಅಲ್ಲಿಯ ಅನುಭವಗಳನ್ನು 'ಪ್ರವಾಸ ಅನುಭವ'[೪೪] ಎಂಬ ಲೇಖನದಲ್ಲಿ ದಾಖಲಿಸಿದ್ದಾರೆ. ಅದು ಲೇಖನ ಮಾಲೆಯಾಗಿ ಹಲವು ಸಂಚಿಕೆಗಳಲ್ಲಿ ಮುಂದುವರಿದಿದೆ.

ಎನ್. ವಿ. ಅಂಬಾಮಣಿ ಮೂರ್ತಿ ಅವರ 'ಅಮೇರಿಕಾ ಪ್ರವಾಸದ ನನ್ನ ಅನುಭವಗಳು'[೪೫] ಎಂಬ ಲೇಖನ ಮಾಲೆ ವಿಶ್ವಕರ್ಮೋದಯ ಪತ್ರಿಕೆಯಲ್ಲಿ ನಿರಂತರವಾಗಿ ಹತ್ತು ಸಂಚಿಕೆಗಳಲ್ಲಿ ಪ್ರಕಟವಾಗಿದೆ. ಸಾಹಿತ್ಯಿಕ ಸೇವೆಗಾಗಿ ಅಮೇರಿಕೆಯಲ್ಲಿ ಅವರ ಸನ್ಮಾನ ಸಮಾರಂಭ ನಿಮಿತ್ಯ ಮಾಡಿದ ಪ್ರವಾಸದ ರಮ್ಯ ಕಥನವನ್ನು ಒಂದು ಲಲಿತ ಪ್ರಬಂಧದ ಮಾದರಿಯಲ್ಲಿ ಅಂಬಾಮಣಿ ಮೂರ್ತಿ ಅವರು ಕಟ್ಟಿಕೊಟ್ಟಿರುವುದು ಗಮನಿಸುವ ಅಂಶವಾಗಿದೆ.

**೫.೨.೩. ಕಾದಂಬರಿ :**

ಕನ್ನಡ ವಿಶ್ವಕರ್ಮ ಪತ್ರಿಕೆಗಳು ಸಾಹಿತ್ಯದ ಪ್ರಕಾರಗಳಲ್ಲಿ ಪ್ರಮುಖವಾದ ಕಾದಂಬರಿಯ ಕ್ಷೇತ್ರವನ್ನೂ ಕೂಡ ತನ್ನ ಪತ್ರಿಕೆಯಲ್ಲಿ ಪ್ರಕಟಿಸುವುದರ ಮೂಲಕ ಸೃಜನಶೀಲ ಸಾಹಿತ್ಯಕ್ಕೆ ಮಾದರಿಯಾಗಿದೆ. ಕರಾಳ ಜಾಲೀಯ ಮರಗಳ ನಡುವೆ ಒಂದು ಸಂಪಿಗೆಯ ಮರವೂ ಕೂಡ ಬೆಳೆಯಬಹುದು. ತಾನು ಎಲ್ಲಿದ್ದರೂ ತನ್ನ ಕಂಪನ್ನಡರಿ ಸಂಪಿಗೆ ಆ ಮುಳ್ಳು ಗಿಡಗಳಲ್ಲಿಯೂ ಒಳ್ಳೆಯ ಭವನೆಗಳನ್ನು ಮೂಡಿಸಬಹುದ. ಹೀಗೆ ನಾಡಿನ ಪ್ರಮುಖ ಕಾದಂಬರಿಕಾರರ ಕಾದಂಬರಿಗಳನ್ನು ಸರಣಿಯಲ್ಲಿ ಪ್ರಕಟಿಸುತ್ತ ಬಂದಿರುವುದಕ್ಕೆ ಉದಾಹರಣೆಯೆಂದರೆ, ಕಾದಂಬರಿಕಾರ ಜೀ.ಶಂ.ಪರಮಶಿವಯ್ಯ ಅವರ 'ಕಣಿವೆಯ ಬಾಳು' ಕಾದಂಬರಿಯನ್ನು ವಿಶ್ವಕರ್ಮ ಪತ್ರಿಕೆಯಲ್ಲಿ ಪ್ರಕಟವಾಗಿರುವುದನ್ನು ಇಲ್ಲಿ ಗಮನಿಸಬಹುದು. 'ಕಣಿವೆ ಬಾಳು' ಕಾದಂಬರಿಯ ಆರಂಭವನ್ನು ಹೀಗೆ ಉದಾಹರಿಸನಹುದು, "ಓ! ನೀನು ತುಳಿದ ದಾರಿಯನ್ನೇ ತುಳಿಯುತ್ತಿರುವೆ! ಕಲ್ಲುಮುಳ್ಳುಗಳನ್ನು ಲೆಕ್ಕಿಸದೆ ಈ ಕಲ್ಮೊರಡಿಯಲ್ಲಿ ನಿತ್ಯವೂ ಒಂದು ಸೋಲುತ್ತಿರವೆ ! ಈ ಮರದ ತಂಪು ನೆರಲು.....ಬನದ ಸೊಂಪು ಸೆಳೆವು.....ಎಲ್ಲವೂ ನಿನ್ನನ್ನು ಮರುಳುಗೊಳಿರುವೆ?... ಇಲ್ಲ....ಯಾವ ಬನದ ಐಸಿರಿಗೂ ನೀನು ಮನಸೋತು ಬಂದಿಲ್ಲವೆಂದೇ ನನ್ನ ವಾದ. ನಾನಿರುವ ಈ ಬರಡು ಮರದಡಿಯಲ್ಲಿ ನಿನಗಾವ ಶಾಂತಿ ದೊರೆತೀತು? ಅದೋ ಅತ್ತ ಸಾಗು, ಆ ಹಿಪ್ಪೆಯ ಮರಗಳನ್ನು ನೋಡು..... ಕರಿಯ ನೆರಳು ಹೆಪ್ಪುಗಟ್ಟಿ ನಿಂತಿದೆ. .... ಹಸಿರು ಮತ್ತೆಯೇ ನಿನ್ನನ್ನು ಸ್ವಾಗತಿಸಿದೆ.... ಅಲ್ಲಿಗೇಕೆ ಹೋಗಲಾರೆ? ಯಾವ ಮೋಹ ನಿನ್ನನ್ನು ಇಲ್ಲಿಗೆ ಸೆಳೆಯಿತು?.... ಆದರೂ ಯೋಚಿಸುತ್ತಿರುವೆ?.... ಕುಳಿತಂತೆಯೇ ಕಲ್ಲಾಗುತ್ತಿರುವೆ! ನಿನ್ನ ಭ್ರಾಂತಿಗೆ ಈ ಮರಗಿಡಗಳು ನಗದಿರುವೆವು?[೪೬]

**೫.೨.೪. ನಾಟಕ :**

ಕನ್ನಡ ಸಾಹಿತ್ಯದ ಸಮಗ್ರ ಚರಿತ್ರೆಯನ್ನು ಅಭ್ಯಾಸಿಸುವಾಗ ಸಾಹಿತ್ಯದ ಹಲವು ಪ್ರಕಾರಗಳು ಬೆಳೆದು ಬಂದಿರುವುದು ಕಾಣುತ್ತೇವೆ. ಪ್ರಚೀನ ಕನ್ನಡ ಸಾಹಿತ್ಯದಲ್ಲಿ ಗದ್ಯ, ಪದ್ಯ ಎಂದು ವಿಂಗಡಿಸಿದರೆ, ನಡುಗನ್ನಡ ಕಾಲಘಟ್ಟದಲ್ಲಿ ವಚನ, ಕೀರ್ತನೆ, ಷಟ್ಪದಿ, ರಗಳೆ, ತ್ರಿಪದಿ, ಕಂದ ಪದ್ಯಗಳಂತಹ ಪ್ರಕಾರಗಳನ್ನು ಗುರ್ತಿಸಲಾಗುತ್ತದೆ. ಅದರಂತೆ ಹೊಸಗನ್ನಡದಲ್ಲಿ ಬೆಳೆದು ಬಂದಿರುವ

ಸಾಹಿತ್ಯ ಪ್ರಕಾರಗಳಲ್ಲಿ ನಾಟಕ ಸಾಹಿತ್ಯವೂ ಒಂದು. ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ತನ್ನ ವಾಙ್ಮಯ ಸೃಷ್ಟಿಯೊಂದಿಗೆ, ನಾಟಕ ಸಾಹಿತ್ಯದ ಪ್ರಕಾರದಲ್ಲಿ ಪ್ರಸಿದ್ಧ ಕನ್ನಡ ನಾಟಕಕಾರರ ನಾಟಕಗಳನ್ನು ಪ್ರಕಟಿಸಿರುವುದನ್ನು ಕಾಣುತ್ತೇವೆ.

ವಿಶ್ವಕರ್ಮ ಸಮಾಜದ ಬರಹಗಾರರಿಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಕೆಲವು ಪತ್ರಿಕೆಗಳು ಉದಯೋನ್ಮುಖ ಲೇಖಕರ ಕವನ-ಕಥೆಗಳ ಜೊತೆಗೆ ಕಿರುನಾಟಕಗಳನ್ನು ಪ್ರಕಟಿಸಿರುವುದು ಕಂಡು ಬರುತ್ತದೆ.

ಗಂಗಾಧರ ಮೂರ್ತಿ ಅವರು ತಮ್ಮ ವಿಶ್ವಕರ್ಮಾ ಪತ್ರಿಕೆಯಲ್ಲಿ ೧೯೫೧ರಲ್ಲಿಯೇ ಕಿರುನಾಟಕಗಳನ್ನು ಪ್ರಕಟಿಸಿ, ಮಾದರಿಯಾಗಿದ್ದಾರೆ. 'ಅಭಿರಾಮಾಚಾರ್ಯ'[೪೭] ಎಂಬ ನಾಟಕವನ್ನು ಈ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ. ಮಂಗಳೂರಿನ ಸುಂದರೇಶ ಎಂಬುವರು ಬರೆದ 'ಧನದಾಹ'[೪೮] ಎಂಬ ನಾಟಕ ಇದಕ್ಕೆ ನಿದರ್ಶನವಾಗಿದೆ.

**೫.೨.೫. ವಿಮರ್ಶೆ ಮತ್ತು ಪುಸ್ತಕ ಪರಿಚಯ :**

ಪತ್ರಿಕೆಗಳಲ್ಲಿ ಕೆಲವು ಪುಸ್ತಕಗಳನ್ನು ಧಾರಾವಾಹಿಯಾಗಿ ಪ್ರಕಟಿಸಿ, ಪರಿಚಯ ಮಾಡಿವೆ. ನಂತರ ಪುಸ್ತಕ ರೂಪದಲ್ಲಿ ಹೊರತರುವ ಕಾರ್ಯವನ್ನು ಕೆಲವು ಸಂಪಾದಕರು ಮಾಡಿದ್ದಾರೆ. ಅವುಗಳ ಪರಿಚಯವನ್ನು ಈ ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ಮಾಡಿರುತ್ತವೆ. ಸಾಹಿತ್ಯದಲ್ಲಿ ವಿಮರ್ಶೆ ಮಹತ್ವವನ್ನು ಪಡೆದುಕೊಂಡಿದ್ದು, ಶ್ರೀ ಶ್ರೀಕಂಠಾಚಾರ್ಯ 'ನಮ್ಮ ಸಾಮಾಜಿಕ ಪರಿಸ್ಥಿತಿ', (ವಿಶ್ವಕರ್ಮಾ ಸಂಪುಟ ೨,ಸಂಚಿಕೆ ೬, ಪುಟ ೧೦, ಎಪ್ರಿಲ್ ೧೯೫೦) ಆದ್ಯಪಳ್ಳಿ ಸೋಮಸುಂದರಂ ಅವರು ಅನಕೃ ಅವರ ಕಾದಂಬರಿಯಾದ 'ಮುಯ್ಯಿಗೆ ಮುಯ್ಯ', (ವಿಶ್ವಕರ್ಮಾ ಸಂಪುಟ ೩,ಸಂಚಿಕೆ ೪-೫, ಪುಟ ೭೬, ಫೆಬ್ರುವರಿ-ಮಾರ್ಚ ೧೯೫೧) ಮುಕ್ತ ಕವಿಯು 'ಮರುಳಾಚಾರ್ಯರ ಶತಕಗಳು'(ವಿಶ್ವಕರ್ಮಾ ಸಂಪುಟ ೪,ಸಂಚಿಕೆ ೧೧, ಪುಟ ೨೨, ಸಪ್ಟೆಂಬರ್ ೧೯೫೨) ಹಲವಾರು ವಿಶ್ವಕರ್ಮ ವಿದ್ವಾಂಸರು ಮಾಡಿರುವ ವಿಮರ್ಶೆಯನ್ನು ವಿಶ್ವಕರ್ಮ ಪತ್ರಿಕೆಗಳು ಪ್ರಕಟಿಸುತ್ತಾ ಬಂದಿರುವುದನ್ನು ಗುರುತಿಸಲಾಗಿದೆ.

ಶ್ರಾದ್ಧ ತರ್ಪಣ ವಿಧಿಃ

ವಿಶ್ವಕರ್ಮಾನ್ವಯ ಪ್ರದೀಪಿಕಾವಲೋಕನಂ (ಧಾರಾವಾಹಿ ರೂಪದಲ್ಲಿ)

ಯಾಜುಷೀ ಗೃಹ್ಯಬೋಧಿನೀ (ಐದು ಭಾಗಗಳಲ್ಲಿ)

ನಿತ್ಯಕರ್ಮಾನುಷ್ಠಾನ ಸಂಗ್ರಹ

ಕಾಶ್ಯಪ ಶಿಲ್ಪೋಕ್ತ ಪ್ರತಿಷ್ಠಾವಿಧಿ

ವಿಶ್ವಕರ್ಮವೋ ವಿಶ್ವಧರ್ಮವೋ

ಗ್ರಾಮಾಂತರ ವಿಶ್ವಕರ್ಮ ಮಠೀಯರೂ ಅವರ ವಿದ್ಯಾಭ್ಯಾಸವೂ

'ವಿಶ್ವಬ್ರಾಹ್ಮಣ' ಪತ್ರಿಕೆಯಲ್ಲಿ– ೧. ಶ್ರೀ ವಿಶ್ವಕರ್ಮ ಮಹಾಪುರಾಣ, ೨. ಶ್ರೀ ಮೂಲಸ್ತಂಭ ಮಹಾಪುರಾಣ, ೩. ಶ್ರೀ ಮದ್ಭಗವದ್ಗೀತಾ, ೪. ಶ್ರೀ ಪಂಚಬ್ರಹ್ಮ ಕಾಲೀ ಸಿದ್ಧಾಂತ, ೫. ವಿಶ್ವಕರ್ಮ ಮನ್ವಂತರಾಧಿಪತಿಗಳು, ೬. ಪ್ರಾತಸ್ಸಂಧ್ಯಾವಂದನೆ (ಅರ್ಥಸಹಿತ), ೭. ವೇದಗಳ ಪರಿಚಯ ಮೊದಲಾದ ಕೃತಿಗಳನ್ನು ಧಾರಾವಾಹಿ ರೂಪದಲ್ಲಿ ಪ್ರಕಟಿಸಿರುವುದು ಗಮನಾರ್ಹ.

ಎನ್. ಭಾಸ್ಕರ ಆಚಾರ್ಯ ಅವರ 'ಸ್ಥಿತಿ ಗತಿ' ಪತ್ರಿಕೆ ಕೇವಲ ವಿಶ್ವಕರ್ಮ ಸಮಾಜಕ್ಕೆ ಮಾತ್ರ ಮೀಸಲಾಗದೆ, ಸಮಾಜದ ಎಲ್ಲ ವರ್ಗದ ಸಾಹಿತ್ಯಿಕ ಚಿಂತನೆಗಳನ್ನು ಒಳಗೊಂಡು ಪ್ರಕಟವಾಗುತ್ತಿದೆ. ಉದಾ: ಚೆನ್ನಣ್ಣ ವಾಲೀಕಾರರ ಕಾದಂಬರಿಗಳಲ್ಲಿ ದಲಿತ ಸಂವೇದನೆ, ದಲಿತ ಹೋರಾಟ ಮತ್ತು ಜಾತಿ ಪ್ರಶ್ನೆಯ ಚರ್ಚೆಗಳು ಮೊದಲಾದ ಲೇಖನಗಳು ಇದಕ್ಕೆ ಸಾಕ್ಷಿಯಾಗಿವೆ. ಪ್ರೊ. ಚಿತ್ರಪಾಡಿ ಉಪೇಂದ್ರ ಸೋಮಯಾಜಿ ಇವರು ನೀಡಿರುವ ಪುಸ್ತಕ ಪರಿಚಯ ಡೆಪ್ಯುಟಿ ಚೆನ್ನಬಸಪ್ಪ, ಆರೋಗ್ಯ ಆಯುಷ್ಯ, ಹಿಲಾಲು, ಗುಬ್ಬಚ್ಚಿ ಹೇಳಿದ ಗುಟ್ಟು, ವಿರಹಿ ದಂಡೆ, ಪಂಚಕಜ್ಜಾಯ, ಬರ್ಪದ ಬೆಂಕಿ, ಕೋಳ್ಗಂಬ, ಬಿತ್ತಿದ ಬೆಂಕಿ ಮುಂತಾದ ಸಾಹಿತ್ಯ ಪುಸ್ತಗಳನ್ನು ಪರಿಚಯಿಸುವ ಮಹತ್ವಕ ಕಾರ್ಯವನ್ನು ಸ್ಥಿತಿ ಗತಿ ಪತ್ರಿಕೆ ಮಾಡುತ್ತ ಬಂದಿವೆ.[೪೯]

**೫.೨.೬. ವ್ಯಕ್ತಿ ಪರಿಚಯ :**

ಒಂದು ಸೃಜನಶೀಲ ಸಾಹಿತ್ಯವು ಕೇವಲ ಕಥೆ, ಕಾದಂಬರಿ, ನಾಟಕಗಳಿಗೆ ಮೀಸಲಾಗದೇ, ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಸಾಧಕರನ್ನು, ಕಲಾವಿದರನ್ನು, ಪರಿಚಯಿಸುವ ಮಹತ್ವದ ಕೆಲಸವನ್ನು ಈ ಸಾಹಿತ್ಯ ಮಾಡುತ್ತದೆ. ಇದನ್ನು ವಿಶ್ವಕರ್ಮ ಸಮುದಾಯದ ಪತ್ರಿಕೆಗಳು ವ್ಯಕ್ತಿಯ ಪರಿಚಯಗಳನ್ನು ಮಾಡಿರುವುದು ಇತರೆ ಪತ್ರಿಕೆಗಳಿಗೆ ಸ್ಪೂರ್ತಿಯಾಗಿದೆ. ವಿಶ್ವಕರ್ಮ ಪತ್ರಿಕೆ ಸ್ಥಿತಿ ಗತಿ, ಸಹ ಚಿಂತನ, ರುವಾರಿ ಈ ಪತ್ರಿಕೆಗಳಲ್ಲಿ ವ್ಯಕ್ತಿಯ ಪರಿಚಯ ಕಾಣಬಹುದು. ಉದಾಹರಣೆಗೆ ಎಸ್. ನಂಜುಂಡಿಸ್ವಾಮಿಯವರ 'ಕರ್ನಾಟಕದ ಚಿತ್ರ ಕಲಾವಿಧರು' (ವಿಶ್ವಕರ್ಮಾ, ಸಂಪುಟ–೪, ಸಂಚಿಕೆ–೪, ಪುಟ ಸಂಖ್ಯೆ–೩೦, ಫೆಬ್ರವರಿ ೧೯೫೦), ಪಿ.ಆರ್.ತಿಪ್ಪೇಸ್ವಾಮಿಯವರ 'ಜನಾಬ್ ಎಫ್.ಎಂ.ಸೂಫಿಯವರು' (ವಿಶ್ವಕರ್ಮಾ, ಸಂಪುಟ–೪, ಸಂಚಿಕೆ–೧೧, ಪುಟ ಸಂಖ್ಯೆ–೩೪, ಸೆಪ್ಟಂಬರ್ ೧೯೫೨), ಸಿ.ಎಸ್.ಶಾಸ್ತ್ರಿಯವರ 'ಸಾವಿಗೆ ಸೋಲಿದ ಸೋಮಿ'[೫೦] ಹೀಗೆ ವಿಶೇಷ ಸಾಧನೆಗೈದಿರುವ ಎಲ್ಲಾ ಕ್ಷೇತ್ರದ ಸಾಧಕರನ್ನು ಆಯಾ ವರ್ತಮಾನದಲ್ಲಿ ಸಮಾಜಕ್ಕೆ ಓದುಗರಿಗೆ ಪರಚಯಿಸುವ ಕಾರ್ಯವನ್ನು ವಿಶ್ವಕರ್ಮ ಪತ್ರಿಕೆಗಳು ಮಾಡುತ್ತ ಬಂದಿರುವುದನ್ನು ಗುರ್ತಿಸಿದ್ದೇನೆ.

**೫.೨.೭. ವಿಜ್ಞಾನ ತಂತ್ರಜ್ಞಾನ :**

ಕನ್ನಡ ವಿಶ್ವಕರ್ಮ ಪತ್ರಿಕಗಳಲ್ಲಿ ವಿಜ್ಞಾನ ತಂತ್ರಜ್ಞಾನದ ವಿಷಯಗಳ ಕುರಿತು ವಿವಿಧ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿವೆ. ಜಗತ್ತಿನ ವಿಜ್ಞಾನ ಮತ್ತು ತಂತ್ರಜ್ಞಾನ ಕರ್ತೃ ವಿಶ್ವಕರ್ಮರೇ

ಆಗಿದ್ದಾರೆ. ಪ್ರತಿಯೊಂದು ಕ್ಷೇತ್ರದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಅವಶ್ಯಕವಾಗಿದ್ದು, ಮಾನವನ ಇಂದಿನ ಸಂಪೂರ್ಣ ಜೀವನ ಇದನ್ನ ಅವಲಂಬಿಸಿದೆ. ಟಿ.ವಿ.ಮುತ್ತಾಚಾರ್ಯ ಅವರ ವಿಶ್ವಕರ್ಮಾ ಪತ್ರಿಕೆಯ ಸಂಪುಟ-೩, ಸಂಚಿಕೆ-೨, ಪುಟ-೧೦ರಲ್ಲಿ "ಜೀವನದಲ್ಲಿ ಸಾಹಿತ್ಯ ವಿಜ್ಞಾನಗಳ ಸಾಮರಸ್ಯ" ಲೇಖನದಲ್ಲಿ, ಹೀಗೆ ಹೇಳಿದ್ದಾರೆ. 'ವಿಜ್ಞಾನವೆಂದರೆ, ಪ್ರಕೃತಿಯೊಡನೆ ಪ್ರತಿಭಟನೆ ನಡೆಸಿ ಅದನ್ನು ಪರೀಕ್ಷಿಸುವುದು; ಪರಿಶೋಧಿಸುವದು. ಸೃಷ್ಟಿಯ ಅಂತರಾಳದಲ್ಲಿ ಉದುಗಿರುವ ಮರ್ಮವೇನು? ತತ್ವವೇನು? ಶಕ್ತಿಯಾವುದು? ಅದರ ತಿರುಳೇನು? ಇಂತಹ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಅದು ಕ್ರಮ ಕ್ರಮವಾಗಿಯೇ ಉತ್ತರ ಕೊಡುತ್ತದೆ. ಪ್ರಕೃತಯೆಂದರೆ ಕೇವಲ ನಮ್ಮ ಹೊರಗಣ್ಣಿಗೆ ಕಾಣುತ್ತಿರುವ ನಮ್ಮ ಭೌತಿಕ ಪ್ರಪಂಚ ಮಾತ್ರವೆಂದು ಭಾವಿಸಲಾಗದು. ಅದು ಚೇತನಾ ಚೇತನಾತ್ಮಕವಾದ ಸಮಸ್ತ ಪ್ರಪಂಚದಲ್ಲಿಯೂ ರೂಪಗೊಂಡಿದೆ. ಮನುಷ್ಯ ಸಮಾಜವು ವಿಶ್ವಪ್ರಕೃತಿಯ ಒಂದು ಅಂಶಮಾತ್ರವೆ. ಚರಾಚರಾತ್ಮಕವಾದ ವಿಶ್ವ ಪ್ರಕೃತಿಯ ಎಲ್ಲಾ ಭಾಗಗಳನ್ನು ಕೂಲಂಕುಶವಾಗಿ ಪರಿಶೋಧಿಸಿ ರಹಸ್ಯವನ್ನು ಭೇದಿಸಿ, ವಿಮರ್ಶಿಸಿ, ಜೀವನ ಕ್ರಮವನ್ನು ಉತ್ತಮತರವನ್ನಾಗಿಸಬೇಕೆಂಬುದು ವಿಜ್ಞಾನದ ಮಹಾ ಧ್ಯೆಯ, ಬೃಹತ್ಕಾರ್ಯೆ.' (ವಿಶ್ವಕರ್ಮಾ, ಸಂಪುಟ-೦೩, ಸಂಚಿಕೆ-೦೨, ಪುಟ-೧೦, ಡಿಸೆಂಬರ್ ೧೯೫೦) ಇನ್ನೂ ಹಲವಾರು ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ, ಪಂಚ ಕಸುಬುಗಳಲ್ಲಿಯೂ ವೈಜ್ಞಾನಿಕತೆಯನ್ನು ಗುರುತಿಸಬಹುದು.

**೫.೨.೮. ವೈದ್ಯಕೀಯ :**

ಕನ್ನಡ ವಿಶ್ವಕರ್ಮ ಪತ್ರಿಕೆಗಳು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಿಗಷ್ಟೇ ಸೀಮಿತವಾಗದೇ, ಮಾನವನ ಆರೋಗ್ಯ ಸಂಪತ್ತಿಗೆ ಪೂರಕವಾದ ವಿಚಾರಗಳನ್ನು ನೀಡುವ ಮಹತ್ವದ ಕಾರ್ಯವನ್ನು ವಿಶ್ವಕರ್ಮ ಪತ್ರಿಕೆಗಳು ಮಾಡುತ್ತಿವೆ. ಉದಾಹರಣೆಗೆ : ಡಾ.ಜಿ.ಸರಸ್ವತಮ್ಮನವರ 'ಮಕ್ಕಳ ಸಾಮಾನ್ಯ ಕಾಯಿಲೆಗಳು-ಎಳವು' (ವಿಶ್ವಕರ್ಮಾ, ಸಂಪುಟ-೨, ಸಂಚಿಕೆ-೫, ಪುಟ-೧೯, ಮಾರ್ಚ್ ೧೯೫೦).

ಡಾ.ಪಿ.ಎಸ್.ಶಂಕರ್ ಅವರ 'ವೈದ್ಯಕೀಯ ಬರವಣಿಗೆ' ಯಲ್ಲಿ ವೈದ್ಯ ಬರವಣಿಗೆ ಮಹತ್ವ ಕುರಿತಾಗಿ "ಆರೋಗ್ಯದ ಸಹಭಾಗಿಗಳಾದ ಜನಸಾಮಾನ್ಯರಲ್ಲಿ ಆರೋಗ್ಯ ವಿಚಾರಗಳ ಬಗ್ಗೆ ತಿಳಿದುಕೊಳ್ಳಬೇಕೆಂಬ ಕುತೂಹಲ ಬೆಳೆಯುತ್ತಿದೆ. ದೈಹಿಕ ಅಂಗ ಭಾಗಗಳ ರಚನೆ ಅವುಗಳ ಸಹಜ ಕಾರ್ಯಕ್ರಿಯೆ ಮತ್ತು ಕಾರ್ಯವ್ಯತ್ಯಯದ ಅರಿವು ಅವರಲ್ಲಿರಬೇಕಾದುದು ಅವಶ್ಯವಾಗಿದೆ. ಆ ತಿಳಿವಳಿಕೆಯನ್ನು ಅವರಲ್ಲಿ ಬೆಳೆಸುವಲ್ಲಿ ವೈದ್ಯ ವೃತ್ತಿಯಲ್ಲಿರುವವರು ಮಹತ್ವದ ಪಾತ್ರವನ್ನಾಡುತ್ತಾರೆ.

೧೩೬೦ರಲ್ಲಿ ಒಂದನೆ ಮಂಗರಾಜ ವೈದ್ಯ ಬರವಣಿಗೆಯ ಮಹತ್ವದ ಬಗ್ಗೆ ಹೇಳಿರುವುದು ಮನನೀಯವಾಗಿದೆ; 'ಮರ, ಗಾಳಿ, ಸೂಳೆ, ಬೇಟೆ ಮುಂತಾದವನ್ನು ಹೊಗಳಿ ಕಾವ್ಯ ಬರೆಯುವುದಕ್ಕಿಂತ ಸರ್ವಜನೋಪಕಾರಿಯಾದ ವೈದ್ಯ ಶಾಸ್ತ್ರವನ್ನು ಹೇಳಿರುವುದರಿಂದ ಜನತೆಗೆ ಹೆಚ್ಚು ಉಪಕಾರವಾಗುತ್ತದೆ'. ಇಂತಹ ಬರವಣಿಗೆಲ್ಲಿ ಆಸಕ್ತರಾದವರ ಸಮ್ಮೇಳನ ಮೊದಲ ಬಾರಿ

ಇಪ್ಪತ್ತು ವರ್ಷಗಳ ಹಿಂದೆ ಬೆಳಗಾವಿಯಲ್ಲಿ ಜರುಗಿತು. ಆಮೇಲೆ ಧೀರ್ಘಕಾಲದ ಬಿಡುವಿನ ನಂತರ ೧೯೫೫ ರಿಂದ ಪ್ರತಿವರ್ಷ ಇಂಥ ಸಮಾವೇಶಗಳು ಶಿವಮೊಗ್ಗ ಬೆಳಂಗಾವಿ ಮತ್ತು ಧಾರವಾಡಗಳಲ್ಲಿ ಜರುಗಿ ಐದನೇ ಸಮ್ಮೇಳನ ಇದೀಗ ಬಿಜಾಪುರದಲ್ಲಿ ನಡೆಯುತ್ತಿದೆ."(ಸ್ಥಿತಿ ಗತಿ, ಸಂಪುಟ-೧೦, ಸಂಚಿಕೆ-೨, ಪುಟ ಸಂಖ್ಯೆ-೧೦೦, ಏಪ್ರಿಲ್-ಜೂನ್, ೨೦೨೦) ಎಂದು ಉಲ್ಲೇಖಿಸಿರುತ್ತಾರೆ.

ಬಂಟ್ವಾಳದ ಯೋಗೀಶ ಆಚಾರ್ಯ ಜಿ. ಅವರು 'ಅಸ್ತಮಾ ರೋಗ'ದ ಬಗ್ಗೆ "ಮುಂಜಾಗೃತ ಸಲಹೆಗಳನ್ನು ಈ ಕೆಳಗಿನಂತೆ ತಿಳಿಸಿರುತ್ತಾರೆ,

* ಮನೆಯ ಬಟ್ಟೆಗಳಲ್ಲಿ ಹಾಸಿಗೆ ದಿಂಬುಗಳಲ್ಲಿ ಧೂಳು ಸಂಗ್ರಹವಾಗದಂತೆ ಎಚ್ಚರವಹಿಸಿ.

* ಮನೆಯೊಳಗಣ ತಾಪಮಾನ ಶೇ೫೦%ಕ್ಕಿಂತ ಹೆಚ್ಚಾಗದಂತೆ ಎಚ್ಚರವಹಿಸಿ.

* ಸಾಕುಪ್ರಾಣಿಗಳಿಂದ ದೂರವಿರಬೇಕು. ಅದರ ಮೈಮೇಲೆ ಚರ್ಮಗಳಲ್ಲಿ ಚಿಗಲದಂತಹ ಕ್ರಿಮಿಗಳು ಹಾಗೂ ದೂಳಿನ ಕಣಗಳು ತೊಂದರೆ ಕೊಡುತ್ತವೆ... ಹಾಗೂ ರೋಗದ ಲಕ್ಷಗಳ ಬಗ್ಗೆ ತಿಳಿಸುತ್ತಾ, ಮೂಲತ: ಇದು ಉಸಿರಾಟದ ತೊಂದರೆ, ಶ್ವಾಸನಾಳದಲ್ಲಿ ಅಡಚಣೆಯಾದಾಗ ಉಸಿರಾಡಲು ತೊಂದರೆಯಾಗುತ್ತದೆ." (ಚಿಂತನಶೀಲ ಬುದ್ದಿಜೀವಿ, ಸಂಪುಟ-೧, ಸಂಚಿಕೆ-೫, ಪುಟ-೧೩, ಜನವರಿ-೨೦೧೩)ಎಂದು ಇಂತಹ ಪ್ರಮುಖ ವಿಷಯಗಳನ್ನು ಈ ಪತ್ರಿಯಲ್ಲಿ ವಿವರಿಸಿದ್ದಾರೆ.

ಪ್ರೋ.ಕೆ.ಎ.ಗಂಗಾಧರ್ ಬೆಂಗಳೂರು ಇವರು 'ಜೀರ್ಣಕ್ರಿಯೆ ಮತ್ತು ಉತ್ತಮ ಆಹಾರ ಕ್ರಮಗಳು'[೫೧] ಎಂಬ ಲೇಖದಲ್ಲಿ ಪ್ರೋಟೀನ್‌ಗಳು, ಕೊಬ್ಬುಗಳು, ಆಮ್ಲ ಹಣ್ಣುಗಳು, ಉಪ ಆಮ್ಲ ಹಣ್ಣುಗಳು, ಪಿಷ್ಟ ರಹಿತ ಮತ್ತು ಸೊಪ್ಪುಗಳು ಮುಂತಾವುಗಳ ಬಗ್ಗೆ ವಿವರಿಸಿದ್ದನ್ನು ಕಂಡುಕೊಂಡಿದ್ದೇನೆ.

ಮುಂದುವರೆದು, ೨೦೦೨ನೇ ಸಾಲಿನಲ್ಲಿ 'ಹಿತ ಅಹಿತ' ಎಂಬ ಪುಸ್ತಕಕ್ಕೆ ಕನ್ನಡ ಸಾಹಿತ್ಯ ಪರಿಷತ್‌ನಿಂದ ಡಾ॥ಹಾ.ಮಾ.ನಾಯಕ ಪ್ರಶಸ್ತಿಯನ್ನು ಪಡೆದ ಬೆಂಗಳೂರಿನ ನಿಮ್ಹಾನ್ಸ್‌ನ ಮನೋವೈದ್ಯರಾಗಿದ್ದ ಡಾ॥ಸಿ.ಆರ್.ಚಂದ್ರಶೇಖರ್ ಅವರು ಸೃಜನಶೀಲ ವಿಶ್ವಕರ್ಮ ಪತ್ರಿಕೆಯಲ್ಲಿ 'ಮಾನಸಿಕ ಖಾಯಿಲೆ ಬರಲು ಕಾರಣಗಳೇನು?'(ಸೃಜನಶೀಲ ವಿಶ್ವಕರ್ಮ, ಸಂಪುಟ-೨, ಸಂಚಿಕೆ-೨, ಪುಟ-೮, ೨೫/೦೭/೨೦೦೩) ಎಂಬ ಲೇಖವನ್ನು ಸವಿಸ್ತಾರವಾಗಿ ವಿವರಿಸಿದ್ದಾರೆ.

**೫.೨.೯. ಮಹಿಳಾ ಸಂವೇದನೆ :**

ವಿಶ್ವಕರ್ಮ ಪತ್ರಿಕೆಗಳಲ್ಲಿ ಮಹಿಳಾ ಸಂವೇದನೆ ಕುರಿತು ವಿವೇಚಿಸುವುದಾದರೆ, ವಿಶ್ವಕರ್ಮ ಸಮಾಜದ ಮಹಿಳೆಯರು ಕಲೆಗಳಲ್ಲಿ ಪಾರಂಗತರಾದವರು. ಪುರುಷರಷ್ಟೇ ಅವರೂ ಕಲೆಗಳಲ್ಲಿ ಆಸಕ್ತಿಯುಳ್ಳವರು. ಸಾಹಿತ್ಯ-ಸಂಗೀತ-ವರ್ಣಚಿತ್ರ ಮೊದಲಾದ ಕಲೆಗಳಲ್ಲಿ ಮಹಿಳೆಯರು ಮಾಡಿದ ಸಾಧನೆ ಅಪಾರ. ವಿಶ್ವಕರ್ಮ ಪತ್ರಿಕೆಗಳಲ್ಲಿ ಮಹಿಳೆಯರ ಕಲೆಗಳ ಕುರಿತಾದ ಸಾಧನೆಯ

ವಿವರಗಳನ್ನು ಒಳಗೊಂಡ ಅನೇಕ ಲೇಖನಗಳು ಪ್ರಕಟಗೊಂಡಿವೆ. ಮಹಿಳೆಯರೇ ಕೆಲವರು ಅತ್ಯುತ್ತಮ ಲೇಖನಗಳನ್ನು ಬರೆದು, ವಿಶ್ವಕರ್ಮ ಪತ್ರಿಕೆಗಳ ಮೌಲ್ಯ ಹೆಚ್ಚಿಸಿದ್ದಾರೆ.

ಕಲೆ ಮತ್ತು ಮಹಿಳೆ ಒಂದೇ ನಾಣ್ಯದ ಮುಖಗಳು. ಮಹಿಳೆ ತಾನು ಸುಂದರವಾಗುವುದರ ಜೊತೆಗೆ ತನ್ನ ಗಂಡ, ಮಕ್ಕಳು, ಮನೆ, ಕುಟುಂಬ ಎಲ್ಲವೂ ಸುಂದರವಾಗಿರಬೇಕೆಂದು ಬಯಸುತ್ತಾಳೆ. ಮನೆಯ ಪ್ರತಿಯೊಂದು ಮೂಲೆಯು ಅವಳ ಕಲೆಯ ಕೈಚಳಕದಿಂದ ಕಂಗೊಳಿಸುತ್ತದೆ. ಕಿಟಕಿಯ ಪರದೆಯಿಂದ ಹಿಡಿದು ಟೇಬಲ್ ಹಾಸಿನವರೆಗೂ ಪ್ರತಿಯೊಂದರಲ್ಲೂ ಆಕೆಯ ಕುಶಲತೆ ರಾರಾಜಿಸುತ್ತದೆ. ಮಹಿಳೆಯರಿಗೆ ಕಸದಿಂದ ರಸ ತೆಗೆಯುವ ವಿದ್ಯೆ ಗೊತ್ತು. ಆದರೆ ಕಾಲಘಟ್ಟದಲ್ಲಿ ಅನೇಕ ಸಂದರ್ಭಗಳಲ್ಲಿ ಮಹಿಳೆ ಶೋಷಿತಳಾಗಿಯೂ ಬದುಕಿದ್ದಾಳೆ. ಪ್ರಭಾ ಬೋರಗಾಂವಕರ ಎಂಬುವರು 'ವಿಶ್ವಕರ್ಮ ಮಹಿಳೆ ಮತ್ತು ಕಲೆ' ಎಂಬ ಲೇಖನದಲ್ಲಿ ವಿಶ್ವಕರ್ಮ ಮಹಿಳೆಯರ ಶೋಚನೀಯ ಸ್ಥಿತಿಯನ್ನು ಹೀಗೆ ವಿವರಿಸುತ್ತಾರೆ.

"ವೇದ-ಉಪನಿಷತ್ತುಗಳು ಹೆಣ್ಣಿಗೆ ಪುರುಷನ ಸಮಾನವಾದ ಸ್ಥಾನ ನೀಡಿ ಗೌರವಿಸಿವೆ. ಇದಕ್ಕೂ ಮುಂದೆ ಹೋಗಿ 'ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎಂದು ಹೇಳಿ, ಎಲ್ಲಿ ಮಹಿಳೆಯರು ಪೂಜಿಸಲ್ಪಡುವರೋ ಅಲ್ಲಿ ದೇವತೆಗಳು ವಾಸಿಸುತ್ತಾರೆ' ಎನ್ನಲಾಗುತ್ತಿತ್ತು. ಆದರೆ ಮನು ಹೆಣ್ಣಿಗೆ ಕೇವಲ ಗೃಹಿಣಿಯ ಪಟ್ಟವನ್ನು ನೀಡಿದ. ಅವಳು ಕೇವಲ ಗಂಡ, ಮನೆ, ಮಕ್ಕಳನ್ನು ನೋಡಿಕೊಂಡು ಹೋಗಬೇಕು. ಅವಳಿಗೆ ವೇದ, ಮಂತ್ರ ಪಠಣ ವಿದ್ಯಾಭ್ಯಾಸಕ್ಕೆ ಸ್ವಾತಂತ್ರ್ಯವಿರಲಿಲ್ಲ. ಈ ಹಿನ್ನೆಲೆಯಲ್ಲಿ ವಿಶ್ವಕರ್ಮರ ಸ್ಥಿತಿಯನ್ನು ಹೇಳಬೇಕೆಂದರೆ, ಅವರ ಸ್ಥಿತಿ ತುಂಬಾ ಹೀನಸ್ಥಿತಿಗಿಳಿದಿತ್ತು. ಕಾರಣ ಬಡತನ ಮತ್ತು ಅಜ್ಞಾನ. ಅವರ ಶಿಲ್ಪಕಾರ್ಯಗಳಿಗೆ ಪ್ರೋತ್ಸಾಹ ದೊರೆಯುತ್ತಿರಲಿಲ್ಲ. ಇನ್ನು ಮಹಿಳೆಯ ಸ್ಥಿತಿ ಅಂತೂ ಚಿಂತಾಜನಕವಾಗಿತ್ತು. ಅವಳಿಗೆ ಶಿಕ್ಷಣ ಸರಿಯಾಗಿ ದೊರೆಯುತ್ತಿರಲಿಲ್ಲ. ಅವಳಿಗೆ ಸಾಮಾಜಿಕವಾಗಿ ಶೈಕ್ಷಣಿಕವಾಗಿ ಸಹಕಾರ, ಪ್ರೋತ್ಸಾಹ ಇರಲಿಲ್ಲ. ಅವಳಲ್ಲಿರುವ ಪ್ರತಿಭೆಗೆ ತಣ್ಣೀರು ಸುರಿದಂತಾಗಿ, ಅವಳಲ್ಲಿರುವ ಪ್ರತಿಭೆ ಬಳ್ಳಿ ಚಿಗುರಿ, ಬೆಳೆಯದೆ ಅದು ಕಮರುವಂತಾಗಿತ್ತು. ಉನ್ನತ ವ್ಯಾಸಂಗ ಮಾಡಿದರೆ ಮುಂದೆ ವಿವಾಹ ಸಮಸ್ಯೆ ಕಾಡಬಹುದು ಎಂದು ಎಷ್ಟೋ ತಂದೆ ತಾಯಿಯರು ಸಾಮಾಜಿಕವಾಗಿ ಅವಳನ್ನು ಬೆಳೆಯಲು ಬಿಡುತ್ತಿರಲಿಲ್ಲ."[೫೨]

ಆದರೆ ಇಂದಿನ ಸಮಾಜ ನಿಂತ ನೀರಲ್ಲ. ಅದು ಹರಿಯುವ ನದಿಯಂತೆ, ಮಲೀನವಾದ ಹೊಲಸುಗಟ್ಟಿದ ನೀರನ್ನು ಹೊಸ ನೀರು ಬಂದು ಕೊಚ್ಚಿಕೊಂಡು ಹೋಗುವಂತೆ, ಸಮಾಜದ ನೀತಿ ರೀತಿ ನಿಯಮಗಳು ಕಾಲಕಾಲಕ್ಕೆ ಬದಲಾಗುತ್ತಲೇ ಇರುತ್ತವೆ. ಕಾಲಕ್ಕೆ ತಕ್ಕಂತೆ ಮಹಿಳೆಯರ ಸ್ಥಾನಮಾನಗಳು ಬದಲಾಗಿ ಅವಳು ಪುರುಷನಿಗೆ ಸಮವಾಗಿ ದುಡಿಯುತ್ತಿದ್ದಾಳೆ. ಎಲ್ಲ ಕ್ಷೇತ್ರದಲ್ಲಿ ದುಡಿದು ಅಭಿವೃದ್ಧಿಯನ್ನು ಹೊಂದುತ್ತಿದ್ದಾಳೆ. ವಿಶ್ವಕರ್ಮ ಸಮಾಜದ ಮಹಿಳೆಯರು ಅನೇಕ ಕಲೆಗಳಲ್ಲಿ ಪಾರಂಗತರಾಗಿ ಸಾಧನೆಯನ್ನು ಮಾಡಿದ್ದಾರೆ.

ಸಂಗೀತ ಕಲೆಯಲ್ಲಿ ಕೆ.ಬಿ. ಹೈಮಾವತಮ್ಮನವರ ಹೆಸರು ಹೇಳಲು ಹೆಮ್ಮೆ ಎನಿಸುತ್ತದೆ. ಇವರು ಸಾಹಿತಿಯೂ ಹೌದು. ಸಂಗೀತದಲ್ಲಿ ಪ್ರಾವೀಣ್ಯತೆಯನ್ನು ಪಡೆದ ಇನ್ನೊಬ್ಬ ಮಹಿಳೆ ಧಾರವಾಡದ ಗಾಯತ್ರಿ ಬಡಿಗೇರ ಅವರು.

ವಿಶ್ವಕರ್ಮ ಸಮಾಜದಲ್ಲಿ ಮಹಿಳಾ ಲೇಖಕಿಯರು ಬಹಳಷ್ಟಿದ್ದಾರೆ. ಪ್ರಸಿದ್ಧ ಸಾಮಾಜಿಕ ಕಾದಂಬರಿಗಳನ್ನು ಕಥೆಗಳನ್ನು ಬರೆಯುತ್ತಿರುವ ಕೋಲಾರದ ಶ್ರೀಮತಿ ಸರಿತಾ ಜ್ಞಾನಾನಂದ, ಮಂಗಳೂರು ಜಿಲ್ಲೆಯ ಖ್ಯಾತ ಸಾಹಿತಿ ರತ್ನ ಆಚಾರ್ಯ, ಬೆಂಗಳೂರಿನ ಅಂಬಾಮಣಿಮೂರ್ತಿ, ಉಡುಪಿಯ ಸರಸ್ವತಿದೇವಿ ಡಿ. ಆಚಾರ್, ಶಕುಂತಲಾದೇವಿ ಹೊಳೆಸಾಗರ, ಬೆಂಗಳೂರಿನ ಎಸ್.ಸಿ. ಮೀನಾಕ್ಷಮ್ಮ, ವೈಜಯಮ್ಮ, ಚಿಕ್ಕಮಗಳೂರಿನ ಎ.ಎಂ ವಿಜಯಲಕ್ಷ್ಮೀ, ಕಲಬುರ್ಗಿಯ ಚಿತ್ರೇಖಾ ತೇಂಗಳಿಕರ್, ಹುಬ್ಬಳ್ಳಿಯ ಇಂದಿರಾಬಾಯಿ ಗುಳೇದಗುಡ್ಡ, ಪಾರ್ವತಿಬಾಯಿ ಕಣಗಿನಹಾಳ, ಸುರಪುರದ ಶಾರದಾ ಶಾಪುರಕರ, ಸುವರ್ಣಕಮಲ ಮುದಗೊಡ್ಕರ್, ಸುಮಿತ್ರ ಹೇಮನೂರ್, ಗೀತಾ ಹೂಲಿ, ಜಮಖಂಡಿಯ ಚಂದ್ರಪ್ರಭ ಪತ್ತಾರ, ಬೆಂಗಳೂರಿನ ಶ್ರೀಮತಿ ಇಂದ್ರಕಲಾ ಶಾಸ್ತ್ರಿ ನ್ಯಾಯಾಧೀಶರೂ ಸಾಹಿತಿಯೂ ಆಗಿದ್ದಾರೆ.

ಜಯಶ್ರೀ ಕಣಗಿನಹಾಳ, ಪ್ರಭಾ ಬೋರಗಾಂವಕರ, ಶ್ರೀಮತಿ ಜಯಲಕ್ಷ್ಮೀ, ಶ್ರೀಮತಿ ಹಾರ್ನಳ್ಳಿ ಸಾವಿತ್ರಮ್ಮ ಮೊದಲಾದವರು ವರ್ಣಚಿತ್ರಕಲೆಯಲ್ಲಿ ಪ್ರಸಿದ್ಧಿ ಪಡೆದಿದ್ದಾರೆ. ಕಸೂತಿ ಕಲೆಯಲ್ಲಿ ಧಾರವಾಡ ಕಾಳವ್ವ ನಿಡಗುಂದಿ ರಾಷ್ಟ್ರಪ್ರಶಸ್ತಿ ಪಡೆದಿದ್ದಾರೆ. ಕಸೂತಿ ಕಲೆಯಲ್ಲಿ ಪ್ರಸಿದ್ಧರಾದ ಸಂಕೇಶ್ವರದ ಪ್ರೇಮಾ ಸಾವಗಾಂವ್ಕರ ಅವರ ಸಾಧನೆಯೂ ಅಪಾರ. ರೇಡಿಯೋ ಸ್ಟಾರ್ ಕುಮಾರಿ ಪಟ್ಟಣಕುಡಿ, ವೈದ್ಯಕೀಯ ಕ್ಷೇತ್ರದಲ್ಲಿ ಡಾ. ಶೀಲಾ ಪೋತದಾರ, ತಾಂತ್ರಿಕ ಕಲೆಯಲ್ಲಿ ಶ್ರೀಮತಿ ಆಶಾ ಪೋತದಾರ ಮೊದಲಾದವರ ಸಾಧನೆ ಅನನ್ಯವಾಗಿದೆ.

ಅನುವಾದ ಕಲೆಯಲ್ಲಿ ಶ್ರೀಮತಿ ಸರಿತಾ ಜ್ಞಾನಾನಂದ, ಚಲನಚಿತ್ರರಂಗದಲ್ಲಿ ಪ್ರಸಿದ್ಧಿ ಪಡೆದ ಎಂ.ವಿ. ರಾಜಮ್ಮ, ಭವ್ಯ, ಲಕ್ಷ್ಮೀದೇವಿ ಮೊದಲಾದವರು ವಿಶ್ವಕರ್ಮ ಸಮಾಜಕ್ಕೆ ಗೌರವವನ್ನು ತಂದುಕೊಟ್ಟಿದ್ದಾರೆ.

ವಿಶ್ವಕರ್ಮ ಮಹಿಳಾ ಲೇಖಕಿಯರು ತಮ್ಮ ಸಂವೇದನೆಗಳನ್ನು ಅತ್ಯಂತ ವಾಸ್ತವ ನೆಲೆಯಲ್ಲಿ ಬರೆಯುತ್ತ ಬಂದಿದ್ದಾರೆ. ಸ್ವರೂಪರಾಣಿ ಮಹಿಷಿ ಅವರು 'ಸೊಂಡೂರು ಕುಮಾರ ಸ್ವಾಮಿಯ ದೇಗುಲದ ಬಾಗಿಲು ಮಹಿಳೆಯರಿಗೆ ಪ್ರವೇಶವೇಕಿಲ್ಲ?'[೫೩] ಎಂಬ ವೈಚಾರಿಕ ಲೇಖನವನ್ನು ಬರೆದು, ಸ್ತ್ರೀಯರಿಗೆ ದೇವಸ್ಥಾನ ಪ್ರವೇಶ ನಿಷೇಧಿಸಿದ ಕುರಿತು ಪ್ರಶ್ನೆ ಮಾಡಿದ್ದಾರೆ.

ನಾವು ಮುಂದುವರೆದವರು, ನವನಾಗರಿಕರು, ವಿಚಾರವಾದಿಗಳು, ವೈಜ್ಞಾನಿಕ ಪ್ರಜ್ಞಾವಂತರು, ಲೋಕಜ್ಞಾನ ಬಲ್ಲವರು, ವಿಶ್ವದ ನಾನಾ ಕಡೆ ಹೋಗಿ ಬಂದವರು, ಆಹಾರ-ವಿಹಾರ ಪರಿಣಿತರು, ಗಣಕತಂತ್ರದ ಗಣ್ಯರು, ನಮಗೆ ಎಲ್ಲ ತಿಳಿದಿದೆ.. ಅಕ್ಷರ ಸಂಪತ್ತಿನ ಒಡೆಯರೇ

ನಾವು, ಗಳಿಕೆಯ ಗುಟ್ಟು ಗೊತ್ತಿದೆ, ವೆಚ್ಚದ ಹೆಚ್ಚುಗಾರಿಕೆ ನಮ್ಮದು, ಮೂಢನಂಬಿಕೆಗಳನ್ನೆಲ್ಲ ಓಡಿಸಿ ಬಿಟ್ಟಿದ್ದೇವೆ, ನಾವು ಜಾತಿಭೇದ-ಲಿಂಗಭೇದ ನೋಡದ ವಿಶ್ವಮಾನವರು, ಲೌಕಿಕ-ಪಾರಮಾರ್ಥಗಳೆರಡೂ ನಮಗೆ ಕರಗತ, ನಾವು ಸರ್ವತಂತ್ರ ಸ್ವತಂತ್ರರು-ಇನ್ನೂ ಮುಂತಾಗಿ ಹೇಳಿಕೊಳ್ಳುವ ಆಧುನಿಕ ಭಾರತದ ಜನ ವಾಸ್ತವವಾಗಿ ಹೀಗಿದ್ದಾರೆಯೇ ಎಂದು ಕೇಳಬೇಕಾದ ಸಂದರ್ಭಗಳಲ್ಲಿ ಪ್ರಚಲಿತವಿರುವ, ಚರ್ಚೆಗೊಳಗಾಗಿರುವ 'ಸೊಂಡೂರು ಕುಮಾರಸ್ವಾಮಿ ದೇಗುಲದಲ್ಲಿ ಮಹಿಳೆಯರಿಗೆ ಪ್ರವೇಶ ನಿಷೇದ'ದ ಪ್ರಕರಣದ ಸಂದರ್ಭವೂ ಒಂದು.

ಪ್ರತ್ಯೇಕತೆಯನ್ನು ಅವಲಂಬಿಸದ ಪ್ರಬಲ ಧರ್ಮವಿರುವ ಒಂದು ದೇಶದಲ್ಲಿ ಇದು ಸೋಜಿಗದ ಸಂಗತಿ ಎನಿಸದಿರಬಹುದು. ಕೆಲವು ದೇವಾಲಯಗಳಲ್ಲಿ ಮಹಿಳೆಯರ ಪ್ರವೇಶವನ್ನು ಬಹಿರಂಗವಾಗಿ ನಿಷೇಧಿಸದಿದ್ದರೂ, ಅವುಗಳಲ್ಲಿ ಸಾಕಷ್ಟು ದೇವಾಲಯಗಳು ಮಹಿಳೆಯರು ಮುಟ್ಟಾದಾಗ ಪ್ರವೇಶಿಸಕೂಡದೆಂಬ ಕಟ್ಟುಪಾಡು ಹಾಕಿವೆ. ಇನ್ನು ಕೆಲವು ದೇವಾಲಯಗಳು ವಿದೇಶಿಯರು, ಕ್ರೈಸ್ತರು ಮತ್ತು ಮುಸ್ಲಿಮರಂತಹ ಇತರ ಧರ್ಮಗಳ ಜನರಿಗೂ ಪ್ರವೇಶ ನೀಡುವುದಿಲ್ಲ. ಕೆಲವು ದೇವಾಲಯಗಳಲ್ಲಿ ದೇವರ ದರ್ಶನಕ್ಕೆ ಬರುವವರು ಅಂಗಿ ಲುಂಗಿ ಧರಿಸಬಾರದೆಂದಿದ್ದರೆ, ಇನ್ನು ಕೆಲವು ಕಡೆ ಹೂವು-ಹಾರ ಧರಿಸಬಾರದೆಂದು ಹೇಳಲಾಗುತ್ತದೆ. ಇಂತಹ ನಿಯಮಗಳಿಗೆ ಲೆಕ್ಕವಿಲ್ಲ. ಆದರೆ ಆ ನಿಯಮಗಳು ತಮ್ಮದೇ ಆದ ವಿವಾದಗಳನ್ನು ಕಟ್ಟಿಕೊಂಡಿರುವುದೂ ನಿಜ.

ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದಾದ ಸವಾಯಿ ಮಾಧೋಪುರದ ಘುಶ್ಮೇಶ್ವರ ಮಹಾದೇವ ದೇವಾಲಯಕ್ಕೆ ೨೦೦೪ರ ವರೆಗೆ ಮಹಿಳೆಯರಿಗೆ ಪ್ರವೇಶವಿರಲಿಲ್ಲ. ಆಗ ರಾಜಾಸ್ಥಾನದ ಅಂದಿನ ಶಿಕ್ಷಣ ಸಚಿವ ಘನಶ್ಯಾಮ ತಿವಾರಿ ಅವರು ತಮ್ಮ ಪತ್ನಿಯೊಂದಿಗೆ ಹೋಗಿ ಪೂಜೆ ಸಲ್ಲಿಸಿದ್ದು ಒಂದು ದೊಡ್ಡ ರಂಪವಾಯಿತು. ಆದರೆ ಅದರ ಪರಿಣಾಮವಾಗಿ ಆ ದೇವಾಲಯದ ಬಾಗಿಲುಗಳು ಮಹಿಳೆಯರಿಗೂ ತೆರೆಯುವಂತಾಯಿತು.

ಇತರ ಕೆಲವು ದೇವಾಲಯಗಳಲ್ಲಿ ನಡೆಯುತ್ತಿರುವ ಪೂಜಾರಿಗಳ ಮತಾಚರಣೆಯ ಮಿತಿಕಲ್ಪನೆಯಿಂದಾಗಿ ಸರ್ಕಾರಕ್ಕೆ ಮುಜುಗರವಾಗುವುದೂ ಉಂಟು. ಕಳೆದ ನವೆಂಬರ್ ತಿಂಗಳಲ್ಲಿ ಪ್ರಸಿದ್ಧಪುರಿ ಜಗನ್ನಾಥ ದೇವಾಲಯದ ಪೂಜಾರಿಗಳು ಥೈಲಾಂಡಿನ ರಾಜಕುಮಾರಿ ಮಹಾಚಕ್ರಿ ಸಿರಿಧರ್ನ್ ಅವರ ಪ್ರವೇಶಕ್ಕೆ ಅವಕಾಶ ನೀಡಲಿಲ್ಲ. ವಾಸ್ತವವಾಗಿ ಆಕೆ ಪ್ರಸಿದ್ಧ ಸಂಸ್ಕೃತ ವಿದ್ವಾಂಸಳು. ಆಕೆ ಬೌದ್ಧ ಧರ್ಮದವಳೆಂಬ ಕಾರಣದಿಂದ ಪ್ರವೇಶ ನಿರಾಕರಿಸಲಾಯಿತು. ೧೨ನೆಯ ಶತಮಾನದ ಈ ದೇವಾಲಯದ ನಿಯಮಗಳ ಪ್ರಕಾರ, ಮೂಲತಃ ಹಿಂದೂ ಆಗಿ ಹುಟ್ಟಿದವರು ಅಥವಾ ಭಾರತ ವಿಭಜನೆಗೆ ಮುನ್ನ ಬೌದ್ಧ, ಜೈನ ಅಥವಾ ಸಿಖ್ ಆಗಿ ಹುಟ್ಟಿದವರನ್ನು ಮಾತ್ರ ದೇವಾಲಯದ ಒಳಗೆ ಬಿಡಲಾಗುತ್ತದೆ. ಅಲ್ಲಿನ ಪೂಜಾರಿಗಳು ಎಷ್ಟು ಪ್ರಬಲರೆಂದರೆ, ವಸಾಹತು ಆಡಳಿತದ ಬ್ರಿಟಿಷರಾಗಲೀ, ಸ್ವತಂತ್ರ ಭಾರತದ ಇಂದಿರಾಗಾಂಧಿ ಆಡಳಿತವಾಗಲೀ ಆ ಪೂಜಾರಿಗಳನ್ನು ಕಡೆಗಣಿಸುವ ಧೈರ್ಯ ಮಾಡಲಿಲ್ಲ.

ಮತ್ತೊಂದು ಪ್ರಸಿದ್ಧ ದೇವಾಲಯ ಭುವನೇಶ್ವರದಲ್ಲಿರುವ ಲಿಂಗರಾಜ ದೇವಾಲಯ. ಅಲ್ಲೂ ಇಂತಹುದೇ ನಿಯಮಗಳಿವೆ. ಅಮೆರಿಕಾದಲ್ಲಿ ಜನಿಸಿದ ಪಮೇಲಾ ಕೆ. ಫ್ಲೆಗ್ ಎಂಬಾಕೆ ಭಾರತೀಯನನ್ನು ಮದುವೆಯಾಗಿ, ಹಿಂದೂ ಧರ್ಮವನ್ನು ಅವಲಂಬಿಸಿದ್ದರೂ ೧೧ನೆಯ ಶತಮಾನದ ಈ ದೇವಾಲಯಕ್ಕೆ ಪ್ರವೇಶ ನಿರಾಕರಿಸಲಾಯಿತು. ಆಕೆ ದೇವಾಲಯ ಆಡಳಿತದ ವಿರುದ್ಧ ದೂರು ಸಲ್ಲಿಸಿದರೂ ಪೋಲಿಸರು ಅಸಹಾಯಕರಾಗಿದ್ದರು.

ತಿರುಪತಿಯಲ್ಲಿ ಮಹಿಳೆಯರ ಬಗೆಗೆ ನಿರ್ಬಂಧವಿಲ್ಲ. ಅಲ್ಲಿನ ತಿರುಮಲ ದೇವಸ್ಥಾನದ ಸಿಬ್ಬಂದಿಯಲ್ಲಿ ಶೇಕಡ ೩೦-೪೦ ರಷ್ಟು ಮಹಿಳೆಯರಿದ್ದಾರೆ. ಆದರೂ ಅವರು ಮುಟ್ಟಾದ ಸಂದರ್ಭದಲ್ಲಿ ಒಳ ಪ್ರಾಕಾರಕ್ಕೆ ಪ್ರವೇಶಿಸಕೂಡದೆಂದು ಅವರಿಗೆ ಸೂಚಿಸಲಾಗಿದೆ. ಉಳಿದ ಸಂದರ್ಭದಲ್ಲೂ ಯಾರೂ ವೆಂಕಟೇಶ್ವರನ ಮೂರ್ತಿಯನ್ನು ಮುಟ್ಟುವಂತಿಲ್ಲ. ರಾಷ್ಟ್ರಾಧ್ಯಕ್ಷರು ಮತ್ತು ಪ್ರಧಾನಿ ಸಹ ತೀರ ಹತ್ತಿರವೆಂದರೆ ವಿಗ್ರಹಕ್ಕೆ ೮-೧೨ ಅಡಿಗಳವರೆಗೆ ಹೋಗಬಹುದು. ಈ ವಿಶೇಷ ವಿನಾಯಿತಿಯನ್ನು ಸೋನಿಯಾ ಗಾಂಧಿ ಮತ್ತು ಆಂಧ್ರಪ್ರದೇಶದ ಮುಖ್ಯಮಂತ್ರಿ ರಾಜಶೇಖರ ರೆಡ್ಡಿ (ಅವರೂ ಕ್ರೈಸ್ತರೇ) ಅವರಿಗೆ ಕಲ್ಪಿಸಲಾಗಿತ್ತು. ಉಳಿದಂತೆ ಭಕ್ತಸಮೂಹ ವಿಗ್ರಹಕ್ಕೆ ೨೫ ಅಡಿ ದೂರದಲ್ಲೇ ನಿಲ್ಲಬೇಕು. ಇತರ ಧರ್ಮಗಳ ಜನರು ದೇವಾಲಯ ಪ್ರವೇಶಿಸಬಹುದಾದರೂ 'ಹಿಂದೂ ಧರ್ಮದಲ್ಲಿ ನಂಬಿಕೆ ಇದೆ" ಎಂದು ಪ್ರತಿಜ್ಞೆ ಮಾಡಬೇಕು. ರಾಷ್ಟ್ರಪತಿ ಅಬ್ದುಲ್ ಕಲಾಮ ಮತ್ತು ಸೋನಿಯಾ ಗಾಂಧಿ ಅವರೂ ಹಾಗೆ ಪ್ರತಿಜ್ಞೆ ಮಾಡಿ ಪ್ರವೇಶಿಸಬೇಕಾಯಿತೆಂದು ವರದಿಯಾಗಿದೆ.

ತಿರುಪತಿಗೆ ಮುಸ್ಲಿಮರು ಸಾಮಾನ್ಯ ಸಂದರ್ಶಕರು. ಒಬ್ಬ ಮುಸ್ಲಿಂ ಭಕ್ತ ವೆಂಕಟೇಶ್ವರನ 'ಅಷ್ಟದಳ ಪಾದಪದ್ಮಾರಾಧನಾ ಸೇವೆ'ಗಾಗಿ ೧೦೮ ಕಮಲದ ಹೂಗಳ ಒಂದು ಹರಕೆಯ ಪ್ರತಿಮೆಯನ್ನು ಆ ದೇವಸ್ಥಾನಕ್ಕೆ ದಾನ ಮಾಡಿದ್ದಾನೆ. ದೇವಾಲಯದಲ್ಲಿ ಲಾರ್ಡ್ ಮನ್ರೋನ ಗೌರವಾರ್ಥ ಮುನ್ರೋಲಿಂ ಶ್ಲೋಕ ಅಲ್ಲಿ ರೂಢಿಯಲ್ಲಿದೆ. ಲಾರ್ಡ್ ಮನ್ರೋ ಬ್ರಿಟಿಷರ ಕಾಲದಲ್ಲಿ ಮದರಾಸು ಪ್ರಾಂತ್ಯದ ಗೌರ್ನರ್ ಆಗಿದ್ದವನು.

ದೇವಾಲಯದ ಪಾರುಪತ್ಯೆಯಲ್ಲಿ ಮಾದಕ ದ್ರವ್ಯಗಳು, ಮಾಂಸಾಹಾರ ಮತ್ತು ಪಾದರಕ್ಷೆಗಳ ಬಳಕೆಗೆ ಅವಕಾಶವಿಲ್ಲ. ಹೂವು ಭಗವಂತನಿಗಾಗಿಯೇ ಆಗಿರುವ ಸೃಷ್ಟಿಯಾದ ಕಾರಣ ದೇವರ ದರ್ಶನಕ್ಕೆ ಬರುವ ಭಕ್ತರು ಅದನ್ನು ಧರಿಸಬಾರದೆಂದು ತಿಳಿಸಲಾಗಿರುತ್ತದೆ. ಹಾಗೆಯೇ ಚರ್ಮದುಡಿಗೆ ಹೆಲ್ಮೆಟ್, ಟೋಪಿ ಅಥವಾ ಹ್ಯಾಟುಗಳಿಗೂ ಅಲ್ಲಿ ಅವಕಾಶವಿಲ್ಲ. ಭಕ್ತರು ಎಲೆ ಅಡಿಕೆ ಮೆಲ್ಲಕೂಡದೆಂದು ಸೂಚಿಸಲಾಗಿರುತ್ತದೆ".

ಮೇಲೆ ಹೇಳಿದಂತಹ ನಿಯಮ-ನಿಬಂಧನೆಗಳು ಹಿಂದೂ ಧರ್ಮದ ದೇವಾಲಯಗಳಿಗಷ್ಟೇ ಸೀಮಿತವಾಗಿಲ್ಲ. ಶ್ರೀನಗರದಲ್ಲಿರುವ ಹಜಾರಿ ಬಾಲ್ ಮಂದಿರದಲ್ಲೂ 'ಪವಿತ್ರ ಅವಶೇಷ'

ಇಟ್ಟಿರುವ ಕೊಠಡಿಗೆ ಮಹಿಳೆಯರು ಹೋಗುವಂತಿಲ್ಲ. ಆ ರಾಜ್ಯದ ಮುಸ್ಲಿಂ ವಕ್ಫ್ ಮಂಡಳಿಯ ಪ್ರಧಾನ ವ್ಯವಸ್ಥಾಪಕ ತಸ್ ದಬ್ ಹುಸೇನ್ ಮೀರ್ ಹೇಳುತ್ತಾರೆ. "ಪವಿತ್ರ ಅವಶೇಷ ಇಟ್ಟಿರುವ ಕೊಠಡಿಯ ಪ್ರಕಾರದೊಳಗೆ ಯಾವ ಮಹಿಳೆಗೂ ಪ್ರವೇಶಾವಕಾಶವಿಲ್ಲ. ಆದರೆ ಮಂದಿರದ ಇತರ ಭಾಗಗಳಿಗೆ ಮುಸ್ಲಿಂ ಮಹಿಳೆಯರೂ ಸೇರಿದಂತೆ ಮುಸ್ಲಿಮೇತರ ಪುರುಷರ ಪ್ರವೇಶಕ್ಕೆ ಯಾವುದೇ ನಿಷೇಧವಿಲ್ಲ. ಆದರೆ ಮುಸ್ಲಿಂ ಮಹಿಳೆಯರು ಪವಿತ್ರ ಕಾಬಾ ಪ್ರವೇಶಿಸಬಹುದಾಗಿದ್ದು, ಇಲ್ಲಿನ ನಿಷೇಧ ಮಹಿಳೆಯರ ವಿರುದ್ಧ ಭೇದಭಾವನೆ ಮಾಡಿದಂತಾಗಿದೆ" ಎಂದು ವಿಷಾದಿಸುತ್ತಾರೆ.

ಇಮಾಮ್-ಉ-ಬತೀಬ್-ಇ ದರ್ಗಾದ ಪರೀಷ್ ಮೌಲ್ವಿ ಬಷೀರ್ ಅಹಮದ್ ಫರೂಕಿ "ಪವಿತ್ರ ಅವಶೇಷ ಇಟ್ಟಿರುವ ಪ್ರಾಕಾರಕ್ಕೆ ಮಹಿಳೆಯರು ಹೋಗಬಹುದು. ಆದರೆ ಅವರು ಇಸ್ಲಾಂ ಕಾನೂನಿನಲ್ಲಿ ಪರಿಶುದ್ಧರೆಂದು ಘೋಷಿಸಲ್ಪಟ್ಟಿರಬೇಕು" ಎನ್ನುತ್ತಾರೆ. ಮಸೀದಿಗಳಲ್ಲಿ ಮಹಿಳೆಯರು ಪ್ರಾರ್ಥನೆ ಸಲ್ಲಿಸಲು ಅವಕಾಶವಿದ್ದರೂ ಒಂದು ಪ್ರತ್ಯೇಕ ಆವರಣದಲ್ಲಿ ಮಾತ್ರ.

ಕುತೂಹಲದ ಸಂಗತಿಯೆಂದರೆ, ೨೦೦೦ ವರ್ಷದ ಹಿಂದಿನದೆಂದು ಹೇಳಲಾಗಿರುವ ಶಬರಿಮಲೈ ಅಯ್ಯಪ್ಪ ಸ್ವಾಮಿ ದೇವಾಲಯಕ್ಕೆ ಈ ಮಹಿಳಾ ಪ್ರವೇಶ ನಿಷೇಧ ನಿಯಮಗಳು ಯಾವಾಗ ಹುಟ್ಟಿಕೊಂಡವೆಂಬುದು ಈ ದೇವಾಲಯದ ಪ್ರಧಾನ ತಂತ್ರಿ (ಪೂಜಾರಿ) ಕುಟುಂಬಕ್ಕೂ ಸಹ ತಿಳಿಯದು. ಅವರಿಗೆ ಗೊತ್ತಿರುವುದೆಂದರೆ, 'ಅಯ್ಯಪ್ಪ ಬ್ರಹ್ಮಚಾರಿ ಮತ್ತು ಅವನ ಸಾಕು ತಾಯಿಯಿಂದ ಪಟ್ಟ ಕಟು ಅನುಭವದಿಂದಾಗಿ ಸ್ತ್ರೀಯರ ಬಗೆಗೆ ಅವನಿಗೆ ವಿಶ್ವಾಸವಿಲ್ಲ' ಎನ್ನುವುದಷ್ಟೆ.

ಆದರೆ, ಬೆಂಗಳೂರಿನಲ್ಲಿರುವ ಸಮಾಜ ಶಾಸ್ತ್ರಜ್ಞ ಜಿ.ಆರ್. ಕಾರಂತ್ ಅವರು 'ಹಿಂದೂತ್ವದ ಅಸ್ತಿತ್ವ ಶಕ್ತಿಯೇ ಈ (ಸ್ತ್ರೀ-ಪುರುಷ) ಪ್ರತ್ಯೇಕತೆ. ನಾನು ಯಾರೊಬ್ಬರ ನಂಬಿಕೆ ಶ್ರದ್ಧೆಗಳ ಮಧ್ಯೆ ಪ್ರವೇಶ ಮಾಡದಿದ್ದರೂ, ಈ ಪದ್ಧತಿ ಬದಲಾಗಬೇಕು ಎಂಬ ನಂಬಿಕೆಯವನು. 'ಆಕಸ್ಮಿಕವಾಗಿ ನಾನು ಅಯ್ಯಪ್ಪನ ಪಾದ ಸ್ಪರ್ಶ ಮಾಡಿದೆ' ಎಂದು ಜಯಮಾಲಾ ಧೈರ್ಯದಿಂದ ಹೇಳಿರುವುದಕ್ಕೆ ನಾನು ಹರ್ಷಿಸುತ್ತೇನೆ. ಆಕೆ ಅಲ್ಲಿಗೆ ಹೋದುದು ಈ ಪೂಜಾರಿಗಳಿಗೆ ತಿಳಿಯದ ವಿಷಯವೇನಲ್ಲ. ಅವರ ಗಮನಕ್ಕೆ ಬಾರದೆ ಆ ಘಟನೆ ನಡೆಯಲು ಸಾಧ್ಯವಿಲ್ಲ. ಈಗ ಅವರು ಧರ್ಮಶ್ರದ್ಧೆಯ ಸಭ್ಯರಂತೆ ನಟಿಸಲಾಗದು' ಎನ್ನುತ್ತಾರೆ.

ಜಗನ್ನಾಥ ದೇವಾಲಯದ ಬಗೆಗೆ ವಿಶೇಷ ಅಧ್ಯಯನ ನಡೆಸಿರುವ ಇತಿಹಾಸ ತಜ್ಞ ಸಾಮೇಂದ್ರ ಮುದಲಿ ಅವರು "ದೇವಾಲಯಕ್ಕೆ ವಿದೇಶಿಯರು, ಮುಸ್ಲಿಮರು ಮತ್ತು ಕ್ರೈಸ್ತರ ಪ್ರವೇಶ ನಿಷೇಧಿಸಿರುವುದು, ಮುಖ್ಯವಾಗಿ ಅವರೆಲ್ಲ ಹಿಂದೂಗಳು ನಿಷೇಧಿಸಿರುವ ಮಾಂಸಾಹಾರ ಸೇವಿಸುತ್ತಾರೆ ಎಂಬ ಕಾರಣದಿಂದ ಎಂದು ನಂಬಲಾಗಿದೆ. ಭದ್ರತೆಯ ಉದ್ದೇಶ ಮಾತ್ರವಲ್ಲದೆ ನಂಬಿಕೆ ಇಲ್ಲದವರ ಪ್ರವೇಶ ದೇವಾಲಯದ ಆವರಣ ಮತ್ತು 'ಭೋಗ್' ಅನ್ನು ಅಪವಿತ್ರಗೊಳಿಸುತ್ತದೆ

ಎಂದು ಪೂಜಾರಿಗಳು ನಂಬಿದ್ದಾರೆ. ದೇಶದ ಇತರ ಭಾಗಗಳಲ್ಲಿ ನಡೆಯುವ ವಾರ್ಷಿಕ ರಥೋತ್ಸವಗಳಲ್ಲಿ ಯಾರಾದರೂ ಪಾಲುಗೊಳ್ಳಬಹುದು. ದೇವರ ದರ್ಶನಕ್ಕೆ ದೇವಾಲಯದ ಪ್ರವೇಶ ನಿರಾಕರಿಸಲ್ಪಟ್ಟವರು ಬೇರೆ ಕಡೆ ದರ್ಶನಮಾಡಬಹುದು ಎಂಬ ಕಾರಣದಿಂದ ಈ ರಥೋತ್ಸವ ಸಂದರ್ಭದ ಅವಕಾಶ' ಎಂದು ಹೇಳುತ್ತಾರೆ.

"ಕ್ಯಾಥೋಲಿಕ್ ಚರ್ಚ್‌ನವರೂ ಸಹ ಗರ್ಭ ನಿರೋಧ ಮತ್ತು ಜನನ ನಿಯಂತ್ರಣದಂತಹ ವಿಷಯಗಳ ಬಗೆಗೆ ಈಗ ಸಣ್ಣ ಪುಟ್ಟ ಹೊಂದಾಣಿಕೆಗಳನ್ನು ಮಾಡಿಕೊಂಡಿದ್ದಾರೆ. ಆದ್ದರಿಂದ ಮುಟ್ಟಾದ ಹೆಂಗಸರು ಮತ್ತಿತರರು ದೇವಾಲಯಗಳನ್ನು ಪ್ರವೇಶಿಸಬಾರದೆಂಬ ಹಳೆಕಾಲದ ನಂಬಿಕೆಗಳನ್ನು ಬಿಟ್ಟುಬಿಡಬೇಕು" ಎಂದು ಹೇಳುವ ಕಾರಂತರು "ಪೂಜಾರಿಗಳು ಜನರನ್ನು ದೂರವಿಟ್ಟು ತಮ್ಮ ಅಧಿಕಾರ ಉಳಿಸಿಕೊಂಡಿದ್ದಾರೆ. ಅವರು ನೀಡುವ ಪ್ರಸಾದ ಪರಿಶುದ್ಧವೆಂಬ ಬಗೆಗೆ ಅವರಿಗೆ ಹೇಗೆ ಖಚಿತವಾಗಿದೆ? ಆ ಪ್ರಸಾದ ತಯಾರಿಸಲು ಬೇಕಾದ ಅಕ್ಕಿಯನ್ನು ಮುಟ್ಟಾದ ಹೆಂಗಸರು ಕೂಡಿಕೊಂಡು ಕುಟ್ಟುವುದಿಲ್ಲವೆ? ಈ ಪೂಜಾರಿಗಳ ಮನೆಯಲ್ಲಿ ಹೆಂಗಸರಿಲ್ಲವೆ? ಹೀಗಿರುವಾಗ ಒಬ್ಬ ವ್ಯಕ್ತಿ ಮುಟ್ಟಾದ ಮಾತ್ರಕ್ಕೆ ದೇವರ ಮೂರ್ತಿ ಅಪವಿತ್ರಗೊಳ್ಳುವುದಾದರೂ ಹೇಗೆ?" ಎಂದು ಪ್ರಶ್ನಿಸುತ್ತಾರೆ.

ವಿಶ್ವಕರ್ಮ ಸಮಾಜದವರೇ ನಿರ್ಮಾಣ ಮಾಡುವ ದೇವಸ್ಥಾನಗಳಲ್ಲಿ ವಿಶ್ವಕರ್ಮ ಸಮಾಜದ ಮಹಿಳೆಯರಷ್ಟೇ ಅಲ್ಲ ಯಾವ ಮಹಿಳೆಯರೂ ದೇವಸ್ಥಾನ ಪ್ರವೇಶ ಮಾಡಬಾರದೆಂಬ ನಿಯಮ ಮಾಡಿರುವುದು ಪುರುಷ ಪ್ರಧಾನ ಸತ್ತೆಯ ದಬ್ಬಾಳಿಕೆಯ ಉದಾಹರಣೆಯಾಗಿದೆ ಎಂಬ ಅಂಶವನ್ನು ಸ್ವರೂಪರಾಣಿ ಮಹಿಷಿ ಅವರು ತಮ್ಮ ಲೇಖನದಲ್ಲಿ ಅತ್ಯಂತ ವಿವರವಾಗಿ ಚರ್ಚಿಸಿದ್ದಾರೆ.

ರೋಹಿಣಿ ಎಂ. ವಿ. ಎನ್ನುವರು 'ಮಹಿಳಾ ಚಿಂತನೆಯ ವಿಭಿನ್ನ ನೆಲೆಗಳು'[೫೪] ಎಂಬ ಲೇಖನದಲ್ಲಿ ಮಹಿಳೆಯರ ಇಂದಿನ ಸ್ಥಾನಮಾನಗಳ ಕುರಿತು ಸವಿವರವಾಗಿ ಚರ್ಚಿಸಿದ್ದಾರೆ.

ಇಂದುಮತಿ ಅವರ 'ಮಹಿಳೆ ಮತ್ತು ಹೋರಾಟ'[೫೫] ಲೀಲಾ ಮಾಧವ ಆಚಾರ್ಯ ಅವರ 'ಮಹಿಳೆ-ಮನೆ ಮತ್ತು ಉದ್ಯೋಗ'[೫೬] ಪಿ. ಪ್ರೇಮಾ ಅವರ 'ವಿದ್ಯಾವಂತ ಮಹಿಳೆಯರ ಕರ್ತವ್ಯ'[೫೭] ಮತ್ತು 'ಭಾರತೀಯ ಮಹಿಳೆ ಅಂದು-ಇಂದು'[೫೮] ಎರಡು ಲೇಖನಗಳು ತುಂಬ ಮೌಲಿಕವಾಗಿವೆ.

ಜಿ. ಸರಸ್ವತಮ್ಮ ಎನ್ನುವರು ೧೯೫೦ರ ದಶಕದಲ್ಲಿ ವಿಶ್ವಕರ್ಮಾ ಪತ್ರಿಕೆಯಲ್ಲಿ 'ಮಹಿಳಾ ಲೋಕ' ಎಂಬ ಅಂಕಣವನ್ನು ಬರೆದದ್ದು ವಿಶೇಷವಾಗಿ ಗಮನಿಸುವಂತಹದ್ದು. ಆ ಕಾಲದಲ್ಲಿ ಮಹಿಳೆಯರು ಇನ್ನೂ ಹೆಚ್ಚು ಸಾಕ್ಷರರು ಆಗದಿದ್ದ ಸಂದರ್ಭದಲ್ಲಿ ಸರಸ್ವತಮ್ಮ ಅವರು ಈ ಅಂಕಣ ಮಾಲೆ ಬರೆದಿದ್ದಾರೆ. ಗೃಹಿಣಿಯರ ಕರ್ತವ್ಯಗಳು, ಮಕ್ಕಳ ಪಾಲನೆ-ಪೋಷಣೆ, ಮಕ್ಕಳ

ರೋಗರುಜಿನಗಳು ಮೊದಲಾದ ವಿಷಯಗಳನ್ನು ಕುರಿತು ಅವರು ಬರೆದಿದ್ದಾರೆ. ೧೯೫೦ರ ದಶಕದಲ್ಲಿ ವಿಶ್ವಕರ್ಮಾ ಪತ್ರಿಕೆಯಲ್ಲಿ ಬರೆದ ಇನ್ನಿಬ್ಬರು ಮಹಿಳೆಯರೆಂದರೆ ಉಮಾವತಿದೇವಿ ಮತ್ತು ವಾರಿಜಾದೇವಿ ಬಸ್ರೂರ ಅವರು. ಉಮಾವತಿದೇವಿ ಅವರು 'ಸ್ತ್ರೀ ವಿದ್ಯಾಭ್ಯಾಸ'[೫೯] ಎಂಬ ಅರ್ಥಪೂರ್ಣ ಲೇಖನವನ್ನು ಬರೆದರೆ, ವಾರಿಜಾದೇವಿ ಬಸ್ರೂರ ಅವರು 'ಮಹಿಳೆಯರ ಕರ್ತವ್ಯ'[೬೦] ಎಂಬ ಲೇಖನ ರಚಿಸಿದ್ದಾರೆ.

ಅಂಬಾಮಣಿಮೂರ್ತಿ ಅವರು ೧೯೮೦ರ ತರುವಾಯದ ಎಲ್ಲ ವಿಶ್ವಕರ್ಮ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ. ಅದರಲ್ಲೂ ಅವರ ಪ್ರವಾಸ ಕಥನಗಳು ವಿಧಾತೃ-ವಿಶ್ವಕರ್ಮ ಕಲಾ ಪತ್ರಿಕೆಗಳಲ್ಲಿ ಆಗಾಗ ಪ್ರಕಟಗೊಂಡಿವೆ. ವಿಶ್ವಕರ್ಮ ಮಹಿಳೆಯರ ಸ್ಥಿತಿ-ಗತಿ ಕುರಿತು ಅವರು ಮೇಲಿಂದ ಬರೆಯುತ್ತ ಬಂದಿದ್ದಾರೆ. 'ವಿಶ್ವಕರ್ಮ ಮಹಿಳೆಯರ ಸ್ಥಿತಿಗತಿ ಒಂದು ವಿವೇಚನೆ'[೬೧] ಎಂಬ ಲೇಖನ ಅವರ ಪ್ರಬುದ್ಧ ಚಿಂತನೆಗೆ ಸಾಕ್ಷಿಯಾಗಿದೆ. 'ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆ'[೬೨] ಅವರ ವಿಶ್ಲೇಷಣಾತ್ಮಕ ಬರಹವಾಗಿದೆ. ಇದೇ ಆಶಯದ ಒಂದು ಲೇಖನವನ್ನು ಲಕ್ಷ್ಮಮ್ಮ ಎಂ. ಆರ್. ಅವರು ಆತ್ಮೀಯ ಬೋಧಕ ಪತ್ರಿಕೆಯಲ್ಲಿ ಬರೆದಿದ್ದಾರೆ.[೬೩] ಸುಭದ್ರಮ್ಮ ಚಂದ್ರಪ್ಪ ಎನ್ನುವವರು 'ಪುರಾತನ ಭಾರತದಲ್ಲಿ ಸ್ತ್ರೀ ಪರಂಪರೆ'[೬೪] ಬಾರಕೂರು ಸುಚಿತ್ರಾ ಅವರು 'ಮಹಿಳೆ ಸಂಸ್ಕೃತಿ ಮತ್ತು ಸಂಸ್ಕಾರ'[೬೫] ಶಕುಂತಲ ಬಿ. ರಾವ್ ಅವರು 'ಮಹಿಳೆ ಮತ್ತು ಪರಿಸರ'[೬೬] ಮುಂತಾದ ಬರಹಗಳು ವಿಶ್ವಕರ್ಮ ಮಹಿಳೆಯರ ವೇದನೆ-ಸಂವೇದನೆಗಳನ್ನು ಅಭಿವ್ಯಕ್ತಿಸುವ ಅನನ್ಯ ಲೇಖನಗಳಾಗಿವೆ. ಹೊಸ ತಲೆಮಾರಿನ ಬರಹಗಾರರಾದ ಕವಿಯತ್ರಿ ಡಾ.ಜಯಶ್ರೀ ಕಂಬಾರ, ಡಾ. ಗೀತಾಬಾಯಿ ಬಡಿಗೇರ, ಕನ್ನಡದಲ್ಲಿ ಗಜಲ್ ಬರೆಯುತ್ತಿರುವ ವಿಜಯಪುರದ ಶಿಕ್ಷಕಿ ಶ್ರೀಮತಿ ಕೆ.ಸುನಂದಾ ಅವರ ಬರಹಗಳು ಗಮನಿಸುವಂಥವು.

ಕೆಲವು ಪುರುಷ ಲೇಖಕರು ಮಹಿಳಾ ಸಂವೇದನೆಯ ಲೇಖನಗಳನ್ನು ಬರೆದಿದ್ದಾರೆ. ಚಂದ್ರಶೇಖರ ಶಾಸ್ತ್ರಿ ಎಡತೊರೆ ಅವರು 'ಭಾರತಾರ್ಯರ ಧಾರ್ಮಿಕ ಸಂಸ್ಕೃತಿ; ಸ್ತ್ರೀಯರ ಸ್ಥಾನಮಾನಗಳು'[೬೭] ಹಿರಣ್ಯ ಅವರ 'ಭಾರತೀಯ ಸಂಸ್ಕೃತಿಯಲ್ಲಿ ನಾರಿಯ ನಡೆ'[೬೮] ರವಿಶಂಕರ ಗುರೂಜಿ ಅವರ 'ಮಾತೃಶಕ್ತಿಯ ಮಹತ್ವ'[೬೯] ಸುಭಾಷಚಂದ್ರ ನಾಟೀಕರ ಅವರ 'ಮಹಿಳಾ ವಿಮೋಚನೆ ಡಾ. ಅಂಬೇಡ್ಕರ್ ಅವರ ಕೊಡುಗೆ'[೭೦] ರವೀಂದ್ರ ಮುನೋಳಿ ಅವರ 'ಮಹಿಳೆಯರ ಮಾನಸಿಕ ಆರೋಗ್ಯ ಕೆಲವು ಸಾಮಾಜಿಕ ಅಂಶಗಳು'[೭೧] ವಿಶ್ವನಾಥ ಆಚಾರ್ ಅವರ 'ವಿಶ್ವಕರ್ಮ ಸಮಾಜದಲ್ಲಿ ಸ್ತ್ರೀ ವಿದ್ಯಾಭ್ಯಾಸ'[೭೨] ಎಸ್. ಯು. ಪೋತದಾರ ಅವರ 'ಕಲೆ ಮತ್ತು ಮಹಿಳೆ'[೭೩] ಮೊದಲಾದ ಲೇಖನಗಳು ವಿಶ್ವಕರ್ಮ ಸಮಾಜದ ಮಹಿಳೆಯರ ಸ್ಥಿತಿಗತಿ-ಸ್ಥಾನಮಾನಗಳ ಕುರಿತಾಗಿ ಹೊಸ ಬೆಳಕು ಚೆಲ್ಲುತ್ತವೆ.

ವಿಶ್ವಕರ್ಮ ಸಮಾಜದ ಮಹಿಳೆಯರ ವಿವಿಧ ಕಲಾಕ್ಷೇತ್ರದಲ್ಲಿ ಅನನ್ಯವಾದ ಸಾಧನೆ ಮಾಡಿದ ಸಂದರ್ಭದಲ್ಲಿ, ಅವರ ಸಾಧನೆಯ ಪರಿಚಯಾತ್ಮಕ ಲೇಖನಗಳನ್ನು ವಿಶ್ವಕರ್ಮ ಪತ್ರಿಕೆಗಳು ಪ್ರಕಟಿಸುತ್ತ ಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಗಮನಿಸುವುದಾದರೆ,

ಬಿ. ಎ. ಆಚಾರ್ ಅವರ 'ತ್ರಿವಿಕ್ರಮ ಸಾಧನೆಯ ಶ್ರೀಮತಿ ಕೃಷ್ಣವೇಣಿ'[೭೪] ಮನೋರಮಾ ಭಟ್ ಅವರ 'ಒಡಿಸ್ಸಿ ನೃತ್ಯಲೋಕದ ಸಾಮ್ರಾಜ್ಞೆ ಬಿಜೋಯಿನಿ'[೭೫] ರೋಹಿಣಿ ಬಿ.ಎಂ. ಅವರ 'ಕಸೂತಿಯಲ್ಲಿ ಕುಸುರಿ ಕೆಲಸದ ಶಶಿಕಲಾ ಬಾಯಾರು'[೭೬] ವಿರೂಪಾಕ್ಷ ಬಡಿಗೇರ ಅವರ 'ಪ್ರಚಾರ ಬಯಸದ ಪ್ರತಿಭಾವಂತ ಕಲಾವಿದೆ ಪಿ.ಗೌರಿ ಪೈ'[೭೭] ದಿನಕರ ಶೆಟ್ಟಿ 'ಬ್ರಹ್ಮಾವರದ ಅಪ್ರತಿಮ ಬಾಲ ಕಲಾವಿದೆ'[೭೮] ಸರೋಜಾ ಭಟ್ 'ಭರತನಾಟ್ಯಕ್ಷೇತ್ರದ ಅನನ್ಯ ಕಲಾವಿದೆ ರಚನಾ ರಾವ್'[೭೯] ಇಬ್ರಾಹಿಂ ಎಂ. ಎನ್. 'ಮಹಿಳಾ ಯಕ್ಷಗಾನ ತಂಡವನ್ನು ಪ್ರಥಮವಾಗಿ ರೂಪಿಸಿದ ರೂವಾರಿ ಪಣಂಬೂರು ಶ್ರೀಧರ ಐತಾಳ'[೮೦] ಆಚಾರ್ಯ ಕಾ.ವಾ. ಅವರ 'ಉದಯೋನ್ಮುಖ ಕಲಾವಿದೆ ಶಿಲ್ಪಾ ಆಚಾರ್ಯ'.[೮೧]

ಈ ಎಲ್ಲ ಲೇಖನಗಳು ಮಹಿಳಾ ಸಾಧಕಿಯರ ಸಾಧನೆಯ ವಿವರಗಳನ್ನು ನೀಡುವುದರ ಜತೆಗೆ ವಿಶ್ವಕರ್ಮ ಮಹಿಳಾ ಸಮಾಜಕ್ಕೆ ಮಾರ್ಗದರ್ಶನ ಮಾಡುವ ಕಾರ್ಯವನ್ನು ಈ ಪತ್ರಿಕೆಗಳು ಮನಃಪೂರ್ವಕವಾಗಿ ಮಾಡಿವೆ.

**೫.೨.೧೦. ಇತರೇ**

**ಗಾದೆಗಳು–ಸುಭಾಷಿತಗಳು–ನುಡಿಮುತ್ತುಗಳು :**

ವಿಶ್ವಕರ್ಮ ಸಮಾಜದ ಈ ಎಲ್ಲ ಪತ್ರಿಕೆಗಳ ಪ್ರಾರಂಭದ ಪುಟಗಳಲ್ಲಿ ಒಂದು ಸಂಸ್ಕೃತ ಶ್ಲೋಕ ಮತ್ತು ಅವುಗಳ ವಿವರಣೆ ನಿರಂತರವಾಗಿ ಪ್ರಕಟವಾಗುತ್ತ ಬಂದಿದೆ. ಹಾಗೆಯೇ ಲೇಖನಗಳು ಮುಗಿದ ಪುಟಗಳಲ್ಲಿ ಜಾಗ ಖಾಲಿ ಉಳಿದರೆ, ಅಲ್ಲಿ ಕೆಲವು ಗಾದೆಗಳನ್ನು, ಸುಭಾಷಿತಗಳನ್ನು, ನುಡಿಮುತ್ತುಗಳನ್ನು ಪ್ರಕಟಿಸುತ್ತ ಬಂದಿರುವುದು ವಿಶೇಷ ಪ್ರಯತ್ನವೆಂದೇ ಹೇಳಬೇಕು. ಒಳ್ಳೆಯ ಚಿಂತನೆಗಳನ್ನು ಹುಡುಕಿ ಪ್ರಕಟಿಸುವುದು ಸಂಪಾದಕರ ಶ್ರಮ–ಶ್ರದ್ಧೆಗೆ ಸಾಕ್ಷಿಯಾಗಿವೆ.

ವಿಶ್ವಕರ್ಮನ ತತ್ವಾಂಬುಧಿಯಲ್ಲಿಯ ರತ್ನಗಳು ಎಂಬ ಹೆಸರಿನಲ್ಲಿ ಯು. ಬಿ. ಸುತಾರ್ ಅವರು ಕೆಲವು ನುಡಿಮುತ್ತುಗಳನ್ನು ರಚಿಸಿದ್ದಾರೆ. ಈ ನುಡಿಮುತ್ತುಗಳಲ್ಲಿ ವಿಶ್ವಕರ್ಮ ಧರ್ಮದ ಮೌಲ್ಯಗಳು ತಿಳಿಯುತ್ತವೆ.

೧. ಸತ್ಯಂ–ಸುಂದರಂ–ವಿಶ್ವರೂಪಂ

೨. ಪಂಚಮಹಾಭೂತಾತ್ಮನೆ ವಿಶ್ವಕರ್ಮನು

೩. ವಿಶ್ವಕರ್ಮನೇ ಅಣು–ರೇಣುಗಳ ಜನಕ

೪. ವಿಶ್ವಕರ್ಮನೇ ವಿಶ್ವದ ಮೊದಲ ಗುರು

೫. ತಾನು ತನ್ನನ್ನು ಅರಿತು ತನ್ನವರನ್ನು ತಿಳಿಯುವುದೇ ವಿಶ್ವಕರ್ಮ ಧರ್ಮ

೬. ವಿಶ್ವವೇ ವಿಶ್ವಕರ್ಮನ ಕಮ್ಮಟ

೭. ವಿಶ್ವಕರ್ಮನು ಶೂನ್ಯಸಿದ್ಧಾಂತದ ಹಿರಣ್ಯಗರ್ಭ

೮. ನನಗೆ ಎಲ್ಲ ದೇವತೆಗಳು ವಿಶ್ವಕರ್ಮನಂತೆಯೇ ಕಾಣಿಸುತ್ತಾರೆ.

೯. ಜಾತಿಗೆ ಜಂಗಮನಾದವನೇ ವಿಶ್ವಕರ್ಮ.

೧೦. ವಿಶ್ವಕರ್ಮನು ಜಾತ್ಯತೀತ ಜಗದ್ಗುರು.

೧೧. ವಿಶ್ವಕರ್ಮ ಧರ್ಮವು ಅವರ ಕರ್ಮದಲ್ಲಿ ತೋರುವುದು.

೧೨. ವಿಶ್ವಕರ್ಮನ ಕರ್ಮದಲ್ಲಿ ಧರ್ಮ ಸಾಧನೆ ಇದೆ.

೧೩. ವಿಶ್ವಕರ್ಮನಲ್ಲಿ ವಿಜ್ಞಾನ ಅಡಗಿಕೊಂಡಿದೆ.

೧೪. ಕುಲಗಳನ್ನು ಕಟ್ಟಿದ ವಿಶ್ವಕರ್ಮನು ಯಾರನ್ನು ಹಳಿಯುವುದಿಲ್ಲ.

೧೫. ಪಂಚಪದಾರ್ಥಗಳು ವಿಶ್ವಕರ್ಮನಲ್ಲಿಯೇ ಲೀನವಾಗುತ್ತವೆ.

೧೬. ವಿಶ್ವಕರ್ಮನು ತತ್ವಬೀಜವನ್ನು ಬೀತ್ತಿದ ಮಹಾಕೃಷಿಕ

೧೭. ಕಲೋಪಾಸಕನೇ ವಿಶ್ವಕರ್ಮನ ಕಿಂಕರ

೧೮. ವಿಶ್ವಕರ್ಮನು ವಿಶ್ವದ ಅನಾದಿ ಬ್ರಾಹ್ಮಣನು.

೧೯. ಪ್ರವೃತ್ತಿ, ಪ್ರಯತ್ನ, ಪ್ರತಿಫಲ, ಪ್ರಗತಿ, ಪರಿಶೀಲನೆ ಇವು ವಿಶ್ವಕರ್ಮನ ಪ್ರಕೃತಿಯ ರೂಪಗಳು.

೨೦. ವಿಶ್ವಕರ್ಮನು ಆಧ್ಯಾತ್ಮಿಕ ಯೋಗದ ಕೇಂದ್ರಬಿಂದು.[೮೨]

**ಗಾದೆಗಳು :**

'ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯಾ'

'ಒಲೆಹತ್ತಿ ಉರಿದೊಡೆ ನಿಲಬಹುದಲ್ಲದೆ,

ನೆಲಹತ್ತಿ ಉರಿದೊಡೆ ನಿಲಲುಬಹುದೆ?'

'ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು?'

'ಗೋಡೆಯ ತೊಳೆದು ಕೆಸರ ಕೆಡಸಿಹನೆಂದರೆ ಅದಾರವಶ'

'ಓದೊಕ್ಕಾಲು ಬುದ್ಧಿ ಮುಕ್ಕಾಲು'

'ಕಟ್ಟಿದ ಬುತ್ತಿ ಎಷ್ಟು ದಿನ ಈಡೇರಲಾಪುದು'

'ಕುರುಡ ಕುರುಡನ ಕೈಯಪಿಡಿದು ಪಥವ ನಡೆಯಬಲ್ಲರೆ?

'ಗೆದ್ದಲು ಮನೆಯಮಾಡೆ ಸರ್ಪಂಗೆ ಇಂಬಾದಂತೆ'

'ಓರ್ವರಿಗೆ ಹುಟ್ಟಿ ಮತ್ತೋರ್ವರ ಅಪ್ಪ ಎಂಬ ನಾಣ್ಣುಡಿ'

‘ಒತ್ತಿ ಹಣ್ಣ ಮಾಡಿದಡೆ ಅದೆತ್ತಣ ರುಚಿಯಪ್ಪುದೋ?
ಅರಲುಗೊಂಡ ಕೆರಿಗೆ ತೊರೆಬಂದು ಹಾಯ್ದಂತೆ?
‘ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೇ’
‘ಹೊರಸಿಕೊಂಡ ಹೋದನಾಯಿ ಮೊಲನನೇ ಹಿಡಿವುದಯೋ
ತುಳುಕದು ನೋಡಾ ತುಂಬಿದುದು’
‘ಭೂಮಿಯಿಲ್ಲದೆ ಬಂಡಿ ನಡೆವುದೇ?’
‘ಕೆಂಡವ ಗೊರಲೆ ಮುಟ್ಟಬಲ್ಲದು’
‘ಸಹಜವ ನುಡಿದಡೆ ಸೇರುವರಿಲ್ಲ ಕಾಣಿರಣ್ಣಾ’
‘ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ’
‘ಬೇಲಿ ಕೆಯ್ಯ ಮೇವೊಡೆ’
‘ಗಾಳಿಬೀಸುವ ವೇಳೆಯಲ್ಲಿ ತೂರಿಕೊಳ್ಳಿರೊ’
‘ಆಳಾಗಿದ್ದು ಅರಸಾಗಬಹುದು’
‘ಬೆಂಕಿಯೊಳಗುಳ್ಳ ಗುಣ ಬಿಸಿನೀರಲುಂಟೆ?’
‘ಧನವುಳ್ಳವರ ನೆನೆದಡೆ ದರಿದ್ರ ಹೋಹುದೆ?’
‘ಮನಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೊ’
‘ತೊರೆಯೊಳಗಿದ್ದವನು ತೃಷೆಯಾಗಲು ಅರಸುವನೆ ಕೆರೆಯುದಕವ’
‘ಹುಣಸೆಯ ಹೂವೆಲ್ಲ ಕಾಯಾಗಬಹುದೆ?’
‘ಅಟ್ಟಮಡಕೆಯ ನೆತ್ತಿಯಮೇಲೆ ಹೊತ್ತು ತಿರಗುವವನಂತೆ’
‘ಮೆಟ್ಟಿದ ಹೆಜ್ಜೆಯ ಮೆಟ್ಟುವ ಗಾಣದ ತೆರನಂತೆ’
‘ಸಾಯುವ ಕುದುರೆಗೆ ಹುಲ್ಲನಡಕುವಂತೆ’
‘ಬಡವನ ಕೋಪ ಅವುಡಿಗೆ ಮೃತ್ಯು’
“ಮರೆತರೂ ವೇದವನು ಕಲಿತುಕೊಳಲಾಗುವುದು
ಹಾರುವನ ಹುಟ್ಟು ನಡೆತೆಗುಂದಲು ಕೆಡುವುದು (ತಿರುಕ್ಕುರಳ್)

(ಬ್ರಾಹ್ಮಣನು ಕಲಿತ ವೇದವನ್ನು ಮರೆತರೂ ಮತ್ತೆ ಓದಿ ಕಲಿತುಕೊಳ್ಳಬಹುದು. ವೇದವನ್ನು ಮರೆತದ್ದರಿಂದ ಅವನ ಕುಲ ಕೆಡುವುದಿಲ್ಲ. ಆದರೆ, ತನ್ನ ಮೇಲ್ಕುಲಕ್ಕೆ ತಕ್ಕ ಆಚಾರವನ್ನು ನಡೆಸದೆ ತಪ್ಪಿದರೆ ಅವನ ಹುಟ್ಟು ಕೆಡುತ್ತದೆ. ವೇದವನ್ನು ಮರೆತರೆ ಹೋಗದೆ ಬ್ರಾಹ್ಮಣ್ಯ ಆಚಾರ ಕೆಟ್ಟರೆ ಉಳಿಯುವುದಿಲ್ಲ.)[೨೩]

ಇಂಥ ನೂರಾರು ನುಡಿಗಳನ್ನು ಸಂಗ್ರಹಿಸಿ ಪ್ರಕಟಿಸಿದರೆ ಒಂದು ದೊಡ್ಡ ಗ್ರಂಥವೇ ಆಗುವುದು.

**ಶಿಕ್ಷಣ:** ಡಾ. ಎಚ್.ಬಿ. ದೊರೆಸ್ವಾಮಿ ಅವರ 'ವಿಶ್ವಕರ್ಮ ಬ್ರಾಹ್ಮಣ ಸಮಾಜದ ಮಕ್ಕಳ ವಿದ್ಯಾಭ್ಯಾಸದ ಕಡೆ ಒಂದು ನೋಟ' ಎಂಬ ಲೇಖನದಲ್ಲಿ ತಮ್ಮ ಸಮಾಜದ ಬಡಮಕ್ಕಳ ಶಿಕ್ಷಣಕ್ಕಾಗಿ ಈವರೆಗಿನ ಪ್ರಯತ್ನಗಳು ಮತ್ತು ಮುಂದೆ ಮಾಡಬೇಕಾದ ಕಾರ್ಯಗಳ ಕುರಿತು ಒಂದು ಸ್ಥೂಲವಾದ ಅವಲೋಕನವಿದೆ. ತಮ್ಮ ಸಮಾಜಕ್ಕೆ ೩% ಮೀಸಲಾತಿ ಪಡೆಯಲು ಸರಕಾರದ ಮೇಲೆ ಒತ್ತಡ ತರಲು ಹೋರಾಟ ಮಾಡುತ್ತಿದ್ದರು, ಅದು ಸಾಧಿಸಬೇಕಾದರೆ ಮೊದಲು ನಮ್ಮ ಸಮಾಜದ ಮಕ್ಕಳು ಅಕ್ಷರಸ್ಥರಾಗಬೇಕೆಂಬ ಕಾಳಜಿ ಇಲ್ಲಿದೆ.

ವಿಶ್ವಕರ್ಮದ ಸಮಾಜವು ಮುಂದೆ ಬರಬೇಕಾದರೆ ಮೊದಲು ನಮ್ಮ ಮಕ್ಕಳು ಶಿಕ್ಷಣ ಪಡೆಯಬೇಕೆಂಬ ಆಲೋಚನೆ ವಿಶ್ವಕರ್ಮ ಮುಂದಾಳುಗಳಲ್ಲಿ ಮೂಡಿತು. ಅದಕ್ಕಾಗಿ ಲಿಂಗಾಯತರು ಉಚಿತ ಪ್ರಸಾದ ನಿಲಯಗಳನ್ನು ಸ್ಥಾಪಿಸಿದಂತೆ, ತಮ್ಮ ಸಮಾಜದ ಬಡಮಕ್ಕಳಿಗಾಗಿ ವಿದ್ಯಾರ್ಥಿ ನಿಲಯಗಳನ್ನು ಅಸ್ತಿತ್ವಕ್ಕೆ ತರಬೇಕೆಂಬ ಕಾಳಜಿ ವಿಶ್ವಕರ್ಮ ದುರೀಣರಲ್ಲಿತ್ತು. ಮೈಸೂರಿನ ವಿಶ್ವಕರ್ಮ ಸಮಾಜದ ಅಧ್ಯಕ್ಷರಾದ ಟಿ. ಯಾಲಕ್ಕಾಚಾರ್ಯರು ರಾಜಧಾನಿ ಬೆಂಗಳೂರಿನಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ಅಸ್ತಿತ್ವಕ್ಕೆ ತಂದರು. ಅದು ವಿಶ್ವಕರ್ಮ ಸಮಾಜದ ಬಡಮಕ್ಕಳಿಗೆ ರಾಜಧಾನಿಯಲ್ಲಿ ಅಧ್ಯಯನ ಮಾಡಲು ತುಂಬ ಅನುಕೂಲವಾಯಿತು. ಬಿ.ಸಿ. ಆಚಾರ್ಯ ಎಂಬುವರು ೧೯೪೮ರಲ್ಲಿ ನಂಜನಗೂಡಿನಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ವಿಶ್ವಕರ್ಮ ಸಮಾಜದ ಮಕ್ಕಳಿಗಾಗಿ ಪ್ರಾರಂಭ ಮಾಡಿದರು. ನಂತರ ಮಂಡ್ಯ, ಬಿರೂರು ಮೊದಲಾದ ಊರುಗಳಲ್ಲಿ ವಿದ್ಯಾರ್ಥಿ ನಿಲಯಗಳು ಪ್ರಾರಂಭವಾದವು. ಇವುಗಳ ಸಮಗ್ರ ಇತಿಹಾಸ, ಆಯಾ ವಿದ್ಯಾರ್ಥಿ ನಿಲಯಗಳ ಪ್ರಗತಿಯ ವರದಿ ನಮಗೆ ಅಧಿಕೃತವಾಗಿ ದೊರೆಯುವುದು ಪತ್ರಿಕೆಗಳ ಮೂಲಕವೇ.

ಬೀರೂರಿನ ವಿದ್ಯಾವರ್ಧಕ ಸಂಘದ ಒಂದು ಸಭೆಯಲ್ಲಿ ಮೂರನೆಯ ತರಗತಿ ಓದುತ್ತಿದ್ದ ಕು. ಬಿ.ಎಸ್.ನಾಗಮಣಿ ಎಂಬ ಚಿಕ್ಕ ಹುಡುಗಿ ಭಾಷಣ ಮಾಡಿ, ತಮ್ಮ ಸಮಾಜದ ಶಿಕ್ಷಣದ ಕಾಳಜಿಯನ್ನು ವ್ಯಕ್ತಪಡಿಸಿರುವುದು ತುಂಬ ಕೌತುಕವಾಗಿದೆ. ಅವಳ ಮಾತುಗಳು ಹೀಗಿವೆ: "ವಿಶ್ವಕರ್ಮರ ವಿದ್ಯೆಯನ್ನು ಹೆಚ್ಚಿಸಬೇಕಾದರೆ ಏನು ಮಾಡಬೇಕೆಂದಿರುವಿರಿ. ಹಾಗಾದರೆ ಮೊದಲು ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲ ಮಾಡಿಕೊಡಿ. ವಿದ್ಯಾವಂತೆಯಾದ ಒಬ್ಬ ಹೆಂಗಸು ತನ್ನ ಮಕ್ಕಳಿಗೆ ಮತ್ತು ಮನಸ್ಸು ಮಾಡಿದರೆ ಕಡೆಯ ಪಕ್ಷ ಎಂಟು ಜನ ತನ್ನ ಬಂಧುಗಳ ಮಕ್ಕಳಿಗೆ ಲೀಲಾಜಾಲವಾಗಿ ವಿದ್ಯೆಯನ್ನು ಹೇಳಿಕೊಡುತ್ತಾಳೆ. ಹಾಗೆ ನೀವು ಮಾಡಿದರೆ ನಿಮ್ಮ ಕೆಲಸ ಕಾರ್ಯಗಳು ಎಷ್ಟು ಸುಲಭವೂ ಸರಳವೂ ಆಗುತ್ತವೆಂಬುದು ಆಗ ನಿಮಗೇ ತಿಳಿಯುವುದು. ವಿಶ್ವಕರ್ಮರ ಗಹ ಕೆಲಸಗಳು ಹೆಂಗಸಿನ ವಿದ್ಯೆಯಿಂದ ಬೆಳಗಿದರೆ

ಗೃಹವು ಮಂಗಳಕರವಾಗುವುದು. ದುಡಿದು ಬಂದ ನಿಮ್ಮನ್ನು ಆದರದಿಂದ ಕಂಡು ಹಿತವಾದ ಮಾತುಗಳನ್ನಾಡಿ, ಪಕ್ವಾನ್ನವನ್ನು ಊಟಕ್ಕೆ ಬಡಿಸಿ, ದಾಸಿಯಂತೆ ನಿಮ್ಮ ಸೇವೆ ಮಾಡಿ, ಕಷ್ಟದಲ್ಲಿ ಸಮಯೋಚಿತವಾದ ಸಲಹೆ ಮಾಡಿ, ಮಕ್ಕಳ ಆದರ್ಶತಾಯಿಯಾಗಿ, ಮುಂದಿನ ಪ್ರಜೆಗಳನ್ನು ನಾಗರಿಕರನ್ನಾಗಿ ಮಾಡಿ, ನಿಮ್ಮ ಜೀವನವನ್ನು ಸುಖಮಯ ಮಾಡುವವರು ಹೆಂಗಸರೇ ಅಲ್ಲವೇ? ರಾಷ್ಟ್ರವು ಬಲಿಷ್ಠವಾಗ ಬೇಕಾದರೆ, ಅದಕ್ಕೆ ಸೇರಿದವರೆಲ್ಲರೂ ಐಕ್ಯಮತ ಭಾವದಿಂದ ಸುಶಿಕ್ಷಿತರಾಗಿ ಬಾಳಿ ದೇಶೋನ್ನತಿಗೆ ದುಡಿಯಬೇಕೆಂಬ, ಒಳ್ಳೆಯ ಭಾವನೆಯನ್ನು ಹೊಂದಬೇಕಾದರೆ ಸ್ತ್ರೀ ವಿದ್ಯಾಭ್ಯಾಸವು ಅಲಕ್ಷಿಸತಕ್ಕದ್ದಲ್ಲ. ವಿದ್ಯೆಗೇ ಅಧಿದೇವತೆ ಶಾರದೆಯೆಂಬುದು ನಿಮಗೆಲ್ಲ ತಿಳಿದಿದೆ! ಹಿಂದಿನ ಸೀತಾದೇವಿ ಸಾವಿತ್ರಿದೇವಿ ಇಂದಿನ ಸರೋಜಿನಿ ದೇವಿ ವಿಜಯಲಕ್ಷ್ಮೀದೇವಿ ಇವರೆಲ್ಲ ಜಗದ್ವಿಖ್ಯಾತರಾದ ವೀರಮಾತೆಯರೂ ರಾಜಕಾರಣಿಗಳೂ ಅಲ್ಲವೆ? ಇದೆಲ್ಲ ನಿಮಗೆ ತಿಳಿದೇ ಇದೆ. ಗಂಡಸರು ವಿದ್ಯೆ ಗಳಿಸುವುದರಲ್ಲಿ ಸ್ವಾರ್ಥಿಗಳೆಂಬುದನ್ನು ಇಂದಿನ ನಿರಕ್ಷರ ಮಹಿಳೆಯರೇ ತೋರಿಸಿಕೊಟ್ಟಿದ್ದಾರೆ. ನೀವಿದನ್ನು ಅಲ್ಲದಂತೆ ಮಾಡಿ. ಯಾರಿಗೂ ಯಾವಾಗಲೂ ಪಕ್ಷಪಾತ ತೋರಿಸಬಾರದು. ಇಂತು ಅರಿಕೆ ಮಾಡಿಕೊಂಡ ವಿಷಯಗಳಲ್ಲಿ ಒಪ್ಪಾದುವನ್ನೇ ಆರಿಸಿಕೊಂಡು ಮಹಿಳೆಯರಿಗೂ ತಿಳಿವಳಿಕೆ ಬರುವಂತಹ ತೀರ್ಮಾನಗಳನ್ನು ಮಾಡಿ".[೪೪]

ಮೂರನೆಯ ತರಗತಿಯಲ್ಲಿ ಓದುತ್ತಿದ್ದ ಒಬ್ಬ ಚಿಕ್ಕ ಬಾಲಕಿ ವಿಶ್ವಕರ್ಮ ಮಹಿಳೆಯರು ಕೂಡ ಶಿಕ್ಷಣದಿಂದ ವಂಚಿತರಾಗಬಾರದೆಂಬ ಕಳಕಳಿಯ ಈ ಭಾಷಣವನ್ನು ಮಾಡಿದ್ದು ಆ ಕಾಲದ ಸಾಮಾಜಿಕ ಸ್ಥಿತಿಗತಿಯನ್ನು ಅಕ್ಷರಶಃ ನಮಗೆ ತಿಳಿಸಿಕೊಡುತ್ತದೆ.

ಭಾರತದಲ್ಲಿ ೧೯೫೦ರಲ್ಲಿ ಸಂವಿಧಾನ ಜಾರಿಗೆ ಬಂದ ನಂತರ, ಪ್ರಜಾರಾಜ್ಯೋತ್ಸವದ ಒಂದು ವಿಶೇಷಾಂಕವನ್ನು ವಿಶ್ವಕರ್ಮಾ ಪತ್ರಿಕೆಯು ಪ್ರಕಟಿಸಿದೆ. ಮುಂಬೈ ನಗರದ ಎ. ಬಸರೂರ್ ಅವರ 'ಸ್ವಾತಂತ್ರ್ಯ ಮತ್ತು ಉಪಯೋಗ' ಎಂಬ ಲೇಖನ ಈ ಸಂಚಿಕೆಯಲ್ಲಿದೆ. 'ವಿಶ್ವಕರ್ಮ ಸಮಾಜವು ಹೇಗೆ ಸ್ವಾತಂತ್ರ್ಯದ ಉಪಯೋಗವನ್ನು ಮಾಡಿಕೊಳ್ಳಬಲ್ಲುದು' ಎಂಬ ವಿಚಾರ ಕುರಿತು ತುಂಬ ಮೌಲಿಕವಾದ ವಿಚಾರಗಳಿವೆ.

"ನಮ್ಮ ಮಾತೃಭೂಮಿಯ ಉನ್ನತಿಯಲ್ಲಿ ಅವನತಿಯಲ್ಲಿ ವಿಶ್ವಕರ್ಮ ಸಮಾಜದವರ ಹವಿರ್ಭಾಗವು ಇದ್ದೇ ಇದೆ. ಶಿಲ್ಪದ ಮೂಲ ಕರ್ತೃಗಳಾದ ವಿಶ್ವಕರ್ಮರು ದೇಶದ ಕಲಾ ಸಂಪತ್ತನ್ನು ಹೆಚ್ಚಿಸಿದವರು. ಕಲಾ ಕೌಶಲ್ಯದಿಂದಾಗಿ ಸನಾತನ ದೇಶವಾದ ಈ ಭಾರತ ವರ್ಷವು ಎಷ್ಟು ಹಿರಿಮೆಯಲ್ಲಿತ್ತು ಎಂಬುದರ ಪ್ರತ್ಯಕ್ಷ ಅನುಭವವನ್ನು ಇಂದಿನವರಾದ ನಮಗೆ ಮಾಡಿಕೊಡುತ್ತದೆ. ಈವತ್ತಿಗೆ ಇಂತಹ ಶಿಲ್ಪದ ಎಷ್ಟು ವಿಚಿತ್ರ ನಿದರ್ಶನಗಳು ಪೌರಾಣಿಕ, ಚಾರಿತ್ರಿಕ ಕುರುಹುಗಳಿಂದ ಕಂಡುಬರುತ್ತವೆ. ಅಜಂತಾಗುಹೆ, ಹಳೆಬೀಡು, ಬೇಲೂರು, ಆಗ್ರಾ ಮೊದಲಾದ ಸ್ಥಳಗಳಲ್ಲಿ ಮಾತ್ರವಲ್ಲದೆ, ಹಿಂದೂ ದೇಶದ ಸಂಸ್ಕೃತಿಯು ಹಿಂದೂ ದೇಶದ ಹೊರಗೂ ಇತ್ತೆಂಬುದರ ನಿದರ್ಶನಗಳು, ಶಿಲ್ಪ ಕುರುಹುಗಳು ಕಂಡುಬರುತ್ತವೆ. ಈವತ್ತಿನ ದಿವಸ ಶಾಲೆಗಳಲ್ಲಿ ವಿಶ್ವಕರ್ಮ

ವಂಶಜರು ಡ್ರಾಯಿಂಗ್, ಲೆಕ್ಕವೇ ಮೊದಲಾದ ಕಲೆಗಳಲ್ಲಿ ಹೆಚ್ಚಿನ ಪ್ರೌಢಿಮೆಯನ್ನು ತೋರಿಸುತ್ತಿರುವುದು ಪ್ರತ್ಯಕ್ಷ ಕಂಡುಬರುತ್ತದೆ. ಇದರಿಂದ ವ್ಯಕ್ತವಾಗುತ್ತದೇನಂದರೆ ಕಲೆಯು ಅವರ ರಕ್ತದಲ್ಲಿಯೇ ಅಡಕವಾಗಿದೆಯೆಂಬುದು. ಆದರೆ ಇವರು ಆರ್ಥಿಕ ಸ್ಥಿತಿಯಲ್ಲಿ ಕುಗ್ಗಿದ್ದಾರೆ. ಜನತೆಯ, ಸರಕಾರದ ಹೆಚ್ಚಿನ ಪ್ರೋತ್ಸಾಹವು ಸಿಗದೆ ತಳಕ್ಕೆ ಬಿದ್ದುಹೋಗಿದ್ದಾರೆ. ಹಿಂದೂ ದೇಶವು ಎಷ್ಟು ಉನ್ನತಿಯಲ್ಲಿತ್ತೋ ಅಷ್ಟೇ ಉನ್ನತಿಯಲ್ಲಿ ವಿಶ್ವಕರ್ಮ ಸಮಾಜದವರೂ ಇದ್ದರು. ಹಿಂದೂ ದೇಶವು ಎಂದು ಬಿತ್ತೋ ಅಂದೇ ವಿಶ್ವಕರ್ಮರೂ ಬಿದ್ದಿದ್ದಾರೆ. ಈವತ್ತು ಹಿಂದೂದೇಶವು ಸ್ವಾತಂತ್ರ್ಯವನ್ನು ಪಡೆದಿದೆ. ಅಂತೆಯೇ ವಿಶ್ವಕರ್ಮರು ತಮ್ಮ ಕಳೆದುಹೋದ ಪ್ರತಿಭೆಯನ್ನು ತಿರುಗಿ ಪಡೆಯತಕ್ಕದ್ದು. ದೇಶದ ಉನ್ನತಿಯಲ್ಲಿ ಅವನತಿಯಲ್ಲಿ ವಿಶ್ವಕರ್ಮರ ಆಗುಹೋಗುಗಳೂ ಬಹಳವಾಗಿ ಸೇರಿ ಕೊಂಡಿದೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈವತ್ತು ವಿಶ್ವಕರ್ಮರು ತಮ್ಮ ವಿದ್ಯಾಪ್ರೌಢಿಮೆಯನ್ನು ಕೈಗಾರಿಕೆಯ ಮೂಲಕವೇ ತೋರಿಸತಕ್ಕದ್ದು. ಹೆಚ್ಚೆಚ್ಚು ಜನರು ಕಲೆಯ, ಇಂಜನಿಯರಿಂಗ್ ಲೈನು ಮೊದಲಾದವುಗಳಲ್ಲಿ ಸೇರತಕ್ಕದ್ದು. ಶಿಲ್ಪವನ್ನು ಪುನರುತ್ಥಾನಗೊಳಿಸ ತಕ್ಕದ್ದು. ಯಂತ್ರ ಕೈಗಾರಿಕೆಗಳಲ್ಲಿಯೂ ಹೆಚ್ಚಿನ ಆಸಕ್ತಿಯನ್ನು ತೋರಿಸತಕ್ಕದ್ದು. ಹೀಗೆ ದೇಶದ ಕೈಕಾರಿಕೆಗಳಲ್ಲಿಯೂ ಹೆಚ್ಚಿನ ಆಸಕ್ತಿಯನ್ನು ತೋರಿಸತಕ್ಕದ್ದು. ಹೀಗೆ ದೇಶದ ಕೈಗಾರಿಕೆಯು ಮುಂದುವರಿದು ಹೊಸ ಸಂಶೋಧನೆಗಳು ಆಗುವಂತೆ ಪ್ರಯತ್ನಿಸತಕ್ಕದ್ದು. ಅದಕ್ಕೆ ಸಂಬಂಧಪಟ್ಟ ಹಿಂದಿನ ಗ್ರಂಥಗಳನ್ನು ಕನ್ನಡಕ್ಕೆ ಇಲ್ಲವೆ ಇಂಗ್ಲಿಷ್ ಇಲ್ಲವೇ ಇನ್ನಿತರ ಭಾಷೆಗಳಲ್ಲಿ ಪ್ರಕಟಿಸಬೇಕು. ಹೀಗೆ ವಿಶ್ವಕರ್ಮರು ತಮ್ಮ ನಾಡಿನಲ್ಲಿಯೇ ಹರಿಯುತ್ತಿರುವ ಕಲೆಯನ್ನು ದೇಶದ ಕಲ್ಯಾಣಕ್ಕಾಗಿ ವೃದ್ಧಿ ಮಾಡಬೇಕು... ಈ ರೀತಿಯಲ್ಲಿ ಎಲ್ಲರೂ ದೇಶದ ಜನತೆಯೇ ತಮ್ಮ ತಮ್ಮ ಕರ್ತವ್ಯ ಪಾಲನೆಯನ್ನು ಮಾಡುತ್ತ, ತಮ್ಮಿಂದಾದ ಸೇವೆಯನ್ನು ದೇಶದ ಏಳ್ಗೆಗಾಗಿ ನಡೆಸುತ್ತ ದೇಶದ ಗೌರವ, ಸಂಪತ್ತು ಸ್ವಾತಂತ್ರ್ಯ ಶಾಶ್ವತವಾಗಿರುವಂತೆ ಪ್ರಯತ್ನಿಸುವುದೇ ಸ್ವಾತಂತ್ರ್ಯದ ನಿಜವಾದ ಉಪಯೋಗ. ಮಹಾತ್ಮಾಜಿಯವರ ಆತ್ಮಶಾಂತಿಯ ಸ್ಮಾರಕ! ರಾಮರಾಜ್ಯದ ತಳಹದಿ!"[೮೫]

ದೇಶದ ಉನ್ನತಿ ಅವನತಿ ಉಭಯ ಸಂಗತಿಗಳು ವಿಶ್ವಕರ್ಮ ಸಮಾಜದ ಮೇಲೆ ನಿಂತಿವೆ ಎಂಬ ವಾಸ್ತವ ಸತ್ಯವನ್ನು ಬಸರೂರ ಅವರು ಮೇಲಿನ ಲೇಖನದಲ್ಲಿ ಅತ್ಯಂತ ಮಾರ್ಮಿಕವಾಗಿ ವಿವರಿಸಿದ್ದಾರೆ.

ವಿಶ್ವಕರ್ಮಾ ಪತ್ರಿಕೆಯು 'ನಮ್ಮ ಸಾಮಾಜಿಕ ಸಮಸ್ಯೆಗಳು' ಎಂಬ ಮಾಲಿಕೆಯನ್ನೇ ಪ್ರಾರಂಭ ಮಾಡಿ, ಸಮಾಜ ಸುಧಾರಣೆಗಾಗಿ ಕೆಲವು ಮಹತ್ವದ ಬರಹಗಾರರಿಂದ ಲೇಖನಗಳನ್ನು ಬರೆಯಿಸಿ ಪ್ರಕಟಿಸಿರುವುದು ಸಮಾಜದ ಏಳ್ಗೆಯ ದೃಷ್ಟಿಯಿಂದ ಔಚಿತ್ಯಪೂರ್ಣವಾದುದು. ಇದಕ್ಕೆ ಉದಾಃ 'ನಮ್ಮ ಕೆಲಸವು ಗೌರವಹೀನವೇ?'[೮೬] ಎಂಬ ಲೇಖನವನ್ನು ಚಂ.ಭಾ. ಸಾನಗ ಎಂಬುವರು ಸುದೀರ್ಘವಾಗಿ ಬರೆದು, ಸಮಾಜದಲ್ಲಿ ತಮ್ಮ ಕಾಯಕದ ಸ್ಥಾನಮಾನ ಯಾವುದು ಎಂಬುದನ್ನು ತಲಸ್ಪರ್ಶಿಯಾಗಿ ಚರ್ಚಿಸಿದ್ದಾರೆ.

ಪತ್ರಿಕೆಗಳು ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಬಹುಮಹತ್ವದ ಪಾತ್ರವಹಿಸುತ್ತವೆ ಎಂಬುದನ್ನು ಮರೆಯಲಾಗದು. ಜಾತೀಯ ನೆಪದಲ್ಲಿ ವಿಶ್ವಕರ್ಮ ಸಮಾಜದ ಮೇಲೆ ನಡೆದ ಶೋಷಣೆ ದೌರ್ಜನ್ಯಗಳನ್ನು ಬಯಲಿಗೆಳೆದು, ನ್ಯಾಯ ಕೊಡಿಸಿದ ಶ್ರೇಯಸ್ಸು ಈ ಪತ್ರಿಕೆಗಳಿಗೆ ಸಲ್ಲುತ್ತದೆ. ೧೯೫೦ರ ದಶಕದಲ್ಲಿ ನಡೆದ ಒಂದು ಘಟನೆಯನ್ನು ಇಲ್ಲಿ ಪ್ರಸ್ತಾಪಿಸಲೇಬೇಕು. ವಿಶ್ವಕರ್ಮಾ ಪತ್ರಿಕೆಯ ಸಂಪಾದಕರಿಗೆ ಸೂರಾಚಾರ್ಯ ಎಂಬುವರು ಒಂದು ಪತ್ರ ಬರೆದಿದ್ದಾರೆ. ಆ ಪತ್ರದ ಒಕ್ಕಣಿಕೆ ಹೀಗಿದೆ:

'ಶ್ರೀ ವಿಶ್ವಕರ್ಮಾ ಪತ್ರಿಕೆಯ ಸಂಪಾದಕರ ಸನ್ನಿಧಾನಕ್ಕೆ ನಾಗಮಂಗಲ ತಾಲ್ಲೂಕು ನೆಲಿಗೆರೆ ಹೋಬಳಿ ಕಂಚನಹಳ್ಳಿ ಗ್ರಾಮದಲ್ಲಿರುವ ವಿಶ್ವಕರ್ಮಮತೀಯರು ಬರೆದುಕೊಂಡ ಅರ್ಜಿ–

'ಸ್ವಾಮಿ, ನಮ್ಮ ಊರಿನ ಸಣ್ಣ ಲಿಂಗಾಚಾರ್ಯ ಎಂಬವರ ಮಗಳ ಲಗ್ನವನ್ನು ಇದೇ ಊರಿನ ತನ್ನ ಸ್ವಗೃಹದಲ್ಲಿ ಮಾಡುವುದಾಗಿ ಲಗ್ನಪತ್ರಿಕೆ ಪ್ರಿಂಟು ಮಾಡಿಸಿದ್ದಕ್ಕೆ (ಊರಿನಲ್ಲಿ ಮದುವೆ ಮಾಡಲಿಲ್ಲ) ಆ ಹಳ್ಳಿಯ ಬಹುಸಂಖ್ಯಾತರು (ಒಕ್ಕಲಿಗರು)) ಪಂಚಾಯತಿ ಸೇರಿಸಿ ನ್ಯಾಯ ಮಾಡಿ ೫ ರೂ. ದಂಡ ವಿಧಿಸಿದುದನ್ನು ಸಣ್ಣಲಿಂಗಾಚಾರ್ಯನು ಕೊಡದೆ ಹೋಗಲು ಆ ಬಹುಸಂಖ್ಯಾತರು ಬೀದಿಯಲ್ಲಿ ಗುಂಪುಗೂಡಿ ಬಹಿರಂಗವಾಗಿ ನಮ್ಮವರ ಮನೆಗಳ ಮೇಲೆ ಕಲ್ಲು ಹೊಡೆಯಲು ಆರಂಭಿಸಿದರು. ಈ ವಿಚಾರವನ್ನು ಬೆಳ್ಳೂರು ಪೋಲೀಸಿ ಆಫೀಸಿಗೆ ತಿಳಿಸಲಾಯಿತು. ಪೋಲೀಸನವನೊಬ್ಬನು ನಮ್ಮಗಳ ರಕ್ಷಣೆಗೆ ಊರಿನಲ್ಲಿ ಕಾದಿದ್ದನು. ಆದರೂ ೨೭-೫-೧೯೫೦ರಂದು ಬೆಳಿಗ್ಗೆ ೬ ಗಂಟೆ ಸಮಯದಲ್ಲಿ ಪುನಃ ಕಲ್ಲುಗಳು ಬೀಳಲು ಆರಂಭವಾಯಿತು. ಆಗ ವಿಚಾರಿಸಲು ಹೊರಗೆ ಬಂದ ವೆಂಕಟಾಚಾರ್ಯನೆಂಬುವರನ್ನು ಜವರೇಗೌಡ ನಂಜುಂಡಯ್ಯ ಎಂಬುವರು ಬಹಳವಾಗಿ ಹೊಡೆದರು. ಕೂಡಲೆ ಅವರನ್ನು ಆಸ್ಪತ್ರೆಗೆ ಸೇರಿಸಿದೆವು. ಡಾಕ್ಟರು ಪರೀಕ್ಷಿಸಿ ಮೈಸೂರು ಕೃಷ್ಣರಾಜೇಂದ್ರ ಆಸ್ಪತ್ರೆಗೆ ಕಳಿಸಿಕೊಟ್ಟರು. ಅಲ್ಲಿ ಎಕ್ಸರೇ ತೆಗೆದು ಪರೀಕ್ಷಿಸಿದಾಗ ವೆಂಕಟಾಚಾರ್ಯರ ಬಲ ಪಕ್ಕೆಯ ಒಂದು ಮೂಳೆಯು ಮುರಿದು ಹೋಗಿರುವುದು ಕಂಡು ಬಂತು. ತಕ್ಕ ಚಿಕಿತ್ಸೆ ನಡೆಯುತ್ತಿದೆಯಾದರೂ ಬದುಕುವುದು ಕಷ್ಟವಾಗಿದೆ. ಈ ವಿಚಾರದಲ್ಲಿ ಪೋಲೀಸಿನವರು ರಿಕಾರ್ಡು ಮಾಡಿರುತ್ತಾರೆ. ಇತ್ತೀಚೆಗೆ ಇದೇ ಊರಿನ ಸೂರಾಚಾರ್ಯರೆಂಬುವರು ತಮ್ಮ ಮಗನ ಮದುವೆಯನ್ನು ೭-೬-೧೯೫೦ರಂದು ನಡೆದಲು ತಾಲ್ಲೂಕು ಅಮಲ್‌ದಾರರಲ್ಲಿ ಲೈಸೆನ್ಸ್ ಕೇಳಿದರು. ೨-೯-೧೯೫೦ ರಲ್ಲಿ ಸಬ್‌ಇನ್ಸ್‌ಪೆಕ್ಟರ್ ಊರಿಗೆ ಬಂದು ಮಹಜರ್ ಮಾಡಿಕೊಂಡು ಹೋದರು. ಆ ದಿವಸ ಸೂರಾಚಾರ್ಯರು ಊರಲ್ಲಿರಲಿಲ್ಲವಾಗಿ ಮಾರನೆ ದಿನ ಮಧ್ಯಾಹ್ನ ಕರಿಯಾಚಾರ್ಯರೆಂಬುವರ ಜೊತೆಯಲ್ಲಿ ಬೆಳ್ಳೂರಿಗೆ ಹೋಗಿ ದಫೇದಾರರಲ್ಲಿ ಮಹಜರು ಬರೆದುಕೊಟ್ಟು, ಸಾಯಂಕಾಲ ೬-೩೦ ಗಂಟೆ ಸಮಯದಲ್ಲಿ ಊರಿಗೆ ವಾಪಸು ಬರುತ್ತಿದ್ದಾಗ ಇದೇ ಊರಿನ ಪಟೇಲ್ ಲಕ್ಕಣ್ಣಗೌಡ ವಗೈರೆ ೩೦ ಜನರು ಹಳ್ಳದಲ್ಲಿ ಕಾದಿದ್ದು, ದಾರಿಗೆ ಅಡ್ಡಲಾಗಿ ಬಂದು ಸೂರಾಚಾರ್ಯ ಹಾಗೂ

ಕರಿಯಾಚಾರ್ಯರನ್ನು ಮಚ್ಚು ಕೊಡಲಿ ಮುಂತಾದ ಆಯುಧಗಳಿಂದ ಹೊಡೆದು ಕೆಳಕ್ಕೆ ಕೆಡವಿದರು. ಇವರು ಕೂಗಿಕೊಂಡದ್ದನ್ನು ಕೇಳಿ ಓಡಿ ಬಂದ ಸಣ್ಣನಿಂಗಾಚಾರ್ಯ, ಅಣ್ಣಾಸ್ವಾಮಾಚಾರ್ಯ ಮತ್ತು ಲಿಂಗಾಚಾರ್ಯ ಎಂಬುವರನ್ನು ಸಹ ಹೊಡೆದು ಓಡಿ ಹೋದರು. ಕೂಡಲೆ ಸಮಾಚಾರವನ್ನು ತಿಳಿದ ಪೋಲೀಸರು ಕೃತ್ಯ ನಡೆದ ಸ್ಥಳಕ್ಕೆ ಬಂದು ಜಮಾಯಿಸಿ ಗಾಯಗೊಂಡವರನ್ನು ಗಾಡಿಗಳ ಮೇಲೆ ಸಾಗಿಸಿ ಚಿಕಿತ್ಸೆ ಮಾಡಿಸಿರುತ್ತಾರೆ. ಬಡವರಾದ ನಾವು ಮದುವೆಯಂಥ ಚಿಕ್ಕ ಕಾರ್ಯಕ್ಕಾಗಿ ಇಷ್ಟು ತೊಂದರೆಪಟ್ಟು, ಗಾಯಗಳಿಂದ ನರಳುತ್ತಿದ್ದೇವೆ. ವಿವಾಹವು, ವಿವಾಹದ ಮೆರವಣಿಗೆಯೂ ಪ್ರತಿಯೊಬ್ಬ ಮನುಷ್ಯನ ಆಜನ್ಮಸಿದ್ಧವಾದ ಹಕ್ಕಾಗಿದ್ದರೂ ಅದನ್ನು ಅನುಭವಿಸಲು ಸರ್ವಪ್ರಜಾ ಸ್ವಾತಂತ್ರ್ಯವೆಂದು ಹೇಳಿಕೊಳ್ಳುವ ಪ್ರಜಾಸರಕಾರದಲ್ಲಿದ್ದರೂ ಅವಕಾಶವಿಲ್ಲದಂತಾಗಿದೆ. ಇಂದಿನ ರಾಜ್ಯದಲ್ಲಿ ಸರ್ವಸಮತಾ ಭಾವನೆಯಿದೆಯೆಂಬುದೂ ಎಲ್ಲರೂ ಶಾಂತಿ ಸೌಹಾರ್ದಗಳಿಂದ ಬಾಳಬಹುದೆಂಬುದು ಕನಸಿನ ಮಾತಾಗಿದೆ. ಈಗ ಈ ಗ್ರಾಮದಲ್ಲಿ ನಾವುಗಳೂ ನಮ್ಮ ಹೆಂಗಸರು ಮಕ್ಕಳುಗಳು ಬದುಕುವುದು ಕಷ್ಟವಾಗಿದೆ. ನಮ್ಮ ಹೆಂಗಸರನ್ನು ಸಿಕ್ಕಿದ ಕಡೆ ಮಾನಭಂಗ ಮಾಡುತ್ತೇವೆಂದು ಹೇಳುತ್ತಿರುವುದನ್ನು ಕಂಡರೆ ನಮಗೆ ತುಂಬಾ ಭಯವಾಗಿದೆ.

ತಾವು ಖುದ್ದು ದಯಮಾಡಿಸಿ ಗ್ರಾಮಸ್ಥರಿಗೆ ತಿಳುವಳಿಕೆ ಹೇಳಿ ಬಡವರಾದ ನಮ್ಮ ಲಗ್ನಕಾರ್ಯಗಳನ್ನು ನಡೆಸುವಂತೆ ಅವಕಾಶ ಕಲ್ಪಿಸಿಕೊಟ್ಟು ಇತರರಿಂದ ನಮಗೆ ಯಾವ ತೊಂದರೆಯೂ ಆಗದ ಹಾಗೆ ನಮ್ಮಗಳನ್ನು ಕಾಪಾಡಬೇಕಾಗಿ ಅತ್ಯಂತ ವಿನಯದಿಂದ ಪ್ರಾರ್ಥಿಸುತ್ತೇವೆ.– ತಮ್ಮ ವಿಧೇಯ ಸೂರಾಚಾರ್ಯ ಮತ್ತು ಈ ಗ್ರಾಮದ ವಿಶ್ವಕರ್ಮ ಮತೀಯರು. ದಿನಾಂಕ ೯–೬–೧೯೫೦".[೮೭]

ಈ ಪತ್ರವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದ ಗಂಗಾಧರಮೂರ್ತಿ ಅವರು ಸಮಾಜ ಬಾಂಧವರನ್ನು ಬಡಿದೆಬ್ಬಿಸುವ ಬರಹವೊಂದನ್ನು ಪ್ರಕಟಿಸಿದರು. ಇಂಥ ಜಾತಿಯ ವೈಷಮ್ಯಗಳು ಓಂದೂ ಸಮಾಜದ ಅಸ್ತಿತ್ವಕ್ಕೆ ಕೊಡಲಿಪೆಟ್ಟು ನೀಡುತ್ತವೆ ಎಂಬುದನ್ನು ಅರಿತುಕೊಂಡಿದ್ದ ಅವರು ಸರಕಾರದ ಮೇಲೆ ತಮ್ಮ ಈ ಬರಹದ ಮೂಲಕ ಒತ್ತಡ ತಂದು, ಸಮಸ್ಯೆಯನ್ನು ಪರಿಹರಿಸುವ ಕೆಲಸ ಮಾಡಿದರು. ಇಂಥ ಪ್ರಸಂಗಗಳಿಂದ ನಮಗೆ ದೊರೆತ ಈ ಸ್ವಾತಂತ್ರ್ಯ ಬಹುಕಾಲ ನಿಲ್ಲದೆ ಇಡೀ ದೇಶವನ್ನು ಮತ್ತೊಮ್ಮೆ ಪರದಾಸ್ಯಕ್ಕೆ ದೂಡುತ್ತದೆ ಎಂದು ಎಚ್ಚರಿಕೆ ಮಾತುಗಳನ್ನು ಹೇಳಿದರು. ಈ ಸಂದರ್ಭದಲ್ಲಿ ಅವರಿಗೆ ಸಾಂತ್ವನ ನೀಡುವ ಮೂಲಕ ಸಾಮಾಜಿಕ ಬದ್ಧತೆಯನ್ನು ತೋರುವ ಕಾರ್ಯವನ್ನು ಮಾಡಿದರು.

"ಕಠೋರ ಅನ್ಯಾಯ ಓಂಸೆಗಳಿಗೆ ಸಿಕ್ಕಿ ದುರಂತವನ್ನನುಭವಿಸುತ್ತಿರುವ ಮತಸೋದರರಿಗೆ ನಮ್ಮ ಹೃತ್ಪೂರ್ವಕ ಅನುತಾಪವನ್ನು ನೀಡುತ್ತೇವೆ. ಇದೇ ರೀತಿ ಅನ್ಯಾಯ ಹಿಂಸೆಗಳಿಗೆ ಗುರಿಯಾಗಿರುವ, ಗುರಿಯಾಗುತ್ತಿರುವ ಅಸಂಖ್ಯಾತ ಜನರ ಅನುತಾಪಗಳೂ ಸಹಾನುಭೂತಿಗಳೂ

ಅವರೊಂದಿಗಿಗೆಯೆಂದು ಹೇಳಬಯಸುತ್ತೇವೆ. ಇವರು ಮಾಡಿರುವ ತ್ಯಾಗವು ಅನ್ಯಾದೃಶ್ಯವಾಗಿದೆ. ಈ ತ್ಯಾಗದ ಫಲವು ಇಂದೇ ಕಾಣಿಸದೇ ಹೋಗಬಹುದು. ಆದರೆ ಎಂದಿಗಿಂತಲೂ ಇಂದು ಈ ತ್ಯಾಗಕ್ಕೆ ಬೆಲೆಯಿದೆ. ಈ ತ್ಯಾಗದಿಂದ ಯಾರು ಈ ದುರಂತಗಳಿಗೆ ಕಾರಣರಾಗಿರುವರೋ ಅವರ ಅಜ್ಞಾನ ಕಠಿಣ ಹೃದಯಗಳ ಅರಿವನ್ನು ಲೋಕವು ತಿಳಿಯುವಂತಾಗಿದೆ...ಅಖಂಡ ಕರ್ನಾಟಕದಲ್ಲಿರುವ ಎಲ್ಲ ಸಂಘಗಳೂ ಸಂಸ್ಥೆಗಳೂ ಮುಖ್ಯವಾಗಿ ಎಲ್ಲ ವಿಶ್ವಕರ್ಮ ಸಮಾಜ-ಸಂಘಗಳೂ ಮಾನವನ ಆಜನ್ಮಸಿದ್ಧ ಹಕ್ಕಿಗೆ ಊನ ಬಂದಿರುವ ಈ ಕೃತ್ಯಗಳನ್ನು ಖಂಡಿಸಿ ಮೈಸೂರು ಸರಕಾರಕ್ಕೂ ಸಹಾನುಭೂತಿಯನ್ನು ತೋರಿಸಿ ಕಂಚನಹಳ್ಳಿ ಗ್ರಾಮದ ವಿಶ್ವಕರ್ಮಮತೀಯರಿಗೂ ನಿರ್ಣಯಗಳನ್ನು ಕಳುಹಿಸಿ ಕೊಡಬೇಕೆಂದು ಸೂಚಿಸಬಯಸುತ್ತೇವೆ. ಅಲ್ಲದೆ ಆದಷ್ಟು ಮಟ್ಟಿಗೆ ಅದೆಷ್ಟೇ ಅಲ್ಪವಾದರೂ ಸರಿಯೆ ದ್ರವ್ಯವನ್ನು ಶೇಖರಿಸಿ ಸೂರಾಚಾರ್ಯರು ಕಂಚನಹಳ್ಳಿ ಗ್ರಾಮ ಇವರಿಗೆ ಕಳುಹಿಸಿಕೊಟ್ಟು ಸಹಾಯ ಮಾಡಬೇಕೆಂದು ನಮ್ರಪೂರ್ವಕವಾಗಿ ಕೇಳಿಕೊಳ್ಳುತ್ತೇವೆ. ಅಲ್ಲದೆ ಮೈಸೂರು ಸರ್ಕಾರಕ್ಕೆ ಕಳುಹಿಸಿದ ಖಂಡನಾ ನಿರ್ಣಯ ಮತ್ತು ಕಂಚನಹಳ್ಳಿ ಗ್ರಾಮದ ವಿಶ್ವಕರ್ಮ ಮತೀಯರಿಗೆ ಕಳುಹಿಸಿದ ಸಹಾನುಭೂತಿ ನಿರ್ಣಯ ಮತ್ತು ಸಹಾಯ ದ್ರವ್ಯಗಳ ಒಂದು ನಕಲು ಪ್ರತಿಯನ್ನು ವಿಶ್ವಕರ್ಮಾ ಸಂಪಾದಕರಿಗೂ ಕಳುಹಿಸಿಕೊಡಬೇಕೆಂದೂ ವಿನಂತಿಸುತ್ತೇವೆ."[೮೮]

ಅಷ್ಟೇ ಅಲ್ಲ ಈ ವಿಷಯವಾಗಿ ಸರಕಾರದ ಗಮನ ಸೆಳೆದು ಪೊಲೀಸ-ಜಿಲ್ಲಾಧಿಕಾರಿಗಳ ಸಹಕಾರದಿಂದ ಕಂಚನಹಳ್ಳಿಯಲ್ಲಿ ಮದುವೆ ಜರುಗುವಂತೆ ಮಾಡಿದರು. ಈ ಮದುವೆ ಅದ್ದೂರಿಯಾಗಿ ಜರುಗಿದ ವಿಷಯವನ್ನು ಪತ್ರಿಕೆಯಲ್ಲಿ ವಿವರವಾಗಿ ಪ್ರಕಟಿಸಿದರು.[೮೯]

ಶಿವಮೊಗ್ಗದ ಎ.ಎಫ್. ಮೋಹನರಾವ್ ಅವರು 'ವಿಶ್ವಕರ್ಮ ಧರ್ಮ ಮತ್ತು ಸಮಾಜ'[೯೦] ಎಂಬ ಲೇಖನ ಬರೆದು ತಮ್ಮ ಸಮಾಜದ ಸಮಗ್ರ ಅಭಿವೃದ್ಧಿಗಾಗಿ ಏನೆಲ್ಲ ಮಾಡಬಹುದು ಎಂಬುದರ ಒಂದು ಸ್ಥೂಲ ನೋಟವನ್ನು ನೀಡಿದ್ದಾರೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಪ್ರಕಟಿಸಿದ ಪಠ್ಯಪುಸ್ತಕದಲ್ಲಿ ವಿಶ್ವಕರ್ಮ ಸಮಾಜದ ಅವಹೇಳನವಾದ ಸಂದರ್ಭದಲ್ಲಿ ಜಿ. ಜ್ಞಾನಾನಂದ ಅವರ 'ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು ಕೆಲವು ಸಮಾಜಶಾಸ್ತ್ರಜ್ಞರ ಅಭಿಪ್ರಾಯಗಳು' ಎಂಬ ಕೃತಿಯ ಕುರಿತಾದ ವಿಶ್ಲೇಷಣಾತ್ಮಕ ಸಂಶೋಧನಾತ್ಮಕ ಲೇಖನಗಳನ್ನು ವಿಶ್ವಕರ್ಮೋದಯ ಪತ್ರಿಕೆಯಲ್ಲಿ ಪ್ರಕಟಿಸಿ,[೯೧] ಎಂ.ಎನ್. ಶ್ರೀನಿವಾಸ್ ಅವರ ಅಭಿಪ್ರಾಯಗಳನ್ನು ತರ್ಕದ ಒರೆಗಲ್ಲಿಗೆ ಹಚ್ಚಿ, ವಿಶ್ವಕರ್ಮ ಸಮಾಜದ ವೈಶಿಷ್ಟ್ಯತೆಯನ್ನು ಎತ್ತಿ ಹಿಡಿದಿದ್ದಾರೆ. ಡಾ. ನಾಗೇಂದ್ರ ಪ್ರಕಾಶ, ಡಾ. ಎಚ್. ಎಂ. ಪಂಚಕ್ಷರಯ್ಯ, ಡಾ. ಎಂ. ಪೂರ್ವಾಚಾರ್, ಪ್ರೊ.ಕೆ.ವಿ.ಕೃಷ್ಣಮೂರ್ತಿ, ಡಾ. ಪಿ. ನಾಗೇಶ್ವರರಾವ್, ಜಿ. ಎಲ್. ಬಡಿಗೇರ್ ಅವರ ಲೇಖನಗಳನ್ನು ಇಲ್ಲಿ ಕೊಡಲಾಗಿದೆ.

ವಿಶ್ವಕರ್ಮ ಸಮಾಜ ಮುಂದೆ ಬರಬೇಕಾದರೆ ಮಹಿಳೆಯರೂ ಶಿಕ್ಷಣ ಪಡೆಯುವಂತಾಗ ಬೇಕೆಂಬುದು ಈ ಪತ್ರಿಕೆಗಳ ಧ್ಯೇಯ. ಅದಕ್ಕೆ ಪೂರಕವಾದ ಲೇಖನಗಳು ಇಲ್ಲಿವೆ. ಟಿ. ವಿಶ್ವನಾಥ ಆಚಾರ್ ಅವರು 'ವಿಶ್ವಕರ್ಮ ಸಮಾಜದಲ್ಲಿ ಸ್ತ್ರೀ ವಿದ್ಯಾಭ್ಯಾಸ'[೯೨] ಎಂಬ ಲೇಖನದಲ್ಲಿ ಮಹಿಳೆಯರ ವಿದ್ಯಾಭ್ಯಾಸದಿಂದ ಸಮಾಜಕ್ಕಾಗುವ ಲಾಭಗಳನ್ನು ವಿವರಿಸಿದ್ದಾರೆ. ಸಾಮಾಜಿಕ ಸ್ಥಾನಮಾನಗಳು ಹೆಚ್ಚಾಗುವಲ್ಲಿ ಸ್ತ್ರೀ ಶಿಕ್ಷಣದ ಮಹತ್ವವನ್ನು ಇಲ್ಲಿ ತಿಳಿಸಿಕೊಟ್ಟಿದ್ದಾರೆ. ಇದಕ್ಕೆ ಪೂರಕವೆನ್ನುವಂತೆ ೧೭–೧೦–೧೯೮೦ರಂದು ಬಂಗ್ರಮಂಜೇಶ್ವರದ ಕಾಳಿಕಾ ಪರಮೇಶ್ವರಿ ದೇವಸ್ಥಾನದಲ್ಲಿ ಮೈಸೂರಿನ ಕುಮಾರಿ ಮನುವಾಗೀಶ್ವರೀ ಎಂಬುವರು 'ಹಿಂದೂ ಸಮಾಜದಲ್ಲಿ ಸ್ತ್ರೀಯ ಸ್ಥಾನ'[೯೩] ಎಂಬ ವಿಷಯ ಕುರಿತು ಮಾರ್ಮಿಕ ಭಾಷಣವನ್ನು ವಿಶ್ವಕರ್ಮಾ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ.

ಸೋಮನಾಥ ಆಚಾರ್ಯ ಅವರು 'ನಾನು ತಿಳಿದಂತೆ ನಮ್ಮ ಸಮಾಜ'[೯೪] ಎಂಬ ಲೇಖನದಲ್ಲಿ ವಿಶ್ವಕರ್ಮ ಸಮಾಜಕ್ಕೆ ಪ್ರಾಚೀನತೆಯ ಮೆರಗು ಇದ್ದರೂ, ಶಿಲ್ಪಶಾಸ್ತ್ರ ಕಲೆಗಳಲ್ಲಿ ಅಸಾಮಾನ್ಯ ಸಾಧನೆ ಮಾಡಿದ್ದರೂ ಈಗ ಬಡತನದಿಂದ ಕೂಡಿದೆ. ಬಡತನದಿಂದ ಮೇಲೆದ್ದು ನಮ್ಮ ಸಮಾಜ ಬಾಂಧವರ ಬದುಕು ಬೆಳಗಬೇಕಾಗಿದೆ ಎಂಬ ಆಶಯ ಈ ಲೇಖನದಲ್ಲಿದೆ. ಇದರ ಮುಂದುವರಿದ ಭಾಗವೆಂಬಂತೆ ಎರಡನೆಯ ಬಹುಮಾನ ಪಡೆದ ಕಾರ್ಕಳದ ಹರಿಶ್ಚಂದ್ರ ನಿಂಜೂರ ಅವರ 'ನಾನು ತಿಳಿದಂತೆ ನಮ್ಮ ಸಮಾಜ'[೯೫] ಎಂಬ ಲೇಖನವು ಇದೇ ಆಶಯವನ್ನು ಹೆಚ್ಚುಕಡಿಮೆ  ಪ್ರತಿಪಾದಿಸಿದೆ.

ಕಾರ್ಕಳದ ಸದಾನಂದರಾವ್ ಅವರ 'ನಮ್ಮ ಸಾಮಾಜಿಕ ಸಮಸ್ಯೆಗಳು ಮತ್ತು ಯೋಜಿತ ಪರಿಹಾರಗಳು'[೯೬] ಎಂಬ ಲೇಖನವು ಉಡುಪಿಯ ವಿಶ್ವಬ್ರಾಹ್ಮಣ ಸಭಾದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವಾಗಿದ್ದರೂ ಸಾಮಾಜಿಕ ವಿಚಾರಗಳನ್ನು ಅತ್ಯಂತ ಮಾರ್ಮಿಕವಾಗಿ ಚಿಂತಿಸಲಾಗಿದೆ. ವಿಶ್ವನಾಥ ಆಚಾರ್ಯ ಅವರ 'ನಮ್ಮ ಸಂಘ ಜೀವನದ ಕುಂದು ಕೊರತೆಗಳು'[೯೭] ಎಂಬ ಲೇಖನ ಕೂಡ ವಿಶ್ವಬ್ರಾಹ್ಮಣ ಸಭಾದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವೇ ಆಗಿದೆ. ಕೆಲವು ಕಟು ವಿಚಾರಗಳನ್ನು ಪ್ರಸ್ತಾಪಿಸುವ ಮೂಲಕ ಸಮಾಜ ಸಂಘಟನೆಯ ಮೂಲಸೂತ್ರಗಳನ್ನು ಪ್ರತಿಪಾದಿಸಿರುವುದು ಕಂಡುಬರುತ್ತದೆ.

ಎಸ್. ಎ. ಬಸರೂರ್ 'ನಮ್ಮ ಅಧಃಪತನ' (ವಿಶ್ವಕರ್ಮಾ ಸಂಪುಟ೨, ಸಂಚಿಕೆ ೫, ಮಾರ್ಚ ೧೯೫೦ ಪುಟ ೧೨–೧೫), ಶ್ರೀಕಂಠಾಚಾರ್ಯ ಅವರ 'ನಮ್ಮ ಸಾಮಾಜಿಕ ಪರಿಸ್ಥಿತಿ' (ವಿಶ್ವಕರ್ಮಾ ಸಂಪುಟ ೨, ಸಂಚಿಕೆ ೬, ಏಪ್ರಿಲ್ ೧೯೫೦ ಪುಟ ೧೦–೧೩), ಮತ್ತು ವಿಶ್ವಕರ್ಮ ಸಮಾಜ ಶುದ್ಧೀಕರಣ ಹಾಗೂ ನಮ್ಮ ಮಠಪತಿಗಳು ಮತ್ತು ಶೆಟ್ಟಿ ಯಜಮಾನರು' (ವಿಶ್ವಕರ್ಮಾ ಸಂಪುಟ೨, ಸಂಚಿಕೆ ೭ ಮೇ ೧೯೫೦, ಪುಟ ೧೯–೨೨)ವಿ. ಬಿ. ಅರಕೇರಿ 'ವಿಶ್ವಕರ್ಮ ಸಮಾಜದ ಉನ್ನತಿಯ ಮಾರ್ಗ' ಲೇಖನ (ವಿಶ್ವಕರ್ಮಾ ಸಂಪುಟ ೩. ಸಂಚಿಕೆ

೬, ಏಪ್ರಿಲ್ ೧೯೫೧, ಪುಟ ೩೫-೪೨) ಮುಂತಾದ ಕೆಲವು ಲೇಖನಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು.

**ಪೂಜ್ಯರ ಸಂದೇಶಗಳು :**

ವಿಶ್ವಕರ್ಮೋದಯ ಪತ್ರಿಕೆ ನಾಲ್ಕು ವರ್ಷ ಪೂರೈಸಿ, ಐದನೆಯ ವರ್ಷಕ್ಕೆ ಪಾದಾರ್ಪಣೆ ಮಾಡಿದ ಸಂದರ್ಭದಲ್ಲಿ ಆನೆಗುಂದಿ ಸರಸ್ವತಿಪೀಠದ ಪೂಜ್ಯ ಕಾಳಹಸ್ತೇಂದ್ರ ಸರಸ್ವತಿ ಮಹಾಸ್ವಾಮಿಗಳು, ಕಲಬುರ್ಗಿ ಜಿಲ್ಲೆಯ ಶಹಪುರ ವಿಶ್ವಕರ್ಮ ಏಕದಂಡಗಿಮಠದ ಪೂಜ್ಯರು ಶುಭ ಸಂದೇಶ ನೀಡಿ ಪತ್ರಿಕೆಯು ಉತ್ತರೋತ್ತರ ಬೆಳೆದು ಸಮಾಜಕ್ಕೆ ಒಳಿತನ್ನುಂಟು ಮಾಡಲಿ ಎಂದು ಹಾರೈಸಿದ್ದಾರೆ.

ವಿಶ್ವಕರ್ಮ ಕಲಾ ಪತ್ರಿಕೆಯು ನಿಂತು ಹೋದ ಮೇಲೆ, ಎನ್. ಸಿ. ಛಾಯಾಪತಿ ಅವರು ಇದೇ ಪತ್ರಿಕೆಯ ಧ್ಯೇಯಧೋರಣೆಗಳ ಆಶಯದ ಮೇಲೆ 'ವಿಧಾತೃ' ಎಂಬ ಪತ್ರಿಕೆಯನ್ನು ಪ್ರಕಟಿಸಲು ಆರಂಭಿಸಿದಾಗ ಅನೇಕ ಸ್ವಾಮೀಜಿಯವರು ಶುಭ ಸಂದೇಶ ಕಳುಹಿಸಿ ಶುಭ ಹಾರೈಸಿದ್ದಾರೆ.

"ನಮ್ಮ ಸಮಾಜದಲ್ಲಿರುವ ಕೆಲವೇ ಪತ್ರಿಕೆಗಳಲ್ಲಿ ವಿಶ್ವಕರ್ಮಕಲಾ ಒಂದಾಗಿತ್ತು. ಶ್ರೀ.ಸೂರ್ಯಾಚಾರ್ಯರ ಅವರು ಇದನ್ನು ಹೊರತರುತ್ತಿದ್ದರು. ಆದರೆ ಅದು ಕಾರಣಾಂತರದಿಂದ ಸ್ಥಗಿತಗೊಂಡಿತು. ಆಮೇಲೆ ಅದನ್ನೆ 'ವಿಧಾತೃ' ಎಂಬ ಹೆಸರಿನಲ್ಲಿ ಎನ್. ಸಿ. ಛಾಯಾಪತಿ ಇವರು ಹೊರತರುತ್ತಿರುವುದು ನಮ್ಮ ಸಮಾಜಕ್ಕೆ ಒಂದು ಹೊಸ ಕಿರಣ ಬಂದಂತಾಗಿದೆ. ಈ ಪತ್ರಿಕೆಯ ಮೊದಲ ಸಂಪುಟವನ್ನು ಗಂಗಾಧರ ಮೂರ್ತಿಗಳು, ನಾ.ಭಾ. ಚಂದ್ರಶೇಖರಾಚಾರ್ಯರು, ತಾ.ವೆಂ. ಮುತ್ತಾಚಾರ್ಯರು, ಬಿ. ಹರಿಶ್ಚಂದ್ರಾಚಾರ್ಯರು ಇವರುಗಳಿಗೆ ಸಮರ್ಪಣೆ ಮಾಡಿರುವುದು ಬಹಳ ಮಹತ್ವಪೂರ್ಣವಾಗಿದೆ ಎಂದು ಭಾವಿಸುತ್ತೇವೆ. ವೈಶ್ವಕರ್ಮಣ ಸಾಹಿತ್ಯ ಬೆಳೆಸುವಲ್ಲಿ ಅವರುಗಳು ಮಾಡಿದ ಸೇವೆ ಅಪಾರವಾಗಿದೆ. 'ವಿಧಾತೃ' ವೇದವಾಙ್ಮಯದ ವಿಶ್ವಕರ್ಮ ಮತ್ತೊಂದು ಪರ್ಯಾಯ ನಾಮವಾಗಿದೆ. ಬಹಳ ಔಚಿತ್ಯಪೂರ್ಣವಾದ ಹೆಸರನ್ನಿಟ್ಟಿದ್ದಾರೆ. ಪತ್ರಿಕೆಯು ಸಮಾಜದ ಪ್ರತಿಬಿಂಬದಂತಿರುವ ದರ್ಪಣವಿದ್ದಂತೆ. ಆ ದರ್ಪಣವು ಶೀನವೂ ಆಗಬಾರದು, ನಿಮ್ನವೂ ಆಗಬಾರದು ಯಥಾವತ್ತು ಪ್ರತಿಬಿಂಬಿಸುವಂತಿರಬೇಕು. ಆ ನಿಟ್ಟಿನಲ್ಲಿ ಸಮಾಜಕ್ಕೆ ಅತ್ಯುಪಯುಕ್ತವಾದ ಪತ್ರಿಕೆಯಾಗಲೆಂದು ಅಪೇಕ್ಷಿಸುತ್ತೇವೆ."[೯೮] ವಿಶ್ವಬ್ರಾಹ್ಮಣ ಜಗದ್ಗುರು ಶ್ರೀ ಸುಜ್ಞಾನಪೀಠ ಅರೇಮಾದನಹಳ್ಳಿ ಮಹಾಸಂಸ್ಥಾನದ ಪೂಜ್ಯ ಶ್ರೀ ಗುರು ಶಿವಸುಜ್ಞಾನಮೂರ್ತಿ ಮಹಾಸ್ವಾಮಿಗಳವರು ಶುಭ ಹಾರೈಸಿದ್ದು ಸಕಾಲಿಕವಾಗಿದೆ. ಹೀಗೆ ಅನೇಕ ಗುರುಪೀಠಗಳ ಸ್ವಾಮಿಗಳು ಪತ್ರಿಕೆಗಳಿಗೆ ಶುಭ ಸಂದೇಶ ಕಳಿಸಿದ್ದಾರೆ. ಹಾಗೆಯೇ ಸಮಾಜದ ಗಣ್ಯವ್ಯಕ್ತಿಗಳ ಷಷ್ಟ್ಯಬ್ದ-ಶತಮಾನೋತ್ಸವ ಸಮಾರಂಭಗಳಿಗೂ ಶುಭ ಸಂದೇಶ ಕಳಿಸಿಕೊಟ್ಟಿದ್ದಾರೆ.

* ಇಲ್ಲಿಯ ಸಂಪಾದಕೀಯಗಳಲ್ಲಿ ಜಾಗತೀಕ ವಿದ್ಯಮಾನಗಳನ್ನು ಸಮಾಜದ ಜನರಿಗೆ ತಿಳಿಸುವ ಮಹತ್ವದ ವಿವರಗಳು ಇರುವುದನ್ನು ಕಾಣುತ್ತೇವೆ. ಆರನೆ ಜಾರ್ಜ್ ದೊರೆಗಳ ಮರಣ, ಕೋರಿಯಾ ದೇಶದಲ್ಲಿ ಕಮ್ಯುನಿಷ್ಟ ಸಾಮ್ರಾಜ್ಯದ ನಿರ್ಮಾಣ, ಸ್ಟರ್ಲಿಂಗ್ ಒಪ್ಪಂದ, ಭಾರತದ ಮೊದಲ ಸಾರ್ವತ್ರಿಕ ಚುನಾವಣೆಗಳು ಮೊದಲಾದ ವಿಷಯಗಳ ಕುರಿತು ಇಲ್ಲಿ ಮಾಹಿತಿ ದೊರೆಯುತ್ತದೆ.

* ವಿಶ್ವಕರ್ಮ ಧಾರ್ಮಿಕ ಕ್ಷೇತ್ರಗಳಾದ ಆನೆಗುಂದಿ, ಶಿರಸಂಗಿ, ತಿಂತಣಿ ಮೊದಲು ಮಾಡಿಕೊಂಡು ಬಹುತೇಕ ಕ್ಷೇತ್ರಗಳ ಸಮಗ್ರ ವಿವರಗಳು ದೊರೆಯುತ್ತವೆ.

* ವಿಶ್ವಕರ್ಮ ಸಮಾಜದ ಕಲಾವಿದರು ಸಾವಿರಾರು ಜನರು. ಅದರಲ್ಲೂ ಸಾಧನೆ ಮಾಡಿದ, ಸಾಧನೆಯಿಂದ ಪದವಿ ಪ್ರಶಸ್ತಿ ವಿಭೂಷಿತರ ಜೀವನ ಸಾಧನೆಯ ವಿವರಗಳು ಇಲ್ಲಿವೆ.

* ಧಾರ್ಮಿಕ ಜಗತ್ತಿನ ಆಗುಹೋಗುಗಳ ಕುರಿತು ಆಯಾ ಕಾಲ ಘಟ್ಟದಲ್ಲಿ ನಡೆದ ಅನೇಕ ಘಟನೆಗಳ ವಿವರಗಳು ದೊರೆಯುವುದು ಈ ಪತ್ರಿಕೆಗಳಲ್ಲಿ ಮಾತ್ರ. ಗೋಕರ್ಣದ ಪ್ರಕರಣ, ಶ್ರೀರಂಗಪಟ್ಟಣ ಮೊದಲಾದ ಕಡೆಯ ವಿಶ್ವಕರ್ಮ ದೇವಸ್ಥಾನಗಳಲ್ಲಿ ಬೇರೆ ಧರ್ಮೀಯ ಅರ್ಚಕರ ನೇಮಕ ವಿವಾದ ಪ್ರಸಂಗ, ಕೆಂಚನಹಳ್ಳಿ ಗ್ರಾಮವೊಂದರಲ್ಲಿ ವಿಶ್ವಕರ್ಮ ಸಮುದಾಯದವರ ಮದುವೆಗೆ ಮೇಲ್ವರ್ಗದವರು ಅಡ್ಡಿ ಮಾಡಿದ ಘಟನೆ, ಪಠ್ಯಪುಸ್ತಕಗಳಲ್ಲಿ ಸಮಾಜದ ಕುರಿತು ಅವಹೇಳನಕಾರಿ ವಿವರಣೆಗಳು ಪ್ರಕಟವಾದ ಸಂದರ್ಭ ಮೊದಲಾದ ಸಮಾಜಕ್ಕೆ ಅವಮಾನವಾದ ಸಂದರ್ಭಗಳಲ್ಲಿ ಪತ್ರಿಕೆಗಳಲ್ಲಿ ಉಗ್ರವಾಗಿ ಪ್ರತಿಭಟಿಸಿ, ಅಗ್ರ ಸಂಪಾದಕೀಯಗಳನ್ನು ಬರೆದು, ವಿದ್ವಾಂಸರಿಂದ ಸಂಶೋಧನಾತ್ಮಕ ಲೇಖನಗಳನ್ನು ಬರೆಯಿಸಿ ಆಯಾ ಸಮಸ್ಯೆಗಳಿಗೆ ಸಮರ್ಪಕವಾದ ಉತ್ತರಗಳನ್ನು ನೀಡಿದ್ದು ವಿಶ್ವಕರ್ಮ ಪತ್ರಿಕೆಗಳ ದೊಡ್ಡ ಸಾಧನೆ ಎನ್ನಬೇಕು.

* ಬಸವಣ್ಣನವರ ಪೂರ್ವಾಶ್ರಯ ಕೆಮ್ಮಕುಲದ ವಿಶ್ವಕರ್ಮ ಸಮಾಜ ಎಂಬುದರ ಕುರಿತು ಮೊದಲ ಲೇಖನ ಪ್ರಕಟವಾದುದು ಈ ಪತ್ರಿಕೆಗಳಲ್ಲಿ.

* ಈ ಎಲ್ಲ ಪತ್ರಿಕೆಗಳಲ್ಲಿ ವಿಶ್ವಕರ್ಮ ಸಮಾಜದ ಬಡಮಕ್ಕಳ ಶಿಕ್ಷಣಕ್ಕಾಗಿ ಅನೇಕ ಯೋಜನೆಗಳನ್ನು ರೂಪಿಸಿ, ಶ್ರೀಮಂತರ ದಾನಿಗಳ ಸಹಾಯದಿಂದ ವಿದ್ಯಾರ್ಥಿ ನಿಲಯಗಳ ಸ್ಥಾಪನೆ, ಶಿಷ್ಯವೇತನ ನೀಡುವ, ವಿದ್ಯಾರ್ಥಿ ನಿಧಿ ಸ್ಥಾಪನೆ ಯೋಜನೆ ಮೊದಲಾದ ವಿಧಾಯಕ ಕಾರ್ಯಗಳ ಸಮಗ್ರವಾದ ವಿವರಣೆ ಈ ಪತ್ರಿಕೆಗಳಿಂದ ತಿಳಿದು ಬರುತ್ತದೆ.

* ಶಿಲ್ಪಕಲೆಯ ಕುರಿತಾದ ಮಹತ್ವದ ಲೇಖನಗಳು, ಅನುವಾದಿತ ಲೇಖನಗಳು ಇಲ್ಲಿ ಮೊದಲ ಬಾರಿಗೆ ಪ್ರಕಟವಾಗಿವೆ. ಶಿಲ್ಪಕಲೆಯನ್ನು ಅಧ್ಯಯನ ಮಾಡುವವರಿಗೆ ಇವು ಬಹುಮಹತ್ವದ ಆಕರಗಳಾಗಿವೆ.

* ವಿಶ್ವಕರ್ಮ ಧರ್ಮದ ಮೂಲ ಗ್ರಂಥಗಳ ಪರಿಚಯಾತ್ಮಕ ಲೇಖನಗಳು ಇಲ್ಲಿವೆ. ವಿಶ್ವಕರ್ಮ ಕಲೆಯ ಕುರಿತಾಗಿ ಸುಮಾರು ಐದುನೂರಕ್ಕೂ ಹೆಚ್ಚು ಗ್ರಂಥಗಳು ಇಲ್ಲಿಯವರೆಗೆ ಪ್ರಕಟವಾದ ಉದಾಹರಣೆಗಳಿವೆ. ೩೪೦ ಶಿಲ್ಪಕಲಾ ಗ್ರಂಥಗಳ ವಿವರಣೆ ಮೊದಲ ಬಾರಿಗೆ ಈ ಪತ್ರಿಕೆಗಳಿಂದ ನಮಗೆ ತಿಳಿಯುತ್ತದೆ. (ಈ ಪುಸ್ತಕ ಪಟ್ಟಿಯನ್ನು ಅನುಬಂಧದಲ್ಲಿ ನೀಡಿರುವೆ).

* ಈ ಪತ್ರಿಕೆಗಳಲ್ಲಿ ಸಾಹಿತ್ಯ-ಸಂಸ್ಕೃತಿ ಕುರಿತಾದ ನೂರಾರು ಮಹತ್ವದ ಲೇಖನಗಳು ಪ್ರಕಟಗೊಂಡಿವೆ. ಆದರೆ ವಿಮರ್ಶಕರ ಗಮನ ಸೆಳೆಯದೇ ಹೋದುದು ವಿಪರ್ಯಾಸದ ಸಂಗತಿಯಾಗಿದೆ. ಹೀಗಾಗಿ ನನ್ನ ಗಮನಕ್ಕೆ ಬಂದ ಸಾವಿರಕ್ಕೂ ಮಿಕ್ಕಿ ಲೇಖನಗಳ ಒಂದು ವೈಜ್ಞಾನಿಕ ಸೂಚಿಶಾಸ್ತ್ರದ ಅನ್ವಯ ಸೂಚಿಯನ್ನು ಅನುಬಂಧದಲ್ಲಿ ಕೊಟ್ಟಿರುವೆ. ಈ ಸೂಚಿಯು ವಿಶ್ವಕರ್ಮ ಧರ್ಮ-ಸಮಾಜ-ಸಂಸ್ಕೃತಿಯನ್ನು ಅಧ್ಯಯನ ಮಾಡುವ ಮುಂದಿನ ಸಂಶೋಧಕರಿಗೆ ಅತ್ಯಂತ ಪ್ರಮುಖ ಆಕರ ಸಾಮಗ್ರಿಗಳಾಗುತ್ತವೆ ಎಂದು ನಿಸ್ಸಂದೇಹವಾಗಿ ಹೇಳಬಯಸುತ್ತೇನೆ.

* ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿ ಫ.ಗು.ಹಳಕಟ್ಟಿಯವರ 'ಶಿವಾನುಭವ' ಪತ್ರಿಕೆಯ ೩೫ ವರುಷಗಳ ೩೨೦ ಸಂಚಿಕೆಗಳು, ಬಿ. ಶಿವಮೂರ್ತಿ ಶಾಸ್ತ್ರಿಗಳ 'ಶರಣ ಸಂದೇಶ' ಪತ್ರಿಕೆಯ ೩೦ ವರ್ಷಗಳ ಸಂಚಿಕೆಗಳು, ಚೆನ್ನಮಲ್ಲಿಕಾರ್ಜುನರ ಸದ್ಧರ್ಮ ದೀಪಿಕೆಯ ೨೦ ವರ್ಷಗಳ ಸಂಚಿಕೆಗಳು, ಬಸವ ಪಥ ಸಂಚಿಕೆಯ ೪೫ ವರ್ಷಗಳ ೫೪೦ ಸಂಚಿಕೆಗಳು ಲಭ್ಯವಿರುವುದನ್ನು ನಾನು ಕಣ್ಣಾರೆ ಕಂಡಿರುವೆ. ಇದೇ ರೀತಿ ವಿಶ್ವಕರ್ಮ ಸಮಾಜದ ಪತ್ರಿಕೆಗಳನ್ನು ಸಮಗ್ರವಾಗಿ ಸಂಗ್ರಹಿಸಿ, ಅವುಗಳನ್ನು ಒಂದೆಡೆ ದಾಖಲೀಕರಣ ಮಾಡಿ, ಒಂದು ಲೇಖನ ಸೂಚಿ ಪ್ರಕಟಿಸಿದರೆ, ವಿಶ್ವಕರ್ಮ ಸಮಾಜದ ಭವ್ಯದರ್ಶನ ಲೋಕದೃಷ್ಟಿ ನಾಡಿಗೆ ಚಿರಪರಿಚಿತ ವಾಗುವುದರಲ್ಲಿ ಸಂದೇಹವಿಲ್ಲ.

* ಕರ್ನಾಟಕದ ಉದ್ದಕ್ಕೂ ಕ್ಷೇತ್ರಕಾರ್ಯ ಮಾಡಿ ಅನೇಕ ಪತ್ರಿಕೆಗಳನ್ನು ಸಂಗ್ರಹಿಸುವ ಕಾರ್ಯವನ್ನು ನನ್ನ ಮಿತಿಗೆ ಒಳಪಟ್ಟು ಮಾಡಿರುವೆ. ಈ ಪತ್ರಿಕೆಗಳಲ್ಲಿ ಅಡಕವಾಗಿರುವ ಸಾಮಾಜಿಕ-ಧಾರ್ಮಿಕ-ಶೈಕ್ಷಣಿಕ ಕಾಳಜಿಯ ಮಹತ್ವದ ಲೇಖನಗಳ ಜೊತೆಗೆ ಕಲೆ-ಸಂಸ್ಕೃತಿ-ಸಾಹಿತ್ಯ ಕುರಿತಾದ ಲೇಖನಗಳು ಮೌಲಿಕವಾಗಿವೆ. ಸಾಧ್ಯವಾದರೆ ಇವುಗಳನ್ನು ವಿಷಯಾನುಗುಣವಾಗಿ ಸಂಪಾದಿಸಿ ಸಂಪುಟಗಳಲ್ಲಿ ಪ್ರಕಟಿಸಿದರೆ ವಿಶ್ವಕರ್ಮ ಸಮಾಜದ ಸಮಗ್ರ ದರ್ಶನವಾಗುವುದರಲ್ಲಿ ಸಂದೇಹವಿಲ್ಲ.

* ಈ ಪತ್ರಿಕೆಗಳಲ್ಲಿ ವಿಶ್ವಕರ್ಮ ಸಮಾಜದ ಸಂಘ-ಸಂಸ್ಥೆಗಳ ಹುಟ್ಟು ಬೆಳವಣಿಗೆಯ ಇತಿಹಾಸವನ್ನು ಕಾಣುತ್ತೇವೆ. ಸಹಕಾರಿ ಬ್ಯಾಂಕ್‌ಗಳು, ವಿದ್ಯಾರ್ಥಿನಿಲಯಗಳು, ಇತರ ಸಂಘ ಸಂಸ್ಥೆಗಳ ಕಾರ್ಯಕ್ರಮಗಳ ವರದಿಗಳು ನಿರಂತರವಾಗಿ ಪ್ರಕಟವಾಗಿವೆ. ಇವು ಕೂಡ ಈ ಸಮಾಜದ ಪ್ರಗತಿಯ ಹೆಜ್ಜೆಗಳನ್ನು ತಿಳಿಸುತ್ತವೆ.

* ವಿಶ್ವಕರ್ಮ ಸಮಾಜದ ಧಾರ್ಮಿಕ ಕ್ಷೇತ್ರಗಳಾದ ಶಿರಸಂಗಿ, ಆನೆಗುಂದಿ ಮೊದಲಾದ ಕ್ಷೇತ್ರಗಳಲ್ಲಿ ನಿರಂತರ ನಡೆಯುವ ಧಾರ್ಮಿಕ ಉತ್ಸವ–ಅನ್ನಸಂತರ್ಪನಾ–ಜಾತ್ರಾ ಮಹೋತ್ಸವಗಳ, ಹುಣ್ಣಿಮೆ–ಅಮಾವಾಸ್ಯೆಗಳ ಕಾಲದ ಧಾರ್ಮಿ ಆಚರಣೆಗಳ ಕಾರ್ಯಕ್ರಮಗಳ ಸಮಗ್ರ ವರದಿಗಳು ಪ್ರಕಟವಾಗಿವೆ.

**ವಿಶ್ವಕರ್ಮರ ಸಾಹಿತ್ಯ :**

ರಾಷ್ಟ್ರಮಟ್ಟದಲ್ಲಿ ವಿಶ್ವಕರ್ಮ ಜನಾಂಗದ ವಿಶ್ವಕರ್ಮರ ಸಾಹಿತ್ಯ ಅಪಾರವಾಗಿ ಬೆಳದು ಬಂದಿರುವದನ್ನು ಕುರಿತು ಹಿರಿಯ ವಿದ್ವಾಂಸರಾದ ನಾ.ಭಾ.ಚಂದ್ರಶೇಖರಾಚಾರ್ಯರು ಸಂಗ್ರಹಿಸಿರುವ ಪಟ್ಟಿಯನ್ನು "ವಿಶ್ವಕರ್ಮಾ" ಮಾಸ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಪ್ರಾಚೀನ ಗ್ರಂಥಗಳ ಸಂಖ್ಯೆಯೇ ಮೂರುನೂರರಷ್ಟಿದೆ. ಜುಲೈ ೧೯೫೨ರ ಸಂಚಿಕೆಯಲ್ಲಿ ಸಂಪಾದಕರು 'ಶಿಲ್ಪ, ವಾಸ್ತು, ಕಲಾಗ್ರಂಥಗಳ' ಒಂದು ಪಟ್ಟಿಯನ್ನು ನೀಡಿದ್ದಾರೆ.

**ವಿಶ್ವಕರ್ಮ ಕೃತ ಕೃತಿಗಳು :**

| | |
|---|---|
| ೧. ಆಯತತ್ವ | ೨. ಮಹಾವಿಶ್ವ ಕರ್ಮೀಯ |
| ೩. ವಿಶ್ವಕರ್ಮೀಯ | ೪. ವಿಶ್ವಕರ್ಮವಿದ್ಯಾ |
| ೫. ವಿಶ್ವಕರ್ಮ ಪ್ರಕಾಶ | ೬. ವಿಶ್ವಕರ್ಮಶಿಲ್ಪ |
| ೭. ವಿಶ್ವಕರ್ಮ ರಹಸ್ಯ | ೮. ವಿಶ್ವಕರ್ಮ ಸಿದ್ಧಾಂತ |
| ೯. ವಿಶ್ವಕರ್ಮ ಸಂಹಿತ | ೧೦. ವಿಶ್ವಕರ್ಮವಾಸ್ತು |
| ೧೧. ವಿಶ್ವಕರ್ಮಾಗಮ | ೧೨. ವಾಸ್ತುಶಾಸ್ತ್ರ |
| ೧೩. ವಿಶ್ವಕರ್ಮಾವತಾರ | ೧೪. ವಾಸ್ತು ವಿಚಾರ |
| ೧೫. ಪರಶಿವ ವಿಶ್ವಕರ್ಮಾಗಮ | ೧೬. ಅಪರಾಜಿತ ವಾಸ್ತುಶಾಸ್ತ್ರ |
| ೧೭. ಜ್ಞಾನರತ್ನಕೋಶ | ೧೮. ವಾಸ್ತುಪ್ರಕಾಶ |
| ೧೯. ಕ್ಷೀರಾರ್ಣವ | ೨೦. ವಿಶ್ವಕರ್ಮ ಮತ |

**ಮಯ ವಿರಚಿತ :**

| | |
|---|---|
| ೨೧. ಮಯಶಿಲ್ಪ | ೨೨. ಮಯವಾಸ್ತು |
| ೨೩. ಮಯಮಾಯ | ೨೪. ಮಯಜಯ |
| ೨೫. ಮಯವಿದ್ಯಾಪ್ರಕಾಶ | ೨೬. ಮಯಪ್ರದೀಪಿಕ |
| ೨೭. ಮಯಸಂಗ್ರಹ | ೨೮. ಶಿಲ್ಪಶಾಸ್ತ್ರವಿಧಿ |
| ೨೯.ಗುರುದೇವ ಪದ್ಧತಿ | |

**ಮನು ಬ್ರಹ್ಮ ವಿರಚಿತ :**

೩೦.ಮನುತಂತ್ರ
೩೧. ಮನುಸಾರವಾಸ್ತು
೩೨. ಮಾನವಸೂತ್ರ
೩೩. ಮನುಸಾರ

**ತ್ವಷ್ಟ್ರ ರಚಿತ :**

೩೪. ತ್ವಷ್ಟ್ರ ತಂತ್ರ

**ಮಂಡನ ಸೂತ್ರಧಾರ ಕೃತಿಗಳು :**

೩೫. ವಾಸ್ತುಮಂಡನ
೩೬. ಪ್ರಾಸಾದ ಮಂಡನ
೩೭. ರೂಪಮಂಡನ
೩೮. ರಾಜವಲ್ಲಭ ಮಂಡನ
೩೯. ಗೃಹವಾಸ್ತುಸಾರ
೪೦. ತಾರಾ ಲಕ್ಷಣ
೪೧. ದಾರು ಸಂಗ್ರಹ
೪೨. ನಿರ್ದೋಷವಾಸ್ತು
೪೩. ಪ್ರಸಾದ ಕಲ್ಪ
೪೪. ಮೂರ್ತಿಧ್ಯಾನ
೪೫. ವಾಸ್ತುರಾಜವಲ್ಲಭ

**ಇತರ ಗ್ರಂಥಗಳು :**

೪೬. ಶಿಲ್ಪಕಲಾದೀಪಿಕ (ಅಗಸ್ತ್ಯ)
೪೭. ಶಿಲ್ಪಸಾಹಿತ್ಯ
೪೮. ಶಿಲ್ಪ ರತ್ನಾಕರ
೪೯. ಶಿಲ್ಪ ವತಂಸ (ಗೋವಿಂದಾನಂದ)
೫೦. ಶಿಲ್ಪಶಾಸ್ತ್ರ ಜ್ಞಾನ
೫೧. ಶಿಲ್ಪಸಂಹಿತ (ಕಶ್ಯಪ)
೫೨. ಶಿಲ್ಪಜ್ಞಾನ
೫೩. ಶಿಲ್ಪ ಸಂಗ್ರಹ
೫೪. ಶಿಲ್ಪ ಪ್ರಕಾಶ
೫೫. ಶಿಲ್ಪ ಸರ್ವಸಂಗ್ರಹ
೫೬. ಶಿಲ್ಪಾರ್ಥಸಾರ
೫೭. ಶಿಲ್ಪಸಾರ
೫೮. ಶಿಲ್ಪಶಾಸ್ತ್ರ ಸಾರ
೫೯. ಶಿಲ್ಪಲೇಖ
೬೦. ಶಿಲ್ಪ ಗ್ರಂಥ
೬೧. ಶಿಲ್ಪದೀಪಿಕ
೬೨. ಶಿಲ್ಪ ವಿಷಯ
೬೩. ಶಿಲ್ಪತಂತ್ರ (ಕುಮಾರ ಭಟ್ಟ)
೬೪. ಶಿಲ್ಪಶಾಸ್ತ್ರ
೬೫. ಶಿಲ್ಪಸರ್ವಸ್ವ ಸಂಗ್ರಹ
೬೬. ಶಿಲ್ಪ ನಿಘಂಟು
೬೭. ವಾಸ್ತುಬೋಧ
೬೮. ವಾಸ್ತುಮಂಜರಿ
೬೯ ವಾಸ್ತುವಿಚಾರ

೭೦. ವಾಸ್ತು ಸಮುಚ್ಚಯ
೭೧. ವಾಸ್ತು ಪದ್ಧತಿ
೭೨. ವಾಸ್ತುಶಾಸ್ತ್ರ (ಭೋಜದೇವ)
೭೩. ವಾಸ್ತುತಂತ್ರ
೭೪. ವಾಸ್ತುಸಾರ
೭೫. ವಾಸ್ತುಮಾಹಾತ್ಮ್ಯ
೭೬. ವಾಸ್ತ್ವಧಿಕಾರ
೭೭. ವಾಸ್ತುಕೋಶ
೭೮. ವಾಸ್ತುರತ್ನಾವಳಿ
೭೯. ವಾಸ್ತುಪ್ರಕಾಶ
೮೦. ವಾಸ್ತುಚಕ್ರ (ದೀಕ್ಷಾಚಾರ್ಯ)
೮೧. ವಾಸ್ತುಶಾಸ್ತ್ರ
೮೨. ವಾಸ್ತುರಾಜ(ರಾಜಸಿಂಹಶಿಲ್ಪ)
೮೩. ವಾಸ್ತುಕರಣ
೮೪. ವಾಸ್ತುಪುರುಷ
೮೫. ವಾಸ್ತುವಿಧಿ
೮೬. ವಾಸ್ತುನಿರ್ಮಾಣ
೮೭. ವಾಸ್ತುಶಿರೋಮಣಿ
೮೮. ವಾಸ್ತುವಿದ್ಯಾ
೮೯. ವಾಸ್ತುತಿಲಕ (ಕೇಶವಾಚಾರ್ಯ ಪುತ್ರ)
೯೦. ವಾಸ್ತುಲಕ್ಷಣ
೯೧. ವಾಸ್ತುಸಂಗ್ರಹ
೯೨. ವಾಸ್ತುಪ್ರದೀಪ
೯೩. ವಾಸ್ತುವಿದ್ಯಾಪತಿ (ವಾಸುದೇವ)
೯೪. ವಾಸ್ತುರತ್ನಾವಳಿ (ಜೀವನಾಥ)
೯೫. ವಾಸ್ತುಸೌಖ್ಯ (ಭೂದರಾನಂದ)
೯೬. ವಾಸ್ತುಪುರುಷ ಲಕ್ಷಣ
೯೭. ನಾರಾಯಣಶಿಲ್ಪ (ನಾರಾಯಣ)
೯೮. ಸೃಷ್ಟಿಶಿಲ್ಪ
೯೯. ಕಲ್ಪಶಿಲ್ಪ
೧೦೦. ಆತ್ರೇಯಶಿಲ್ಪ
೧೦೧. ಪ್ರಾಜಾಪತ್ಯಶಿಲ್ಪ
೧೦೨. ಶೌನಕಶಿಲ್ಪ
೧೦೩. ಮಲ್ಲಶಿಲ್ಪ (ಭಾನುರಾಜಾಶ್ರಿತ)
೧೦೪. ವಿಶ್ವಶಿಲ್ಪ
೧೦೫. ಪಾದ್ಮೀಶಿಲ್ಪ (ಪದ್ಮಕ)
೧೦೬. ಔಶನಸ ಶಸ್ತ್ರಶಿಲ್ಪ (ಶುಕ)
೧೦೭. ಈಶಾನಶಿಲ್ಪ (ಈಶ್ವರ)
೧೦೮. ವಾಲ್ಮೀಕಶಿಲ್ಪ (ವಾಲ್ಮೀಕಿ)
೧೦೯. ಸಾಧಕಶಿಲ್ಪ
೧೧೦. ವಜ್ರಶಿಲ್ಪ
೧೧೧. ಪ್ರಬೋಧಶಿಲ್ಪ
೧೧೨. ಪ್ರಯೋಗಶಿಲ್ಪ
೧೧೩. ಭಾರದ್ವಾಜಶಿಲ್ಪ
೧೧೪. ಯಮಶಿಲ್ಪ
೧೧೫. ವಿಶ್ವಾಮಿತ್ರ ಶಿಲ್ಪ
೧೧೬. ಪಾರಾಶರ್ಯ ಶಿಲ್ಪ
೧೧೭. ಅನಿರುದ್ಧ ಶಿಲ್ಪ
೧೧೮. ಕುಮಾರಶಿಲ್ಪ
೧೧೯. ಪ್ರಶುದ್ಧಶಿಲ್ಪ

೧೨೦. ವಾಣಿಶಿಲ್ಪ
೧೨೧. ವಾಸುದೇವ ಶಿಲ್ಪ
೧೨೨. ಚಿತ್ರಕರ್ಮಶಿಲ್ಪ
೧೨೩. ಸನತ್ಕುಮಾರಶಿಲ್ಪ
೧೨೪. ಸಾರಸ್ವತಶಿಲ್ಪ
೧೨೫. ಮನಶ್ಶಿಲ್ಪ
೧೨೬. ಆದಿಸಾರ
೧೨೭. ವಿಶಾಲಾಕ್ಷ
೧೨೮. ತಾಪದೃಕ್
೧೨೯. ಕಾಶ್ಯಪ
೧೩೦. ನಾಮಸಂಗಿಲ್ಯ
೧೩೧. ಅಂಶುಮಾನಭೇದಕಲ್ಪ (ಕಶ್ಯಪ)
೧೩೨. ಗೌತಮಂ (ಗೌತಮ)
೧೩೩. ಪ್ರಬೋಧಕಂ (ಪ್ರಬೋಧಕ)
೧೩೪. ಭೋಜಮತ (ಭೋಜ)
೧೩೫. ಮಹಾಸಾರ
೧೩೬. ಸೌರಂ (ಸೂರ್ಯ)
೧೩೭. ಪರಾವಚಿತ್ರಕ
೧೩೮. ಉಲೂಕಕಲ್ಪ
೧೩೯. ಕೇಸರಿರಾಜ
೧೪೦. ಕುಂಡಮಂಡ ದರ್ಪಣ
೧೪೧. ಗಾರ್ಗೇಯಾಗಮ
೧೪೨. ವಿಶ್ವೇಶ
೧೪೩. ವಿಸ್ತಾರಕ
೧೪೪. ಮಹಾತಂತ್ರ
೧೪೫. ಚೈತ್ರಿಕ
೧೪೬. ಬಹುಶ್ರುತ
೧೪೭. ಅಗಸ್ತ್ಯಸಂಹಿತ
೧೪೮. ಕಾರ್ಪಾರ್ಯ (ಕೃಪ)
೧೪೯. ನಾರದೀಯ
೧೫೦. ಭೃಗುಮತ
೧೫೧. ಮಾರ್ಕಂಡೇಯ
೧೫೨. ಆಯಾದಿಲಕ್ಷಣ
೧೫೩. ಉದ್ವಿಷ್ಠಾನಯನ
೧೫೪. ಕುಂಡಮಾರ್ತಾಂಡ
೧೫೫. ಕೇಸರೀವಾಸ್ತು
೧೫೬. ಗಾಂಧರ್ವವಿದ್ಯಾ
೧೫೭. ಚಿತ್ರಶಾಲ
೧೫೮. ಛಾಯಾಪುರುಷ ಲಕ್ಷಣ
೧೫೯. ನಿರ್ದೋಷಮುಕ್ತವಾಸ್ತು
೧೬೦. ಪ್ರಮಾಣ ಮಂಜರಿ
೧೬೧. ಪ್ರತಿಷ್ಠಾಸಾರಸಂಗ್ರಹ
೧೬೨. ಮಾನಸಾರ (ಮಾನಸಾರಋಷಿ)
೧೬೩. ಸಾಧ್ಧಿಕ
೧೬೪. ಸಾಮ (ಸೋಮ)
೧೬೫. ಕಾಲಯಾಪ
೧೬೬. ಪ್ರತಿಷ್ಠಾಮೂಖ
೧೬೭. ಅಪರಾಜಿತಪೃಚ್ಛ (ಭುವನದೇವಾಚಾರ್ಯ)
೧೬೮. ವಿಶ್ವನಾಶ
೧೬೯. ವಿದಂದ
೧೭೦. ಕಪಿಲಕಾಲಯೂಪ (ಕಪಿಲ)
೧೭೧. ಮನೋಬೋಧ

೧೭೨. ಗೋಪಾಸವ

೧೭೩. ನಗ್ನಸಿದ್ಧಕಲ್ಪ

೧೭೪. ಬ್ರಾಹ್ಮೇಯ (ಬ್ರಹ್ಮ)

೧೭೫. ಮಾನವಿಜ್ಞಾನ

೧೭೬. ಇಂದ್ರವರುಣೀಕಲ್ಪ

೧೭೭. ಕಲಾನಿಧಿ (ಗೋವಿಂದಸ್ಥಪತಿ)

೧೭೮. ಕುಮಾರವಾಸ್ತು

೧೭೯. ಗುಂಜಕಲ್ಪ

೧೮೦. ಜಲಾಯನಜ್ಞಾನ

೧೮೧. ದ್ವಾರದೀಪಿಕ (ಗೋವಿಂದಸ್ಥಪತಿ)

೧೮೨. ಪ್ರಸಾದಕರ್ತನ

೧೮೩. ನಾನಾವಿಧಕುಂಡಪ್ರಕಾಶ (ನಕುಲಶಿಲ್ಪಿ)

೧೮೪. ಪ್ರಾಸಾದ ಕೇಸರಿ

೧೮೫. ವಿಶ್ವಬೋಧ

೧೮೬. ಭಾನುವಂತ

೧೮೭. ಕಶ್ಯಪಸಂಹಿತಾ

೧೮೮. ಚಿತ್ತ ಬಾಹುಳ್ಯ

೧೮೯ ಸಿಂಧು

೧೯೦. ಜಲಾರ್ಗಳ (ವರಾಹಮಿಹಿರ)

೧೯೧. ಕಾಷ್ಠಶಾಲ

೧೯೨. ಕಾಷ್ಠಶಾಲ

೧೯೩. ಕಾಷ್ಠಸಂಗ್ರಹ

೧೯೪. ಕುಂಡಪ್ರದೀಪ

೧೯೫. ಗದ್ಯ ಚಿಂತಾಮಣಿ

೧೯೬. ಚಿತ್ರಲಕ್ಷಣ

೧೯೭. ಧಾತುಕಲ್ಪ

೧೯೮. ನಂದಿಘನ

೧೯೯. ನಲತಂತ್ರ (ನಲ)

೨೦೦. ಪದ್ಮಸಂಹಿತ

೨೦೧. ಪ್ರಾಸಾದ ಲಕ್ಷಣ

೨೦೨. ಪಾಷಾಣವಿಚಾರ

೨೦೩. ವಿಶ್ವಧರ್ಮ

೨೦೪. ಅರುಟಿಕ

೨೦೫. ಐಂದ್ರಮತ (ಇಂದ್ರ)

೨೦೬. ಬೃಹಸ್ಪತೀಯ

೨೦೭. ಲಾವಜ್ಞ

೨೦೮. ಸಾಕಂ

೨೦೯. ಉದ್ಧಾರಧೋರಣಿ (ಗೋವಿಂದಸ್ಥಪತಿ)

೨೧೦. ಕುಂಡತತ್ವಪ್ರದೀಪ

೨೧೧. ಕಪಿಂಜಲ ಸಂಹಿತೆ

೨೧೨. ಗ್ರಹಪೀಠಮಾಲಾ

೨೧೩. ತತ್ವಮಾಲಾ

೨೧೪. ದಾನಪದ್ಧತಿ

೨೧೫. ನಕ್ಷತ್ರಕಲ್ಪ

೨೧೬. ಪ್ರಯೋಗಮಂಜರಿ

೨೧೭. ಪ್ರಾಸಾದಾಲಂಕಾರಮಾಲಾ

೨೧೮. ಪ್ರಾಸಾದವಿಚಾರ

೨೧೯. ಪ್ರಾಸಾದನಿರ್ಣಯ

೨೨೦. ಭುವನರ್ದೀಪಿಕ

೨೨೧. ವಿಹಾರಕಾರಿಕ

೨೨೨. ವಿಮಾನಾದಿಮಾನ

೨೨೩. ಜ್ಞಾನರತ್ನಕೋಶ

೨೨೪. ತಂತ್ರಸಮುಚ್ಚಯ
೨೨೫. ಪಾಂಚರಾತ್ರಾಗಮ
೨೨೬. ಬೃಹತ್ಸಂಹಿತ(ವರಾಹಮಿಹಿರ)
೨೨೭. ವಿಶ್ವಸಾರೋದ್ಧಾರ
೨೨೮. ಶತೃಘ್ನೀಯ
೨೨೯. ಸಾತಕಸಾರ
೨೩೦. ಸನತ್ಕುಮಾರವಾಸ್ತು
೨೩೧.ಸಮರಾಂಗಣ (ಸಮರಾಂಗಣ ಸೂತ್ರಧಾರ)
೨೩೨. ಜ್ಞಾನಪ್ರಕಾಶದೀಪಿಕ
೨೩೩. ಭಾಸ್ಕರೀಯ(ಭಾಸ್ಕರಾಚಾರ್ಯ)
೨೩೪. ಪ್ರತಿಷ್ಠಾತಂತ್ರ
೨೩೫. ಕುಂಡಮುಂಡಪಸಿದ್ಧಿ
೨೩೬. ಮಂಜುಶ್ರೀಸಾಧನ
೨೩೭. ಯುಕ್ತಿಲ್ಪತರು
೨೩೮. ವರ್ಣಸಂಗ್ರಹ
೨೩೯. ಸಾರಸಂಹಿತ
೨೪೦. ಸಿದ್ಧಾಂತ ಶಿರೋಮಣಿ
೨೪೧. ಸುಪ್ರಭೇದ ಪ್ರತಿಷ್ಠಾತಂತ್ರ
೨೪೨. ಕುಲಾರ್ಣವತಂತ್ರ
೨೪೩. ಕಾಮಿಕಾದೀಪ್ತ
೨೪೪. ಪಾರ್ಮತಂತ್ರಕ್ರಿಯೆ
೨೪೫. ರತ್ನಾವನಸಾರ (ಮಾರ್ಕಂಡೇಯ)
೨೪೬. ಯಂತ್ರ ಚಿಂತಾಮಣಿ
೨೪೭. ರುದ್ರಯಾಮಳ ವಾಸ್ತುತಂತ್ರ
೨೪೮. ವಿಶ್ವಂಭರವಾಸ್ತು
೨೪೯. ಸೂತ್ರಧಾರಣ
೨೫೦. ಸೂತ್ರಸಂತಾನ
೨೫೧. ಹೇಮಾದಿ ಪ್ರತಿಷ್ಠಾತಂತ್ರ
೨೫೨. ಜಯಮಧ್ವಮಾನ
೨೫೩. ರತ್ನಪರೀಕ್ಷೆ
೨೫೪. ಮಹಾವಜ್ರಭೈರವ ತಂತ್ರ
೨೫೫. ಪ್ರತಿಮಾ ಲಕ್ಷಣ (ನಗ್ನಜಿತ್)
೨೫೬. ಮೂಲಸ್ತಂಭ ನಿರ್ಣಯ
೨೫೭. ಮೃತ್ಸಂಗ್ರಹ
೨೫೮. ರೂಪವಿಧಿ
೨೫೯. ರಾಜಗೃಹ ನಿರ್ಮಾಣ
೨೬೦. ವೃದ್ಯಾನಸ
೨೬೧. ಲಗ್ನಶುದ್ಧಿ
೨೬೨. ವಾಪೀಚಕ್ರ
೨೬೩. ವಿಮಾನವಿದ್ಯಾ
೨೬೪. ಸಕಲಾಧಿಕಾರ (ಅಗಸ್ತ್ಯ)
೨೬೫. ಸೂರ್ಯ ಸಿದ್ಧಾಂತ
೨೬೬. ಹರಿಸಂಹಿತಾ
೨೬೭. ಪ್ರಾಸಾದದೀಪಿಕ
೨೬೮. ಸುಖಾನಂದವಾಸ್ತು
೨೬೯. ಕೌಮಾರಸಂಹಿತಾ
೨೭೦. ಹನುಮತ್ಕಲ್ಪ
೨೭೧. ರೂಪಾವತಾರ
೨೭೨. ಗೋಭಿಲಗೃಹ್ಯಸೂತ್ರ
೨೭೩. ಪ್ರಾಸಾದಾನು ಕೀರ್ತನ
೨೭೪. ರಾಜವಲ್ಲಭಟೀಕ
೨೭೫. ಕ್ರಿಯಾಸಂಗ್ರಹ ಪಂಜಿಕ (ಕುಲದತ್ತ)

೨೭೬. ರತ್ನಪರೀಕ್ಷಾ (ಬುದ್ಧಭಟ್ಟಾಚಾರ್ಯ)೨೭೭.ಪಾದಪವಿನಕ್ಷಾ

೨೭೮. ವೃಕ್ಷದೋಹದ  ೨೭೯. ವೃಕ್ಷಾಯುರ್ವೇದ

೨೮೦. ಸಸ್ಯಾನಂದ  ೨೮೧. ರತ್ನಲಕ್ಷಣ

೨೮೨. ರತ್ನಾದಿ ಪರೀಕ್ಷಾ  ೨೮೩. ಅಂಕಣಶಾಸ್ತ್ರ

೨೮೪. ಕಾಶ್ಯಪೀಯ  ೨೮೫. ಕೂಪಾದಿ ಜಲಸ್ಥಾನಲಕ್ಷಣ

೨೮೬. ಕ್ಷೇರನಿರ್ಮಾಣ ವಿಧಿ  ೨೮೭. ಗೃಹಪಥಿಕ

೨೮೮. ಗೋಪುರ ವಿಮಾನಾದಿ ಲಕ್ಷಣ೨೮೯. ಚಕ್ರಶಾಸ್ತ್ರ

೨೯೦. ಚಿತ್ರಪಟ  ೨೯೧. ಜಲಾರ್ಗಳಯಂತ್ರ

೨೯೨. ದೇವಾಲಯ ಲಕ್ಷಣ  ೨೯೩. ದ್ವಾರಲಕ್ಷಣಪಟಲ

೨೯೪. ಪಕ್ಷಿಮನುಷ್ಯಾಲಯ ಲಕ್ಷಣ ೨೯೫. ಪ್ರಾಸಾದ ಲಕ್ಷಣ

೨೯೬. ಬಲಿಪೀಠ ಲಕ್ಷಣ  ೨೯೭. ಪ್ರಾಸಾದಲಕ್ಷಣ (ವರಾಹಮಿಹಿರ ಕೃತ)

೨೯೮. ಪ್ರಾಸಾದಾಲಂಕಾರ ಲಕ್ಷಣ  ೨೯೯. ಮನುಷ್ಯಾಲಯಲಕ್ಷಣ

೩೦೦. ಮನುಷ್ಯಾಲಯ ಚಂದ್ರಿಕಾ  ೩೦೧. ಮರೀಚಾಪಟಲ

೩೦೨. ಮಾನಕಥನ  ೩೦೩. ಮಾನವ ವಾಸ್ತು ಲಕ್ಷಣ

೩೦೪. ಮಾನವಸಾರ (ಮನುಬ್ರಹ್ಮ) ೩೦೫. ಮಾನಸ

೩೦೬. ರಥ ಲಕ್ಷಣ  ೩೦೭. ಸದ್ವಿದಿಕ್ಸಂಧಾನ

೩೦೮. ಪೀಠಲಕ್ಷಣ  ೩೦೯. ಪ್ರತಿಮಾ ದ್ರವ್ಯಾದಿರಚನಾ

೩೧೦. ಕೌತುಕ ಲಕ್ಷಣ  ೩೧೧. ಚತ್ವಾರಿಂಶದ್ವಿದ್ಯಾ

೩೧೨. ಅಂಶುಮಾನಕಲ್ಪ  ೩೧೩. ಆಗಾರವಿನೋದ

೩೧೪. ಜಯಮಾಧವಮಾನಸೋಲ್ಲಾಸ೩೧೫. ಭಾರ ಲಕ್ಷಣ

೩೧೬. ಮಣಿಪರೀಕ್ಷಾ (ಅಗಸ್ತ್ಯ)  ೩೧೭. ಆಗಮಾದಿ ಪ್ರತಿಷ್ಠಾ ಪದ್ಧತಿ

೩೧೮. ಗ್ರಹನಿರೂಪಣ ಸಂಕ್ಷೇಪ  ೩೧೯. ಚಿತ್ರಕರ್ಮ ಶಿಲ್ಪಶಾಸ್ತ್ರ

೩೨೦. ನವರತ್ನ ಪರೀಕ್ಷಾ  ೩೨೧. ಮಯೂರ ಚಿತ್ರಕ

೩೨೨. ಮೂರ್ತಿಲಕ್ಷಣ  ೩೨೩. ರತ್ನಸಮುಚ್ಚಯ

೩೨೪. ಲೋಹರತ್ನಾಕರ  ೩೨೫. ಲೋಹಾರ್ಣವ

೩೨೬. ಲೋಹಶಾಸ್ತ್ರ  ೩೨೭. ವೈಖಾನಸ

೩೨೮. ಶಾಸ್ತ್ರಜಲಾಧಿರತ್ನ ೩೨೯. ಸರ್ವವಿಹಾರೀಯ ಯಂತ್ರ

೩೩೦. ಸಾರಸ್ವತೀಯ ಶಿಲ್ಪಶಾಸ್ತ್ರ ೩೩೧. ರತ್ನದೀಪಿಕಾ (ಕಂದೇಶ್ವರ)

೩೩೨. ವಿಶ್ವವಿದ್ಯಾಭರಣ(ಬಸವಾಚಾರ್ಯ)೩೩೩. ವಿಶ್ವಬ್ರಹ್ಮಕುಲೋತ್ಸಾಹ (ನಾರಾಯಣಶಾಸ್ತ್ರಿ)

೩೩೪. ಕೃಷಿ ವಿಷಯ ೨೩೫. ರಥಕಾರಾಧಿಕಾರಣ (ಬಸವಾಚಾರ್ಯ)

೩೩೬. ರತ್ನಮಾಲ(ಪಶುಪತಿ) ೩೩೭. ಮಾನಸೋಲ್ಲಾಸ ವೃತ್ತಾಂತ ಪ್ರಕಾಶ

೩೩೮. ಪಂಚರತ್ನದೀಪಿಕಾ ೩೩೯. ಗೃಹನಿರ್ಮಾಣವಿಧಿ

೩೪೦. ರಟ್ಟುಮತ (ಭಾಸ್ಕರ) ೩೪೧. ಅಂಶುಮತ್ಕಾಕ್ಶ್ಯಪೀಯ

೩೪೨. ಕ್ಷೇತ್ರಗಣಿತ ಶಾಸ್ತ್ರ ೩೪೩. ಅಭಿಲಷಿತಾರ್ಥಚಿಂತಾಮಣಿ

೩೪೪. ರತ್ನಶಾಸ್ತ್ರ ೩೪೫. ನೌಕಾಶಾಸ್ತ್ರ

೩೪೬. ದೇವತಾಶಿಲ್ಪಿ ೩೪೭. ಗೋಸೂತ್ರ

೩೪೮. ಗೋಶಾಂತಿ ೩೪೯. ಗೋವೈದ್ಯಶಾಸ್ತ್ರ

೩೫೦. ಗೋಶಾಸ್ತ್ರ ೩೫೧. ಕಳಾಶಾಸ್ತ್ರ

೩೫೨. ಚಿತ್ರಭಾರತ ೩೫೩. ಶಿಲ್ಪರತ್ನ (ಕುಮಾರ)

೩೫೪. ವಾಸ್ತುಪ್ರಕರಣ ೩೫೫. ಮಯಮತವಾಸ್ತುಶಾಸ್ತ್ರ (ಮಯ)

೩೫೬. ಮಯವಾಸ್ತುಶಾಸ್ತ್ರ ೩೫೭. ಮಯಶಿಲ್ಪಶಾಸ್ತ್ರ

೩೫೮. ಆತ್ರೇಯಮಂಡನ ೩೫೯. ಕೋದಂಡಮಂಡನ (ಮಂಡನಸೂತ್ರಧರ)

೩೬೦. ಶಿಲ್ಪೋಪನಿಷತ್ತು ೩೬೧. ಶಿಲ್ಪಸೂತ್ರ

೩೬೨. ವಿಶ್ವಕರ್ಮ ಬ್ರಾಹ್ಮಣ ವಂಶಾಗಮ(ನಿರಂಜನ ಶಾಸ್ತ್ರಿ)[೯೯]

ಮೇಲಿನ ಎಲ್ಲ ಗ್ರಂಥಗಳ ಹೆಸರುಗಳನ್ನು ಮರಾಠಿಯಲ್ಲಿ ಪ್ರಕಟವಾದ 'ವಿಶ್ವಬ್ರಹ್ಮ ಕುಲೋತ್ಸಾಹ' ಎಂಬ ಗ್ರಂಥ ಮತ್ತು 'Studies in Indian History and Culture by. Dr. Narendra Nath' ಎಂಬ ಇಂಗ್ಲಿಷ್ ಗ್ರಂಥಗಳಿಂದ ಪಟ್ಟಿ ಮಾಡಿದ್ದಾರೆ. ಇವಲ್ಲದೆ ಇನ್ನೂ ಕೆಲವು ಗ್ರಂಥಗಳ ಹೆಸರನ್ನು ವಿಸ್ತಾರಭಯದಿಂದ ಬಿಟ್ಟ ಸಂಗತಿಯನ್ನು ಪ್ರಸ್ತಾಪಿಸಿದ್ದಾರೆ.

ಈ ಎಲ್ಲ ಸಾಹಿತ್ಯ ಕೃತಿಗಳನ್ನು ವಿಶ್ವಕರ್ಮ ಸಮುದಾಯದವರು ಅಧ್ಯಯನ ಮಾಡಬೇಕು. ಇಲ್ಲಿಯ ಕೆಲವು ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಬೇಕೆಂಬ ಉದ್ದೇಶದಿಂದ ಕೆಲವು ವಿಶ್ವಕರ್ಮ ಪತ್ರಿಕೆಗಳು ಕೆಲಸ ಮಾಡಿವೆ. ಇವುಗಳಲ್ಲಿ ಮೂಲಸ್ತಂಭ ನಿರ್ಣಯ ಕೃತಿಯನ್ನು ಧಾರಾವಾಹಿಯಾಗಿ ಪ್ರಕಟಿಸಲಾಗಿದೆ. ಭಗವದ್ಗೀತೆ, ವೇದಗಳ ಕುರಿತು ಧಾರಾವಾಹಿಯಾಗಿ ಪ್ರಕಟಿಸುತ್ತ ಬಂದಿದ್ದಾರೆ.

## ಕೊನೆ ಟಿಪ್ಪಣಿ

೧. ಡಾ. ವೀರೇಶ ಬಡಿಗೇರ, ಪಾಂಚಳ ಸಾಹಿತ್ಯ ಮತ್ತು ಸಂಸ್ಕೃತಿ, ಪುಟ–೬೮–೬೯, ೨೦೧೯.

೨. ವಿಶ್ವಕರ್ಮಾ, ಸಂಪುಟ ೨, ಸಂಚಿಕೆ ೫, ಪುಟ–೩೨–೩೩, ಮಾರ್ಚ್ ೧೯೫೦.

೩. ವಿಶ್ವಕರ್ಮಾ, ಪುಟ–೭–೯, ಜುಲೈ ೧೯೮೦.

೪. ವಿಶ್ವಕರ್ಮಾ, ಪುಟ–೧–೨, ಸೆಪ್ಟಂಬರ್ ೧೯೮೦.

೫. ವಿಶ್ವಕರ್ಮಾ, ಪುಟ–೧, ಸೆಪ್ಟಂಬರ್ ೧೯೮೦.

೬. ವಿಶ್ವಕರ್ಮಾ, ಪುಟ–೩, ಮಾರ್ಚ ೧೯೮೧.

೭. ವಿಶ್ವಕರ್ಮಾ, ಪುಟ–೩–೭ ಏಪ್ರಿಲ್ ೧೯೮೧.

೮. ಶಂ.ಬಾ.ಜೋಶಿ: ವಿಶ್ವಬ್ರಾಹ್ಮಣರು–ಒಂದು ವೈದಿಕ ವಿಶ್ಲೇಷಣೆ. ವಿಶ್ವಕರ್ಮಾ, ಪುಟ–೩–೫ ಜೂನ್ ೧೯೮೧.

೯. ವಿಶ್ವಕರ್ಮಾ, ಪುಟ–೯–೧೨, ಸೆಪ್ಟಂಬರ್ ೧೯೮೧.

೧೦. ವಿಶ್ವಕರ್ಮಾ, ಪುಟ–೧೧–೧೨, ಅಕ್ಟೋಬರ್ ೧೯೮೧.

೧೧. ವಿಶ್ವಕರ್ಮಾ, ಪುಟ–೩–೫, ನವೆಂಬರ್ ೧೯೮೨.

೧೨. ವಿಶ್ವಕರ್ಮಾ, ಪುಟ–೨–೧೨, ಮೇ ೧೯೮೧.

೧೩. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೮, ಪುಟ–೨೪–೨೬, ಜೂನ ೧೯೫೦..

೧೪. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧೧, ಪುಟ–೧೯–೨೬, ಸೆಪ್ಟಂಬರ್ ೧೯೫೦.

೧೫. ವಿಶ್ವಕರ್ಮಾ ಸಂಪುಟ–೨, ಸಂಚಿಕೆ–೫, ಪುಟ–೪, ಮಾರ್ಚ ೧೯೫೦,

೧೬. ವಿಶ್ವಕರ್ಮಾ ಸಂಪುಟ–೩, ಸಂಚಿಕೆ–೮, ಪುಟ–೪, ಜೂನ್ ೧೯೫೧.

೧೭. ವಿಶ್ವಕರ್ಮಾ, ಪುಟ–೩, ಏಪ್ರಿಲ್ ೧೯೮೨.

೧೮. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೪–೫, ಪುಟ–೫೦–೬೬, ಫೆಬ್ರುವರಿ–ಮಾರ್ಚ ೧೯೫೦.

೧೯. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೨, ಪುಟ–೨೩–೨೭, ಡಿಶಂಬರ್ ೧೯೪೯.

೨೦. ವಿಶ್ವಕರ್ಮಾ, ಸಂಪುಟ೨, ಸಂಚಿಕೆ–೩–೪, ಪುಟ–೫೦–೫೭, ಜನವರಿ ೧೯೫೦.

೨೧. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೫, ಪುಟ–೨೭–೩೨, ಮಾರ್ಚ ೧೯೫೦.

೨೨. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೬, ಪುಟ–೩೦–೩೬, ಏಪ್ರಿಲ್ ೧೯೫೦.

೨೩. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೮, ಪುಟ–೨೬–೩೧, ಜೂನ ೧೯೫೦.

೨೪. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧೦, ಪುಟ–೨೧–೨೬, ಆಗಸ್ಟ ೧೯೫೦.

೨೫. ವಿಶ್ವಕರ್ಮಾ, ಪುಟ–೩–೬, ಜುಲೈ ೧೯೮೦ರ ಸಂಚಿಕೆ

೨೬. ವಿಶ್ವಕರ್ಮಾ, ಪುಟ–೯–೧೨, ಸೆಪ್ಟಂಬರ್ ೧೯೮೦.

೨೭. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧೧, ಪುಟ–೨೯–೩೨, ಸೆಪ್ಟಂಬರ್ ೧೯೫೦.

೨೮. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧೨, ಪುಟ–೨೬–೩೭, ಅಕ್ಟೋಬರ್ ೧೯೫೦.

೨೯. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೧, ಪುಟ–೪–೨೧, ನವೆಂಬರ್ ೧೯೫೦.

೩೦. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೨, ಪುಟ–೨೮–೩೩, ಡಿಶಂಬರ್ ೧೯೫೦.

೩೧. ವಿಶ್ವಕರ್ಮಾ, ಸಂಪುಟ–೩. ಸಂಚಿಕೆ–೪–೫, ಪುಟ–೩೨–೪೩, ಫೆಬ್ರವರಿ ಮಾರ್ಚ ೧೯೫೧.

೩೨. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೬, ಪುಟ–೧೩–೧೮, ಏಪ್ರಿಲ್ ೧೯೫೧.

೩೩. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೭, ಪುಟ–೧೭–೨೩, ಮೇ ೧೯೫೧.

೩೪. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೮, ಪುಟ–೨೭–೩೬, ಜೂನ ೧೯೫೧.

೩೫. ವಿಶ್ವಕರ್ಮಾ, ಪುಟ–೧, ಅಕ್ಟೋಬರ್ ೧೯೮೦.

೩೬. ವಿಶ್ವಕರ್ಮಾ, ಪುಟ–೫–೬, ಸೆಪ್ಟಂಬರ್ ೧೯೮೧.

೩೭. ವಿಶ್ವಕರ್ಮಾ, ಪುಟ–೯, ಡಿಶಂಬರ್ ೧೯೮೧.

೩೮. ವಿಶ್ವಕರ್ಮಾ, ಪುಟ–೫–೯, ಜನವರಿ ೧೯೮೨.

೩೯. ವಿಶ್ವಕರ್ಮಾ, ಪುಟ–೫–೭, ಏಪ್ರಿಲ್ ೧೯೮೨.

೪೦. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧, ಪುಟ–೧೯, ನವೆಂಬರ್ ೧೯೪೯.

೪೧. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೬, ಪುಟ–೧೦–೧೩, ಏಪ್ರಿಲ್ ೧೯೫೧.

೪೨. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೮, ಪುಟ–೧೯–೨೫, ಜೂನ ೧೯೫೧.

೪೩. ವಿಶ್ವಕರ್ಮಾ, ಪುಟ–೧೦–೧೨, ಮೇ ೧೯೮೦.

೪೪. ವಿಶ್ವಕರ್ಮೋದಯ, ಪುಟ–೧೯–೨೧, ನವೆಂಬರ್–ಡಿಸೆಂಬರ್ ೨೦೦೭.

೪೫. ವಿಶ್ವಕರ್ಮಾ, ಪುಟ–೧೦, ಜುಲೈ ೧೯೮೧.

೪೬. ವಿಶ್ವಕರ್ಮಾ, ಸಂಪುಟ–೦೫, ಸಂಚಿಕೆ–೦೬, ಪುಟ–೩೨, ಡಿಸೆಂಬರ್ ೧೯೫೦.

೪೭. ವಿಶ್ವಕರ್ಮಾ, ಪುಟ ೭–೯, ಡಿಶಂಬರ್ ೧೯೮೧.

೪೮. ವಿಶ್ವಕರ್ಮಾ, ಸಂಪುಟ೨ ಸಂಚಿಕೆ ೨, ಪುಟ ೨೧–೨೯, ನವೆಂಬರ್ ೧೯೪೯.

೪೯. ಕೃತಿ ಗತಿ, ಸಂಪುಟ–೧೦, ಸಂಚಿಕೆ–೨, ಪುಟ–೩, ಏಪ್ರಿಲ್–ಜೂನ್, ೨೦೨೦.

೫೦. ಸ್ಥಿತಿ ಗತಿ, ಸಂಪುಟ–೧೦, ಸಂಚಿಕೆ–೨, ಪುಟ ಸಂಖ್ಯೆ–೧೨೮, ಏಪ್ರಿಲ್–ಜೂನ್, ೨೦೨೦.

೫೧. ಆತ್ಮೀಯ ಬೋಧಕ, ಸಂಪುಟ–೬, ಸಂಚಿಕೆ–೧೦, ಸೆಪ್ಟಂಬರ್ ೨೦೧೮.

೫೨. ಪ್ರಭಾ ಬೋರಗಾಂವಕರ : ವಿಶ್ವಕರ್ಮ ಮಹಿಳೆ ಮತ್ತು ಕಲೆ:ಕಾಳಿಕಾ ಸಂದೇಶ, ಪುಟ–೧೧, ಅಕ್ಟೋಬರ್–೨೦೧೨.

೫೩. ಸ್ವರೂಪರಾಣಿ ಮಹಿಷಿ –ಸೊಂಡೂರು ಕುಮಾರ ಸ್ವಾಮಿಯ ದೇಗುಲದ ಬಾಗಿಲು ಮಹಿಳೆಯರಿಗೆ ಪ್ರವೇಶವೇಕಿಲ್ಲ?: ವಿಶ್ವಕರ್ಮ ಸಂದೇಶ ಸಂಪುಟ–೩, ಸಂಚಿಕೆ–೨, ಪುಟ–೪–೫, ಮೇ ೨೦೦೭.

೫೪. ರೋಹಿಣಿ ಎಂ.ವಿ. ಮಹಿಳಾ ಚಿಂತನೆಯ ವಿಭಿನ್ನ ನೆಲೆಗಳು : ಸ್ಥಿತಿಗತಿ, ಪುಟ–೬೫–೬೭, ಜನವರಿ ೨೦೧೪.

೫೫. ಇಂದುಮತಿ: ಮಹಿಳೆ ಮತ್ತು ಹೋರಾಟ : ಕಾಳಿಕಾದೇವಿ ವಾಣಿ, ಸಂಪುಟ–೫, ಸಂಚಿಕೆ–೫, ಪುಟ–೨೫–೨೬ ಸೆಪ್ಟಂಬರ್ ೨೦೧೩.

೫೬. ಲೀಲಾ ಮಾಧವ ಆಚಾರ್ಯ : ಮಹಿಳೆ–ಮನೆ ಮತ್ತು ಉದ್ಯೋಗ ವಿಶ್ವಕರ್ಮಾ ಸಂಪುಟ–೨೭, ಸಂಚಿಕೆ– ೧೨, ಪುಟ–೩–೪, ಡಿಶಂಬರ್ ೧೯೮೧.

೫೭. ಪಿ. ಪ್ರೇಮಾ: ವಿದ್ಯಾವಂತ ಮಹಿಳೆಯರ ಕರ್ತವ್ಯ : ವಿಶ್ವಕರ್ಮಾ ಸಂಪುಟ–೨೭, ಸಂಚಿಕೆ ೮, ಪುಟ–೩–೪, ಆಗಸ್ಟ್ ೧೯೮೧.

೫೮. ಪಿ. ಪ್ರೇಮಾ : ಭಾರತೀಯ ಮಹಿಳೆ ಅಂದು–ಇಂದು : ವಿಶ್ವಕರ್ಮಾ ಸಂಪುಟ–೨೮, ಸಂಚಿಕೆ–೪, ಪುಟ–೪–೫, ಏಪ್ರಿಲ್ ೧೯೮೨.

೫೯. ಉಮಾವತಿದೇವಿ: ಸ್ತ್ರೀ ವಿದ್ಯಾಭ್ಯಾಸ ವಿಶ್ವಕರ್ಮಾ ಸಂಪುಟ–೩, ಸಂಚಿಕೆ–೨, ಪುಟ–೨೩–೨೭, ಡಿಸೆಂಬರ ೧೯೫೦.

೬೦. ವಾರಿಜಾದೇವಿ ಬಸ್ರೂರ : ಮಹಿಳೆಯರ ಕರ್ತವ್ಯ ವಿಶ್ವಕರ್ಮಾ ಸಂ.೨, ಸಂಚಿಕೆ ೬, ಪುಟ–೨೦–೨೩, ಏಪ್ರಿಲ್ ೧೯೫೦.

೬೧. ಅಂಬಾಮಣಿ ಮೂರ್ತಿ : ವಿಶ್ವಕರ್ಮ ಮಹಿಳೆಯರ ಸ್ಥಿತಿಗತಿ ಒಂದು ವಿವೇಚನೆ– ವಿಶ್ವಕರ್ಮಕಲಾ ಸಂಪುಟ–೧೨, ಸಂಚಿಕೆ–೨, ಪುಟ–೯–೧೪, ನವೆಂಬರ್ ೧೯೯೮.

೬೨. ಅಂಬಾಮಣಿಮೂರ್ತಿ : ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ : ಕಾಳಿಕಾದೇವಿ ವಾಣಿ ಸಂಪುಟ–೫, ಸಂಚಿಕೆ–೧೨, ಪುಟ–೨೫–೨೭, ಏಪ್ರಿಲ್ ೨೦೧೪.

೬೩. ಲಕ್ಷ್ಮಮ್ಮ ಎಂ. ಆರ್. ಸಮಾಜದಲ್ಲಿ ಸ್ತ್ರೀಯರ ಸ್ಥಾನ : ಆತ್ಮೀಯ ಬೋಧಕ ಸಂಪುಟ–೫, ಸಂಚಿಕೆ–೭, ಪುಟ–೧೩–೧೪, ಮೇ ೨೦೧೮.

೬೪. ಸುಭದ್ರಮ್ಮ ಚಂದ್ರಪ್ಪ : ಪುರಾತನ ಭಾರತದಲ್ಲಿ ಸ್ತ್ರೀ ಪರಂಪರೆ : ವಿಶ್ವಕರ್ಮಕಲಾ ಸಂಪುಟ-೯, ಸಂಚಿಕೆ-೫, ಪುಟ-೯-೧೦, ಫೆಬ್ರುವರಿ ೧೯೯೬.

೬೫. ಬಾರಕೂರು ಸುಚಿತ್ರಾ : ಮಹಿಳೆ ಸಂಸ್ಕೃತಿ ಮತ್ತು ಸಂಸ್ಕಾರ : ಸಹಚಿಂತನ ಸಂಪುಟ-೨, ಸಂಚಿಕೆ-೧, ಪುಟ-೪-೬, ಫೆಬ್ರುವರಿ ೨೦೧೧.

೬೬. ಶಕುಂತಲ ಬಿ. ರಾವ್: ಮಹಿಳೆ ಮತ್ತು ಪರಿಸರ: ಸಹಚಿಂತನ ಸಂಪುಟ-೬, ಸಂಚಿಕೆ-೮, ಪುಟ-೭-೮, ಆಗಸ್ಟ ೨೦೧೪.

೬೭. ಚಂದ್ರಶೇಖರ ಶಾಸ್ತ್ರಿ ಎಡತೊರೆ: ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯಲ್ಲಿ ಸ್ತ್ರೀಯರ ಸ್ಥಾನಮಾನಗಳು: ಆತ್ಮೀಯ ಬೋಧಕ ಸಂಪುಟ-೬, ಸಂಚಿಕೆ-೭, ಪುಟ-೧೪-೧೫, ಜೂನ ೨೦೧೮.

೬೮. ಹಿರಣ್ಯ 'ಭಾರತೀಯ ಸಂಸ್ಕೃತಿಯಲ್ಲಿ ನಾರಿಯ ನಡೆ': ಸಹಚಿಂತನ ಸಂಪುಟ-೧, ಸಂಚಿಕೆ-೮, ಪುಟ-೬, ಆಗಸ್ಟ್ ೨೦೧೦.

೬೯. ರವಿಶಂಕರ ಗುರೂಜಿ: 'ಮಾತೃಶಕ್ತಿಯ ಮಹತ್ವ' ಸಹಚಿಂತನ ಸಂಪುಟ-೯, ಸಂಚಿಕೆ-೧೨, ಪುಟ-೧೩, ಡಿಶಂಬರ್ ೨೦೧೬.

೭೦. ಸುಭಾಷಚಂದ್ರ ನಾಟೀಕರ : 'ಮಹಿಳಾ ವಿಮೋಚನೆ ಡಾ. ಅಂಬೇಡ್ಕರ್ ಅವರ ಕೊಡುಗೆ' ವಿಶ್ವಕರ್ಮ ಕಲಾ ಸಂಪುಟ-೧೩, ಸಂಚಿಕೆ-೭, ಪುಟ-೨೮-೩೨, ಮೇ ೨೦೦೦.

೭೧. ರವೀಂದ್ರ ಮುನೋಳಿ : 'ಮಹಿಳೆಯರ ಮಾನಸಿಕ ಆರೋಗ್ಯ ಕೆಲವು ಸಾಮಾಜಿಕ ಅಂಶಗಳು' ಸ್ಥಿತಿಗತಿ, ಪುಟ-೮೯-೯೩, ಜನವರಿ ೨೦೧೪.

೭೨. ವಿಶ್ವನಾಥ ಆಚಾರ್ : 'ವಿಶ್ವಕರ್ಮ ಸಮಾಜದಲ್ಲಿ ಸ್ತ್ರೀ ವಿದ್ಯಾಭ್ಯಾಸ' ವಿಶ್ವಕರ್ಮಾ ಸಂಪುಟ-೨೬.

೭೩. ಎಸ್. ಯು. ಪೋತದಾರ : 'ಕಲೆ ಮತ್ತು ಮಹಿಳೆ' ರೂವಾರಿ ಸಂಪುಟ-೧, ಸಂಚಿಕೆ ೧೦, ಪುಟ-೧೪-೧೫, ಸೆಪ್ಟಂಬರ್ ೨೦೦೫, ಸಂಚಿಕೆ-೯, ಪುಟ-೩, ಸೆಪ್ಟಂಬರ್ ೧೯೮೦.

೭೪. ಬಿ. ಎ. ಆಚಾರ್ : 'ತ್ರಿವಿಕ್ರಮ ಸಾಧನೆಯ ಶ್ರೀಮತಿ ಕೃಷ್ಣವೇಣಿ' ವಿಧಾತೃ ಸಂಪುಟ-೨ ಸಂಚಿಕೆ-೧೧, ಪುಟ-೮-೯, ಡಿಶಂಬರ್ ೨೦೧೧.

೭೫. ಮನೋರಮಾ ಭಟ್ : 'ಒಡಿಸ್ಸಿ ನೃತ್ಯಲೋಕದ ಸಾಮ್ರಾಜ್ಞೆ ಬಿಜೋಯಿನಿ' ರೂವಾರಿ ಸಂಪುಟ-೧, ಸಂಚಿಕೆ-೬, ಪುಟ-೮, ಜನವರಿ ೨೦೦೫.

೭೬. ರೋಹಿಣಿ ಬಿ.ಎಂ. : 'ಕಸೂತಿಯಲ್ಲಿ ಕುಸುರಿ ಕೆಲಸದ ಶಶಿಕಲಾ ಬಾಯಾರು' ರೂವಾರಿ ಸಂಪುಟ-೧, ಸಂಚಿಕೆ-೮, ಪುಟ-೬-೭, ಜೂನ ೨೦೦೫.

೭೭. ವಿರೂಪಾಕ್ಷ ಬಡಿಗೇರ: 'ಪ್ರಚಾರ ಬಯಸದ ಪ್ರತಿಭಾವಂತ ಕಲಾವಿದೆ ಪಿ.ಗೌರಿ ಪೈ' ರೂವಾರಿ ಸಂಪುಟ–೧, ಸಂಚಿಕೆ ೯, ಪುಟ–೧೨–೧೪, ಜುಲೈ ೨೦೦೫.

೭೮. ಶೆಟ್ಟಿ 'ಬ್ರಹ್ಮಾವರದ ಅಪ್ರತಿಮ ಬಾಲ ಕಲಾವಿದೆ' ರೂವಾರಿ ಸಂಪುಟ–೧, ಸಂಚಿಕೆ ೧೦, ಪುಟ–೧೬, ಆಗಸ್ಟ್ ೨೦೦೫.

೭೯. ಸರೋಜಾ ಭಟ್ 'ಭರತನಾಟ್ಯಕ್ಷೇತ್ರದ ಅನನ್ಯ ಕಲಾವಿದೆ ರಚನಾ ರಾವ್' ರೂವಾರಿ ಸಂಪುಟ–೧ ಸಂಚಿಕೆ–೪, ಪುಟ–೧೨–೧೩, ನವೆಂಬರ್ ೨೦೦೪.

೮೦. ಇಬ್ರಾಹಿಂ ಎಂ.ಎನ್. 'ಮಹಿಳಾ ಯಕ್ಷಗಾನ ತಂಡವನ್ನು ಪ್ರಥಮವಾಗಿ ರೂಪಿಸಿದ ರೂವಾರಿ ಪಣಂಬೂರು ಶ್ರೀಧರ ಐತಾಳ' ರೂವಾರಿ ಸಂಪುಟ–೧, ಸಂಚಿಕೆ–೪, ಪುಟ–೨೬, ನವೆಂಬರ್ ೨೦೦೪.

೮೧. ಆಚಾರ್ಯ ಕಾ.ವಾ.: 'ಉದಯೋನ್ಮುಖ ಕಲಾವಿದೆ ಶಿಲ್ಪಾ ಆಚಾರ್ಯ' ವಿಶ್ವಕರ್ಮ ಸಂದೇಶ ಸಂಪುಟ–೨, ಸಂಚಿಕೆ ೧೨, ಪುಟ–೭–೮, ಮಾರ್ಚ ೨೦೦೬.

೮೨. ವಿಶ್ವಕರ್ಮಾ, ಪುಟ–೧, ಜನವರಿ–ಫೆಬ್ರುವರಿ ೧೯೮೨.

೮೩. ವಿಧಾತೃ, ಸಂಪುಟ–೧, ಸಂಚಿಕೆ–೧, ಪುಟ–೫, ಫೆಬ್ರುವರಿ ೨೦೧೧.

೮೪. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೩–೪, ಪುಟ–೧೬, ಜನವರಿ ೧೯೫೦.

೮೫. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೩–೪, ಪುಟ–೩೨–೪೦, ಜನವರಿ ೧೯೫೦.

೮೬. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೯, ಪುಟ–೧೨–೧೩, ಜುಲೈ ೧೯೫೦.

೮೭. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೯, ಪುಟ–೧೬, ಜುಲೈ ೧೯೫೦.

೮೮. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೮, ಪುಟ–೫೨–೫೪, ಜೂನ ೧೯೫೧.

೮೯. ವಿಶ್ವಕರ್ಮಾ, ಪುಟ–೯, ಏಪ್ರಿಲ್ ೧೯೮೦.

೯೦. ಜಿ.ಜ್ಞಾನಾನಂದ:ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು ಕೆಲವು ಸಮಾಜಶಾಸ್ತ್ರಜ್ಞರ ಅಭಿಪ್ರಾಯಗಳು: ವಿಶ್ವಕರ್ಮೋದಯ, ಪುಟ–೧೦, ಜುಲೈ–ಆಗಸ್ಟ್ ೨೦೦೭.

೯೧. ವಿಶ್ವಕರ್ಮಾ, ಪುಟ–೩, ಸೆಪ್ಟಂಬರ್ ೧೯೮೦.

೯೨. ವಿಶ್ವಕರ್ಮಾ, ಪುಟ–೧–೨, ಡಿಶಂಬರ್ ೧೯೮೦.

೯೩. ವಿಶ್ವಕರ್ಮಾ, ಪುಟ–೧, ಜುಲೈ ೧೯೮೧.

೯೪. ವಿಶ್ವಕರ್ಮಾ, ಪುಟ–೧೦–೧೨, ಆಗಸ್ಟ್ ೧೯೮೧.

೯೫. ವಿಶ್ವಕರ್ಮಾ, ಪುಟ–೩–೫, ಜನೆವರಿ–ಫೆಬ್ರುವರಿ ೧೯೮೨.

೯೬. ವಿಶ್ವಕರ್ಮಾ, ಪುಟ-೯, ಏಪ್ರಿಲ್ ೧೯೮೨.

೯೭. ವಿಶ್ವಕರ್ಮೋದಯ, ಪುಟ-೧೬, ಅಕ್ಟೋಬರ್ ೨೦೦೭.

೯೮. ವಿಶ್ವಕರ್ಮಾ, ಸಂಪುಟ-೨, ಸಂಚಿಕೆ-೧೧, ಪುಟ-೧೭-೧೯, ಸೆಪ್ಟಂಬರ್ ೧೯೫೦.

೯೯. ವಿಶ್ವಕರ್ಮಾ ಸಂಪುಟ-೪, ಸಂಚಿಕೆ-೯, ಪುಟ ೧೬-೧೮, ಜುಲೈ ೧೯೫೨, ವಿಶ್ವಕರ್ಮಾ ಸಂಪುಟ-೪, ಸಂಚಿಕೆ-೧೦, ಪುಟ ೧೫-೧೮, ಅಗಷ್ಟ್ ೧೯೫೨.

# ಅಧ್ಯಾಯ-ಆರು
# ವಿಶ್ವಕರ್ಮರು ಮತ್ತು ಕನ್ನಡ ಪತ್ರಿಕಾ ಜಗತ್ತು

೬.೧ ವಿಶ್ವಕರ್ಮರು
೬.೨ ವಿಶ್ವಕರ್ಮೇತರರು

## ಅಧ್ಯಾಯ-ಆರು

# ವಿಶ್ವಕರ್ಮರು ಮತ್ತು ಕನ್ನಡ ಪತ್ರಿಕಾ ಜಗತ್ತು

ವಿಶ್ವಕರ್ಮ ಪತ್ರಿಕೆಗಳು ಬೆಳದು ಪ್ರವರ್ದಮಾನಕ್ಕೆ ಬರುವಲ್ಲಿ ವಿಶ್ವಕರ್ಮ ಸಮಾಜದ ಬುದ್ಧಿಜೀವಿಗಳೊಂದಿಗೆ ವಿಶ್ವಕರ್ಮೇತರ, ಸಮಾಜದ ಬುದ್ಧಿಜೀವಿಗಳ ಕೊಡುಗೆಯು ಅಪಾರವಾಗಿದೆ. 'ಚಿಂತನಶೀಲ ಬುದ್ಧಿಜೀವ' ಪತ್ರಿಕೆಯು ತನ್ನ ಟ್ಯಾಗ್ ಲೈನ್‌ನಲ್ಲಿ ತನ್ನ ಜ್ಯಾತ್ಯಾತೀತ ನಿಲುವುಗಳನ್ನು ಹೀಗೆ ಸ್ಪಷ್ಟಪಡಿಸುತ್ತದೆ. "ಸಮಕಾಲೀನ ಕನ್ನಡಿಗರ ವೈಚಾರಿಕ, ಧಾರ್ಮಿಕ, ಸಾಂಸ್ಕೃತಿಕ ಸಂದೇಶಕ್ಕೆ ಈ ಪತ್ರಿಕೆಗಳು ಮೀಸಲಾಗಿದೆ". ಸಾಹಿತ್ಯ ಸಂಸ್ಕೃತಿ ಎನ್ನುವದು ಏಕಾಕಾರವಾಗಿರುವಂತದ್ದಲ್ಲ. ಅದು ಒಬ್ಬನಿಂದ ನಿರ್ಮಿತವೂ ಅಲ್ಲ. ಅದು ಆ ಸಮಾಜದ ಒಟ್ಟು ಜೀವಾಳವಾಗಿದೆ. ವ್ಯಕ್ತಿ ನಿಷ್ಠೆಯನ್ನು ಮೀರಿ ಸಮಷ್ಠಿ ನಿಷ್ಠೆಗೆ ಬದ್ಧವಾಗಿರಬೇಕಾಗಿರುತ್ತದೆ. ಸಮುದಾಯದ ಕಲೆಗಳು ಲೋಕೋಪಕಾರಿಯಾದಂತವು. ಹಾಗಾಗಿ ನಮ್ಮ ಸಾಹಿತ್ಯ ಚರ್ಚೆಗಳು ಕೂಡ ಲೋಕೋಪಕಾರದತ್ತ ಒಲವು ತೋರಬೇಕಾಗಿದೆ. ಸಮಷ್ಠಿ ಪ್ರಜ್ಞೆ ಬೆಳೆಸಿಕೊಳ್ಳಬೇಕಾಗಿದೆ.[೧] (ಸಂಪುಟ-೧, ಸಂಚಿಕೆ-೬, ೨೦೧೩) ಹೀಗೆ ಜ್ಞಾನವೇ ಸಮಾಜದ ಮುಖ್ಯ ವಾಹಿನಿ ಎನ್ನುವ ಜಾತಿನಿರಸನ ಪ್ರಜ್ಞೆಯನ್ನು ವಿಶ್ವಕರ್ಮ ಪತ್ರಿಕೆಗಳ ಅಂತರಾಳದಲ್ಲಿ ಕಾಣುತ್ತೇವೆ.

ಇಂದು ತಾಂತ್ರಿಕ ಪ್ರಗತಿ, ಕ್ರಾಂತಿಕಾರಕ ಬದಲಾವಣೆಗೆ ಕಾರಣವಾಗುತ್ತವೆ. ಈ ಅರ್ಥದಲ್ಲಿ ಯಾವುದೇ ಕಲೆ, ಸಾಹಿತ್ಯ, ಸಂಸ್ಕೃತಿಗಳು ತನ್ನದಾಗಿ ಉಳಿವುದು ಕಷ್ಟವಾಗುತ್ತಿದೆ. ಇದು ಪರಿವರ್ತನಾಶೀಲ ಸಮಾಜದ ಸಹಜ ಸ್ಥಿತಿ ಇರಬಹುದು. ಇದರ ಗಾಢ ಅರಿವು ಇರುವ ವಿಶ್ವಕರ್ಮ ಪತ್ರಿಕೆಗಳು ಬದಲಾವಣೆಯನ್ನು ಅಥವಾ ಬರವಣಿಗೆಯನ್ನು ಮನುಷ್ಯನ ಅಸ್ತಿತ್ವದ ಉಳುವಿಕೆಗೆ ಕಾರಣವಾಗಬೇಕು ಎಂಬ ಮುಖ್ಯ ತಾತ್ವಿಕತೆಯನ್ನು ಹೊಂದಿದೆ. ಆದರೆ ಇಂದು ನಮ್ಮ ಅಸ್ತಿತ್ವ ಇದ್ದೂ ಇಲ್ಲದಂತಾಗುತ್ತಿದೆ. ಬುದ್ಧಿ ಇದ್ದೂ ಇಲ್ಲದಂತೆ ವರ್ತಿಸುತ್ತಿದ್ದೇವೆ. ವ್ಯಕ್ತಿ ವ್ಯಕ್ತಿ ನಡುವೆ ಸಹಜ ಸಂವಹನ ಸಾಧ್ಯವಾಗುತ್ತಿಲ್ಲ. ಬಹುದೊಡ್ಡ ಸಾಂಸ್ಕೃತಿಕ ಪರಕೀಯತೆಯತ್ತ ಆಧುನಿಕ ಮನಷ್ಯ ದಾಪುಗಾಲು ಇಡುತ್ತಿದ್ದಾನೆ. ಇದನ್ನು ಮನಗಂಡ ವಿಶ್ವಕರ್ಮ ಪತ್ರಿಕೆಗಳು ಒಂದು ಸಾಮೂಹಿಕ ಕಟ್ಟುವ ಕ್ರಿಯೆಯಲ್ಲಿ ಭಾಗಿಯಾಗುವ ಮೂಲಕ ಪ್ರಜಾ ಪ್ರಭುತ್ವದ ಮೂಲ

ಆಶಯಗಳನ್ನು ಎತ್ತಿ ಹಿಡಿದಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ನಿಟ್ಟಿನಲ್ಲಿ ಈ ಅಧ್ಯಾಯದಲ್ಲಿ ವಿಶ್ವಕರ್ಮ ಪತ್ರಿಕೆಗಳ ಸರ್ವಾಂಗೀನ ಬೆಳವಣಿಗೆಯಲ್ಲಿ ವಿಶ್ವಕರ್ಮರ ವಿದ್ವಾಂಸರೊಂದಿಗೆ ವಿಶ್ವಕರ್ಮೇತರ ವಿದ್ವಾಂಸರು ಕೈ ಜೋಡಿಸಿದ್ದನ್ನು ನಿರ್ವಚನ ಮಾಡಲು ಪ್ರಯತ್ನಿಸಿದ್ದೇನೆ.

**೬.೧. ವಿಶ್ವಕರ್ಮರು :**

ವಿಶ್ವಕರ್ಮ ವಿದ್ವಾಂಸರು: ಕನ್ನಡ ಪ್ರಮುಖ ಸಂಶೋಧಕರು ಬರಹಗಾರರು, ಆಗಿ ಕನ್ನಡ ಕೈಂಕರ್ಯ ಮಾಡಿದ ಡಾ.ಕೆ.ಜಿ.ಕುಂದಣಗಾರ, ವಿಶ್ವಕರ್ಮರ ಮೊದಲಪತ್ರಿಕೆಯಾದ 'ವಿಶ್ವಕರ್ಮಾ'ದ ಸಂಪಾದಕರಾದ ಗಂಗಾಧರ ಮೂರ್ತಿಯವರಾಗಿರಬಹುದು. 'ವಿಶ್ವದರ್ಶನ' ಪತ್ರಿಕೆಯ ಸಂಪಾದಕರಾದ ಜೀವಣ್ಣ ಮಸಳಿಯವರು, 'ಕಾಳಿಕಾ ಸಂದೇಶ' ಜಗನ್ನಾಥ ಬಡಿಗೇರರು, 'ಸಹ ಚಿಂತನ' ಪತ್ರಿಕೆಯ ಸಂಪಾದಕರಾದ ಬಿ.ಎ.ಆಚಾರ್ಯ ಅವರು, ವಿದ್ವಾಂಸರಾದ ಹರಿಶ್ಚಂದ್ರ ಆಚಾರ್ಯ ಜಿ.ಜ್ಞಾನಾನಂದ ಹಲವಾರು ವಿದ್ವಾಂಸರು ವಿಶ್ವಕರ್ಮ ಪತ್ರಿಕೆಗಳಿಗೆ ಸಂಪಾದಕೀಯಗಳನ್ನು ನೀಡಿದ್ದಾರೆ. ವಿಶ್ವಕರ್ಮ ಪತ್ರಿಕೆಯಲ್ಲಿ ಕವಿತೆ ಬರೆದ ಸಿ,ಕೆ,ಪುಟ್ಟಣ್ಣಚಾರ, ಅಗ್ರಲೇಖನ ಬರೆಯುತ್ತಿದ್ದ ನಾ.ಭಾ. ಚಂದ್ರಶೇಖರಾಚಾರ್ಯರು ಪ್ರಮುಖರಾಗಿದ್ದಾರೆ. ಇದರೊಂದಿಗೆ ಹಲವು ವಿದ್ವಾಂಸರು ಉಪಸಂಪಾದಕರು, ವರದಿಗಾರರಾಗಿ, ಛಾಯಾಚಿತ್ರಗಾರರಾಗಿ, ಮಾಲೀಕರಾಗಿ, ತಾಂತ್ರಿಕ ವಿಭಾಗದ ಕಾರ್ಯನಿರ್ವಾಹಕಾರಿ ಕನ್ನಡ ಪತ್ರಿಕಾ ಜಗತ್ತನ್ನು ಶ್ರೀಮಂತಗೊಳಿಸಿದ್ದಾರೆ.

ವಿಶ್ವಕರ್ಮ ಸಂಪಾದಕೀಯಗಳಲ್ಲಿ ನಡೆದ ಕೆಲವು ಮಹತ್ವಪೂರ್ಣ ಚರ್ಚೆಗಳನ್ನು ಕೆಳಗಿನಂತೆ ಚರ್ಚಿಸಲಾಗಿದೆ. ಒಂದೊಂದು ಪತ್ರಿಕೆಯ ಒಂದೊಂದು ಸಂಪಾದಕೀಯ ಧೋರಣೆಗಳು ಬೇರೆ ಬೇರೆಯಾಗಿರುತ್ತವೆ. ಆದರೆ ವಿಶ್ವಕರ್ಮ ಸಮಾಜದ ಪತ್ರಿಕೆಗಳ ಸಂಪಾದಕರ ಸಂಪಾದಕೀಯಗಳು ಸಮಾಜದ ಸಂಘಟನೆಗೆ ಸದಾಕಾಲ ಹೆಚ್ಚು ಒತ್ತು ಕೊಟ್ಟಿರುವುದು ಕಂಡುಬರುತ್ತದೆ.

೧. ವಿಶ್ವಕರ್ಮೋದಯ ಪತ್ರಿಕೆಯ ಸಂಪಾದಕರಾದ ಶಿಲ್ಪಿ ಸಿ.ಆರ್. ಸುರೇಶ ಅವರು ವಿಶ್ವಕರ್ಮ ಸಮಾಜಕ್ಕೆ ಧಕ್ಕೆ ಒದಗುವ ಯಾವುದೇ ಪ್ರಸಂಗ ಬಂದರೂ ಅದನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸುವ ಸಾಮರ್ಥ್ಯವನ್ನು ಹೊಂದಿದವರು. ಶಿರಸಂಗಿ ಕಾಳಿಕಾದೇವಿ ದೇವಸ್ಥಾನದ ಬಗ್ಗೆ ಹತ್ತಾರು ವರ್ಷಗಳ ಕಾಲ ನಡೆದ ಎರಡು ವರ್ಗದ ಜಗಳ ಕುರಿತಾಗಲಿ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕದಲ್ಲಿ ವಿಶ್ವಕರ್ಮ ಸಮಾಜವನ್ನು ಅವಹೇಳನ ಮಾಡಿದ ಸಂದರ್ಭದಲ್ಲಾಗಲಿ, ಸರಕಾರ ರಾಷ್ಟ್ರಕವಿ ಕುವೆಂಪು ಅವರ ನಾಡಗೀತೆಗೆ ಕತ್ತರಿ ಹಾಕಿ 'ಡಂಕಣ ಜಕಣರ ನೆಚ್ಚಿನ ಬೀಡೆ' ಎಂಬ ಸಾಲುಗಳನ್ನು ತೆಗೆಯುತ್ತೇವೆ ಎಂದು ಆದೇಶ ಹೊರಡಿಸಿದಾಗ ಹೀಗೆ ಅನೇಕ ಸಂದರ್ಭಗಳಲ್ಲಿ ಸುರೇಶ ಅವರು ತಮ್ಮ ಮೊನಚು ಮಾತುಗಳ ಸಂಪಾದಕೀಯಗಳಿಂದ ಗಮನ ಸೆಳೆದಿದ್ದಾರೆ. ಈ ಕುರಿತು ಫೆಬ್ರುವರಿ ೨೦೦೪ರ ಸಂಚಿಕೆಯ ಸಂಪಾದಕೀಯದಲ್ಲಿ ಹೀಗೆ ಬರೆಯುತ್ತಾರೆ:

“ನಮ್ಮ ಸಮಾಜಕ್ಕೆ ಸರ್ಕಾರದಿಂದಾಗಲೀ, ಇನ್ನಾವುದೇ ರೀತಿಯಿಂದ ತೊಂದರೆ, ಅನ್ಯಾಯಗಳಾದರೆ ಅವುಗಳನ್ನು ಪ್ರತಿಭಟಿಸುವ ಮನೋಭಾವವಿಲ್ಲದಿರುವುದು ಶೋಷನೀಯ ಸಂಗತಿ. ಮೊನ್ನೆ ವಿವಾದದ ಸುಳಿಯಲ್ಲಿದ್ದ ನಾಡಗೀತೆಯಲ್ಲಿ ‘ಡಂಕಣ ಜಕಣರ ನೆಚ್ಚಿನ ಬೀಡೆ’ ಎಂಬ ನಮ್ಮ ಭಾರತೀಯ ಸಂಸ್ಕೃತಿಯ ಪ್ರತೀಕವಾದ ಈ ಸಾಲುಗಳನ್ನು ತೆಗೆದಾಗ ನಮ್ಮವರ ನೀರಸ ಪ್ರತಿಕ್ರಿಯೆ ಒಂದು ಉದಾಹರಣೆ. ಈ ವಿಷಯವಾಗಿ ದನಿ ಎತ್ತಿದವರು ಅಂಭಾಮಣಿಮೂರ್ತಿ ಅವರು. ಇವರ ದನಿಗೆ ದನಿಗೂಡಿಸಿದವರು ಯಾರು? ಈ ಸಂಚಿಕೆಯಲ್ಲಿ ಇದರ ವಿಶೇಷ ಲೇಖನವನ್ನು ತಮ್ಮಗಳ ಕೈಗೆ ನೀಡುತ್ತಿದ್ದೇವೆ”[೨] ಇದು ಅವರ ಉತ್ತಮ ಸಂಪಾದಕೀಯಕ್ಕೆ ಒಂದು ಉದಾಹರಣೆಯಾಗಿದೆ.

೨. ಪ್ರಬೋಧಕ ಎಂಬ ಮಾಸಪತ್ರಿಕೆ ೨೦೦೭ರಿಂದ ಪ್ರಕಟವಾಗುತ್ತಿದೆ. ಪ್ರಧಾನ ಸಂಪಾದಕರಾದ ಮಂಜುನಾಥ ಆಚಾರ್ಯ ಅವರು ಪ್ರತಿತಿಂಗಳು ಈ ಪತ್ರಿಕೆಗೆ ಸಂಪಾದಕೀಯ ಬರೆಯುತ್ತ ಬಂದಿದ್ದಾರೆ. ಸಮಾಜ ಸಂಘಟನೆಯ ಮೂಲ ಆಶಯಗಳನ್ನು ಒಳಗೊಳ್ಳುವ ಅನೇಕ ಚಿಂತನಪರ ವಿಚಾರಗಳನ್ನು ಪ್ರಸ್ತುತ ಸಾಮಾಜಿಕ ಸಂದರ್ಭಕ್ಕೆ ಅನ್ವಯವಾಗುವ ವಿಷಯಗಳನ್ನು ಸಂಪಾದಕೀಯದಲ್ಲಿ ಪ್ರಸ್ತಾಪಿಸಿ, ಓದುಗರನ್ನು ವರ್ತಮಾನದಲ್ಲಿ ಚಿಂತಿಸುವಂತೆ ಮಾಡುತ್ತಾರೆ. ಏಪ್ರಿಲ್ ೨೦೧೦ರ ಸಂಚಿಕೆಯಲ್ಲಿ ಅವರು ಬರೆದ ಒಂದು ಸಂಪಾದಕೀಯ ‘ಸಂಸ್ಕೃತಾನುಕರಣಕ್ಕಿಂತಲೂ ಇದು ಬಲು ಕೆಡಕು’ ಎಂಬ ಶೀರ್ಷಿಕೆಯಡಿಯಲ್ಲಿ ಕರಾವಳಿ ಪ್ರದೇಶದ ವಿಶ್ವಕರ್ಮರಿಗೆ ಆಗುತ್ತಿರುವ ಅನ್ಯಾಯ ಮತ್ತು ಪ್ರಾದೇಶಿಕ ಅಸಮಾನತೆಯನ್ನು ಕುರಿತು ಕಳಕಳಿ ವ್ಯಕ್ತಪಡಿಸಿದ್ದು ಹೀಗೆ–

“ನಾವು ಸಮಗ್ರ ಭಾರತದ ಅಲ್ಲ ಅಖಿಲ ಕರ್ನಾಟಕದ ಚಿತ್ರಣವನ್ನು ಸ್ಪಷ್ಟವಾಗಿ ಕೊಡಲಾರೆವಾದರೂ ಸಾಧಾರಣ ಪರಶುರಾಮ ಸೃಷ್ಟಿಯೆಂದು ಖ್ಯಾತವಾದ ಈ ಕರಾವಳಿ ಪ್ರದೇಶದ ವಿಶ್ವಬ್ರಾಹ್ಮಣ ಜನಸಾಮಾನ್ಯರ ಸ್ಥಿತಿಗತಿಯ ಬಗ್ಗೆ ನಿಖರವಾದ ಚಿತ್ರಣವನ್ನು ಕೊಡಬಹುದು. ಸರಕಾರಿ ಉದ್ಯೋಗವೂ, ಇನ್ನಿತರ ಉನ್ನತ ವ್ಯಾಸಂಗದ ಅಂತಸ್ತಿನ ನೌಕರಿಯನ್ನು ಹೊಂದಿರುವವರನ್ನು ಬಿಟ್ಟರೆ ಗ್ರಾಮೀಣ ಪ್ರದೇಶದ ವಿಶ್ವಕರ್ಮರೆಂದರೆ ಇತರೇ ಜನಾಂಗದವರ ದೃಷ್ಟಿಯಲ್ಲಿ ತುಂಬಾ ನಿಕೃಷ್ಟರು. ಇಲ್ಲಿಯ ಬಹಳಷ್ಟು ದೇವಸ್ಥಾನಗಳ ವೈದಿಕವನ್ನು ಸಮಾಜದ ಮೇಲೆ ಹಿಡಿತವನ್ನು ಹೊಂದಿರುವ ಬಹಳಷ್ಟು ಬ್ರಾಹ್ಮಣರಿಗೆ ನಾವು ಶೂದ್ರರು! ಪಂಚ ಕಸಬುಗಳನ್ನು ವೃತ್ತಿಯಾಗಿಸಿಕೊಂಡಿರುವ ಬಹುಪಯೋಗಿ ಈ ಜನಾಂಗದ ಬಗ್ಗೆ ಯಾವೊಂದು ಜನಾಂಗಕ್ಕೂ ಒಳ್ಳೆಯ ಭಾವನೆಯೇ ಇಲ್ಲವೆಂದರೂ ತಪ್ಪಲ್ಲ. ಇದು ಸಂಸ್ಕಾರಯುತ ಶಿಕ್ಷಣದ ಕೊರತೆಯಿಂದ ನರಳುತ್ತಿರುವ ವಿಶ್ವಕರ್ಮರ ನಿತ್ಯದ ಜೀವನಗಾಥೆ ಎಂದು ವೈದಿಕ ಶಿಲ್ಪ ಥಿಯರಿ–ಪ್ರಾಕ್ಟಿಕಲ್‌ನಲ್ಲಿ ವೈದಿಕದಿಂದ ದೂರ ಸರಿದೆವೊ, ಶಿಲ್ಪವನ್ನೆ ಅವಲಂಬಿಸಿದ್ದೇವೊ ಈಗ ಶಿಲ್ಪದ ತಿರುಳನ್ನು ಬಿಸುಟು ಜೊಳ್ಳನ್ನು ಆರಿಸಿಕೊಂಡು ಕೂಲಿಯಾಳಿಗಿಂತಲೂ ಕಡೆಯಾಗಿದೆ ನಮ್ಮ ಜೀವನ. ನಾವು ದೇವಬ್ರಾಹ್ಮಣರು, ವಿಶ್ವಬ್ರಾಹ್ಮಣರು ನಮ್ಮದು ಶ್ರೇಷ್ಠ ಗುರು ಪರಂಪರೆಯಿದೆ. ಸ್ವತಂತ್ರ ಉದ್ಯೋಗವಿದೆ.

ಪರಂಪರೆಯ ಶ್ರೇಷ್ಠ ಮಠಮಂದಿರಗಳಿವೆ, ನಮ್ಮದೇ ವೈದಿಕ ವರ್ಗವಿದೆ. ಇದು ಇತ್ತೀಚಿನ ವರ್ಷಗಳಲ್ಲಿ ತುಂಬಾ ಅಭಿವೃದ್ಧಿಯಾಗಿದೆ. ಏನೆಲ್ಲಾ ಬಿರುದು ಬಾವಲಿಗಳಿರುವ ನಮ್ಮ ಮಂದಿಯ ಗುರುವಿನ ಪಟ್ಟಾಭಿಷೇಕವನ್ನು ಇನ್ನೊಂದು ಆರ್ಷೇಯ ಬ್ರಾಹ್ಮಣ ಗುರುಗಳು ಮುಂಚೂಣಿಯಲ್ಲಿದ್ದು ಅವರದೇ ವೈದಿಕರು ನೆರವೇರಿಸುತ್ತಾರೆ ಎಂದರೆ ನಮ್ಮದು ಮುಖಸ್ತುತಿಯ ಬೂಟಾಟಿಕೆಯೆಂದೇ ವ್ಯಾಖ್ಯಾನಿಸಬೇಕು. ಸಪ್ತಾರ್ಷೆಯ ಗುರುಗಳು ಅವರ ವೈದಿಕ ಬಳಗದ ಬಗ್ಗೆ ನಮ್ಮಲ್ಲಿ ಅತೀವ ವಿನೀತಭಾವನೆಗಳಿರುವುದು ನಿಜವಾದರೂ ಇಷ್ಟೊಂದು ವಿಶಾಲ ಕರ್ನಾಟಕದಲ್ಲಿ ನಮ್ಮ ಪರಂಪರೆಯಲ್ಲಿ ೬೦ಕ್ಕೂ ಹೆಚ್ಚು ಮಠಾಧಿಪತಿಗಳು ಇದ್ದು ೪೦೦ಕ್ಕೂ ಜಾಸ್ತಿ ವಿವಿಧ ಸ್ತರದ ವೈದಿಕರ ಸಮೂಹವೇ ಕಾರ್ಯನಿರ್ವಹಿಸುತ್ತಿದೆ. ಇದಕ್ಕೂ ಮಿಗಿಲಾದ ಪ್ರಬುದ್ಧಪೀಠಗಳು ಹತ್ತಿರದ ತಮಿಳುನಾಡು, ಆಂಧ್ರಪ್ರದೇಶದ ಭಾಗದಲ್ಲಿದ್ದು ಈ ಪ್ರದೇಶದಲ್ಲಿ ಪ್ರಕಾಂಡ ವಿದ್ವಾಂಸರು ಇರುವುದಾಗಿಯೂ ನಂಬಲಾಗಿದೆ. ವಿದ್ಯೆ ಜ್ಞಾನ ಯಾವ ಮಗುವಿನಲ್ಲಿದ್ದರೂ ಆಲಿಸಬೇಕಾದ ತಿಳಿಯಬೇಕಾದ ವಿಷಯವಾದರೂ ಅನ್ಯ ಜನಾಂಗದ ಗುರುಪರಂಪರೆಯಿಂದ ನಮ್ಮ ಯತಿ–ದೀಕ್ಷೆ ಪಡೆದ ಗುರುಗಳಿಗೆ ಪಟ್ಟಾಭಿಷೇಕ, ಜನಾಂಗದ ಮೇಲೆ ಆಗಬಹುದಾದ ದುಷ್ಪರಿಣಾಮಗಳೇನು ಎನ್ನುವ ಚಿಂತನೆ–ಮಂಥನೆಗೆ ಅವಕಾಶವಾಗಬಹುದಾದ ದೌರ್ಭಾಗ್ಯವೇ ಸರಿ. ಒಂದು ನಾವು ನಮ್ಮ ಶ್ರೇಷ್ಠತ್ವದ ಬಗ್ಗೆ ಮಾತನಾಡಬಾರದು, ಮಾತನಾಡುವುದಾದರೆ ಅದಕ್ಕೆ ಸರಿಯಾದ ವ್ಯವಸ್ಥೆಗಳನ್ನು ಅಚ್ಚುಕಟ್ಟಾದ ರೀತಿಯಲ್ಲಿ ಸಮಾಜದ ಒಳಗಿನ ವಿಷಯವೆಂದು ನಿರ್ವಹಿಸಲ್ಪಡಬೇಕು. ಕಾಲ ನಿಂತ ನೀರಲ್ಲ, ಕರ್ನಾಟಕದಾದ್ಯಂತದ ವಿವಿಧ ಜನಾಂಗದ ಮಠ ಮಂದಿರಗಳು ಬೆಳೆದ ರೀತಿ, ಶಿಷ್ಯ ವೃಂದವನ್ನು ಆದರಿಸಿದ ರೀತಿ, ಯಜ್ಞೋಪವೀತ ದಾರಿಗಳಲ್ಲದಿದ್ದರೂ ವೈದಿಕ ವ್ಯವಸ್ಥೆಯನ್ನು ಹುಟ್ಟುಹಾಕಿದ ರೀತಿಯಿಂದಾದರೂ ನಾವು ಎಚ್ಚೆತ್ತುಕೊಳ್ಳಬೇಕು. ಬ್ರಹ್ಮಕಲಶ, ಕುಂಭಾಭಿಷೇಕ, ಗುರುಪಟ್ಟಾಭಿಷೇಕವೇ ಇನ್ನಿತರ ವೈದಿಕ ಕಾರ್ಯಕ್ರಮಗಳನ್ನು ಸ್ವತಂತ್ರವಾಗಿ ನಿರ್ವಹಿಸುತ್ತಾರೆಂದರೆ ನಮಗೆ ಈ ರೀತಿಯ ಮನಃಸ್ಥಿತಿ ಯಾಕೆ ಬಂತು? ಈ ವಿಷಯದಲ್ಲಿ ಸಮಾಜದ ಮನಸ್ಥಿತಿ ಚಿಂತನೆ, ಅಭಿಪ್ರಾಯವೇನೆಂಬ ಕನಿಷ್ಠತಮ ಯೋಜನೆಯನ್ನಾದರೂ ಮಾಡಬಹುದಿತ್ತು.

ಬಹಳಷ್ಟು ವೈರುಧ್ಯಗಳನ್ನು ಪ್ರಾದೇಶಿಕವಾಗಿ ವೈವಿಧ್ಯತೆಯನ್ನು ಮೈಗೂಡಿಸಿಕೊಂಡಿದ್ದರೂ, ಕರಾವಳಿ ಪ್ರದೇಶದ ವಿಶ್ವಬ್ರಾಹ್ಮಣರು ನಿಂತರ ಶೋಷಣೆಗೆ ಒಳಗಾದವರು. ಆದರೂ ಸಿಕ್ಕಿದ ಅವಕಾಶಗಳಲ್ಲಿ ಕಾಲಧರ್ಮದ ನಾಯಕರುಗಳ, ವೈದಿಕರ ದಿಸೆಯಿಂದಾಗಿ ಪರಭಾರೆಯಾಗಿದ್ದ ಬಹಳಷ್ಟು ಕಾಳಿಕಾಂಬಾ ದೇವಸ್ಥಾನಗಳ ವೈದಿಕವನ್ನು ಪುನಃ ನಮ್ಮವರಿಂದಲೇ ನಿರ್ವಹಿಸಲ್ಪಡಲು ಭಾರೀ ಸಾಹಸವನ್ನೇ ಮಾಡಿರುವುದು ಸಾಧಾರಣ ಇತ್ತೀಚಿನ ಇತಿಹಾಸವೇ ಸರಿ".[೩]

ವಿಶ್ವಕರ್ಮ ಸಮಾಜದ ಅದರಲ್ಲೂ ಕರಾವಳಿ ಪ್ರದೇಶದ ವಿಶ್ವಕರ್ಮ ಸಮಾಜಕ್ಕೆ ಆಗುತ್ತಿರುವ ಅನ್ಯಾಯಗಳನ್ನು ನೇರವಾದ ಮಾತುಗಳಿಂದ ಇಲ್ಲಿ ಖಂಡಿಸುವುದರ ಜೊತೆಗೆ ಅದಕ್ಕೆ ಪರಿಹಾರವನ್ನು ಹೇಳಿರುವುದು ಸಂಪಾದಕೀಯ ಬರಹಕ್ಕೆ ಔಚಿತ್ಯ ಪ್ರಾಪ್ತವಾಗಿದೆ.

ಸವದತ್ತಿ ತಾಲೂಕಿನ ಶಿರಸಂಗಿ ಕಾಳಿಕಾದೇವಸ್ಥಾನ ಕಾರಣವಾಗಿ ಅಲ್ಲಿಯ ವಿಶ್ವಕರ್ಮ ಸಮಾಜದವರು 'ಶ್ರೀ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆ' ಎಂಬ ಸಂಸ್ಥೆಯನ್ನು ೨೦೧೭ರಲ್ಲಿ ಸ್ಥಾಪಿಸಿ, ಆ ಸಂಸ್ಥೆಯ ಮುಖವಾಣಿಯಾಗಿ 'ವಿಶ್ವಕರ್ಮ ವಿಕಾಸವಾಣಿ' ಎಂಬ ಮಾಸಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ. ಈ ಪತ್ರಿಕೆಗೆ ಗೌರವ ಸಂಪಾದಕರಾಗಿ ಪೂಜ್ಯ ಸ್ವಾಮಿ ಶಿವಾತ್ಮಾನಂದ ಸರಸ್ವತಿ ಸ್ವಾಮೀಜಿ ಅವರು ಶುಭ ಸಂದೇಶವನ್ನು ಬರೆಯುತ್ತಾರೆ. ಪ್ರಧಾನ ಸಂಪಾದಕರಾದ ಸಿ.ಪಿ. ಮಾಯಾಚಾರಿ ಅವರು ಸಂಪಾದಕೀಯ ಬರೆಯುತ್ತಾರೆ. ಸಂಸ್ಥೆಯ ಅಧ್ಯಕ್ಷರಾದ ಪಿ.ಬಿ. ಬಡಿಗೇರ ಅವರ 'ಅಧ್ಯಕ್ಷರ ನುಡಿ' ಕೂಡ ಪ್ರಕಟವಾಗುತ್ತದೆ. ಸಿ.ಪಿ. ಮಾಯಾಚಾರಿ ಅವರು ಈ ಪತ್ರಿಕೆಯ ಕುರಿತು ಎರಡನೆಯ ಸಂಚಿಕೆಯಲ್ಲಿ ಹೇಳಿದ ಮಾತುಗಳು ಗಮನಾರ್ಹವಾಗಿವೆ:

"ಇತ್ತೀಚಿನ ವರ್ಷಗಳಲ್ಲಿ ವಿಶ್ವಕರ್ಮ ಜನಾಂಗೀಯರು ತಾಯಿ ಕಾಳಿಕೆಯ ದರ್ಶನಾಕಾಂಕ್ಷಿಗಳಾಗಿ ನಿರಂತರವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಈ ಶ್ರದ್ಧಾಕೇಂದ್ರಕ್ಕೆ ಆಗಮಿಸುತ್ತಿರುವುದು ಮತ್ತು ಕ್ಷೇತ್ರದ ಅಭಿವೃದ್ಧಿಗೆ ದೇಣಿಗೆ ನೀಡುತ್ತಿರುವುದು ಸಂಸ್ಥೆಯ ಜವಾಬ್ದಾರಿಯನ್ನು ಇಮ್ಮಡಿಗೊಳಿಸಿದೆ. ಈ ಕಾರಣದಿಂದಾಗಿ ಕ್ಷೇತ್ರದಲ್ಲಿ ಅಭಿವೃದ್ಧಿ ಕಾರ್ಯಗಳು ತೀವ್ರಗೊಂಡಿವೆ. ಈ ಕಾರ್ಯಕ್ರಮಗಳಲ್ಲಿ ಭಕ್ತರ ಭಾಗವಹಿಸುವಿಕೆಯಿಂದಾಗಿ ಸಂಸ್ಥೆಯು ನಮ್ಮ ಜನರಲ್ಲಿ ಸಂಘಟನೆಯ ಅರಿವು ಮೂಡಿಸಿ, ಅವರ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಗೆ ಪೂರಕವಾದ ವಿಚಾರಗಳನ್ನು ಹಂಚಿಕೊಳ್ಳಲು ಸೂಕ್ತವೇದಿಕೆಯೊಂದನ್ನು ಸಿದ್ಧಗೊಳಿಸಿದೆ. ಆ ವೇದಿಕೆ ಅಥವಾ ಮಾಧ್ಯಮವೇ 'ವಿಶ್ವಕರ್ಮ ವಿಕಾಸವಾಣಿ' ಮಾಸಿಕ ಪತ್ರಿಕೆ. ಈ ಮಾಸಿಕ, ದಿನಾಂಕ ೨೮-೩-೨೦೧೭ರಂದು ಯುಗಾದಿಯಂದು ಬಿಡುಗಡೆಯಾಗಿದೆ. ಇದೀಗ ಈ ಪತ್ರಿಕೆಯ ೨ ಮತ್ತು ೩ನೇ ಸಂಯುಕ್ತ ಸಂಚಿಕೆಯನ್ನು ಸಮಾಜ ಬಾಂಧವರ ಕೈಯಲ್ಲಿಡುತ್ತಿದ್ದೇವೆ. ಈ ಪತ್ರಿಕೆ, ಜನಾಂಗದ ಮುಖವಾಣಿಯಾಗಿ, ಸಮಾಜದ ಜನರಲ್ಲಿ ಅರಿವು, ಸಂಘಟನೆ ಹಾಗೂ ಅಗತ್ಯವಿದ್ದಾಗ ಸಮಾಜಕ್ಕಾದ ಅನ್ಯಾಯವನ್ನು ಪ್ರತಿಭಟಿಸಿ, ನ್ಯಾಯವನ್ನು ದಕ್ಕಿಸಿಕೊಳ್ಳುವ 'ಮಂತ್ರದಂಡ'ವಾಗಬೇಕೆಂದು ಸಂಸ್ಥೆಯ ಆಶಯವಾಗಿದೆ. ಈ ಪತ್ರಿಕೆ, ವಿಶ್ವಕರ್ಮ ಜನಾಂಗದ ಇತಿಹಾಸ ಸಂಸ್ಕೃತಿ-ಪರಂಪರೆಯ ಜತೆ-ಜತೆಗೆ, ವರ್ತಮಾನದಲಲಿ ನಮ್ಮ ಜನಾಂಗದ ಏಳಿಗೆ ಬದ್ಧತೆಗೆ ಇಂದು ಅಗತ್ಯವಾಗಿರುವ ಉದ್ಯೋಗ, ಸ್ವಯಂ ಉದ್ಯೋಗ ಮತ್ತು ವ್ಯವಹಾರ, ಯುವಕ ಯುವತಿಯರಿಗೆ ಅಗತ್ಯವಿರುವ ಕಲಿಕೆ ಬಗ್ಗೆ ಮಾರ್ಗದರ್ಶನ ಮತ್ತು ವಿವಿಧ ಕ್ಷೇತ್ರಗಳಲ್ಲಿನ ಅವಕಾಶಗಳ ಬಗ್ಗೆ ಅಗತ್ಯ ಮಾಹಿತಿ ನೀಡುವ ಗುರಿ ಹೊಂದಿದೆ. ಯಾವುದೇ ಕೆಲಸ ಅಂದುಕೊಂಡಂತೆ ಒಮ್ಮೆಲೇ ಸಾಧಿತವಾಗದು-ಎಂಬ ಅರಿವು ಇರಿಸಿಕೊಂಡೆ ಸಂಸ್ಥೆ ಹಾಗೂ ಸಂಪಾದಕ ಮಂಡಳಿ ಈ ಮಾರ್ಯದಲ್ಲಿ ಮುಂದಡಿ ಇಡಲು ಸಜ್ಜಾಗಿದೆ.

ಪತ್ರಿಕೆಯಲ್ಲಿ ಜನಾಂಗದ ಇತಿಹಾಸ, ಸಂಸ್ಕೃತಿ-ಪರಂಪರೆಯ ಜತೆಗೆ, ನಾಡಿನಾದ್ಯಂತ ವಿಶ್ವಕರ್ಮರ ಸ್ಥಿತಿ-ಗತಿ-ಸಮಾರಂಭ, ಕಲೆ, ಕಲಾವಿದರ ಮಾಹಿತಿ ಸೇರಿದಂತೆ ಜನಾಂಗದ ಸಮಗ್ರ ಚಿತ್ರಣ ನೀಡುವುಕ್ಕೆ ಪತ್ರಿಕೆ ವೇದಿಕೆಯಾಗಲಿದೆ".

ಈ ಪತ್ರಿಕೆ ಪ್ರಾರಂಭವಾದ ಸಂದರ್ಭದಲ್ಲಿಯೇ ಕರ್ನಾಟಕ ಸರಕಾರ ಜಾತಿಗಣತಿಗೆ ಮುಂದಾಯಿತು. ಅದಕ್ಕಾಗಿ ವಿಶ್ವಕರ್ಮ ಸಮಾಜಕ್ಕೆ ನ್ಯಾಯವಾಗಿ ಸಲ್ಲಬೇಕಾದ ಸೌಲಭ್ಯಗಳನ್ನು ಪಡೆದುಕೊಳ್ಳಲು, ರಾಜಕೀಯ ಹಾಗೂ ಸಾಮಾಜಿಕ ನೆಲೆಯಲ್ಲಿ ಸಾಮುದಾಯಿಕ ಪ್ರಯತ್ನಗಳು ಗಟ್ಟಿಯಾಗಿ ನಡೆಯಬೇಕು ಮತ್ತು ವಿಶ್ವಕರ್ಮ ಸಮಾಜದ ಮುಖವಾಣಿಯಾದ ಪತ್ರಿಕೆಗಳು, ಮುಖಂಡರು, ಮಠಾಧೀಶರು ಮೊದಲು ಆ ವರದಿಯನ್ನು ಸರಿಯಾಗಿ ತಿಳಿದುಕೊಂಡು, ಅದಕ್ಕಾಗಿ ಸರಕಾರದ ಮೇಲೆ ಒತ್ತಡ ತರಬೇಕೆಂಬ ಕಳಕಳಿಯ ಸಂಪಾದಕೀಯಗಳು, ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

ಮಂಗಳೂರಿನಿಂದ ಪ್ರಕಟವಾಗುತ್ತಿರುವ ರೂವಾರಿ ಮಾಸಪತ್ರಿಕೆ ವಿಶ್ವಕರ್ಮ ಸಮಾಜದ ಕಲೆ–ಕಲಾವಿದರಿಗೆ ಮೀಸಲಾದ ಒಂದು ಅಪರೂಪದ ಪತ್ರಿಕೆಯಾಗಿದೆ. ಕಲೆಯನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಈ ಪತ್ರಿಕೆಯ ಪಾತ್ರ ಸ್ಮರಣೀಯವಾಗಿದೆ. ಈ ಪತ್ರಿಕೆಯ ಗೌರವ ಸಂಪಾದಕ ಬೈಕಾಡಿ ಜನಾರ್ದನ ಆಚಾರ್ ಅವರು ಪ್ರತಿ ಸಂಚಿಕೆಗೆ ಸಂಪಾದಕೀಯ ಬರೆಯುತ್ತಾರೆ. ಸಂದರ್ಭೋಚಿತ, ಸಮಯೋಚಿತ, ಸಾಂದರ್ಭಿಕ ಸಂಪಾದಕೀಯಗಳನ್ನು ಬರೆಯುವ ಮೂಲಕ ಓದುಗರ ಗಮನ ಸೆಳೆಯುವ ಆಕರ್ಷಕ ಶೈಲಿ ಅವರದು.

ಬೈಕಾಡಿ ಜನಾರ್ದನ ಆಚಾರ್ ಅವರು ರೂವಾರಿ ಪತ್ರಿಕೆಯ ಜುಲೈ ೨೦೦೫ ಸಂಚಿಕೆಯಲ್ಲಿ ಬರೆದ 'ಸೊರಗುತ್ತಿರುವ ಪಾರಂಪರಿಕ ಶಿಲ್ಪಕಲೆ' ಎಂಬ ಸಂಪಾದಕೀಯ ಹೀಗಿದೆ:

"ಶಿಲ್ಪಕಲೆಯ ಇತಿಹಾಸವನ್ನು ಅಧ್ಯಯನ ಮಾಡುವಾಗ ನಾವು ಭಾರತೀಯ ಶಿಲ್ಪಕಲೆಯ ಬಗ್ಗೆ ಹೆಮ್ಮೆ ಪಡುತ್ತೇವೆ. ಅಭಿಮಾನದಿಂದ ಬೀಗುತ್ತೇವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಶಿಲ್ಪಕಲೆಗೆ ನಮ್ಮ ದೇಣಿಗೆ ಏನು ಎಂದು ಕೇಳಿದರೆ ಉತ್ತರಿಸಲು ತಡವರಿಸಬೇಕಾಗುತ್ತದೆ. ಇಂದು ಸರಕಾರವಾಗಲಿ, ದೇವಸ್ಥಾನದ ಆಡಳಿತ ಮಂಡಳಿಯವರಾಗಲಿ ಶಿಲ್ಪಕಲೆಯ ಉಳಿವಿಗಾಗಿ ಗಮನ ಹರಿಸುತ್ತಿಲ್ಲ. ಆಧುನಿಕ ಕಲೆ, ಶಿಲ್ಪ ಮತ್ತು ವಾಸ್ತು ಶ್ರೇಷ್ಠ ಎಂಬ ಭ್ರಮೆಯಿಂದ ನಮಗೆ ಹೊರಬರಲು ಸಾಧ್ಯವಾಗುತ್ತಿಲ್ಲ. ಶಿಲ್ಪಕಲೆ ಬರಿಯ ಕರಕೌಶ ಅಲ್ಲ, ವಿಶ್ವವಿದ್ಯಾಲಯಗಳ ಮೂರು ವರ್ಷಗಳ ಪದವಿ ಮಟ್ಟದ ಅಧ್ಯಯನದಿಂದ ಅದನ್ನು ಕರಗತಗೊಳಿಸಿಕೊಳ್ಳುವುದು ಸಾಧ್ಯವಿಲ್ಲದ ಮಾತು. ಪದವಿ ಶಿಕ್ಷಣದ ಕರಿಕ್ಯುಲಮ್ ಅಥವಾ ಸಿಲೆಬಸ್‌ನ ಚೌಕಟ್ಟಿನೊಳಗೆ ಬಂಧಿಸಿ, ಪ್ರಿಂಟೆಡ್ ನೋಟ್ಸ್, ಬಾಯಿಪಾಠ ಮಾಡಿ ಒಳ್ಳೆಯ ಅಂಕಗಳನ್ನೋ ರ್‍ಯಾಂಕನ್ನೋ ಪಡೆದ ಮಾತ್ರಕ್ಕೆ ಅವನೊಬ್ಬ ಉತ್ತಮ ಶಿಲ್ಪಿ ಎನ್ನಲಾಗುವುದಿಲ್ಲ. ಶಿಲ್ಪಕಲೆ, ಲಲಿತಕಲೆಗಳೆಲ್ಲವೂ ಇದಕ್ಕೆ ಅತಿರಿಕ್ತ, ಅತೀತ.

ಗುರು–ಶಿಷ್ಯ ಪರಂಪರೆಯಿಂದ ಸಾಗಿ ಬರುತ್ತಿದ್ದ ಶಿಲ್ಪ ಶಿಕ್ಷಣ ಪಾಶ್ಚಾತ್ಯರ ಆಗಮನದಿಂದ ಹೊಸ ಸ್ವರೂಪ ಪಡೆಯತೊಡಗಿತು. ಕಾಲೇಜು, ವಿಶ್ವವಿದ್ಯಾಲಯಗಳ ಶಿಕ್ಷಣಕ್ಕೆ ಆದ್ಯತೆ ಹೆಚ್ಚಾಗಿ ಮಾಸ್ಟರ್ಸ್ ಡಿಗ್ರಿ ಪಡೆದವನೇ ಆ ವಿಷಯದಲ್ಲಿ ಮಾಸ್ಟರ್ ಅಥವಾ ಪೂರ್ಣ ತಿಳಿದವ ಎಂಬ

ತಪ್ಪು ಕಲ್ಪನೆ ನಮ್ಮದಾಯಿತು. ಗಟ್ಟಿ ತಳಪಾಯದ ಗುರುಕುಲ ಪದ್ಧತಿಯ ಶಿಲ್ಪ ಶಿಕ್ಷಣ ನಲುಗತೊಡಗಿತು. ಶಾಸ್ತ್ರ ಸಂಪತ್ತಿಗಿಂತ ಮಾರುಕಟ್ಟೆಯ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆ ನೀಡತೊಡಗಿದರು. ಅದೇ ಕಾರಣದಿಂದ ಶಿಲ್ಪಶಾಸ್ತ್ರ ನಮ್ಮಿಂದ ದೂರವಾಗತೊಡಗಿತು. ಓರ್ವ ಶಿಲ್ಪಿ ಎಂತಹ ಶಿಲ್ಪ ನೀಡಿದ ಎನ್ನುವುದಕ್ಕಿಂತ ಎಷ್ಟು ಲಾಭಗಳಿಸಿದ ಎನ್ನುವದು ಮುಖ್ಯವಾಯಿತು.

ಶಿಲ್ಪಶಾಸ್ತ್ರವನ್ನು ವ್ಯವಸ್ಥಿತವಾಗಿ ಬೋಧಿಸುವ ವ್ಯವಸ್ಥೆ ಕರ್ನಾಟಕದಲ್ಲಿ ಆಗಬೇಕಾಗಿದೆ. ಅಂತಹ ಶಿಲ್ಪಕಲಾ ಶಾಲೆಗಳನ್ನು ಸರಕಾರವೇ ತೆರೆದು ಅಲ್ಲಿ 'ಶಾಸ್ತ್ರ' ಮತ್ತು 'ಕೌಶಲ' ಎರಡೂ ವಿಭಾಗಗಳಿಗೆ ಸಮಾನ ಆದ್ಯತೆ ನೀಡಿ ಸಾಂಪ್ರದಾಯಿಕವಾದ ಗುರು-ಶಿಷ್ಯ ಪರಂಪರೆಯಲ್ಲಿಯೇ ಕಲಿಸುವ ಗಟ್ಟಿ ವ್ಯವಸ್ಥೆಯ ಅಡಿಪಾಯ ಹಾಕಬೇಕು. ಪ್ರಾಚೀನ ಶಿಲ್ಪಶಾಸ್ತ್ರ ಗ್ರಂಥಗಳ ಅಧ್ಯಯನಕ್ಕೆ ಹೆಚ್ಚು ಗಮನ ನೀಡಬೇಕು. ತಮಿಳುನಾಡಿನ ಸರಕಾರ ಆದರ್ಶ ಕ್ರಮ ಮುಂದಿಟ್ಟುಕೊಂಡು ಸಂಸ್ಕೃತ ಮತ್ತು ಇತರ ಭಾಷೆಗಳಲ್ಲಿರುವ ಪ್ರಮುಖ ಗ್ರಂಥಗಳನ್ನು ಕನ್ನಡಾನುವಾದಗೊಳಿಸಿ ಕರ್ನಾಟಕದ ಶಿಲ್ಪಿಗಳು ಅದರ ಪ್ರಯೋಜನ ಪಡೆಯುವಂತೆ ಮಾಡಬೇಕು.

ನಮ್ಮ ಕಲೆ ಮತ್ತು ಸಂಸ್ಕೃತಿಯ ಅಭಿವೃದ್ಧಿಗೆ ಕಟಿಬದ್ಧವಾಗಿರುವ ಹಂಪಿಯ ಕನ್ನಡ ವಿಶ್ವವಿದ್ಯಾಲಯದವರು ಈ ಕುರಿತು ಹೆಚ್ಚು ಚಿಂತನೆ ನಡೆಸಬೇಕು. ಕರ್ನಾಟಕ ಸರಕಾರ ಇಂತಹ ಉತ್ತಮ ಯೋಜನೆಗಳಿಗೆ ಅನುದಾನ ನೀಡಲು ಹಿಂದೆ-ಮುಂದೆ ನೋಡಬಾರದು”[೫]

ಶಿವಮೊಗ್ಗದಿಂದ ೧೯೯೯ರಿಂದ ಪ್ರಕಟವಾಗುತ್ತಿರುವ ವಿಶ್ವಬ್ರಾಹ್ಮಣ ಎಂಬ ಪತ್ರಿಕೆಯನನು ಎ. ಎಫ್. ಮೋಹನರಾವ್ ಅವರು ಸಂಪಾದಿಸಿ ಪ್ರಕಟಿಸುತ್ತಿದ್ದಾರೆ. ವಿಶ್ವಕರ್ಮ ಧರ್ಮ ಸಾಹಿತ್ಯ ಸಂಸ್ಕೃತಿಗಳ ಸಮಗ್ರವಾದ ಅರಿವು ಮೂಡಲೆಂಬ ಕಾರಣಕ್ಕಾಗಿ ವೇದಗಳ ಪರಿಚಯ, ಶ್ರೀ ಮದ್ಭಗವದ್ಗೀತಾ, ವಿಶ್ವಬ್ರಾಹ್ಮಣ ಸಂಸ್ಕೃತಿ ಮೊದಲಾದ ವಿಷಯಗಳ ಕುರಿತು ನಿರಂತರವಾಗಿ ಅಂಕಣ ಬರಹದ ರೂಪದಲ್ಲಿ ದಾರಾವಾಹಿಯಾಗಿ ಪ್ರಕಟಿಸುತ್ತ ಬಂದಿದ್ದಾರೆ. ಸಂಪಾದಕೀಯ ಬರೆಯುವಲ್ಲಿ ತುಂಬ ಸಮತೂಕದ ಕೆಲವೇ ಅಕ್ಷರಗಳಲ್ಲಿ ಹೇಳಬೇಕಾದುದನ್ನು ಹೇಳುವ ಶೈಲಿ ಮೆಚ್ಚುವಂತಹದು. ಮೋಹನರಾವ್ ಅವರ ಒಂದು ಸಂಪಾದಕೀಯ ಹೀಗಿದೆ-

“ವಿಶ್ವಬ್ರಾಹ್ಮಣ ಪತ್ರಿಕೆಯ ಬಗ್ಗೆ ಅನೇಕ ಮಹನೀಯರು ಮೆಚ್ಚುಗೆಯ ಪತ್ರಗಳನ್ನು ಬರೆಯುತ್ತಿದ್ದಾರೆ. ಆ ಎಲ್ಲ ಮಹನೀಯರಿಗೆ ಹಾರ್ದಿಕ ಧನ್ಯವಾದಗಳು. ಪತ್ರಿಕೆಯು ಆರನೇ ವರ್ಷದ ಹತ್ತನೇ ತಿಂಗಳಿನಲ್ಲಿ ಮುಂದುವರಿದಿದ್ದು ಹೊಸ ಹೊಸ ಜ್ಞಾನವರ್ಧಕ ವಿಷಯಗಳನ್ನು ಪ್ರಕಟಿಸುತ್ತಿದೆ. ಅನೇಕ ಚಂದಾದಾರರು ಪತ್ರಿಕೆ ತುಂಬಾ ಚೆನ್ನಾಗಿದೆ. 'ವೇದಗಳ ಪರಿಚಯ' ವೇದಗಳನ್ನೇ ನೋಡದ ನಮಗೆ ತಾವು ವೇದಗಳ ಪರಿಚಯ ಮಾಡಿಕೊಡುತ್ತಿರುವುದು ತುಂಬಾ ಸ್ತುತ್ಯಾರ್ಹ. ಜತೆಗೆ ನಮ್ಮ ಸಮಾಜದ ಮಹಾತ್ಮರ ಪರಿಚಯವನ್ನೂ ಮಾಡಿಕೊಡಿ ಎಂದು ಬರೆಯುತ್ತಿದ್ದಾರೆ. ಧಾರ್ಮಿಕ, ಶೈಕ್ಷಣಿಕ, ಜ್ಞಾನವರ್ಧಕ ವಿಷಯಗಳಿಗೆ ವಿಶೇಷ ಮಹತ್ವ ಕೊಟ್ಟು ಆ ವಿಷಯಗಳನ್ನೇ ಹೆಚ್ಚಾಗಿ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದು ವರದಿಗಳಿಗೆ ಸ್ಥಳಾವಕಾಶ ಕಡಿಮೆಯಿದೆ. ಕಾರಣ, ವರದಿಗಳನ್ನು

ಕಳಿಸುವವರು ಸಂಕ್ಷಿಪ್ತ ವರದಿಗಳನ್ನು ಮಾತ್ರ ಕೃಪೆ ಮಾಡಬೇಕು. ಪತ್ರಿಕೆಯ ಬಗ್ಗೆ ಮೆಚ್ಚುಗೆಯ ಪತ್ರಗಳು ತುಂಬಾ ಬರುತ್ತಿದ್ದು ಅವುಗಳನ್ನು ಪ್ರಕಟಿಸಲು ಸಾಧ್ಯವಾಗದುದಕ್ಕೆ ವಿಷಾದಿಸುವೆ. ಕಾರಣ, ಅದಕ್ಕಾಗಿ ಒಂದು ಪುಟ ಉಪಯುಕ್ತವಲ್ಲದ ವಿಷಯಗಳಿಗೆ ವ್ಯಯವಾಗುವುದು ಸಮಂಜಸವಲ್ಲವೆಂದು ನನ್ನ ಭಾವನೆ".[೬]

ಕಡಿಮೆ ಪುಟದಲ್ಲಿ ಹೆಚ್ಚು ವಿಷಯಗಳನ್ನು ಜನರಿಗೆ ಮುಟ್ಟಿಸಬೇಕೆಂಬ ಕಳಕಳಿ ಈ ಸಂಪಾದಕೀಯದಲ್ಲಿ ಎದ್ದು ಕಾಣುತ್ತದೆ.

ಮೋಹನರಾವ್ ಅವರೇ ಸಂಪಾದಕರಾಗಿ ಪ್ರಕಟಿಸುತ್ತಿರುವ ಮತ್ತೊಂದು ಮಹತ್ವದ ಪತ್ರಿಕೆ ವಿಶ್ವಬಂಧು. ವಿಶ್ವಬ್ರಾಹ್ಮಣ ಪತ್ರಿಕೆ ಮಾಸಿಕವಾದರೆ, ವಿಶ್ವಬಂಧು ತ್ರೈಮಾಸಿಕ ಪತ್ರಿಕೆಯಾಗಿದೆ. ಇಲ್ಲಿಯೂ ಕೂಡ ಮೋಹನರಾವ್ ಅವರೇ ಸಂಪಾದಕೀಯವನ್ನು ಬರೆಯುತ್ತ ಬಂದಿದ್ದಾರೆ. ಅವರ ಸಂಪಾದಕೀಯಕ್ಕೆ ಒಂದು ಉದಾಹರಣೆ ಹೀಗಿದೆ–

"ಇದು ವಿಶ್ವಬಂಧುವಿನ ಮೂರನೆಯ ಸಂಚಿಕೆ. ಕೇವಲ ಮೂರು ಸಂಚಿಕೆಗಳಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯ ಚಂದಾದಾರರಾಗಿ ಸಹಕರಿಸಿದ ತಮಗೆಲ್ಲರಿಗೂ ಹೃತ್ಪೂರ್ವಕ ಧನ್ಯವಾದಗಳು. ಪತ್ರಿಕೆಯ ಬಗ್ಗೆ ಅನೇಕ ಮಹನೀಯರು ಪ್ರಶಂಸ್ಯಾ ಪತ್ರಗಳನ್ನು ಬರೆದಿರುತ್ತಾರೆ. ಅವರೆಲ್ಲರಿಗೂ ಕೃತಜ್ಞತಾಪೂರ್ವಕ ವಂದನೆಗಳು. ಧಾರ್ಮಿಕ ಪತ್ರಿಕೆಯೊಂದು ಶೀಘ್ರ ಗತಿಯಲ್ಲಿ ಪ್ರಗತಿದಾಯಕವಾಗಿ ಮುಂದುವರಿಯುತ್ತಿರುವುದು, ಜನತೆಯು ಧರ್ಮಕ್ಕೆ ಹೆಚ್ಚು ಬೆಲೆ ಕೊಡುತ್ತಿರುವುದರ ಶುಭ ಸಂಕೇತ. 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ವಾಕ್ಯಕ್ಕೆ ಈಗೀಗ ಬೆಲೆ ಬರುತ್ತಿದೆ. ಕೇವಲ ಹಣವೇ ಸರ್ವಸ್ವವಲ್ಲ ಎಂಬುದು ಪ್ರತಿಯೊಬ್ಬರಗೂ ಅರಿವಾಗತೊಡಗಿದೆ. ಹಣವು ಇಂದು ಇರುತ್ತದೆ ನಾಳೆ ಹೋಗುತ್ತದೆ ಆದರೆ ಧರ್ಮವು ಶಾಶ್ವತವಾಗಿ ಉಳಿಯುವಂಥದು. ದಾನ, ಪರೋಪಕಾರ, ಧಾರ್ಮಿಕ ಪತ್ರಿಕೆಗಳಿಗೆ ಪ್ರೋತ್ಸಾಹ, ಉಚಿತ ವಿವಾಹ, ಉಪನಯನ, ಕಲ್ಯಾಣ ಮಂಟಪ, ದೇವಾಲಯಗಳಿಗೆ ಉದಾರದಾನ ಮೊದಲಾದ ಧರ್ಮಕಾರ್ಯಗಳು ಶಾಶ್ವತ ಸುಖ ಸಂತೋಷಗಳನ್ನುಂಟು ಮಾಡುವವು. ಪ್ರತಿಯೊಬ್ಬ ಮಾನವನೂ ಧರ್ಮಪಾಲನೆ ಮಾಡಿದಲ್ಲಿ ರಾಜರಾಜ್ಯವಾಗುವುದರಲ್ಲಿ ಸಂದೇಹವಿಲ್ಲ. ವೇದ, ಉಪನಿಷತ್ತು, ಮಹಾಭಾರತ, ಮೂಲಸ್ತಂಭ ಮೊದಲಾದ ಗ್ರಂಥಗಳು ಇದನ್ನೆ ಹೇಳಿವೆ. ಆ ಕಾರಣಕ್ಕಾಗಿಯೇ ವಿಶ್ವಬಂಧು ಪತ್ರಿಕೆಯು ವೇದ, ಉಪನಿಷತ್ತು, ಗೀತೆ, ಪುರಾಣ, ಇತಿಹಾಸ ಮೊದಲಾದ ಗ್ರಂಥಗಳಿಂದ ಅಮೂಲ್ಯ ವಿಷಯಗಳನ್ನು ಸಂಗ್ರಹಿಸಿ ಸಮಾಜಕ್ಕೆ ಅರ್ಪಿಸುವ ಸಂಕಲ್ಪ ಹೊಂದಿದೆ. ಜೊತೆಗೆ ವೇದಾಂತ, ಪಾರಮಾರ್ಥಿಕ, ನೀತಿಬೋಧಕ, ಶೈಕ್ಷಣಿಕ, ಸಾಂಸ್ಕೃತಿಕ ಮೊದಲಾದ ವಿಷಯಗಳನ್ನೂ ಪ್ರಕಟಿಸುತ್ತಿದೆ".[೭]

ಉಡುಪಿ ಜಿಲ್ಲೆಯ ಪಣಿಯೂರು ಗ್ರಾಮದ ಶ್ರೀ ಮಂಜುನಾಥ ಆಚಾರ್ಯ ಅವರು 'ಆತ್ಮೀಯ ಬೋಧಕ' ಎಂಬ ಮಾಸಪತ್ರಿಕೆಯನ್ನು ೨೦೧೩ರಿಂದ ಪ್ರಕಟಿಸುತ್ತಿದ್ದಾರೆ. ಸಂಪಾದಕರಾಗಿ, ಮಾಲೀಕರಾಗಿ ಅವರು ಪತ್ರಿಕೆಯನ್ನು ಈವರೆಗೆ ಮುನ್ನಡೆಸಿದ್ದಾರೆ. ವಿಶ್ವಕರ್ಮ ಸಮಾಜದ

ಗೊಂದಲಗಳನ್ನು ಪರಿಹರಿಸಿ, ಸರ್ವಾಂಗ ಸುಂದರ ಸಮಾಜದ ಕನಸನ್ನು ಮಂಜುನಾಥ ಆಚಾರ್ಯ ಅವರು ಕಂಡವರು. ಈ ದಿಶೆಯಲ್ಲಿಯೇ ಪತ್ರಿಕೆಯನ್ನು ರೂಪಿಸಿದ್ದಾರೆ. ಮೇ ೨೦೧೫ರ ಸಂಚಿಕೆಯ ಅವರ ಒಂದು ಸಂಪಾದಕೀಯ ಇಡೀ ಸಮಾಜದ ಬಗೆಗಿನ ಅವರ ಕಾಳಜಿಯನ್ನು ಹೀಗೆ ತೋರಿಸುತ್ತದೆ:

"ಜಾತಿ ಆಧಾರಿತ ಮೀಸಲಾತಿ ಸಾಮಾಜಿಕ ಆರ್ಥಿಕ ಸಮೀಕ್ಷೆಗೆ ಸರಕಾರ ಮುಂದಡಿ ಇಡುತ್ತಿದ್ದಂತೆ, ಯಾವ ಜಾತಿಯಲ್ಲೂ ಏಳದ ಗೊಂದಲ ಈ ಸಮಾಜದಲ್ಲಿ ಎದ್ದಿರುವುದು ತೀರಾ ದುರದೃಷ್ಟಕರ. ಜಿಲ್ಲಾವಾರು, ರಾಜ್ಯವಾರು, ರಾಷ್ಟ್ರಮಟ್ಟದ ಸಮಾಜ ಸಂಘಟನೆಗಳ ನೆಲೆಯಲ್ಲೂ ಹಿಂದೂ ಧರ್ಮದ ಅಡಿಯಲ್ಲಿ ಜಾತಿ ವಿಶ್ವಕರ್ಮ ಎಂದೂ ಉಪಜಾತಿ ಪಾಂಬಾಲ/ವಿಶ್ವಬ್ರಾಹ್ಮಣ ಇತ್ಯಾದಿ ಹಾಗೂ ವೃತ್ತಿ ಸಂಬಂಧಿ ಶಿಲ್ಪಿ ಬಡಿಗೇರ, ಪತ್ತಾರ್, ಕಮ್ಮಾರ, ಅಕ್ಕಸಾಲಿ ಎಂದೂ ಬರೆಸಿಕೊಳ್ಳಬೇಕೆಂದು ಮಾಹಿತಿ ರವಾನೆಯಾಗುತ್ತಿದ್ದಂತೆ ವಿಶ್ವಕರ್ಮ ದೇವರ ಹೆಸರು ಅದು ಜಾತಿವಾಚಕ ಹೇಗೆ ಸಾಧ್ಯ? ಆದ್ದರಿಂದ ಜಾತಿ ವಿಶ್ವಬ್ರಾಹ್ಮಣ ಎಂಬುದು ಸೂಕ್ತವೆನ್ನುವ ಸಂದೇಶ ಕೂಡ ಜನಾಂಗದಲ್ಲಿ ರವಾನೆಯಾಗಿರುವುದೂ ಜನಾಂಗವನ್ನು ಮಾತ್ರ ಗೊಂದಲಕ್ಕೆ ದೂಡಿರುವುದು ಮಾತ್ರ ಸತ್ಯ. ಹಿಂದೂಸ್ತಾನದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ವರ್ಗದಲ್ಲಿ ಬ್ರಾಹ್ಮಣ ವರ್ಗದಲ್ಲಿ ವಿಶ್ವಬ್ರಾಹ್ಮಣರು ಉಪಜಾತಿಯಾಗಿ ಗುರುತಿಸಿಕೊಂಡಿರುವುದಕ್ಕೆ ವೇದ, ಪುರಾಣ ಪ್ರಸ್ತುತ ಇತಿಹಾಸದುದ್ದಕ್ಕೂ ಕಾಶೀ ವಿದ್ವಾಂಸ ಮಂಡಳಿ ಶೃಂಗೇರಿ ಗುರುಗಳ ಸಮ್ಮತಿ ಪತ್ರಗಳು ಚಿತ್ತೂರು ಜಿಲ್ಲಾ ಅದಾಲತ್ ಕೋರ್ಟ ತೀರ್ಪಿನಂತಹ ೨೮ಕ್ಕೂ ಮಿಕ್ಕ ತೀರ್ಪುಗಳು ದೇಶಿಯ ವಿದೇಶಿ ವಿದ್ವಾಂಸರ ಅಭಿಪ್ರಾಯಗಳು ಇದಕ್ಕೆ ಪೂರಕವಾಗಿರುತ್ತದೆ.

ಜಾತ್ಯತೀತವಾಗಿ ಆಡಳಿತ ನಡೆಸಬೇಕೆಂಬ ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿ ದೇಶವನ್ನು ಜಾತಿಯ ನೆಲೆಯಲ್ಲಿ ವಿಂಗಡಿಸಿ ಆರ್ಥಿಕ, ಸಾಮಾಜಿಕ ಮೀಸಲಾತಿಯನ್ನು ದೊರಕಿಸಿ ಕೊಟ್ಟ ಕಾರಣ ಬ್ರಾಹ್ಮಣರನ್ನು ಆರ್ಥಿಕವಾಗಿ ಸದೃಢರು ಎಂದು ಗುರುತಿಸಿರುವುದು ಪ್ರಸ್ತುತ ಸಮಸ್ಯೆಗಳ ಕಾರಣಗಳಲ್ಲಿ ಪ್ರಮುಖವಾದುದು. ಈ ನೆಲೆಯಲ್ಲಿ ಬ್ರಾಹ್ಮಣ ವರ್ಗದ ಪ್ರಧಾನ ಜಾತಿಯಲ್ಲಿ ಉಪವರ್ಗ ವಿಶ್ವಕರ್ಮ/ವಿಶ್ವಬ್ರಾಹ್ಮಣ ಕಲಂ (೬)ರಲ್ಲಿ ಗುರುತಿಸುವುದು ಅಸಾಧ್ಯವಾದ ಕಾರಣ, ಮತ್ತೊಂಎಡೆ ಕಲಂ ೬ ರಲ್ಲಿ ಜಾತಿ ವಿಶ್ವಕರ್ಮ ಎಂದು ನಮೂದಿಸಲು ಕಲ್ಪಿಸಲಾಗಿರುವ ಅವಕಾಶವನ್ನು ಬಳಸಿಕೊಳ್ಳುವ ಬಗ್ಗೆ ಎದ್ದಿರುವ ಗೊಂದಲಗಳಿಗೆ ತೆರೆ ಎಳೆಯಬೇಕಾದುದು ತೀರ ಅಗತ್ಯ.

ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದ ಕಾರಣದಿಂದಾಗಿ ವಿಶ್ವಕರ್ಮರು ವಿಶ್ವಬ್ರಾಹ್ಮಣರು ಇತಿಹಾಸದಲ್ಲಿ ಯಾವ ರೀತಿಯ ಸಂಕಷ್ಟಗಳಿಗೆ ಒಳಗಾದರೆಂದು ತಿಳಿಯಲು ೨೮ಕ್ಕೂ ಮಿಕ್ಕಿದ ಕೋರ್ಟ ಖಟ್ಲೆಗಳೇ ಸಾಕ್ಷಿ. ವ್ಯವಸ್ಥಿತವಾದ ಪಿತೂರಿ, ಬಲಾಢ್ಯ ಜನಾಂಗದವರ ದಬ್ಬಾಳಿಕೆಯಡಿಯಲ್ಲಿ ಭಾರತೀಯ ಸಂಸ್ಕೃತಿಯನ್ನು ಜಗತ್ತಿಗೆ ಅನಾವರಣಗೊಳಿಸಿದ

ಶಿಲ್ಪ ವೈಭವದ ಹರಿಕಾರರಾದ ಈ ಜನಾಂಗವನ್ನು ಶೂದ್ರತ್ವದ ಲೇಬಲ್ ಹಚ್ಚಲು ಎಷ್ಟೆಲ್ಲಾ ಪ್ರಯತ್ನಗಳು ನಡೆದಿವೆ ಎನ್ನುವುದನ್ನು ತಿಳಿಯಲು ಇತಿಹಾಸದುದ್ದಕ್ಕೂ ನಡೆದಿರುವ ಘಟನೆಗಳತ್ತ ದೃಷ್ಟಿ ಹರಿಸಿದರೇ ತಿಳಿಯುವುದು. ವಿದ್ಯೆ ಎನ್ನುವುದು ಕೆಲವೇ ಕೆಲವು ಮಂದಿಯ ಸ್ವತ್ತಾಗಿದ್ದ ಕಾಲದಲ್ಲಿ ಈ ಸಮಾಜ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ವಿದ್ಯೆ ಸಾರ್ವತ್ರಿಕವಾಗುತ್ತಿದ್ದಂತೆ ಜನಸಾಮಾನ್ಯರ ಪಾಲಿಗೆ ಕಬ್ಬಿಣದ ಕಡಲೆಯಾಗಿದ್ದ ಸಂಸ್ಕೃತ, ವೇದಾಂತ ಗ್ರಂಥಗಳನ್ನು ಎಲ್ಲಾ ಜನಾಂಗದವರು ಅಧ್ಯಯನ ಮಾಡುತ್ತಿದ್ದಂತೆ ಈ ಜನಾಂಗದ ಮೇಲಿನ ಕರಿ ಮೋಡದ ಛಾಯೆಗಳು ಸರಿದು ಸೃಷ್ಟಿಯನ್ನು ಗೈಯುವ ಪರಮಾತ್ಮನಿಗೆ ಸಮೀಕರಿಸಿ ವಿಶ್ವಕರ್ಮರೆಂದು ಜಗತ್ತು ಗೌರವಪೂರ್ವಕವಾಗಿ ಸಂಬೋಧಿಸುತ್ತಿರುವುದು ಕಡಿಮೆಯ ವಿಷಯವೇ ಅಲ್ಲ. ಜಾತಿ ಸಂಕುಚಿತತೆಯ ವಿಷವರ್ತುಲದಿಂದ ಹರಗಿಟ್ಟು ಈ ಜನಾಂಗವನ್ನು ವಿಶ್ವಕರ್ಮರೆಂದು ಎತ್ತರದಲ್ಲಿ ಕುಳ್ಳಿರಿಸಿರುವದು ಕೂಡಾ ಧರ್ಮ ಆಧಾರಿತ ಗ್ರಂಥಗಳ ಅಧ್ಯಯನದ ಫಲಶ್ರುತಿಯೇ ಇರಬಹುದು. ಬದಲಾಗುತ್ತಿರುವ ಕಾಲಚಕ್ರದ ನಡೆಯಲ್ಲಿ ಇಂತಹ ಒಂದು ಗೌರವಾನ್ವಿತ ಶಿಲ್ಪಿ ಜನಾಂಗ ಈ ಭರತಖಂಡದಲ್ಲಿ ಈ ದೇಶದ ಸನಾತನ ಸಂಸ್ಕೃತಿಯ ಶಿಲ್ಪಿ ವೈಭವವನ್ನು ಅನಾವರಣಗೊಳಿಸಿದ ಬ್ರಾಹ್ಮಣ ವರ್ಗವೇ ಆಗಿತ್ತು ಎಂದು ಸಾರ್ವತ್ರಿಕವಾಗಿ ಹೇಳುವ ಕಾಲದ ನಿರೀಕ್ಷೆಯಲ್ಲಿ ನಾವಿರೋಣ.

ಸ್ವಾತಂತ್ರ್ಯಪೂರ್ವದಲ್ಲಿ ಈ ದೇಶದಲ್ಲಿ ಅಸ್ಪೃಶ್ಯತೆಯ ಕರಾಳತೆಯಡಿಯಲ್ಲಿ ನರಳಿದ ವರ್ಗಗಳು ಜಾತಿ ಮೀಸಲಾತಿಯ ಪ್ರಯೋಜನವನ್ನು ಪಡೆದು ರಾಜಕೀಯ ಸಾಮಾಜಿಕ ಶೈಕ್ಷಣಿಕ ಮುಖ್ಯವಾಹಿನಿಯಲ್ಲಿ ಇಂದು ಬೆಳಗಿರುವ ಸತ್ಯಗಾಥೆಯನ್ನು ನಾವು ಮನಗಂಡರೆ ವಿಶ್ವಕರ್ಮ ಎಂಬ ಭಗವಂತನ ನಾಮಾಂಕಿತವನ್ನು ಬಳಸಿಕೊಂಡು ಮೀಸಲಾತಿಯ ಮಾನದಂಡದಲ್ಲಿ ನಾವೂ ಕೂಡಾ ರಾಜಕೀಯ, ಶೈಕ್ಷಣಿಕ, ಸಾಮಾಜಿಕ ಮುಖ್ಯವಾಹಿನಿಯಲ್ಲಿ ಬೆಳೆಯಲು ಖಂಡಿತವಾಗಿಯೂ ಸಹಕಾರಿಯಾಗುವುದರ ಜೊತೆಗೆ ಪ್ರಸ್ತುತ ಸಮಕಾಲೀನ ವ್ಯವಸ್ಥೆಯಲ್ಲಿ ನಾವೂ ಬ್ರಾಹ್ಮಣರೆನ್ನುವ ಬಗೆಗಿನ ಇತರರ ಗೊಂದಲಗಳಿಗೂ ತೆರೆ ಸರಿಸುವ ಪ್ರಯತ್ನಗಳನ್ನು ನಾವು ಎಷ್ಟರಮಟ್ಟಿಗೆ ನಿರ್ವಹಿಸಿದೆ ಎನ್ನುವ ಪ್ರಶ್ನೆಗಳೂ ಉತ್ತರದಾಯಿತ್ವದಿಂದ ಕೂಡಿರಲಿ".[೮]

ಸಹ ಚಿಂತನ ಪತ್ರಿಕೆಗೆ ಗೌರವ ಪ್ರಧಾನ ಸಂಪಾದಕರಾದ ಶ್ರೀ ಬಿ.ಎ. ಆಚಾರ್ಯ ಅವರು ಸಂಪಾದಕೀಯ ಬರೆಯುತ್ತ ಬಂದಿದ್ದಾರೆ. ವಿಶ್ವಕರ್ಮ ಸಮಾಜದಲ್ಲಿ ಸ್ವಾಭಿಮಾನ ಜಾಗೃತಿ ಮಾಡುವುದೇ ಅವರ ಸಂಪಾದಕೀಯಗಳ ಪರಮ ಉದ್ದೇಶ. ರಾಜ್ಯದಲ್ಲಿ-ದೇಶದಲ್ಲಿ ನಡೆಯುವ ಎಲ್ಲ ವಿದ್ಯಮಾನಗಳನ್ನು ಪರಿಶೀಲಿಸಿ, ವಿಶ್ವಕರ್ಮ ಸಮಾಜ ಸಾಗಿಬಂದ ದಾರಿ; ಸಾಗಬೇಕಾದ ರೀತಿ ಬಗ್ಗೆ ಅನೇಕ ಮೌಲಿಕ ಸಂಪಾದಕೀಯಗಳನ್ನು ಬರೆಯುತ್ತ ಬಂದಿದ್ದಾರೆ. ಜನವರಿ ೨೦೧೨ರ ಸಂಚಿಕೆಯ ಒಂದು ಸಂಪಾದಕೀಯ ಹೀಗಿದೆ-

"ಒಂದೂ ಸಮಾಜಕ್ಕೆ ಮಾರ್ಗದರ್ಶನ ಮಾಡುವ ಅರ್ಹತೆ ಮತ್ತು ಹಕ್ಕು ತಮಗೆ ಮೀಸಲು ಎಂದುಕೊಂಡಿರುವ ಒಂದು ಬ್ರಾಹ್ಮಣ ವರ್ಗವು ಹಣಬಲ, ಜನಬಲ, ಜ್ಞಾನಬಲ,

ಅಧಿಕಾರ ಬಲ ಹೊಂದಿರುವ ಇನ್ನೊಂದು ಬ್ರಾಹ್ಮಣ ಸಮಾಜವನ್ನು 'ಸಹಪಂಕ್ತಿ'ಯ ವಿಚಾರದಲ್ಲಿ ಕೆಣಕಿದ್ದು ಕರಾವಳಿಯಲ್ಲಿ ಕಳೆದ ನವರಾತ್ರಿಯ ಸಂದರ್ಭ ನಡೆದ ಒಂದು ಘಟನೆ. ಇದೇ ವಿಚಾರವನ್ನು ಮುಂದಿಟ್ಟುಕೊಂಡು ಬೃಹತ್ ಸಮಾವೇಶವು ಇತ್ತೀಚೆಗೆ ನಡೆದಿದೆ. 'ಮೂಲವೃತ್ತಿ ಸಂರಕ್ಷಣೆ', 'ಸಂಸ್ಕೃತಿ ಸಮನ್ವಯತೆ', 'ಸಾಮಾಜಿಕ ಭದ್ರತೆ' ಈ ಮೂರು ವಿಚಾರಗೋಷ್ಠಿಗಳ ಮೂಲಕ ಸಮಾಜದ ಜಾಗೃತಿಗೆ ಮಾಡಿರುವ ಪ್ರಯತ್ನ ಉಲ್ಲೇಖನೀಯ.

ವಿಶ್ವಬ್ರಾಹ್ಮಣ ಸಮುದಾಯದ 'ವಿಶ್ವಕರ್ಮ ಸಮ್ಮೇಳನ-೨೦೧೨' ಇದಕ್ಕೆ ಕರಾವಳಿ ಕರ್ನಾಟಕ ಸಜ್ಜುಗೊಂಡಿದೆ. ತನ್ನ ಸಂಖ್ಯಾಬಲದ ಮೂಲಕ ಸರಕಾರ ಹಾಗೂ ರಾಜಕೀಯ ಪಕ್ಷಗಳ ಗಮನ ಸೆಳೆಯಬೇಕೆಂದಿರುವ ಈ ಸಮ್ಮೇಳನದಲ್ಲಿ ಸ್ವಾಭಿಮಾನದ ಜಾಗೃತಿಗೆ ಕಹಳೆ ಮೊಳಗಲಿ, ಕಲುಷಿತ ರಾಜಕೀಯ ವ್ಯವಸ್ಥೆಯನ್ನು ಶುದ್ಧಗೊಳಿಸುವ ದೃಢಸಂಕಲ್ಪಕ್ಕೆ ಸಮ್ಮೇಳನ ನಾಂದಿಯಾಗಬೇಕು. ಕರ್ನಾಟಕದಲ್ಲಿ ಒಂದು ರಾಜ್ಯಸಭಾ ಸದಸ್ಯಸ್ಥಾನ ಹಾಗೂ ಒಂದು ವಿಧಾನ ಪರಿಷತ್ ಸದಸ್ಯ ಸ್ಥಾನವನ್ನು ವಿಶ್ವಬ್ರಾಹ್ಮಣ ಸಮುದಾಯಕ್ಕೆ ನೀಡಬೇಕೆನ್ನುವ ಬೇಡಿಕೆಯನ್ನು ಸಲ್ಲಿಸಬಹುದು.

'ವಿಶ್ವಕರ್ಮರು ಹುಟ್ಟು ತಂತ್ರಜ್ಞರು' ಎಂದು ಹೊಗಳಿ ಅಟ್ಟಕ್ಕೇರಿಸುವ ರಾಜಕೀಯ ನಾಯಕರ ಮುಂದೆ ವಿಶ್ವಬ್ರಾಹ್ಮಣರ ಮಕ್ಕಳಿಗೆ ಇಂಜನಿಯರಿಂಗ್, ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಶೇ.೫ರಷ್ಟು ಸ್ಥಾನಗಳನ್ನು ಮೀಸಲಿಡುವ ಕಾಯಿದೆ ರಚಿಸಲು ಒತ್ತಾಯಿಸಬೇಕು. ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವಿಶೇಷ ಮುತುವರ್ಜಿಯಿಂದ ೨೦೧೦ರಿಂದ ಕಾರ್ಯನಿರ್ವಹಿಸುತ್ತಿರುವ ಶಿಲ್ಪ ಗುರುಕುಲಗಳಿಗೆ ಸರಕಾರ ಸಕಾಲದಲ್ಲಿ ಅನುದಾನ ನೀಡಿ ವ್ಯವಸ್ಥೆಯನ್ನು ದೃಢಗೊಳಿಸಬೇಕೆಂಬ ಒತ್ತಾಯ ಸಕಾಲಿಕ. ಇದರಿಂದ ನೂರಾರು ಯುವ ಶಿಲ್ಪಿಗಳಿಗೆ ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ಬಿ.ಎಫ್.ಎ. (ಮೂರ್ತಿಶಿಲ್ಪ) ಪದವಿ ಪಡೆಯಲು ಸಾಧ್ಯವಾಗುತ್ತದೆ. ಆಧುನಿಕ ಶಿಕ್ಷಣದಿಂದ ಶಿಲ್ಪಗಳ ವ್ಯವಹಾರ ಕೌಶಲ್ಯ ಹೆಚ್ಚುತ್ತದೆ. ನೆರೆ ರಾಜ್ಯಗಳಾದ ತಮಿಳುನಾಡು, ಆಂಧ್ರ ಪ್ರದೇಶಗಳಲ್ಲಿ ಇರುವಂತೆ ಕರ್ನಾಟಕದಲ್ಲೂ ದೇವಾಲಯ ನಿರ್ಮಾಣ ಹಾಗೂ ಸಾಂಪ್ರದಾಯಿಕ ಶಿಲ್ಪ ಬೋಧಿಸುವ ಕಾಲೇಜುಗಳನ್ನು ಮುಜುರಾಯಿ ಇಲಾಖೆಯ ಆಧೀನದಲ್ಲಿ ಪ್ರಾರಂಭ ಮಾಡಲು ಒತ್ತಾಯಿಸಬೇಕು. ಈ ಕಾಲೇಜುಗಳಲ್ಲಿ ಸಾಂಪ್ರದಾಯಿಕ ಶಿಲ್ಪಿಗಳ ಮಕ್ಕಳಿಗೆ ಶೇ. ೩೩ ಮೀಸಲಾತಿ ಇರಬೇಕು. ರಾಜ್ಯದ ಮುಜುರಾಯಿ ಇಲಾಖೆಯಲ್ಲಿ ಸ್ಥಪತಿ ವಿಭಾಗವನ್ನು ಪ್ರಾರಂಭ ಮಾಡಿ ದೇವಾಲಯ ನಿರ್ಮಾಣ, ದುರಸ್ಥಿ ಇತ್ಯಾದಿಗಳನ್ನು ಈ ವಿಭಾಗದ ಮೂಲಕವೇ ನಿರ್ವಹಿಸಬೇಕು. ಕರ್ನಾಟಕ ಶಿಲ್ಪಕಲಾ ಶೈಲಿಯನ್ನು ಉಳಿಸಿ ಬೆಳೆಸುವ ಪ್ರಯತ್ನಕ್ಕೆ ಒತ್ತಾಯಿಸಬೇಕು.

ಕರ್ನಾಟಕ ವಿಶ್ವಕರ್ಮ ಸಮುದಾಯದ ಸಮಗ್ರ ಸಾಮಾಜಿಕ-ಆರ್ಥಿಕ-ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ಒಂದು ವ್ಯವಸ್ಥಿತ ಅಧ್ಯಯನ ಹಾಗೂ ಕ್ಷೇತ್ರ ಕಾರ್ಯ ನಡೆಯಬೇಕು. ಕಲೆ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಗಣನೀಯ ಕೊಡುಗೆ ನೀಡುತ್ತಿರುವ ಈ ಸಮಾಜದ ಪುನರುತ್ಥಾನಕ್ಕೆ

ಘನ ಸರಕಾರವು ನ್ಯಾಯೋಚಿತ ದಾರಿಯನ್ನು ರೂಪಿಸಿಕೊಡಬೇಕು. ಬಲವಾದ ಅಂತಃಸತ್ವವಿರುವ ಈ ಸಮಾಜದ 'ವಿಶ್ವಕರ್ಮ'- 'ವಿಶ್ವಬ್ರಾಹ್ಮಣ' ಗೊಂದಲ ಕೊನೆಗೊಳ್ಳಬೇಕು. ಘನ ಪರಂಪರೆ ಇದ್ದರೆ ಏನು ಸಾರ್ಥಕ? ಮನೆಯ ಮಕ್ಕಳೆ ಮಲಗಿ ನಿದ್ರಿಸುತ್ತಿದ್ದರೆ! ಈ ಕಾಲ ಘಟ್ಟದಲ್ಲಿ ಆತ್ಮಾವಲೋಕನ ಅರ್ಥಪೂರ್ಣ”.

ವಿಧಾತೃ ಮಾಸಪತ್ರಿಕೆ ಸಂಪಾದಕರಾದ ಎನ್.ಸಿ. ಛಾಯಾಪತಿ ಅವರು ಪ್ರತಿತಿಂಗಳು ಸಂಪಾದಕೀಯ ಒಂದು ಪುಟ ಪ್ರಕಟಿಸುತ್ತ ಬಂದಿದ್ದಾರೆ. ಒಂದೇ ಪುಟದಲ್ಲಿ ಹೇಳಬೇಕಾದುದನ್ನು ಅತ್ಯಂತ ಸರಳವಾಗಿ ಹೇಳುವ ಕಲೆ ಅವರಿಗೆ ಸಿದ್ಧಿಸಿದೆ. ಕರ್ನಾಟಕದಲ್ಲಿ ಇತ್ತೀಚೆಗೆ ಲಿಂಗಾಯತರು ಹಿಂದೂಗಳಲ್ಲ, ದಲಿತರು ಹಿಂದೂಗಳಲ್ಲ ಎಂಬ ವಾದ ಎದ್ದ ಸಂದರ್ಭದಲ್ಲಿ ಕರ್ನಾಟಕ ಸರಕಾರ ಜಾತಿಗಣತಿ ಮಾಡಲು ಮುಂದಾಯಿತು. ಆ ಸಂದರ್ಭದಲ್ಲಿ ಛಾಯಾಪತಿಯವರು ತಮ್ಮ ವಿಧಾತೃ ಪತ್ರಿಕೆಯಲ್ಲಿ ಒಂದು ಸಮಯೋಚಿತ ಸಂಪಾದಕೀಯ ಬರೆದರು.

“ಸಿಂಧೂ ನದಿಯ ಪೂರ್ವಕ್ಕೆ ವಾಸಿಸುತ್ತಿದ್ದ ಜನರನ್ನು ಹಿಂದೂ ಎಂದು ಕರೆಯುತ್ತಾರೆ. ಈ ಹಿಂದೂ ಪದವು ಕಾಲಾನಂತರದಲ್ಲಿ ಭಾರತದೇಶದ ಉದಗಲಕ್ಕೂ ವಾಸಿಸುವರನ್ನೆಲ್ಲಾ ಹಿಂದೂಗಳು ಮತ್ತು ಹಿಂದೂಸ್ತಾನವೆಂದು ಕರೆದಿದ್ದಾರೆ, ಕರೆಯುತ್ತಲಿದ್ದಾರೆ. ಹಿಂದೂ ಒಂದು ಜೀವನ ಶೈಲಿಯೇ ಹೊರತು ಜಾತಿಗೆ ಸಮೀಕರಿಸಲು ಬರುವುದಿಲ್ಲ. ಬೌದ್ಧ, ಜೈನ, ಇಸ್ಲಾಂ, ಕ್ರೈಸ್ತ ಧರ್ಮಗಳು ವ್ಯಕ್ತಿ ಪ್ರತಿಪಾದಿತವಾಗಿದ್ದು, ಹಿಂದೂ ಧರ್ಮಕ್ಕೆ ಸಂಸ್ಥಾಪಕರು ಯಾರೂ ಇಲ್ಲವೆಂದು ಹೇಳಬೇಕು. ಆದರೆ ಭರತಖಂಡದಲ್ಲಿ ನೆಲೆಸಿದ ಬಹುತೇಕ ಜನರು ಒಂದು ರೀತಿಯ ಏಕರೂಪ ಸಾಮಾಜಿಕ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದುದರಿಂದ ಅವರನ್ನೆಲ್ಲಾ ಒಟ್ಟಾಗಿ ಹಿಂದುಗಳೆಂದು ಕರೆದರು.

ಪ್ರಸ್ತುತ ಈ ಹಿಂದೂ ಶಬ್ದವು ಚರ್ಚೆಗೆ ಗ್ರಾಸವಾಗುತ್ತಿದೆ. ವೀರಶೈವರು/ಲಿಂಗಾಯತರು ನಾವು ಹಿಂದೂಗಳಲ್ಲ ಎಂದು ವಾದಿಸುತ್ತಾರೆ. ದಲಿತರೂ ಸಹ ನಾವು ಹಿಂದೂಗಳಲ್ಲ ಎನ್ನುತ್ತಿರುವುದು ತಿಳಿದ ವಿಷಯ. ಆದರೆ ಭಾರತದಲ್ಲಿ ವಾಸಿಸುತ್ತಿರುವ ಹಿಂದೂ ಎಂದು ಪರಿಗಣಿಸಲ್ಪಟ್ಟಿರುವ ಬ್ರಾಹ್ಮಣರು, ವೀರಶೈವ ಲಿಂಗಾಯತ, ಒಕ್ಕಲಿಗ, ವಿಶ್ವಕರ್ಮ, ವೈಶ್ಯ, ರೆಡ್ಡಿ, ಯಾದವರು, ಕಾಶ್ಮೀರಿ ಪಂಡಿತರು, ನಂಬೂದರಿಗಳು, ದಲಿತರಲ್ಲಿರುವ ಅನೇಕ ಜಾತಿಗಳವರು. ಇವರೆಲ್ಲರೂ ದೇವರು, ದೇವಸ್ಥಾನ ಪೂಜೆಗಳಲ್ಲಿ ನಿರತರಾಗಿರುತ್ತಾರೆ. ಮದುವೆ ಮುಂತಾದ ಸಮಾರಂಭದ ಆಚರಣೆಯಲ್ಲಿ ಏಕತೆಯಿರುವುದು. ಜೋತಿಷ್ಯದಲ್ಲಿ ನಂಬಿಕೆ, ಪಂಚಾಂಗ ಅನುಸರಿಸಿ ಶುಭದಿನಗಳಂದು ಸಮಾರಂಭ ಏರ್ಪಡಿಸುವುದು, ವೇದ, ಉಪನಿಷತ್ತು, ಮಹಾಭಾರತ, ರಾಮಾಯಣ, ಪುರಾಣಗಳಲ್ಲಿ ನಂಬಿಕೆ ಇಟ್ಟಿರುವುದು, ಸ್ತ್ರೀಯರ ಉಡುಗೆ ತೊಡುಗೆಗಳಲ್ಲಿ ಸಾಮ್ಯತೆ, ಪಂಚಭೂತಗಳು, ಶಮೀವೃಕ್ಷ, ಅರಳೀಮರ, ಬಿಲ್ವಪತ್ರೆ, ಎಕ್ಕದಗಿಡ, ತುಳಸಿ ಮುಂತಾದ ಸಸ್ಯ ಸಂಪತ್ತಿನಲ್ಲಿ ದೈವತ್ವ ಕಾಣುವುದು. ಹೋಳಿ, ಶಿವರಾತ್ರಿ, ದೀಪಾವಳಿ, ದಸರಾ, ವಿಘ್ನೇಶ್ವರನ ಪೂಜೆಗಳಲ್ಲಿ

ತೊಡಗಿಸಿಕೊಂಡಿರುವುದು ಮುಂತಾದ ಸಂಪ್ರದಾಯಗಳನ್ನು ಅನುಸರಿಸುತ್ತಿರುವ ಪದ್ಧತಿ ಇರುವುದರಿಂದ ಇವರೆಲ್ಲರನ್ನೂ ಹಿಂದೂಗಳೆಂದು ಪರಿಗಣಿಸಿರಬಹುದು. ಯಾರಾದರೂ ನಮ್ಮನ್ನು ಯಾವ ಧರ್ಮಕ್ಕೆ ಸೇರಿದವರೆಂದು ಕೇಳಿದರೆ ನಾವು ಮೊದಲು ಹೇಳುವುದು ಹಿಂದೂ ನಂತರದ ಸ್ಥಾನ ಜಾತಿಗೆ ದೊರಕುತ್ತದೆ. ಪ್ರಸ್ತಾಪಿಸಿರುವ ಜಾತಿಗಳವರು ಹಿಂದೂ ಎಂದು ಹೇಳಿಕೊಳ್ಳುವುದನ್ನು ಬಿಟ್ಟರೆ, ಇವೆಲ್ಲ ಜಾತಿಗಳವರು ಭಾರತದ ಅಲ್ಪಸಂಖ್ಯಾತರಾಗಿ ಉಳಿದ ಧರ್ಮದವರು ಬಹುಸಂಖ್ಯಾತರಾಗುತ್ತಾರೆಂಬುದರಲ್ಲಿ ಸಂಶಯವಿಲ್ಲ. ಪ್ರಾಜ್ಞರು, ಇತಿಹಾಸಕಾರರು, ಮಠಾಧಿಪತಿಗಳು ಈ ಅಂಶವನ್ನು ಗಮನಿಸಿಯಾದರೂ ಜಾತಿಗಣತಿಯಲ್ಲಿ ನಾನು ಹಿಂದೂ ನಂತರ ಜಾತಿ ಬರೆಸಬೇಕೆಂಬುದು ನನ್ನ ಅಭಿಪ್ರಾಯ".[೧೦]

ವಿಧಾತ್ರ ಸಂಪಾದಕರಿಗೆ ಹಿಂದೂ ಎಂಬ ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಸದಾಶಯವಿದ್ದಂತೆ ಈ ಸಂಪಾದಕೀಯ ಅರಹುತ್ತದೆ. ಧರ್ಮ ಬೇರೆ, ಮತ ಬೇರೆ, ಸಂಪ್ರದಾಯ ಬೇರೆ, ಜಾತಿ ಬೇರೆ, ಈ ಹಿನ್ನೆಲೆಯಲ್ಲಿ ಹಿಂದೂ ಎಂಬುದು ಏಕಘನಾಕೃತಿಯ ಗೂಡಿನಂತೆ ಗೋಚರಿಸುತ್ತದೆ ಎಂಬುದನ್ನು ಓದುಗರಿಗೆ ಮನದಟ್ಟು ಮಾಡಲು ಸಂಪಾದಕರು ಪ್ರಯತ್ನಿಸಿದ್ದಾರೆ.

ವಿಶ್ವಕರ್ಮ ಕಲಾ ಎಂಬ ಕನ್ನಡ ಮಾಸ ಪತ್ರಿಕೆಯ ಸಂಪಾದಕರು ಕೆ. ಸೂರ್ಯಾಚಾರ ಅವರು ೧೯೮೭ರಿಂದ ಈ ಪತ್ರಿಕೆಗೆ ಸಂಪಾದಕೀಯ ಬರೆಯುತ್ತ ಬಂದಿದ್ದಾರೆ. ಈಗ ಈ ಪತ್ರಿಕೆ ನಿಂತಿದೆ. ಆದರೂ ಇದ್ದಷ್ಟು ದಿನ ಸಮಾಜ ಬಾಂಧವರಿಗೆ ವಿಶ್ವಕರ್ಮ ಸಂಸ್ಕೃತಿಯನ್ನು ಪರಿಚಯಿಸುವ ಪ್ರಯತ್ನ ಮಾಡಿದೆ. ಜನವರಿ ೧೯೯೧ರ ಸಂಪಾದಕೀಯದಲ್ಲಿ ಸಂಪಾದಕರ ವಿಶ್ವವಿಶಾಲ ದೃಷ್ಟಿಯನ್ನು ಕಾಣುತ್ತೇವೆ.

"ವಿಶ್ವಕರ್ಮ ಸಾಹಿತ್ಯ ಪ್ರಸಾರದ ಮಹತ್ವಾಕಾಂಕ್ಷೆಯಿಂದ ಎಲ್ಲ ವಿಶ್ವಕರ್ಮರೂ ಓದಿ ಮನನ ಮಾಡಲು ಯೋಗ್ಯ ಹಾಗೂ ಅವಶ್ಯಕ ವಿಷಯಗಳನ್ನು 'ವಿಶ್ವಕರ್ಮಕಲಾ' ತಮಗೆ ಒದಗಿಸುತ್ತಿದೆ. ಒಂದು ಶತಕದಲ್ಲಿ ತಪ್ಪಿ ಹೋದ ವೇದಾಧ್ಯಯನ, ಧರ್ಮಶಾಸ್ತ್ರ ವಿಮರ್ಶೆ ಹಾಗೂ ಅವಶ್ಯಕವಾಗಿ ಆಚರಿಸಬೇಕಾದ ಧಾರ್ಮಿಕ ವಿಧಿಗಳು (ಸಂಧ್ಯಾವಂದನೆ ಸಂಕಲ್ಪ, ಮಂತ್ರಸಹಿತ ದೇವತಾರ್ಚನೆ ಇತ್ಯಾದಿ ಆಗಮಶಾಸ್ತ್ರ ವಿಚಾರಗಳು) ಬೆಳೆಯುವ ಮಕ್ಕಳಿಗೆ ಧೈರ್ಯ ತುಂಬುವಂತಹ ಆದೇಶಗಳು ಧ್ಯೇಯವಾಕ್ಯಗಳಿರುವಂತಹ ಶಾಂತಿಮಂತ್ರಗಳ ಪಠಣ, ವೇದಸಾಹಿತ್ಯದಲ್ಲಿರುವ ಸಾಮಾಜಿಕ, ರಾಜಕೀಯ, ಆರ್ಥಿಕ, ಆಯುರ್ವೇದ, ಗಣಿತ, ಭೌಗೋಳಿಕ, ಜ್ಯೋತಿಷ್ಯ ವೈಜ್ಞಾನಿಕ ವಿಷಯಗಳ ವಿಮರ್ಶೆ ಹಾಗೂ ಸುಖ ಸಂವೃದ್ಧಿಗಳಿಗೆ ಅಳವಡಿಕೆ ಬಗ್ಗೆ ಚಿಂತನ, ಪ್ರಯೋಗ ಎಲ್ಲವನ್ನು ವ್ಯವಸ್ಥಿತವಾಗಿ ಮೈಗೂಡಿಸಿಕೊಂಡಾಗಲೇ ಸ್ವತಂತ್ರದ ಅರ್ಥ, ಮಹತ್ವ ಜನಸಾಮಾನ್ಯರಿಗೆ ಅರಿವಾಗುತ್ತದೆ. ಯಾವ ಪರಬ್ರಹ್ಮ ವಿಶ್ವಕರ್ಮನ ಸಂಕಲ್ಪ ಲೀಲಾಮಾತ್ರದಿಂದ ನಿರ್ಮಿತವಾದ ಚರಾಚರ ವಸ್ತುಗಳಿಂದೊಗೂಡಿದ ಈ ಪ್ರಪಂಚದಲ್ಲಿರುವ ನಾವು ಮೇಲ್ಕಂಡ ಅಂಶಗಳಲ್ಲಿ ಪರಿಣತರಾಗದೇ ವಿಶ್ವಕರ್ಮರೆಂದು ಹೇಳಿಕೊಳ್ಳುವುದು ಪರಿಹಾಸ್ಯವಲ್ಲವೆ? ವೇದ, ಉಪನಿಷತ್ತು ಸಾಹಿತ್ಯದಿಂದ

ಅವಶ್ಯ ವಿಷಯಗಳನ್ನು ಸಮಾಜದ ಗುರುಗಳೂ, ಹಿರಿಯರು, ತಜ್ಞರೂ ಒದಗಿಸಲು ಸಿದ್ಧವಿರುವಾಗ 'ವಿಶ್ವಕರ್ಮಕಲಾ' ಇವನ್ನು ತಮ್ಮ ಬಳಿಗೆ ಹೊತ್ತು ತರುತ್ತಿದೆ. ಆದರೆ ಅನುಷ್ಠಾನವಿಲ್ಲದಿದ್ದರೆ ವೇದ ಶಾಸ್ತ್ರಕ್ಕೇನೂ ಕಳಂಕವಿರದು ಬದಲಾಗಿ ನಾವೇ ಸಮಾಜದೆದುರು ಅವಮಾನಿತ ಬಾಳು ಮುಂದುವರೆಸಬೇಕಾಗುತ್ತದೆ. ಎಲ್ಲಾ ಜನಾಂಗಗಳೂ ಸ್ಪರ್ಧಾತ್ಮಕವಾಗಿ ಮುಂದುವರಿಯುತ್ತಿರುವುದನ್ನು ನೋಡುತ್ತಿರುವ ನಾವು ಗುರು-ಹಿರಿಯರು ತಜ್ಞರು ಒಗಿಸುತ್ತಿರುವ ಈ ಸಾಮಗ್ರಿಯನ್ನು ಸದುಪಯೋಗಪಡಿಸಿಕೊಳ್ಳೋಣ".[೧೧]

ಒಟ್ಟಾರೆ, ಎಲ್ಲ ಸಂಪಾದಕರ ಸಂಪಾದಕೀಯಗಳನ್ನು ಆಮೂಲಾಗ್ರವಾಗಿ ಗಮನಿಸಿದಾಗ, ಸಮಾಜದ ಏಳಿಗೆ, ಸುಧಾರಣೆಯ ಬಗೆಗಿನ ಚಿಂತನೆಗಳು ಹೆಚ್ಚಾಗಿರುವುದನ್ನು ನೋಡುತ್ತೇವೆ.

ವರದಿಗಾರರು : ಸಭೆ ಸಮಾರಣಭಗಳ ವರದಿಗಳನ್ನು ಆಯಾ ಪ್ರದೇಶದಿಂದ ವಿಶ್ವಕರ್ಮ ಪತ್ರಿಕೆಗಳಿಗೆ ಕಳಿಸಿಕೊಡುವ ವರದಿಗಾರರಾಗಿ ಸ್ವಯಂ ಪ್ರೇರಣೆಯಿಂದ ವಿಶ್ವಕರ್ಮ ಸಮಾಜ ಬಂಧುಗಳು ಮಾಡುತ್ತ ಬಂದಿದ್ದಾರೆ. ವೇತನ ರಹಿತ ಸಮಾಜ ಸೇವಾಪೇಕ್ಷೆ ದೃಷ್ಟಿಯಿಂದ ಅವರು ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಕರ್ನಾಟಕದ ತುಂಬ ವ್ಯಾಪಿಸಿರುವ ವಿಶ್ವಕರ್ಮ ಸಮಾಜದ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕಾರ್ಯಚಟುವಟಿಕೆಗಳು ಮಾತ್ರವಲ್ಲದೆ, ವೈಯಕ್ತಿಕ ನೆಲೆಯ ಸನ್ಮಾನ ಸಮಾರಂಭ, ಅಭಿನಂದನ ಗ್ರಂಥ ಬಿಡುಗಡೆ ಸಮಾರಂಭ, ಸಮ್ಮೇಳನಗಳ ವರದಿಗಳನ್ನು ನಿಯಮಿತವಾಗಿ ಮಾಡುತ್ತ ಬಂದಿದ್ದಾರೆ. ಅಂಥ ಕೆಲವು ವರದಿಗಾರರ ಹೆಸರುಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಬಯಸುವೆ.

ಬಾಗಲಕೋಟೆಯಲ್ಲಿ ನೆಲೆಸಿರುವ ಅಶೋಕ ವೇದಪಾಠಕ ಎಂಬುವರು ವಿಶ್ವಕರ್ಮೋದಯ ಪತ್ರಿಕೆಗೆ ಬಾಗಲಕೋಟೆ ಜಿಲ್ಲೆಯ ವಿಶ್ವಕರ್ಮ ಸಮಾಜದ ಎಲ್ಲ ಕಾರ್ಯಕ್ರಮಗಳನ್ನು ವರದಿ ಮಾಡುತ್ತ ಬಂದಿದ್ದಾರೆ. ಮೌನೇಶ್ವರ ಜಯಂತಿ, ವಿಶ್ವಕರ್ಮ ಜಂತಿ, ಉಪನಯನ ಕಾರ್ಯಕ್ರಮ, ಸಂಗೀತ ನೃತ್ಯ ಕಾರ್ಯಕ್ರಮಗಳ ವಿವರಗಳು ವಿಶ್ವಕರ್ಮೋದಯ ಪತ್ರಿಕೆಯಲ್ಲಿ ನಿರಂತರ ಪ್ರಕಟವಾಗುತ್ತ ಬಂದಿವೆ.

ಉಡುಪಿ ಭಾಗದಿಂದ ಅನುಪಮಾ ಎಂಬುವರು ವಿಶ್ವಕರ್ಮೋದಯ ಪತ್ರಿಕೆಗೆ ವರದಿಗಾರರಾಗಿ ಕೆಲಸ ಮಾಡಿದ್ದಾರೆ. ಕಲಬುರ್ಗಿ ಭಾಗದಿಂದ ರಾಜೇಂದ್ರ ಬಡಿಗೇರ್, ಮಣಿಪಾಲದಿಂದ ಬಿ. ಎ. ಆಚಾರ್ಯ, ಬೀದರದಿಂದ ಜೈ ಪ್ರಕಾಶ ಪೊದ್ದಾರ್, ಹಾವೇರಿಯಿಂದ ಅಶೋಕ ಕೆ.ಎಮ್. ಮತ್ತು ರಾಜೇಂದ್ರ ಎಸ್. ರಿತ್ತಿ, ಗಂಗಾವತಿಯಿಂದ ಗುರುಮೂರ್ತಿ ಬಡಿಗೇರ್, ಕಾಸರಗೋಡಿನಿಂದ ವೈ. ಧರ್ಮೇಂದ್ರ ಆಚಾರ್ಯ, ಅರಸಿಕೇರೆಯಿಂದ ಕಲ್ಲೇಶಾಚಾರ್ಯ, ತುಮಕೂರಿನಿಂದ ಸ್ವಾತಿ ರಾಮಕೃಷ್ಣಾಚಾರ್ ಇವರೆಲ್ಲ ವರದಿಗಳನ್ನು ಕಳಿಸಿಕೊಟ್ಟಿದ್ದಾರೆ.

ಶಿರಸಂಗಿಯಿಂದ ಪ್ರಕಟವಾಗುವ 'ವಿಶ್ವಕರ್ಮ ವಿಕಾಸವಾಣಿ' ಪತ್ರಿಕೆಯಲ್ಲಿ ಅನೇಕ ವರದಿಗಳು ಪ್ರಕಟವಾಗುತ್ತವೆ. ಈ ಪತ್ರಿಕೆಗೆ ಡಾ. ವಿರೂಪಾಕ್ಷ ಬಡಿಗೇರ, ಸುರೇಶ ಜುಂಜರವಾಡ, ಶಿರಹಟ್ಟಿಯ ಶಂಕರ ಕಡ್ಲಿಕೊಪ್ಪ, ಹುಬ್ಬಳ್ಳಿಯ ಮೋಹನ ನರಗುಂದ, ಭೀಮಸೇನ ಬಡಿಗೇರ, ಚಿದಾನಂದ ಕಮ್ಮಾರ, ಹಾವೇರಿಯ ರಾಜೇಂದ್ರ ರಿತ್ತಿ, ವೀರಣ್ಣ ಸೊಲ್ಲಾಪುರ, ಗೋಪಾಲ ಮಹಾಮುನಿ ಮೊದಲಾದವರು ವರದಿಗಾರರಾಗಿ ನಿರಂತರ ವಿಶ್ವಕರ್ಮ ಸಮಾಜದ ಪ್ರಾದೇಶಿಕ ಕಾರ್ಯಕ್ರಮಗಳ ವರದಿಗಳನ್ನು ಫೋಟೋ ಸಹಿತ ಕಳಿಸಿಕೊಟ್ಟಿರುವುದು ವಿಶೇಷ.

ವ್ಯಂಗ್ಯ ಚಿತ್ರಕಾರರು : ಯಾವುದೇ ಒಂದು ಪತ್ರಿಕೆಯು ಸರ್ವಜನಾದರಣೀಯವಾಗಬೇಕಾದರೆ ಅಲ್ಲಿ ಎಲ್ಲ ರೀತಿಯ ವೈವಿಧ್ಯತೆಗಳು ಬೇಕಾಗುತ್ತವೆ. ಅವುಗಳಲ್ಲಿ ವ್ಯಂಗ್ಯಚಿತ್ರಗಳೂ ಪತ್ರಿಕೆಯ ಆಂತರಿಕ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ವಿಶ್ವಕರ್ಮ ಸಮಾಜದ ಪತ್ರಿಕೆಗಳು ಮುಖ್ಯವಾಗಿ ಧಾರ್ಮಿಕ ಸಂದೇಶವನ್ನು ಪ್ರಚಾರ-ಪ್ರಸಾರ ಮಾಡುವ ಪತ್ರಿಕೆಗಳಾಗಿರುವುದರಿಂದ ಇಲ್ಲಿ ವ್ಯಂಗ್ಯ ಚಿತ್ರಗಳಿಗೆ ಹೆಚ್ಚು ಅವಕಾಶ ಸಿಕ್ಕಿಲ್ಲ. ಆದರೂ ಕೆಲವು ಪತ್ರಿಕೆಗಳಲ್ಲಿ ಸಾಂದರ್ಭಿಕವಾಗಿ ವ್ಯಂಗ್ಯ ಚಿತ್ರಗಳು ಪ್ರಕಟಗೊಂಡಿವೆ.

ವಿಶ್ವಕರ್ಮೋದಯ ಪತ್ರಿಕೆಯ ಫೆಬ್ರವರಿ ೨೦೦೪ರ ಸಂಚಿಕೆಯಲ್ಲಿ ಗಣೇಶ ಆಚಾರ್ಯ ಎಂಬುವರು ಒಂದು ಅನನ್ಯವಾದ ವ್ಯಂಗ್ಯಚಿತ್ರವನ್ನು ರಚಿಸಿದ್ದಾರೆ. ಅಲ್ಲಿ ಇಬ್ಬರು ವ್ಯಕ್ತಿಗಳ ಸಂಭಾಷಣೆ ಹೀಗೆ ನಡೆಯುತ್ತದೆ.

'ಹೊಸ ವರ್ಷದಲ್ಲಿ ಏನಾದರೂ ಬಿಡೋ ನಿರ್ಧಾರ ತಗೋತ್ತೇನೆ ಅಂದಿದ್ದೆಯಲ್ಲಾ... ಗುಟ್ಕಾ ಬಿಟ್ಯಾ...?'

'ಇಲ್ಲಯ್ಯಾ...ಈ ಥರಾ ಯಾವುದೇ ನಿರ್ಧಾರ ತಗೊಳ್ಳೋದನ್ನೇ ಬಿಟ್ಟೆ...!'[೧೨]

ಈ ಎರಡು ಮಾತುಗಳಲ್ಲಿ ಎಂಥ ಝಲಕ ಇದೆ ಎಂಬುದು ಓದುಗರಿಗೆ ಗೊತ್ತಾಗುತ್ತದೆ. ವ್ಯಂಗ್ಯಕಲ್ಪನೆಯು ವಿನೋದದ ಒಂದು ಪ್ರಭಾವಿ ಕಲ್ಪನೆಯಾಗಿರುತ್ತದೆ. ಮನುಷ್ಯನ ಬೌದ್ಧಿಕ ತಿಳುವಳಿಕೆಯಲ್ಲಿ ಕೊರತೆಯಿರುತ್ತದೆ, ವ್ಯಂಗ್ಯವಿರುತ್ತದೆ. ಅವನ ಮನೋಧಾರಣೆಯಲ್ಲೂ ಒಂದು ಬಗೆಯ ವ್ಯಂಗ್ಯವಿರುತ್ತದೆ. ಅವನ ನೈತಿಕ ಗ್ರಹಿಕೆಯಲ್ಲೂ ಕೊರತೆಯಿರುತ್ತದೆ. ಮನುಷ್ಯ ಸಮಾಜದಲ್ಲಿ ವ್ಯವಹರಿಸುವಾಗ ಅವನಲ್ಲಾಗುವ ವ್ಯಂಗ್ಯ ವ್ಯಕ್ತವಾಗುತ್ತದೆ. ಅವನ ದೇಹದಲ್ಲೂ ವಿಕಲತೆಯಿರುತ್ತದೆ. ಇಂಥ ಯಾವುದಾದರೂ ಪ್ರಕಾರದ ವ್ಯಂಗ್ಯದ ದರುಶನವಾದಾಗ, ಅಥವಾ ಅಂಥ ಚಿತ್ರಣ ಕಂಡಾಗ, ಹಾಸ್ಯದ ನಿರ್ಮಿತಿಯಾಗುತ್ತದೆ. ಇದೇ ಈ ಸಿದ್ಧಾಂತದ ಸಾಮಾನ್ಯ ಸ್ವರೂಪ. ಗ್ರೀಕ ದಾರ್ಶನಿಕರಾದ ಪ್ಲೇಟೋ-ಅರಿಸ್ಟಾಟಲ್‌ನಿಂದ ಇಂದಿನ ಆಸ್ಕರ್ ಮಂಡೆಲ್‌ನವರೆಗಿನ ವಿಚಾರವಂತರು ವಿವಿಧ ಮಾದರಿಯ ವ್ಯಂಗ್ಯ ಕಲ್ಪನೆಯ ಸಹಾಯದಿಂದ ವಿನೋದ ನಿರ್ಮಿತಿಯ ಬಗೆಗಿನ ಸಿದ್ಧಾಂತವನ್ನು ಮಂಡಿಸಿದ್ದಾರೆ. ನೈತಿಕ, ವಸ್ತುನಿಷ್ಠ, ಆತ್ಮನಿಷ್ಠ ಅಥವಾ ಜ್ಞಾತಸಾಪೇಕ್ಷ, ಹಾಗೆಯೇ

ಮಾನಸಶಾಸ್ತ್ರಿಯ ಮತ್ತು ಸಾಮಾಜಿಕ ಭೂಮಿಕೆಯ ಮೂಲಕ ವ್ಯಂಗ್ಯ ಕಲ್ಪನೆಯ ಆಧಾರದಿಂದ ವಿನೋದದ ಸಿದ್ಧಾಂತವನ್ನು ಮಂಡಿಸುತ್ತ ಬರಲಾಗಿದೆ.

ರೂವಾರಿ ಪತ್ರಿಕೆಯ ಅಕ್ಟೋಬರ್ ೨೦೦೪ರ ಸಂಚಿಕೆಯಲ್ಲಿ ಒಂದು ಅಪರೂಪದ ವ್ಯಂಗ್ಯ ಚಿತ್ರವನ್ನು ಪ್ರಕಾಶ ಮೂಲ್ಕಿ ಅವರು ರಚಿಸಿದ್ದಾರೆ. ಅದರಲ್ಲಿ ಇಬ್ಬರು ವ್ಯಕ್ತಿಗಳು ಸಂಧಿಸಿದಾಗ– ಒಬ್ಬ ವ್ಯಕ್ತಿ ಹೀಗೆ ಹೇಳುತ್ತಾನೆ– 'ನೀವು ಹೆಂಡತಿಯ ಮಾತು ಕೇಳುವುದರಲ್ಲಿ ಏನಿದೆ ವಿಶೇಷ!? ನಮ್ಮ ಪ್ರಧಾನಿ ಹೆಂಗಸಿನ ಮಾತು ಕೇಳಿಯೇ ಮುಂದಿನ ಹೆಜ್ಜೆ ಇಡೋದು ಅಂತೀನಿ!'[೧೩] ಎಂದು ಹೇಳುತ್ತಾನೆ. ಇದು ಆ ಸಂದರ್ಭದಲ್ಲಿ ನಮ್ಮ ದೇಶದ ಪ್ರಧಾನಿಯಾಗಿದ್ದವರು ಅವರ ಪಕ್ಷದ ಅಧ್ಯಕ್ಷರ ಮಾತು ಕೇಳುತ್ತಾರೆ ಎಂಬ ವದಂತಿ ಇತ್ತು. ಅದನ್ನು ವ್ಯಂಗ್ಯಚಿತ್ರಕಾರ ಬಳಸಿಕೊಂಡು ಅಪರೂಪದ ಚಿತ್ರವನ್ನು ಸಾಂದರ್ಭಿಕವಾಗಿ ಚಿತ್ರಿಸಿದ್ದಾರೆ.

ಮತ್ತೊಂದು ವ್ಯಂಗ್ಯಚಿತ್ರದಲ್ಲಿ ಹೊಟೇಲಿನಲ್ಲಿ ತಿಂಡಿತಿನ್ನುವ ವ್ಯಕ್ತಿಯೊಬ್ಬ ಹೊಟೇಲ್ ಮಾಲೀಕನನ್ನು ಕರೆದು ತಿಂಡಿಯಲ್ಲಿ ಕಸ ಬಿದ್ದಿದೆ ಎಂದು ತೋರಿಸುವ ದೃಶ್ಯವಿದೆ. ಅದಕ್ಕೆ ಪ್ರತಿಕ್ರಿಯೆಯಾಗಿ ಹೊಟೇಲ್ ಮಾಲೀಕ 'ನಿನ್ನೆ ನಮ್ಮ ಅಡುಗೆ ಭಟ್ಟ 'ಕಸದಿಂದ ರಸ' ಎಂಬ ಕೈಪಿಡಿ ಓದುತ್ತಿದ್ದ, ಅದರ ಪರಿಣಾಮವಿರಬೇಕು'[೧೪] ಎನ್ನುತ್ತಾನೆ. ಹೀಗೆ ಆ ಚಿತ್ರಗಳನ್ನು ನೋಡಿದಾಗ ತಟ್ಟನೆ ನಗು ಬರದೆ ಇರದು.

ಒಬ್ಬ ವ್ಯಂಗ್ಯ ಚಿತ್ರಕಾರನು ಅಭಿಪ್ರಾಯವೊಂದನ್ನು ಕಂಡುಕೊಳ್ಳಲು ಮತ್ತು ಅದನ್ನು ಚಿತ್ರ ಮೂಲಕ ಸಂಪೂರ್ಣ ನಿರೂಪಿಸಲು ಸಮರ್ಥನಾಗಿರಬೇಕು. ಅನೇಕ ವ್ಯಂಗ್ಯಚಿತ್ರಕಾರರು ದೈನಂದಿನ ಸುದ್ದಿಯನ್ನು ಚರ್ಚಿಸಲು ಸಂಪಾದಕರನ್ನು ಭೇಟಿಯಾಗುತ್ತಾರೆ. ಅವರ ಗುಂಪು ಯಾವ ಘಟನೆಯು ಸಂಪಾದಕೀಯ ವಿಮರ್ಶೆಗೆ ಯೋಗ್ಯವಾದುದೆಂಬುದನ್ನು ನಿರ್ಣಯಿಸುತ್ತದೆ. ಅನಂತರ ವ್ಯಂಗ್ಯ ಚಿತ್ರಕಾರನು ಹಲವಾರು ಅಭಿಪ್ರಾಯಗಳ ಕರಡು ಚಿತ್ರಗಳನ್ನು ರಚಿಸುತ್ತಾರೆ. ಸಂಪಾದಕರು ಆ ಅಪೂರ್ಣ ಚಿತ್ರಗಳಲ್ಲಿ ಒಂದನ್ನು ಆರಿಸಿಕೊಳ್ಳುತ್ತಾರೆ.

ಹಾಸ್ಯ ಚಿತ್ರಕಾರರು ಮತ್ತು ವ್ಯಂಗ್ಯಚಿತ್ರ ಶ್ರೇಣಿಯ ಕಲಾವಿದರು ತಮ್ಮದೇ ಆದ ಅಭಿಪ್ರಾಯವನ್ನು ಬೆಳೆಸಿಕೊಳ್ಳಬಹುದು ಅಥವಾ ಲೇಖಕರ ಅಭಿಪ್ರಾಯಗಳನ್ನು ಆಧರಿಸಿ ಕೆಲಸ ಮಾಡಬಹುದು. ಹಾಸ್ಯ ಚಿತ್ರಶ್ರೇಣಿಯ ಕಲಾವಿದ ಕಥೆಯನ್ನು ಒದಗಿಸುವ ಲೇಖಕರೊಂದಿಗೆ ಸೇರಿಸುತ್ತಾನೆ. ಬೇರೆಯವರು ಬರೆದ ಹಾಸ್ಯವನ್ನು ಬಳಸಿಕೊಳ್ಳುವ ವ್ಯಂಗ್ಯಚಿತ್ರ ಕಲಾವಿದರು ತಮ್ಮ ಸಂಭಾವನೆಯ ಕಾಲು ಭಾಗವನ್ನು ಲೇಖಕರಿಗೆ ಕೊಡುತ್ತಾರೆ. ಅನೇಕ ವ್ಯಂಗ್ಯ ಚಿತ್ರಕಾರರು ಕೇವಲ ಒಂದು ಪ್ರಕಾಶನಕ್ಕಾಗಿ ಕೆಲಸ ಮಾಡುವುದಿಲ್ಲ. ಅವರು ಹಲವು ಕರಡು ಚಿತ್ರಗಳನ್ನು ಒಂದೇ ಸಲ ಪತ್ರಿಕೆಯ ಸಂಪಾದಕರಿಗೆ ಕಳಿಸುತ್ತಾರೆ. ಅವುಗಳಲ್ಲಿ ಒಂದನ್ನು ಸಂಪಾದಕರು ಸ್ವೀಕರಿಸಬಹುದು ಅಥವಾ ಇನ್ನೂ ಉತ್ತಮವಾಗಿ ಚಿತ್ರಿಸಲು ಹೇಳಬಹುದು.

ಸಂಪಾದಕರಿಗೆ ಅಥವಾ ಲೇಖಕರಿಂದ ಒದಗಿಸಲ್ಪಟ್ಟ ಕೃತಿಗೆ ವಿವರಣಾತ್ಮಕ ವ್ಯಂಗ್ಯಚಿತ್ರಗಳನ್ನು ಕಲಾವಿದರು ಬರೆಯುತ್ತಾರೆ. ಮೂಲಪಾಠದ ಮುಖ್ಯಾಂಶವನ್ನು ಸಮರ್ಥಿಸುವಂತೆ ಅಥವಾ ವಿಷದಪಡಿಸುವಂತೆ ಚಿತ್ರಕಾರನು ವಿವರಣಾತ್ಮಕ ವ್ಯಂಗ್ಯಚಿತ್ರಗಳನ್ನು ರಚಿಸಬೇಕು. ತನ್ನ ಸ್ವಂತ ಶೈಲಿ ಮತ್ತು ಸಂಪಾದಕರ ಅವಶ್ಯಕತೆಗನುಸಾರವಾಗಿ ಒಬ್ಬ ವ್ಯಂಗ್ಯಚಿತ್ರಕಾರನು ೩೦ ನಿಮಿಷ ಅಥವಾ ಒಂದು ದಿನದ ಅವಧಿಯಲ್ಲಿ ಒಂದು ವ್ಯಂಗ್ಯಚಿತ್ರವನ್ನು ಬರೆದು ಮುಗಿಸಬಲ್ಲ. ಹೆಚ್ಚಿನ ವ್ಯಂಗ್ಯಚಿತ್ರಕಾರರು ಮೊದಲು ಪೆನ್ಸಿಲಿನಿಂದ ಬಾಹ್ಯರೇಖೆಯನ್ನು ರಚಿಸುತ್ತಾನೆ. ಅನಂತರ ಅದನ್ನು ಕುಂಚ ಅಥವಾ ಲೇಖನಿಯಿಂದ ಇಂಕಿನಲ್ಲಿ ತಿದ್ದುತ್ತಾನೆ. ಅವರು ವ್ಯಂಗ್ಯಚಿತ್ರದ ಕೆಲವು ಭಾಗಗಳನ್ನು ಮೇಲಿಂದ ಮೇಲೆ ಪುನಃ ಬರೆಯುತ್ತಾರೆ. ಬಳಿಕ ಅವುಗಳನ್ನು ಒಟ್ಟಿಗೆ ಸೇರಿಸುತ್ತಾರೆ. ಈ ಒಟ್ಟು ಸೇರಿದ ಭಾಗಗಳು ಮುದ್ರಿತ ಚಿತ್ರದಲ್ಲಿ ಕಂಡುಬರುವುದಿಲ್ಲ. ನೆರಳಿನ ಭಾಗಗಳು ಮತ್ತು ಕಪ್ಪು ಬಣ್ಣಗಳು ವ್ಯಂಗ್ಯಚಿತ್ರ ಎದ್ದು ಕಾಣುವಂತೆ ಮಾಡುತ್ತವೆ. ಸೂಕ್ಷ್ಮ ಸರಳ ರೇಖೆಗಳನ್ನು ಸಲೀಸಾಗಿ ಎಳೆದು ನೆರಳನ್ನು ತೋರಿಸುವುದು ಸಾಮಾನ್ಯ ವಿಧಾನ. ಮುದ್ರಿತ ಸಮಾನಾಂತರ ರೇಖೆಗಳಿರುವ ತೆಳು ಪ್ಲಾಸ್ಟಿಕ್ ಹಾಳೆಯನ್ನು ಅಂಟಿಸುವುದು ಇನ್ನೊಂದು ವಿಧ. ಅನೇಕ ಸಂಪಾದಕೀಯ ವ್ಯಂಗ್ಯ ಚಿತ್ರಕಾರರು ವಿಶಿಷ್ಟ ಕಾಗದದ ಮೇಲೆ ಕುಂಚದಿಂದ ಚಿತ್ರಿಸುತ್ತಾರೆ.

ಛಾಯಾ ಚಿತ್ರಗಾರರು : ವಿಶ್ವಕರ್ಮ ಸಮಾಜದ ಪತ್ರಿಕೆಗಳಲ್ಲಿ ವೈವಿಧ್ಯಮಯವಾದ ಮುಖಪುಟ ವಿನ್ಯಾಸಗಳು, ಕಾರ್ಯಕ್ರಮ ವರದಿಗಳ ಫೋಟೋಗಳು ಪ್ರಕಟವಾಗುತ್ತಿವೆ. ಒಂದೊಂದು ಪತ್ರಿಕೆಯು ಒಂದೊಂದು ವೈಶಿಷ್ಟ್ಯವನ್ನು ಹೊಂದಿವೆ. ಉದಾಹರಣೆಗೆ– ವಿಶ್ವಕರ್ಮೋದಯ ಪತ್ರಿಕೆಯು ಮುಖಪುಟದಲ್ಲಿ ವಿಶ್ವಕರ್ಮ ಮಹಾಪುರುಷರ ಚಿತ್ರಗಳನ್ನೇ ಪ್ರಕಟಿಸುತ್ತ ಬಂದಿದೆ. ಉಳಿದ ಕೆಲವು ಪತ್ರಿಕೆಗಳು ಸಂದರ್ಭಕ್ಕೆ ಅನುಗುಣವಾಗಿ ನಾಡಿನ ತುಂಬ ಜರುಗಿದ ವಿಶ್ವಕರ್ಮ ಸಮಾಜದ ವಿವಿಧ ಕಾರ್ಯಕ್ರಮಗಳ ಫೋಟೋಗಳನ್ನು ಮುಖಪುಟಕ್ಕೆ ಬಳಸುತ್ತಿವೆ. ಪುಸ್ತಕ ಬಿಡುಗಡೆ, ಜಾತ್ರಾ ಮಹೋತ್ಸವ, ಸಭೆ–ಸಮ್ಮೇಳನಗಳ ಚಿತ್ರಗಳು ಇಲ್ಲಿ ನೆಲೆ ಪಡೆಯುತ್ತವೆ.

ಈ ಫೋಟೋಗಳನ್ನು ತೆಗೆಯುವವರು ಯಾವಾಗಲೂ ತೆರೆಮರೆಯಲ್ಲಿಯೇ ಇರುತ್ತಾರೆ. ಹೀಗಾಗಿ ನನ್ನ ಕ್ಷೇತ್ರಕಾರ್ಯದ ಅಧ್ಯಯನದ ಸಂದರ್ಭದಲ್ಲಿ ಈ ವಿಷಯವಾಗಿ ಅನೇಕ ಸಂಪಾದಕರೊಂದಿಗೆ ನಾನು ಮಾತನಾಡಿದಾಗ, 'ಇತ್ತೀಚೆಗೆ ಡಿಜಿಟಲ್ ತಂತ್ರಜ್ಞಾನ' ತುಂಬ ಮುಂದುವರಿದ ಕಾರಣವಾಗಿ, ಯಾರಾದರೂ ಮೊಬೈಲ್‌ನಲ್ಲಿ ಫೋಟೋ ತೆಗೆದು ಕಳಿಸಿದರೂ ನಾವು ಪ್ರಕಟಿಸುತ್ತಿದ್ದೇವೆ. ಹೀಗಾಗಿ ವೃತ್ತಿಪರ ಛಾಯಾಗ್ರಾಹಕರ ಉಪಯೋಗ ಇಂದು ಕಡಿಮೆಯಾಗುತ್ತಿದೆ ಎಂದು ವಿವರಿಸಿದರು.

ಡಿಜಿಟಲ್ ಅನಿಮೇಶನ್ ಕ್ರಾಂತಿ ಕಾರಣವಾಗಿ ಕಳೆದ ಹದಿನೈದು ಇಪ್ಪತ್ತು ವರ್ಷಗಳ ಅವಧಿಯಲ್ಲಿ ಮಾಧ್ಯಮ ಕ್ಷೇತ್ರದಲ್ಲಿ ಅಪೂರ್ವ ಬದಲಾವಣೆಯೇ ಆಗಿದೆ. ವಿಶ್ವಕರ್ಮೋದಯ ಪತ್ರಿಕೆಯ ವಿನ್ಯಾಸವನ್ನು ಚಿತ್ರದುರ್ಗದ 'ಜೀವನ್ ಡಿಜಿಟಲ್ ಸ್ಟುಡಿಯೋ'ದವರು ಮಾಡಿಕೊಡುತ್ತಾರೆ.

ಸಂಪಾದಕ ಸಿ. ಆರ್. ಸುರೇಶ ಅವರನ್ನು ಈ ಬಗ್ಗೆ ಕೇಳಿದಾಗ, ಈ ಸ್ಟುಡಿಯೋದವರು ವಿಶ್ವಕರ್ಮ ಸಮಾಜದವರಲ್ಲ. ಆದರೂ ಅತ್ಯಂತ ಚೆನ್ನಾಗಿ ನಮ್ಮ ಕೆಲಸವನ್ನು ಮಾಡಿಕೊಡುತ್ತಾರೆ ಎಂದು ಹೇಳಿದರು.

ಆನೆಗೊಂದಿ ಮಹಾಸಂಸ್ಥಾನಪೀಠದ ಮುಖವಾಣಿಯಾಗಿ ಪ್ರಕಟವಾಗುತಿರುವ ಋಷಿಸ್ವರಂ ತ್ರೈಮಾಸಿಕ ಪತ್ರಿಕೆಗೆ ಪುಟ ವಿನ್ಯಾಸ ಮಾಡುತ್ತಿರುವವರು ಕೆ.ಆರ್.ಕೆ. ನಾಗಪ್ರಸಾದ ಆಚಾರ್ಯ ಆರಿಕ್ಕಾಡಿ. ಅವರು ಕುಂಬಳೆ ಗ್ರಾಮದಲ್ಲಿ ಜಯಕೃಷ್ಣ ಪ್ರಿಂಟಿಂಗ್ ಪ್ರೆಸ್ ನಡೆಸುತ್ತಿದ್ದಾರೆ. ಹಾಗೆಯೇ ಪ್ರವೃತ್ತಿಯಿಂದ ಛಾಯಾಗ್ರಾಹಕರಾಗಿ ಕಾರ್ಯ ಮಾಡುತ್ತಿದ್ದಾರೆ. ಆನೆಗೊಂದಿ ಜಗದ್ಗುರುಗಳ ಕಾರ್ಯಕ್ರಮಗಳ ಛಾಯಾಚಿತ್ರಗಳನ್ನು ತೆಗೆದು, ಅವುಗಳನ್ನು ವಿನ್ಯಾಸ ಮಾಡಿ ಋಷಿಸ್ವರಂ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದಾರೆ.

ರೂವಾರಿ ಪತ್ರಿಕೆ ಸಂಪಾದಕರು ಪ್ರತಿ ಸಂಚಿಕೆಗೂ ಒಬ್ಬ ಅಪರೂಪದ ಕಲಾವಿದರ ಫೋಟೋ ಪ್ರಕಟಿಸುತ್ತಾರೆ. ಆ ಚಿತ್ರವನ್ನು ತೆಗೆದವರ ಮತ್ತು ಚಿತ್ರವನ್ನು ಒದಗಿಸಿದವರ ಇಬ್ಬರ ಹೆಸರನ್ನೂ ಪ್ರಕಟಿಸುವ ಸೌಜನ್ಯವನ್ನು ಮೆರೆದಿದ್ದಾರೆ. ಉದಾ: ರೂವಾರಿ ಪತ್ರಿಕೆಯ ಜನವರಿ ೨೦೦೫ರ ಸಂಚಿಕೆ ಮುಖಪುಟದಲ್ಲಿ ಖ್ಯಾತ ಗಾಯಕಿ ಎಂ. ಎಸ್. ಸುಬ್ಬಲಕ್ಷ್ಮಿ ಅವರ ಫೋಟೋ ಪ್ರಕಟಿಸಿದ್ದಾರೆ. ಒಳಪುಟದಲ್ಲಿ ಈ ಚಿತ್ರವನ್ನು ತೆಗೆದವರು ಟಿ. ಎಸ್. ನಾಗರಾಜನ್ ಮತ್ತು ಚಿತ್ರ ಒದಗಿಸಿದವರು ಶ್ರೀ ಮಹಾಬಲೇಶ್ವರ ಭಟ್, ಒಡಿಯೂರು ಎಂದು ಮುದ್ರಿಸಿದ್ದಾರೆ.[೧೫] ಅದೇ ರೀತಿ ಜೂನ ೨೦೦೫ ಸಂಚಿಕೆಯಲ್ಲಿ ಕಲಾತ್ಮಕ ಚಿತ್ರ ಪ್ರಕಟವಾಗಿದೆ. ಅದನ್ನು ರಚನೆ ಮಾಡಿದವರು ಎಸ್. ಆರ್. ಸ್ವಾಮಿ.[೧೬] ಹೀಗೆ ಪ್ರತಿ ಸಂಚಿಕೆಗೂ ಒಬ್ಬ ಛಾಯಾಚಿತ್ರಗಾರನ, ಕಲಾವಿದನ ಹೆಸರನ್ನು ಪ್ರಕಟಿಸುತ್ತ ಬಂದಿರುವುದು ಕಲೆಗೆ ಅವರಿಗಿರುವ ಗೌರವದ ದ್ಯೋತಕತೆಯನ್ನು ತೋರಿಸುತ್ತದೆ.

ಹೀಗಾಗಿ ಛಾಯಾಗ್ರಾಹಕರು ಇಂದಿ ನೇಪಥ್ಯಕ್ಕೆ ಸರಿಯುವ ಪ್ರಸಂಗ ಬಂದಿದೆ. ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಇದೆಲ್ಲ ತುಂಬ ಕಷ್ಟವಾಗಿತ್ತು. ೧೯೮೦ರ ದಶಕದ ಹಿಂದಿನ ಸಂಚಿಕೆಗಳನ್ನು ನೋಡಿದಾಗ ಇದು ನಮ್ಮ ಗಮನಕ್ಕೆ ಬರುತ್ತದೆ. ಆಗ ಫೋಟೋಗಳನ್ನು ಪ್ರಕಟಿಸಿದರೂ ಆ ಫೋಟೋಗಳನ್ನು ತೆಗೆದವರ ಹೆಸರನ್ನು ಹಾಕದೆ ಇರುವುದು ಒಂದು ಕೊರತೆ ಎನಿಸುತ್ತದೆ.

ತಾಂತ್ರಿಕ ವಿಭಾಗ :ವಿಶ್ವಕರ್ಮ ಪತ್ರಿಕೆಗಳನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವ ಈ ಸಂದರ್ಭದಲ್ಲಿ ಆ ಪತ್ರಿಕೆಗಳ ತಾಂತ್ರಿಕ ವಿಭಾಗ ಕುರಿತು ಕೆಲವು ವಿಷಯಗಳನ್ನು ಕಲೆ ಹಾಕಿದೆ. ಅಂಥ ಕೆಲವು ವಿವರಗಳು ಹೀಗಿವೆ.

ಬಹುತೇಕ ಪತ್ರಿಕೆಗಳು ಸಂಪಾದಕರ ಮೇಲೆಯೇ ಜೀವ ಹಿಡಿದಿರುತ್ತವೆ. ಜೀವಣ್ಣ ಮಸಳಿ ಅವರ ಬದುಕನ್ನು ನೋಡಿದಾಗ, ಪತ್ರಿಕೆಗೆ ಸಂಪಾದಕರೂ ಅವರೇ. ಪ್ರೂಫ್ ತಿದ್ದುವವರು

ಅವರೇ, ಸಂಪಾದಕೀಯ ಬರೆಯುವುದು, ಪ್ರಸಂಗ ಬಂದರೆ, ಪ್ರೆಸ್ಸಿನ ಪೆಡಲ್ ತುಳಿಯುವುದು ಮೊದಲಾದ ಕೆಲಸಗಳನ್ನು ಒಬ್ಬರೇ ಮಾಡುವ ಪ್ರಸಂಗಗಳು ಆಧುನಿಕ ಸೌಲಭ್ಯಗಳು ಇಲ್ಲದ ಕಾಲದಲ್ಲಿ ಮೂರು ದಶಕಗಳ ಹಿಂದೆ ಹೆಚ್ಚಾಗಿದ್ದವು. ಆದರೆ ಇಂದು ಮಾಹಿತಿ ತಂತ್ರಜ್ಞಾನ ವಿಪರೀತ ಬೆಳೆದಿರುವುದರಿಂದ ಮೊಳೆ ಜೋಡಿಸುವ ಕೆಲಸದ ಬದಲಾಗಿ, ಕಂಪ್ಯೂಟರ್ ಡಿ.ಟಿ.ಪಿ. ಬಂದಿದೆ. ತುಳಿದು ಮುದ್ರಣ ಮಾಡುವ ಮಶೀನ ಬದಲಾಗಿ, ಏಕಕಾಲಕ್ಕೆ ನಾಲ್ಕುವರ್ಣದಲ್ಲಿ ಪ್ರಕಟವಾಗುವ ಬೆಲೆಯುಳ್ಳ ಮಶೀನುಗಳು ಬಂದಿವೆ.

ಆನೆಗೊಂದಿ ಸಂಸ್ಥಾನಮಠದಿಂದ ಪ್ರಕಟವಾಗುವ ಋಷಿಸ್ವರಂ ಪತ್ರಿಕೆಯ ಟೆಕ್ನಿಕಲ್ ಪುಟದಲ್ಲಿ ತಾಂತ್ರಿಕ ವಿಭಾಗದ ಸಂಪೂರ್ಣ ಮಾಹಿತಿ ಕೊಟ್ಟಿರುವುದು ನನ್ನ ಗಮನ ಸೆಳೆಯಿತು. ಪತ್ರಿಕೆಗೆ ಜಾಹೀರಾತು ವಿಭಾಗವನ್ನು ಉಡುಪಿಯ ಕಾಡಬೆಟ್ಟು ನಾಗರಾಜ ಆಚಾರ್ಯ ಅವರು ನಿರ್ವಹಿಸುತ್ತಿದ್ದಾರೆ. ಪ್ರಸರಣ ವಿಭಾಗವನ್ನು ಎಚ್. ರತ್ನಾಕರ ಆಚಾರ್ಯ ಉದ್ಯಾವರ ಮತ್ತು ಕರಂಬಳ್ಳಿ ಜಯಕರ ಆಚಾರ್ಯ ಅವರು ನೋಡಿಕೊಳ್ಳುತ್ತಿದ್ದಾರೆ.

ಮಾಲೀಕರಾಗಿ :ಈಗ ಪ್ರಕಟವಾಗುತ್ತಿರುವ ವಿಶ್ವಕರ್ಮ ಪತ್ರಿಕೆಗಳ ಸಂಪಾದಕರೇ ಬಹುತೇಕ ಪ್ರಕಾಶಕರಾಗಿ, ಮಾಲೀಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕೆಲವು ಸಂದರ್ಭಗಳಲ್ಲಿ ಸಂಪಾದಕರು ಬೇರೆ ಆಗಿ, ಮಾಲೀಕರು ಬೇರೆಯಾಗಿದ್ದಾರೆ. ಅಂತಹ ಕೆಲವು ಉದಾಹರಣೆಗಳನ್ನು ಗಮನಿಸಿ–

೧. ಸಹಚಿಂತನ ಪತ್ರಿಕೆ ಮಂಗಳೂರಿನಿಂದ ೧೯೮೭ರಿಂದ ಪ್ರಕಟವಾಗುತ್ತಿದೆ. ಎಸ್. ವಿ. ಆಚಾರ್ ಅವರು ಇದರ ಮಾಲೀಕರಾಗಿ ಸೇವೆ ಮಾಡಿದ್ದಾರೆ. ಸಂಪಾದಕರು ಮಾತ್ರ ಕಾಲಕಾಲಕ್ಕೆ ಬೇರೆಯಾಗಿದ್ದಾರೆ. ಪ್ರಾರಂಭದಲ್ಲಿ ಗೌರವ ಸಂಪಾದಕರಾಗಿ ಬೈಕಾಡಿ ಜರ್ನಾರ್ದನ ಆಚಾರ್ ಅವರು ಕಾರ್ಯನಿರ್ವಹಿಸಿದರೆ, ಇಂದು ಬಿ. ಎ. ಆಚಾರ್ಯ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ಮಂಗಳೂರು ವಿಶ್ವಕರ್ಮ ಸಮಾಜದ ಮುಖಂಡರಲ್ಲಿ ಒಬ್ಬರಾದ ಎಸ್. ವಿ. ಆಚಾರ್ ಅವರು ತಮ್ಮ ಸ್ವಂತ ಹಣವನ್ನು ವ್ಯಯಿಸಿ ಪತ್ರಿಕೆಯನ್ನು ಪ್ರಕಟಿಸುತ್ತ ಬಂದಿದ್ದಾರೆ. ಒಮ್ಮೊಮ್ಮೆ ಆರ್ಥಿಕವಾಗಿ ಹಿನ್ನಡೆ ಅನುಭವಿಸಿದರೂ ಒಮ್ಮೆಯೂ ಪತ್ರಿಕೆ ನಿಲ್ಲದಂತೆ ಮುದ್ರಿಸುತ್ತ ಬಂದಿರುವುದು ಅವರ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

೨. ವಿಧಾತೃ ಪತ್ರಿಕೆಗೆ ಜಿ. ಜ್ಞಾನಾನಂದ ಗೌರವ ಸಂಪಾದಕರು, ಸಂಪಾದಕರು ಎನ್.ಸಿ. ಛಾಯಾಪತಿ ಅವರೇ ಇದರ ಮಾಲೀಕರಾಗಿ ಮುನ್ನಡೆಸುತ್ತಿದ್ದಾರೆ.

೩. ಕಾಳಿಕಾದೇವಿ ವಾಣಿ ಪತ್ರಿಕೆಯನ್ನು ಸಂಪಾದಕ ಡಿ.ಆರ್. ಬಡಿಗೇರ ಅವರೇ ಮಾಲೀಕರಾಗಿ ಮುನ್ನಡೆಸುತ್ತಿದ್ದಾರೆ.

೪. ಋಷಿಸ್ವರಂ ಪತ್ರಿಕೆಯನ್ನು ಆನೆಗೊಂದಿ ಪೀಠದವರು ಮಾಲೀಕರಾಗಿ ಪ್ರಕಟಿಸುತ್ತಿದ್ದಾರೆ. ಇಲ್ಲಿ ಸಂಪಾದಕರಿಗೆ ಶುದ್ಧ ಲೇಖನಗಳ ಆಯ್ಕೆ ಕುರಿತು ಮಾತ್ರ ಕಾರ್ಯ. ಉಳಿದೆಲ್ಲ ಆರ್ಥಿಕ ಚುವಟಿಕೆಯ ಕಾರ್ಯಗಳನ್ನು ಶ್ರೀಮಠ ನೋಡಿಕೊಳ್ಳುತ್ತದೆ.

೫. ನಾನು ಗಮನಿಸಿದಂತೆ, ಉಳಿದೆಲ್ಲ ಪತ್ರಿಕೆಗಳ ಸಂಪಾದಕರೇ ಮಾಲೀಕರಾಗಿ ಪತ್ರಿಕೆಯನ್ನು ಮುನ್ನಡೆಸಿದ್ದಾರೆ. 'ಕಾಳಿಕಾ ಸಂದೇಶ' ಎಂಬ ಪತ್ರಿಕೆ ಶಿರಸಂಗಿಯಿಂದ ಪ್ರಕಟವಾಗುತ್ತಿದೆ. ಅದಕ್ಕಾಗಿ 'ವಿಶ್ವಶಕ್ತಿ ಪ್ರಕಾಶನ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಪ್ರಕಟಿಸುತ್ತಿದ್ದಾರೆ. ಅದೇ ರೀತಿ 'ವಿಶ್ವಕರ್ಮ ಸಂದೇಶ' ಪತ್ರಿಕೆ ಕೂಡ ವಿಶ್ವಕರ್ಮ ಸಮಾಜ ವಿಕಾಸ ಸಂಸ್ಥೆಯಿಂದ ಪ್ರಕಟವಾಗುತ್ತಿದೆ. ಹೀಗೆ ವೈಯಕ್ತಿಕ ನೆಲೆಯಲ್ಲಿ ಹೆಚ್ಚು ಪತ್ರಿಕೆಗಳು ಪ್ರಕಟವಾದರೆ, ಕ್ವಚಿತ್ತಾಗಿ ಸಂಘ ಸಂಸ್ಥೆಗಳ ಮೂಲಕ ಅಥವಾ ಸಂಪಾದಕರು ಬೇರೆ, ಮಾಲೀಕರು ಬೇರೆಯಾಗಿ ಪ್ರಕಟಗೊಂಡಿವೆ.

**೬.೨. ವಿಶ್ವಕರ್ಮೇತರರು :**

ವಿಶ್ವಕರ್ಮ ಸಮಾಜದವರು ನಿಜವಾದ ಅರ್ಥದಲ್ಲಿ ವಿಶ್ವಕುಟುಂಬಿಗಳು. ತಮ್ಮ ಸಮಾಜದ ಪತ್ರಿಕೆಯ ಬೆಳವಣಿಗೆಗೆ ಇತರ ಸಮುದಾಯದವರ ಸಹಕಾರವನ್ನು ಬಯಸಿದವರು. ಆಯಾಯಾ ಕಾಲ ಘಟ್ಟದ ಯುವ ಲೇಖಕರಿಗೆ, ಬರಹಗಾರರಿಗೆ ಅವಕಾಶಗಳನ್ನು ಕೊಟ್ಟವರು. ವಿಮರ್ಶಾತ್ಮಕ ಲೇಖನಗಳನ್ನು ಬರೆಯಲು ಪ್ರೋತ್ಸಾಹ ಕೊಟ್ಟವರು. ಕನ್ನಡ ವಿಶ್ವಕರ್ಮ ಪತ್ರಿಕೆಗಳಿಗೆ ವಿಶ್ವಕರ್ಮೇತರ ಸಮುದಾಯದವರು ನೀಡಿದ ಕೊಡುಗೆಯನ್ನು ಗುರುತಿಸುವುದು ಪ್ರಸ್ತುತವಾಗಿದೆ.

ಅಂಕಣಕಾರರು :ನಿಯಮಿತವಾಗಿ ಒಂದು ಕಾಲಂ ಬರೆಯುವುದಕ್ಕೆ ಅಂಕಣ ಸಾಹಿತ್ಯವೆಂದು ಕರೆಯುತ್ತಾರೆ. ಕನ್ನಡದ ಬಹುತೇಕ ಪತ್ರಿಕೆಗಳು ಅಂಕಣ ಬರಹಗಳನ್ನು ಪ್ರಕಟಿಸುತ್ತವೆ. ಕನ್ನಡದಲ್ಲಿ ಹಾ.ಮಾ. ನಾಯಕರು ಬರೆದ ಅಂಕಣ ಸಾಹಿತ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿರುವುದನ್ನು ಇಲ್ಲಿ ಗಮನಿಸಬೇಕು. ಪ್ರಜಾವಾಣಿಯಲ್ಲಿ ಪ್ರತಿ ರವಿವಾರ ಬರೆಯುತ್ತಿದ್ದ ಅವರ ಸಂಪ್ರತಿ ಅಂಕಣಕ್ಕೆ ರಾಷ್ಟ್ರಮಟ್ಟದ ಗೌರವ ದೊರೆತಿರುವುದು ಕನ್ನಡಿಗರು ಅಭಿಮಾನ ಪಡುವ ಸಂಗತಿಯಾಗಿದೆ. ನಿರಂಜನ, ಕು.ಶಿ. ಹರಿದಾಸಭಟ್ಟ, ಎಚ್ಎಸ್ಕೆ ಮೊದಲಾದವರು ಸಾಹಿತ್ಯಿಕ ಅಂಕಣಗಳಿಂದ ಜನಪ್ರಿಯರಾದವರು.

ಅಂಕಣ ಬರಹಗಳು ಪ್ರಾರಂಭವಾದದ್ದೇ ೧೯೮೦ರ ದಶಕದಲ್ಲಿ. ಅದಕ್ಕೂ ಮುಂಚೆ ಕನ್ನಡ ಪತ್ರಿಕೆಗಳು ಸಂಪಾದಕೀಯ ಪುಟಗಳಲ್ಲೂ ಕೂಡ ಅಖಿಲ ಭಾರತ ಮಟ್ಟದಲ್ಲಿ ಪ್ರಸಿದ್ಧರಾದ ಪತ್ರಕರ್ತರ, ಇಲ್ಲ ವಿಷಯ ಪರಿಣತರ ಇಂಗ್ಲಿಷ್ ಬರಹಗಳ ಅನುವಾದಗಳನ್ನೇ ಪ್ರಕಟಿಸುತ್ತಿದ್ದರು. ೧೯೮೦ರ ನಂತರ ಕನ್ನಡ ಪತ್ರಿಕೋದ್ಯಮದ ಸ್ವರೂಪ ಬದಲಾಯಿತು. ಇದಕ್ಕೆ ಒಂದು ಕಾರಣ ತುರ್ತು ಪರಿಸ್ಥಿತಿ. ೧೯೭೭ರ ಚುನಾವಣೆಯ ನಂತರ ಮಧ್ಯಮ ವರ್ಗಕ್ಕೆ ರಾಜಕೀಯದ ಬಗ್ಗೆ ಆಸಕ್ತಿ ಹೆಚ್ಚಾಗಿ ಕೂಡ ಪತ್ರಿಕೋದ್ಯಮದ ಸ್ವರೂಪದ ಬದಲಾವಣೆಗೆ ಕಾರಣವಾಯಿತು. ೯೦ರ ದಶಕದಲ್ಲಿ ಅಂಕಣ ಪ್ರಕಾರ ಸಾಹಿತ್ಯ ಬರಹವಲ್ಲ ಎಂಬ ಕೂಗು ಸಾಹಿತಿಗಳಿಂದಲೇ ಎದ್ದಿತು. ಅದು ವೈಯಕ್ತಿಕ ನೆಲೆಯಲ್ಲಿ ಮೂಡಿ ಮುಂದೆ ಕಣ್ಮರೆಯಾಯಿತು. ಇಂದು ಅಂಕಣ ಬರಹಗಳು ಪತ್ರಿಕೆಗಳಲ್ಲಿ ಮಾತ್ರ ಪ್ರಕಟವಾಗದೇ, ಬ್ಲಾಗ್‌ಗಳಲ್ಲಿ, ಫೇಸ್‌ಬುಕ್‌ಗಳಲ್ಲಿ ಕೂಡ ಪ್ರಕಟವಾಗುತ್ತಿವೆ.

ಈ ಹಿನ್ನೆಲೆಯಲ್ಲಿ ವಿಶ್ವಕರ್ಮ ಸಮಾಜದ ಪತ್ರಿಕೆಗಳು ಈ ಅಂಕಣ ಬರಹಗಳನ್ನು ಪ್ರಕಟಿಸುತ್ತ ಬಂದಿವೆ. ಪ್ರತಿ ಸಂಚಿಕೆಯಲ್ಲಿಯೂ ಒಬ್ಬ ಬರಹಗಾರರ ನಿಯಮಿತವಾದ ಅಂಕಣ ಬರಹಗಳನ್ನು ನಾವು ನೋಡುತ್ತೇವೆ. ವಿಶ್ವಕರ್ಮ ಸಮಾಜದ ಬರಹಗಾರರು ಈ ಅಂಕಣ ಬರವಣಿಗೆಯನ್ನು ನಿರಂತರವಾಗಿ ಮುಂದುವರಿಸಿದ್ದಾರೆ, ಇಲ್ಲಿ ವಿಶ್ವಕರ್ಮೇತರರ ವಿಷಯವಾಗಿ ನಾನು ಗಮನಿಸಿದಂತೆ, ಸಾಹಿತಿಗಳು–ವಿದ್ವಾಂಸರು ಯಾರು ಅಂಕಣ ಬರಹಗಳನ್ನು ನಿಯಮಿತವಾಗಿ ಬರೆದಂತೆ ಕಾಣಲಿಲ್ಲ. ಆದರೆ ಧಾರ್ಮಿಕ ಮುಖಂಡರ ಭಾಷಣ–ಪ್ರವಚನ–ಆಶೀರ್ವಚನಗಳನ್ನು ಪ್ರತಿ ಸಂಚಿಕೆಯಲ್ಲಿಯೂ ಪ್ರಕಟಿಸುತ್ತ ಜನಸಾಮಾನ್ಯ ಓದುಗರಿಗೆ ನೀಡಿದ್ದು ವಿಶೇಷವಾಗಿ ನನ್ನ ಗಮನ ಸೆಳೆಯಿತು. ವಿಶ್ವಕರ್ಮ ಸಮಾಜದ ಧರ್ಮಗುರುಗಳನ್ನು ಹೊರತುಪಡಿಸಿ, ಮಾನವತೆಯ ಏಕತೆಗಾಗಿ ಶ್ರಮಿಸುತ್ತಿರುವ ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು, ರವಿಶಂಕರ ಗುರೂಜಿ, ತರುಣ ಸಾಗರ ಮುನಿ, ಬ್ರಹ್ಮಕುಮಾರಿ ಆಶ್ರಮದ ಸಹೋದರಿಯರು ಬರೆದ ಚಿಂತನಗಳನ್ನು ನಿಯಮಿತವಾಗಿ ಪ್ರಕಟಿಸುತ್ತ ಬಂದಿರುವುದರಿಂದ ಅವು ಒಂದು ರೀತಿಯಲ್ಲಿ ಅಂಕಣ ಬರಹಗಳೆಂದು ಪರಿಗಣಿಸಲಾಗುತ್ತಿದೆ. ಧಾರ್ಮಿಕ ಗುರುಗಳಲ್ಲದೆ ರಂಗನಾಥ ದಿವಾಕರ ಅವರು ಬರೆದ 'ಉಪನಿಷತ್ ಕಥೆಗಳು' ಎಂಬ ಅಂಕಣ ಮಾಲೆ ವಿಶ್ವಬ್ರಾಹ್ಮಣ ಪತ್ರಿಕೆಯ ಹತ್ತಾರು ಸಂಚಿಕೆಗಳಲ್ಲಿ ಪ್ರಕಟವಾಗಿದೆ.[೧೭] ಉಪನಿಷತ್ತುಗಳಲ್ಲಿ ಬರುವ ನಚಿಕೇತ, ಅರುಣಿ, ಜಾಬಾಲಿ, ಯಾಜ್ಞ್ಯವಲ್ಕ್ಯ, ಮೈತ್ರೇಯ ಮೊದಲಾದವರ ಕುರಿತು ಕಥಾ ರೂಪದಲ್ಲಿ ರಂಗನಾಥ ದಿವಾಕರ ಅವರು ಪರಿಚಯಿಸುತ್ತ ಹೋಗುತ್ತಾರೆ.

ವಿಶ್ವಕರ್ಮ ಸಂದೇಶ ಪತ್ರಿಕೆಯಲ್ಲಿ ಶ್ರೀ ಸಿದ್ಧೇಶ್ವರ ಸ್ವಾಮಿಗಳವರ ಚಿಂತನೆಗಳು ನಿರಂತರವಾಗಿ ಪ್ರಕಟವಾಗುತ್ತ ಬಂದಿವೆ. ಇಂದಿಗೂ ಒಂದು ಕಾಲಂ ಅವರಿಗಾಗಿ ಮೀಸಲಾಗಿರುವುದು ಗಮನಾರ್ಹವಾದ ಅಂಶವಾಗಿದೆ. ೨೦೦೭ರ ಫೆಬ್ರುವರಿ ಸಂಚಿಕೆಯಿಂದ ಪ್ರಾರಂಭವಾದ ಈ ಅಂಕಣ ಯಾತ್ರೆ ಇಂದಿಗೂ ಪ್ರಕಟವಾಗುತ್ತಿದೆ.[೧೮]

ಸಿದ್ಧೇಶ್ವರ ಸ್ವಾಮಿಗಳ ಈ ಅಂಕಣ ಮಾಲೆ ತುಂಬ ಜನಪ್ರಿಯವಾಗಿದೆ. ಅನೇಕ ಓದುಗರು ಅದನ್ನು ಪ್ರಶಂಸಿಸಿ ಸಂಪಾದಕರಿಗೆ ಪತ್ರ ಬರೆದಿರುವುದು ಇದಕ್ಕೆ ನಿದರ್ಶನ. ಸಿದ್ಧೇಶ್ವರ ಸ್ವಾಮಿಗಳು ಎಲ್ಲ ಧರ್ಮದ ಎಲ್ಲೆಗಳನ್ನು ಮೀರಿದ ವಿಶ್ವಮಾನವತೆಯ ಸಂದೇಶವನ್ನು ಸಾರುತ್ತಿರುವುದರಿಂದ ಅವರ ಚಿಂತನೆಗಳಿಗೆ ಹೆಚ್ಚು ಬೆಲೆ ಇದೆ ಎಂಬುದು ನನ್ನ ಅಭಿಪ್ರಾಯ. 'ಗುರು–ಶಿಷ್ಯರು' ಎಂಬ ಅಂಕಣದಲ್ಲಿ ಶ್ರೀಗಳು ಒಂದು ವಿಶ್ಲೇಷಿಸುತ್ತ ಒಂದು ಕಥೆಯನ್ನು ಎಷ್ಟು ಸಂಕ್ಷಿಪ್ತವಾಗಿ ನಿರೂಪಿಸುತ್ತಾರೆ ಎಂಬುದನ್ನು ಇಲ್ಲಿ ನೋಡಿ–

"ಜ್ಞಾನಾರ್ಜನೆಗಾಗಿ ಪೂರ್ವಕಾಲದಲ್ಲಿ ವಿದ್ಯಾರ್ಥಿಗಳು ಗುರುಗಳ ಆಶ್ರಮದಲ್ಲಿ ಕಟ್ಟಿಗೆ ಕಡಿಯುವ, ದನಕಾಯುವ, ಬೆಳೆಬೆಳೆಯುವ ಏನೆಲ್ಲ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡುತ್ತಿದ್ದರು. ಗುರುಗಳ ಆಜ್ಞೆಯನ್ನು ಶಿರಸಾಪಾಲಿಸಿ ಗುರುಗಳ ಕೃಪೆಗೆ ಪಾತ್ರರಾಗುತ್ತಿದ್ದರು. ಆರುಣಿ ಎಂಬ ಶಿಷ್ಯನು ಗುರುಕುಲದಲ್ಲಿ ಗುರುಗಳ ಸೇವೆ ಮಾಡಿಕೊಂಡು ವಿದ್ಯಾರ್ಜನೆ ಮಾಡುತ್ತಿದ್ದ. ಒಂದು

ದಿನ ವಿಪರೀತ ಮಳೆ ಸುರಿಯುತ್ತಿತ್ತು. ಆಶ್ರಮದ ಹಿಂದೆ ಇದ್ದ ಒಡ್ಡು ಒಡೆದು ಆಶ್ರಮದಲ್ಲಿ ನೀರು ನುಗ್ಗುತ್ತಿತ್ತು. ರಾತ್ರಿ ಇಡೀ ಆರುಣಿಯು ಒಡ್ಡಿಗೆ ಅಡ್ಡಮಲಗಿ ಆಶ್ರಮವನ್ನು ರಕ್ಷಿಸಿ ಗುರುಗಳ ಕೃಪೆಗೆ ಪಾತ್ರನಾದ. ಪರಮಪವಿತ್ರ ವಾದ ಇಂಥ ಆಧ್ಯಾತ್ಮಿಕ ಸಂಬಂಧವುಳ್ಳವರೇ ಗುರು–ಶಿಷ್ಯರು."[೧೯]

ಕೇವಲ ಒಂದು ಪ್ಯಾರಾದಲ್ಲಿ ಒಂದು ಕಥೆಯನ್ನು ನಿರೂಪಿಸುವ ಶ್ರೀಗಳ ಸಾಮರ್ಥ್ಯ ಮೆಚ್ಚುವಂತಹದು. ಮನುಷ್ಯನ ಬದುಕು ಒಂದು ಯೋಗಜೀವನ. ಇಂಥ ಯೋಗಜೀವನದಿಂದ ಬದುಕು ಸಾರ್ಥಕವಾಗುತ್ತದೆ. ಆದ್ದರಿಂದ ನಮ್ಮ ಪ್ರಾಚೀನ ಋಷಿಗಳು ನಮಗೆ ಕೊಟ್ಟ ಬದುಕಿನ ಮೌಲ್ಯಗಳ ಚಿತ್ರಣವನ್ನು ಶ್ರೀಗಳು ಹೀಗೆ ವಿವರಿಸುತ್ತಾರೆ:

"ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ, ಧ್ಯಾನಯೋಗ ಎಂದು ಪ್ರಧಾನವಾಗಿ ನಾಲ್ಕು ಯೋಗಗಳು. ನಮಗೂ ಇತರರಿಗೂ ಎಲ್ಲರಿಗೂ ಉಪಯುಕ್ತವಾಗಿರುವ ಒಳ್ಳೆಯ ಕಾರ್ಯಗಳನ್ನು ಮಾಡುವುದು ಕರ್ಮಯೋಗ! ಈ ಸೃಷ್ಟಿಯು ಸೃಷ್ಟಿಕರ್ತನ ಪ್ರತಿರೂಪವೆಂದು ಪ್ರೀತಿ, ಗೌರವ ಆದರಗಳಿಂದ ಕಾಣುವುದು ಭಕ್ತಿಯೋಗ. ಸೃಷ್ಟಿ ಹಾಗೂ ಸೃಷ್ಟಿಕರ್ತನನ್ನು ಗುರುಮುಖೇನ ಅರಿಯುವುದೇ ಜ್ಞಾನಯೋಗ. ಮನಸ್ಸಿನ ಚಂಚಲತೆಯನ್ನು ಕಳೆದುಕೊಂಡು ನಿರಂತರ ಸತ್ಯದ ಸ್ಮರಣೆಯಲ್ಲಿ ಮುಳುಗಿರುವುದೇ ಧ್ಯಾನಯೋಗ! ಈ ಎಲ್ಲ ಯೋಗಗಳ ಸಾಧನೆಗಾಗಿ ಋಷಿಗಳು ನಮಗೆ ನಾಲ್ಕು ಆಶ್ರಮಗಳನ್ನು ಹೇಳಿದರು. ಪ್ರಾರಂಭದ ೨೫ ವರ್ಷ ಬ್ರಹ್ಮಚಾರಿಯಾಗಿ ವಿದ್ಯಾರ್ಜನೆ ಮಾಡುವುದು. ಆ ಬಳಿಕ ೨೫ ವರ್ಷ ಗೃಹಸ್ಥಾಶ್ರಮದಲ್ಲಿದ್ದು ದ್ರವ್ಯಾರ್ಜನೆ ಮಾಡಿ ಕುಟುಂಬದ ಪಾಲನೆ ಪೋಷಣೆ ಮಾಡುವುದು. ನಂತರ ೨೫ ವರ್ಷ ವಾನಪ್ರಸ್ಥಾಶ್ರಮಿಯಾಗಿ ಅರಣ್ಯದಲ್ಲಿದ್ದು ಆತ್ಮಚಿಂತನೆಗೆ ತೊಡಗುವುದು. ಐವತ್ತು ಅರವತ್ತು ವರ್ಷದ ನಂತರ ಪ್ರಪಂಚದ ಕಷ್ಟನಷ್ಟದ ಕುಲುಮೆಯಲ್ಲಿ ಬೆಂದುನೊಂದು ಮನುಷ್ಯನು ಪರಿಪಕ್ವನಾಗಿರುತ್ತಾನೆ. ತಾರುಣ್ಯದ ಆಢ್ಯತೆ, ಅಹಂಕಾರ ಆವೇಶವೆಲ್ಲ ಮರೆಯಾಗಿ ನಯ ವಿನಯ, ನಿರಹಂಕಾರ, ಸಾತ್ವಿಕತೆ ಮೈಗೂಡಿರುತ್ತದೆ. ಆಗ ಗೃಹಸ್ಥಾಶ್ರಮಿಯು ಪ್ರಪಂಚದ ವ್ಯವಹಾರವನ್ನೆಲ್ಲ ಮಕ್ಕಳಿಗೆ ವಹಿಸಿ ತನ್ನ ಧರ್ಮಪತ್ನಿಯೊಂದಿಗೆ ಆಶ್ರಮವಾಸಿಯಾಗಿ ತನ್ನ ೬೦ ವರುಷದ ಅನುಭವವನ್ನೆಲ್ಲ ಹತ್ತು ವರುಷದ ಬಾಲಕರಿಗೆ ನೀಡಬೇಕು. ಇದರಿಂದ ಸಣ್ಣವರೆಲ್ಲರೂ ದೊಡ್ಡವರಿಗಿಂತ ದೊಡ್ಡವರಾಗಿ ಪ್ರತಿ ತಲೆಮಾರು ಹಿಂದಿನ ತಲೆಮಾರಿಗಿಂತ ಅಧಿಕಾಧಿಕವಾಗಿ ಜ್ಞಾನಕ್ಷೇತ್ರದಲ್ಲಿ ಬೆಳೆದು ಮನುಕುಲವೇ ಭವ್ಯ–ದಿವ್ಯವಾಗುವ ಯೋಜನೆ ನಮ್ಮ ಋಷಿಮುನಿಗಳು ಹಾಕಿದರು. ಶಿಕ್ಷಣಕ್ಕೆ ಅವರು ಹೆಚ್ಚು ಮಹತ್ವ ಕೊಟ್ಟರು".[೨೦]

ಸಿದ್ಧೇಶ್ವರ ಶ್ರೀಗಳ ಅಂಕಣ ಬರಹಗಳ ತಲೆಬರೆಹಗಳು ತುಂಬ ಆಕರ್ಷಕ. 'ಸಾಂಖ್ಯಯೋಗ, ಭೂಮಾಧ್ಯಾನ, ದಹರವಿದ್ಯೆ, ಪ್ರಾಣಧ್ಯಾನ, ಸಂವರ್ಗಧ್ಯಾನ, ಪುರುಷವಿದ್ಯೆ, ತಾರಕಯೋಗ, ಹಂಸಧ್ಯಾನ, ಪ್ರಾಣಾಯಾಮ, ಸೋಹಂಧ್ಯಾನ, ಅಮನಸ್ಕಯೋಗ, ತ್ಯಾಗಜೀವನ, ಮಾಯಾಮೃಗ,

ಏಕಸತ್ಯದ ಅನೇಕ ಮುಖಗಳು, ಭುವಿಯೇ ನಿಜವಾದ ಸ್ವರ್ಗ, ಅವಿನಾಶಿ ಆತ್ಮ, ಪಕ್ಕವಿಲ್ಲದ ಹಕ್ಕಿ, ನಿರ್ಲಿಪ್ತತೆ, ಆತ್ಮಬಲ, ಆತ್ಮವಸ್ತು, ಜೀವನಯಾತ್ರೆ, ರಾಗ–ದ್ವೇಷ, ಪುರುಷಾರ್ಥ ಚತುಷ್ಟಯ, ತ್ಯಾಗ–ಭೋಗ, ಸಂಸ್ಕೃತಿ–ನಾಗರಿಕತೆ, ಪ್ರವೃತ್ತಿ–ನಿವೃತ್ತಿ, ಗುರುಪಥ–ಶಿವಪಥ, ದೃಷ್ಟಿ–ಸೃಷ್ಟಿ, ವಿದ್ಯೆ–ಅವಿದ್ಯೆ, ನೇಮ–ನಿತ್ಯ, ಅನುಭವ–ಅನುಭಾವ, ನಯ–ವಿನಯ, ಶಮೆ–ದಮೆ, ನರಜನ್ಮ–ಹರಜನ್ಮ, ಭಕ್ತಿ–ಮುಕ್ತಿ, ಆಶೆ–ಆಮಿಷ, ಕಾಯಕ– ದಾಸೋಹ, ಆಹಾರ–ವಿಹಾರ, ಸುಖ–ದುಃಖ, ಸ್ತುತಿ–ನಿಂದೆ, ರಾಗ–ದ್ವೇಷ, ಸಗುಣ–ನಿರ್ಗುಣ, ಸದ್ಗುಣ–ದುರ್ಗುಣ, ನಡೆ–ನುಡಿ, ಸತಿ–ಪತಿ, ಜ್ಞಾನ–ಕ್ರಿಯೆ, ಬ್ರಹ್ಮಜ್ಞಾನಿ–ಮಿಥ್ಯಾಜ್ಞಾನಿ, ಕರ್ತವ್ಯಪ್ರಜ್ಞೆಯೆ ಧರ್ಮ, ಹರಕೆ–ಹಾರೈಕೆ ಇವೇ ಮೊದಲಾದ ಹೆಸರುಗಳಿಂದ ಅವರ ಚಿಂತನೆಗಳು ವಿಶ್ವಕರ್ಮ ಸಂದೇಶ ಪತ್ರಿಕೆಯಲ್ಲಿ ನಿರಂತರವಾಗಿ ಪ್ರಕಟಗೊಳ್ಳುತ್ತ ಬಂದಿರುವುದು ಅವುಗಳ ಜನಪ್ರಿಯತೆಗೆ ಸಾಕ್ಷಿಯಾಗಿದೆ. ತಮ್ಮ ಪ್ರವಚನಗಳ ಮೂಲಕ ಭೌತಿಕ ಸುಖವನ್ನು ಅರಸಿ ಆಧ್ಯಾತ್ಮಿಕ ಸುಖವನ್ನು ಮರೆತಿದ್ದ ಜನಾಂಗಕ್ಕೆ ದಾರಿ ತೋರಿಸಲು ದಾರ್ಶನಿಕ ಚಿಂತನೆಗಳನ್ನು ಶ್ರೀಗಳು ಸರಳವಾಗಿ ತಿಳಿಸಿದರು. ಅವರ ಪ್ರವಚನಗಳಿಗೆ ನೂರು ಮುಖಗಳು. ಸಾಂಖ್ಯಯೋಗ ವೇದಾಂತ ಸಿದ್ಧಾಂತ, ಸಂತರು–ಶರಣರು, ವೇದ–ಉಪನಿಷತ್ತು, ಭಗವದ್ಗೀತೆ, ವಚನ ಹೀಗೆ ಎಲ್ಲವನ್ನು ಅವರು ವಿವರಿಸುತ್ತಾರೆ. ಅಂತೆಯೆ ಅವರ ಚಿಂತನೆಗಳಿಗೆ ತುಂಬ ಬೆಲೆಯಿದೆ. ಎಲ್ಲ ಧರ್ಮದ ಪತ್ರಿಕೆಗಳವರು ಅವರ ಚಿಂತನೆಗಳನ್ನು ಪ್ರಕಟಿಸುತ್ತಾರೆ. ಕನ್ನಡದ ಬಹುತೇಕ ದಿನಪತ್ರಿಕೆಗಳು ಅವರ ಚಿಂತನೆಗಳನ್ನು ಪ್ರಕಟಿಸಿವೆ.

ಸಿದ್ಧೇಶ್ವರ ಶ್ರೀಗಳಂತೆಯೇ ರವಿಶಂಕರ ಗುರೂಜಿ ಅವರ ಅನೇಕ ಬರಹಗಳು ನಿರಂತರವಾಗಿ ಅಂಕಣ ರೂಪದಲ್ಲಿ ಪ್ರಕಟವಾಗುತ್ತ ಬಂದಿವೆ. ವಿಧಾತ್ರಿ ಪತ್ರಿಕೆಯಲ್ಲಿ ಅವರ ಕೆಲವು ಚಿಂತನೆಗಳು ಪ್ರಕಟವಾಗಿವೆ. ಹಾಗೆಯೇ ಕ್ರಾಂತಿಕಾರಿ ಸಂತ ಮುನಿಶ್ರೀ ತರುಣಸಾಗರ ಮಹಾರಾಜರು ತಮ್ಮ ಚಾತುರ್ಮಾಸಕ್ಕಾಗಿ ಕರ್ನಾಟಕವನ್ನು ಆಯ್ದುಕೊಂಡಾಗ, ಇಲ್ಲಿ ಮಾಡಿದ ಅನೇಕ ಚಿಂತನೆಗಳನ್ನು ಕಾಳಿಕಾದೇವಿ ವಾಣಿ ಪತ್ರಿಕೆ ಸಂಪಾದಕರು ಅಂಕಣರೂಪದಲ್ಲಿ ಪ್ರಕಟಿಸುತ್ತ ಬಂದಿದ್ದಾರೆ. ಅವರ ಕ್ರಾಂತಿಕಾರಿ ವಿಚಾರಗಳು ಇಡೀ ದೇಶದಲ್ಲಿ ಸಂಚಲನವನ್ನುಂಟು ಮಾಡಿದ್ದವು. ಅವರು ಹೇಳುವ ಮಾತುಗಳು ಅಷ್ಟು ಪ್ರಖರವಾಗಿದ್ದವು. ಅವರ ಕ್ರಾಂತಿಕಾರಿ ಹೇಳಿಕೆಗಳಲ್ಲಿ 'ಒಂದು ಧರ್ಮಕ್ಕೆ ಸಾವಿರ ವರುಷವಾದರೆ, ಆ ಧರ್ಮಕ್ಕೆ ಬೆಂಕಿ ಹಚ್ಚಬೇಕು' ಎಂಬ ಸಂದೇಶ ಎಂಥವರಲ್ಲಿ ಆಶ್ಚರ್ಯವನ್ನುಂಟು ಮಾಡುತ್ತದೆ. ಅದಕ್ಕೆ ಅವರು ಹೀಗೆ ವಿವರಣೆ ಕೊಡುತ್ತಾರೆ. "ಒಂದು ಸಾವಿರ ವರುಷಗಳಲ್ಲಿ ಧರ್ಮದಲ್ಲಿಯೂ ರೂಢಿಗತವಾದ ಕಂದಾಚಾರಗಳಿಂದ ಕೊಳೆ–ಗಲೀಜು ಸೇರಿಕೊಂಡು ಬಿಡುತ್ತದೆ. ಇಂದು ಪ್ರತಿಯೊಂದು ಧರ್ಮದ ಸ್ಥಿತಿಯೂ ಹೀಗೆ ಆಗಿರುವುದರಿಂದ ಅವುಗಳ ಸಮಸ್ಯೆಗಳಿಗೆ ಪರಿಹಾರವಿಲ್ಲದಂತಾಗಿದೆ. ಐವತ್ತು ವರುಷಗಳಲ್ಲಿ ನಮ್ಮ ಊಟದ ಏಕತಾನತೆ ರುಚಿಯನ್ನು ಹದಗೆಡಿಸುತ್ತದೆ, ನೂರು ವರುಷಗಳಲ್ಲಿ ಮನೆಗಳ ವಾಸ್ತುಶಿಲ್ಪ ಹಳೆಯದಾಗುತ್ತದೆ, ೫೦೦ ವರುಷಗಳಲ್ಲಿ ಮಂದಿರಗಳು ತಮ್ಮ ಮೂಲ ಉದ್ದೇಶಗಳನ್ನು ಮರೆತು ಬಿಡುತ್ತವೆ. ಆದ್ದರಿಂದ ಬದಲಾವಣೆ ಜಗದ ನಿಯಮ"[೨೦] ಎಂದು ತರುಣಸಾಗರ ಹೇಳುತ್ತಾರೆ.

'ಕೃಷ್ಣನಂತೆ ಮಕ್ಕಳನ್ನು ಪಾಲಿಸುವ ಯಶೋಧೆಯರ ಅವಶ್ಯಕತೆಯಿದೆ'[೨೨] 'ಗಾಂಧೀಜಿ ಸಂದೇಶದ ಪ್ರಸ್ತುತತೆ'[೨೩] ಮೊದಲಾದ ಅಂಕಣ ಬರಹಗಳು ಚೇತೋಹಾರಿಯಾಗಿವೆ.

ಶಿವಮೊಗ್ಗದ ಜಯದೇವಪ್ಪ ಜೈನಕೇರಿ ಅವರು ವಿಶ್ವಕರ್ಮ ಸಂದೇಶದಲ್ಲಿ 'ಕರ್ನಾಟಕ ಸಂಸ್ಕೃತಿ ಮತ್ತು ದೇವಾಲಯಗಳು'[೨೪] ಎಂಬ ಅಂಕಣ ಬರಹವನ್ನು ಪ್ರಕಟಿಸಿದ್ದಾರೆ. ಆಗಸ್ಟ್ ೨೦೦೬ರಿಂದ ಪ್ರಾರಂಭವಾದ ಈ ಅಂಕಣಮಾಲೆ ಡಿಶಂಬರ್೨೦೦೬ಕ್ಕೆ ಮುಕ್ತಾಯವಾಗಿದೆ. ಜೈನಕೇರಿಯವರ ಇತರ ಕೆಲವು ಲೇಖನಗಳು ಕಾಲಕಾಲಕ್ಕೆ ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.[೨೫]

ಗೌತಮ ಚಮನಲಾಲ್ ಎಂಬುವರು 'ಧ್ಯಾನದ ಸರಳ ಸಾಧನೆಗಳು' ಎಂಬ ಅಂಕಣ ಮಾಲೆಯನ್ನು ವಿಶ್ವಕರ್ಮೋದಯ ಪತ್ರಿಕೆಯಲ್ಲಿ ಡಿಶಂಬರ್ ೨೦೦೩ರಿಂದ ಪ್ರಾರಂಭಿಸಿ ೨೦೦೪ರ ಡಿಶಂಬರ್ ಸಂಚಿಕೆಯವರೆಗೆ ಮುಂದುವರಿಸಿದ್ದಾರೆ.

ಹೀಗೆ ಅನೇಕ ವಿಶ್ವಕರ್ಮೇತರ ವಿದ್ವಾಂಸರಿಂದ ಸಾಧಕರಿಂದ ಅಂಕಣ ಬರಹಗಳು ವಿಶ್ವಕರ್ಮ ಸಮುದಾಯದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತ ಬಂದಿವೆ.

**ಲೇಖಕರು :** ವಿಶ್ವಕರ್ಮ ಪತ್ರಿಕೆಗಳಲ್ಲಿ ಇತರ ಸಮುದಾಯದ ಲೇಖಕರು ಬರೆದು ಪತ್ರಿಕೆಗಳಿಗೆ ಹೊಸ ಆಯಾಮವೊಂದನ್ನು ನೀಡುವ ಪ್ರಯತ್ನ ಮಾಡಿದ್ದಾರೆ. ವಿಶ್ವಕರ್ಮ ಸಮಾಜದ ಅನೇಕ ಲೇಖಕರು, ಚಿಂತಕರು, ಯುವಬರಹಗಾರರು ಇದ್ದಾಗಲೂ ಇತರ ಸಮುದಾಯದ ಬರಹಗಾರರ ಲೇಖನಗಳನ್ನು ಪ್ರಕಟಿಸುವ ಮೂಲಕ ಏಕತೆಯ ಸಂದೇಶವನ್ನು ವಿಶ್ವಕರ್ಮ ಸಮುದಾಯದ ಸಂಪಾದಕರು ಸಾರಿದ್ದಾರೆ.

ಕನ್ನಡದ ಅನೇಕ ಪ್ರಮುಖ ಬರಹಗಾರರು ವಿಶ್ವಕರ್ಮ ಸಮುದಾಯದ ಪತ್ರಿಕೆಗಳಲ್ಲಿ ಸಾಂದರ್ಭಿಕವಾಗಿ ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ. ದೇವುಡ ನರಸಿಂಹ ಶಾಸ್ತ್ರಿಗಳು, ಎ.ಆರ್. ಕೃಷ್ಣಶಾಸ್ತ್ರಿ, ಜಿ.ಎಸ್. ಶಿವರುದ್ರಪ್ಪ, ಹಿ. ಚಿ.ಬೋರಲಿಂಗಯ್ಯ, ಜೀ.ಶಂ. ಪರಮಶಿವಯ್ಯ, ಇಬ್ರಾಹಿಂ ಸುತಾರ (ಇತ್ತೀಚೆಗೆ ಪದ್ಮಶ್ರೀ ಪ್ರಶಸ್ತಿ ಪಡೆದವರು) ಮೊದಲಾದ ಪ್ರತಿಷ್ಠಿತ ಬರಹಗಾರರಲ್ಲದೆ, ಅನಾಮಧೇಯ ಅನೇಕ ಲೇಖಕರು ತಮ್ಮ ಬರಹಗಳನ್ನು ಇಲ್ಲಿ ಪ್ರಕಟಿಸುವ ಮೂಲಕ ತಮ್ಮ ಸಾಹಿತ್ಯಿಕ ಬದುಕಿಗೆ ಒಂದು ಸ್ಫೂರ್ತಿ ಚೈತನ್ಯವನ್ನು ಪಡೆದುಕೊಂಡಿದ್ದಾರೆ.

ನನ್ನ ಗಮನಕ್ಕೆ ಬಂದ ಅತ್ಯುತ್ತಮ ಲೇಖನಗಳಲ್ಲಿ ಕೆಲವನ್ನು ಉದಾಹರಿಸುವುದಾದರೆ- ಜಿ.ಎಸ್. ಶಿವರುದ್ರಪ್ಪನವರ 'ಕನಕದಾಸರು : ಕೆಲವು ಚಿಂತನೆಗಳು'[೨೬] ಎಂಬ ಲೇಖನ ಕಾಳಿಕಾದೇವಿವಾಣಿ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಹಿ. ಚಿ. ಬೋರಲಿಂಗಯ್ಯ ಅವರ 'ಶ್ರೀಕೃಷ್ಣ ಪಾರಿಜಾತ'[೨೭] ಸಣ್ಣಾಟದ ವಿಮರ್ಶೆ ರೂವಾರಿ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

ಕನ್ನಡ ಮೊದಲ ಪ್ರಾಧ್ಯಾಪಕರಲ್ಲಿ ಒಬ್ಬರಾದ ಎ. ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತಿ ಮತ್ತು ಶೀಲ'[೨೮] ಎಂಬ ಲೇಖನವು ವಿಶ್ವಕರ್ಮ ಪತ್ರಿಕೆಯಲ್ಲಿ ಪ್ರಕಟವಾಗಿದೆ. ದೇವುಡು ನರಸಿಂಹ

ಶಾಸ್ತ್ರಿಗಳ 'ರಾವಣನು ವಿಶ್ವಕರ್ಮ ವಂಶಜನು'[೨೯] ಎಂಬ ಲೇಖನ ಕಾಳಿಕಾ ಸಂದೇಶ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಇತ್ತೀಚೆಗೆ ಪದ್ಮಶ್ರೀ ಪ್ರಶಸ್ತಿ ಪಡೆದ ಇಬ್ರಾಹಿಮ ಸುತಾರ ಅವರ 'ಓದು ಬಲ್ಲವರೆಲ್ಲ ಜ್ಞಾನಿಗಳಲ್ಲ'[೩೦] ಎಂಬ ಲೇಖನ ಕಾಳಿಕಾ ಸಂದೇಶ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

ಜಿ.ಶಂ. ಪರಮಶಿವಯ್ಯ ಅವರ 'ಕಣಿವೆಯ ಬಾಳು'[೩೧] ಎಂಬ ಕಾದಂಬರಿ ಪ್ರಕಟವಾಗಿದೆ. ಹ. ಶಿ. ಭೈರನಹಟ್ಟಿ ಅವರ 'ನೆಲದ ಮೇಲೆ ಹೆಜ್ಜೆ' ಲೇಖನ ಕಾಳಿಕಾ ಸಂದೇಶ, ಜಯದೇವಪ್ಪ ಜೈನಕೇರಿ ಅವರ 'ಬದುಕು ಮನ್ನಿಸು ಪ್ರಭುವೆ' ಎಂಬ ಲೇಖನ ವಿಶ್ವಕರ್ಮ ಸಂದೇಶ, ಶಾಶ್ವತಸ್ವಾಮಿ ಮುಕ್ಕುಂದಿಮಠ ಅವರ 'ದಾಸ ಸಾಹಿತ್ಯದ ತವನಿಧಿ' ರೂವಾರಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ಕನ್ನಡ ವೈದ್ಯಸಾಹಿತ್ಯಕ್ಕೆ ಅಪರೂಪದ ಕೊಡುಗೆ ನೀಡಿದ ಕರಾವಳಿ ವೈದ್ಯರಲ್ಲಿ ಖ್ಯಾತರಾದ ಡಾ. ಎನ್. ಆರ್. ಆಚಾರ್ಯ ಅವರ ಸುಪುತ್ರ ಡಾ. ಎನ್. ಭಾಸ್ಕರ ಆಚಾರ್ಯ ದಂಪತಿಗಳ ಪತ್ರಿಕಾ ಸೇವೆ ಕೂಡ ಅನನ್ಯವಾದುದು. ತಮ್ಮ ಬಿಡುವಿಲ್ಲದ ವೈದ್ಯಕೀಯ ಸೇವೆಯ ಒತ್ತಡಗಳ ಮಧ್ಯೆಯೂ 'ಸ್ಥಿತಿ-ಗತಿ' ಎಂಬ ಕನ್ನಡ ಮತ್ತು ಇಂಗ್ಲಿಷ್ ಉಭಯ ಭಾಷೆಗಳಲ್ಲಿ ಪತ್ರಿಕೆಯನ್ನು ಪ್ರಕಟಿಸುತ್ತ ಬಂದಿರುವುದು ಅಭಿಮಾನದ ಸಂಗತಿಯಾಗಿದೆ. ಕನ್ನಡ ವಿಮರ್ಶಾ ಸಾಹಿತ್ಯಕ್ಕೆ ಈ ಪತ್ರಿಕೆಯ ಕಾಣಿಕೆ ಅಪಾರವಾಗಿದೆ. ಚಂಪಾ ಅವರ ಸಂಕ್ರಮಣ, ಅಡಿಗರ ಸಾಕ್ಷಿ, ಶೂದ್ರ ಮೊದಲಾದ ಸಾಹಿತ್ಯಿಕ ಪತ್ರಿಕೆಗಳ ಮಾದರಿಯಲ್ಲಿ ಸ್ಥಿತಿಗತಿ ಪತ್ರಿಕೆ ಕಾರ್ಯನಿರ್ವಹಿಸುತ್ತಿದೆ.

ವಿಶ್ವಕರ್ಮ ಸಮಾಜದವರಾದ ಡಾ. ಎನ್. ಭಾಸ್ಕರ್ ಆಚಾರ್ಯ ಅವರು ತಮ್ಮ ಸಂಪಾದಕತ್ವದ ಸ್ಥಿತಿ ಗತಿ ಪತ್ರಿಕೆಯನ್ನು ಎಲ್ಲ ವರ್ಗದ ಜನರಿಗಾಗಿ ಮೀಸಲಾಗಿಟ್ಟಿದ್ದಾರೆ. ನವ್ಯ-ಪ್ರಗತಿಶೀಲ-ದಲಿತ-ಬಂಡಾಯ ಮೊದಲಾದ ಎಲ್ಲ ಸಾಹಿತ್ಯಿಕ ಚಳುವಳಿಗಳಲ್ಲಿ ಭಾಗವಹಿಸಿದ ಲೇಖಕರ ಕೃತಿಗಳ ವಿಮರ್ಶೆ ಅನುಸಂಧಾನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ವೈದ್ಯ ಸಾಹಿತ್ಯದಲ್ಲಿ ಅನನ್ಯವಾದ ಸಾಧನೆ ಮಾಡಿದ ಭಾಸ್ಕರ್ ಆಚಾರ್ಯ ಅವರನ್ನು ಸಾಹಿತ್ಯಕ ವಲಯ ಸರಿಯಾಗಿ ಗ್ರಹಿಸಿಲ್ಲ, ಗೌರವಿಸಿಲ್ಲವೆಂದೇ ಹೇಳಬೇಕು. ಅವರು ವೈದ್ಯರಾಗಿ ವೈದ್ಯಕೀಯ ಕ್ಷೇತ್ರಕ್ಕೆ ಸಂಬಂಧಿಸಿದ ಲೇಖನಗಳನ್ನೇ ಬರೆದು; ಕನ್ನಡದಲ್ಲಿ ವೈದ್ಯ ಸಾಹಿತ್ಯಕ್ಕೆ ಒಂದು ಬೆಲೆ ಬರಬೇಕೆಂದು ಆಶಿಸಿದವರು. ಈ ಕುರಿತು ತಮ್ಮ ಸಂಪಾದಕೀಯದಲ್ಲಿ ಒಮ್ಮೆ ಹೀಗೆ ಬರೆದಿದ್ದರು-

"ವೈದ್ಯಸಾಹಿತ್ಯಕ್ಕೆ ಕನ್ನಡದಲ್ಲಿ ಇನ್ನೂ ಮಹತ್ವದ ಸ್ಥಾನ ಲಭ್ಯವಾಗಿಲ್ಲ. ಇದೊಂದು ಖೇದದ ವಿಷಯ. ಈ ಬಗೆಗೆ ನಾಡಿನ ಎಲ್ಲ ಹಿರಿಯ ಸಾಹಿತಿಗಳೂ, ವಿದ್ವಾಂಸರೂ, ಸಾಂಸ್ಕೃತಿಕ ಚಿಂತಕರೂ ಗಂಭೀರವಾಗಿ ಚಿಂತನೆ ನಡೆಸುವ ಅಗತ್ಯವಿದೆ. ವೈದ್ಯಸಾಹಿತ್ಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಸೂಕ್ತ ಸ್ಥಾನಮಾನಗಳನ್ನು ನೀಡುವ ಶಾಶ್ವತ ಯೋಜನೆಯೊಂದನ್ನು ರೂಪಿಸಿ, ಮುಂದಿನ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅದಕ್ಕೆ ಪ್ರತ್ಯೇಕ ಗೋಷ್ಠಿಗಳನ್ನು ಏರ್ಪಡಿಸಬೇಕೆಂದು ಆಗ್ರಹಪೂರ್ವಕ ವಿನಂತಿಸಿಕೊಳ್ಳುವೆ"[೩೨] ಎಂದು ನಿವೇದಿಸಿಕೊಂಡಿದ್ದರು.

ಸಂಪಾದಕರು ವೈದ್ಯರಾಗಿದ್ದರೂ ಕನ್ನಡ ಸಾಹಿತ್ಯದ ಬಹುಮಹತ್ವದ ಪುಸ್ತಕ ಪರಿಚಯಗಳು, ಕವಿತೆ, ಕಥೆಗಳನ್ನು ಪ್ರಕಟಿಸುವ ಮೂಲಕ ಒಂದು ಅತ್ಯುತ್ತಮ ಸೃಜನಶೀಲ ಪತ್ರಿಕೆಯನ್ನಾಗಿ ರೂಪಿಸಿದ್ದಾರೆ. ಈ ಪತ್ರಿಕೆಯಲ್ಲಿ ಬರೆದ ಬಹುತೇಕ ಲೇಖಕರು ವಿಶ್ವಕರ್ಮೇತರ ಸಮುದಾಯದವರು ಎಂಬುದು ಗಮನಿಸಬೇಕಾದ ಅಂಶವಾಗಿದೆ.

ಜಿ.ಎನ್. ಉಪಾಧ್ಯ, ಶಿವರಾಂ ಕಾರಂತ, ದೊಡ್ಡರಂಗೇಗೌಡ, ಸೋಮನಾಥ ಗೀತೋಗಿ, ರವೀಂದ್ರ ಮುನೋಳಿ, ರಾಮಚಂದ್ರ ಪಾಟೀಲ, ಪಿ.ಎಸ್. ಶಂಕರ, ಪಂಚಾಕ್ಷರಿ ಹಿರೇಮಠ, ಜಿ. ಎಚ್. ಹನ್ನೆರಡುಮಠ, ಎಂ.ಜಿ.ಬಿರಾದಾರ, ಗರುಡನಗರಿ ನಾಗರಾಜ, ಎಂ.ಎಸ್.ವೆಂಕಟರಾಮಯ್ಯ, ಶಿವಗಂಗಾ ಬಿಲಗುಂದಿ, ರೋಹಿಣಿ ಎಚ್.ಬಿ. ಜಿ.ವಿ. ಕುಲಕರ್ಣಿ, ಪ್ರಿಯಾಂಕಾ, ವೀರೇಶ ನಾಯಕ ಮೊದಲಾದ ಪರಿಚಿತ, ಅಪರಿಚಿತ ಲೇಖಕ ಬಳಗ ವಿಶ್ವಕರ್ಮ ಪತ್ರಿಕೆಗಳಲ್ಲಿ ನಿರಂತರವಾಗಿ ಲೇಖನ-ಕವನ-ಕಥೆಗಳನ್ನು ಬರೆಯುತ್ತ ಬಂದಿದ್ದಾರೆ. ವೈವಿಧ್ಯಮಯವಾದ ಲೇಖನಗಳನ್ನು ಪ್ರಕಟಿಸಿ, ಸರ್ವಜನಾಧರಣೀಯವಾಗುವ ನಿಟ್ಟಿನಲ್ಲಿ ಪತ್ರಿಕೆಯನ್ನು ಭಾಸ್ಕರ್ ಆಚಾರ್ಯ ಅವರು ಸಂಪಾದಿಸುತ್ತಿದ್ದಾರೆ.

ಆಧ್ಯಾತ್ಮಿಕ, ಧಾರ್ಮಿಕ, ಕವಿತೆ, ಪುಸ್ತಕ ಪರಿಚಯ, ಸಾಮಾಜಿಕ, ಲಲಿತಪ್ರಬಂಧ, ಕಥೆ, ವೈದ್ಯಕೀಯ, ಅಂಕಣ ಮೊದಲಾದ ಭಾಗಗಳಲ್ಲಿ ಸ್ಥಿತಿಗತಿ ಪ್ರಕಟವಾಗುತ್ತಿದೆ. ಕ್ರಿ.ಶ. ೨೦೦೦ ಜನೆವರಿಯಿಂದ ತ್ರೈಮಾಸಿಕವಾಗಿ ಈ ಪತ್ರಿಕೆ ಇಂದಿಗೂ ಪ್ರಕಟವಾಗುತ್ತಿದೆ.

ಸ್ಥಿತಿಗತಿ ತ್ರೈಮಾಸಿಕ ಪತ್ರಿಕೆಯ ಒಂದೆರಡು ಸಂಚಿಕೆಗಳ ವಿವರ ನೋಡಿದರೆ, ಅದು ಎಲ್ಲ ಸಮಾಜದ ಲೇಖಕರನ್ನು ಹೇಗೆ ಬಳಸಿಕೊಂಡಿದೆ ಎಂಬುದರ ಸ್ಪಷ್ಟ ಚಿತ್ರಣ ದೊರೆಯುತ್ತದೆ. ಈ ಪತ್ರಿಕೆ ಸಂಪುಟ ೪, ಸಂಚಿಕೆ ೩ ಜುಲೈ ಸೆಪ್ಟಂಬರ್ ೨೦೧೪ರ ಸಂಚಿಕೆಯನ್ನು ನೋಡುವುದಾದರೆ ಅಧ್ಯಾತ್ಮಿಕ ವಿಭಾಗದಲ್ಲಿ ಎರಡು ಲೇಖನಗಳಿವೆ. ೧. ಜ್ಯೋತಿ ಸಿ.ಎನ್. ಅವರ 'ವಿಚಾರದ ಬೆಳಕಿನಲ್ಲಿ ದಾಸೋಹದ ನಿರ್ವಚನ' ೨, ಪದ್ಮನಾಭ ಭಟ್ಟ ಅವರ 'ಮಾಡಿದ್ದುಣ್ಣೋ ಮಹಾರಾಯ' ಎಂಬ ಎರಡು ಲೇಖನಗಳಿಗೆ. ಧಾರ್ಮಿಕ ವಿಭಾಗದಲ್ಲಿ ಮ.ನಾ. ಹೆಬ್ಬಾರ ಅವರ 'ನಾಗಾರಾಧನೆ-ಹರಿದಾಸ' ಎಂಬ ಸಂಶೋಧನಾತ್ಮಕ ಲೇಖನವಿದೆ. ಇನ್ನು ಸಾಹಿತ್ಯಿಕ ವಿಭಾಗದಲ್ಲಿ ದೊಡ್ಡರಂಗೇಗೌಡ ಅವರ 'ಡಿ.ವಿ.ಜಿ. ಅವರ ಪ್ರಸಿದ್ಧವಾದ ಕವಿತೆ ವನಸುಮ' ಎಂಬ ವಿಮರ್ಶಾ ಲೇಖನ, ವೀರೇಂದ್ರ ಸಿಂಪಿ ಅವರ 'ಕೆ. ಸತ್ಯನಾರಾಯಣರ ಲೋಕ ಪ್ರಬಂಧ ಸಂಕಲನ-ಒಂದು ಅವಲೋಕನ', ನಟರಾಜ ಕೆ.ಸ್. ಅವರ 'ದಲಿತ ಹೋರಾಟ ಮತ್ತು ಪ್ರಶ್ನೆಯ ಚರ್ಚೆಗಳು', ಜಿ. ವಿ. ಕುಲಕರ್ಣಿ ಅವರ 'ಒಬ್ವಿಯಸ್ ಅಡ್ಯಾಮ್ಸ್' ಎಂಬ ಕಥೆಯ ಯಶೋಗಾಥೆ', ಜಿ. ಶಾಂತಾರಾಮ ಅವರ 'ಕಗ್ಗದ ಸಗ್ಗ', ವೀರೇಶ ನಾಯಕ ಅವರ 'ಕಾವ್ಯದಲ್ಲಿ ಮಕ್ಕಳ ಸಾಹಿತ್ಯ', ವಿ. ಅಪಿನಾಶ್ ಅವರ 'ಕನ್ನಡ ಸಾಹಿತ್ಯಕ್ಕೆ ಕೊಡಗಿನ ಬರವಣಿಗೆಯ ಕೊಡುಗೆಗಳು : ಒಂದು ಪುನರ್ ಅವಲೋಕನ', ಪ್ರಿಯಾಂಕಾ ಅವರ 'ಡಾ.

ಚೆನ್ನಣ್ಣ ವಾಲೀಕಾರರ ಕಾದಂಬರಿಗಳಲ್ಲಿ ದಲಿತ ಸಂವೇದನೆ' ಇವಿಷ್ಟು ವಿಮರ್ಶಾತ್ಮಕ ಲೇಖನಗಳು ಸಾಹಿತ್ಯಿಕ ವಿಭಾಗದಲ್ಲಿ ಪ್ರಕಟಗೊಂಡಿವೆ.

ಕವಿತೆ ವಿಭಾಗದಲ್ಲಿ ಕೆ. ಶೈಲಾಕುಮಾರಿ ಅವರು ಪಂಜಾಬಿನ ಸ್ವರಣ್‌ಜಿತ ಕವಿಯ ಎರಡು ಕವನಗಳನ್ನು ಅನುವಾದಿಸಿದ್ದಾರೆ. ಶಾರದಾ ಅಂಚಿನ ಅವರ 'ನೆನಪುಗಳು', ವೆಂಕಟರತ್ನಂ ಚಿಂತಾಮಣಿ ಅವರ 'ಹುಟ್ಟುಹಬ್ಬ', ಸುಗುಣ ಚಂದಾವರಕರ್ ಅವರ 'ನಾನೆನ್ನರಿತರೆ ಸಾಕೋ' ಎಂಬ ಐದು ಕವನಗಳು ಈ ಸಂಚಿಕೆಯಲ್ಲಿ ಪ್ರಕಟಗೊಂಡಿವೆ.

ಪ್ರೇಮಾಭಟ್ ಅವರ 'ಎಲ್ಲಿ ಹುಡುಕಲಿ ನಿನ್ನ' ಎಂಬ ಪದ್ಯ ಎ.ಎನ್. ಭಟ್ ಅವರು ತೀರಿಕೊಂಡ ಕಾರಣ ಅವರ ಸ್ಮರಣೆಯಲ್ಲಿ ಬರೆದುದಾಗಿದೆ. ಉಪೇಂದ್ರ ಸೋಮಯಾಜಿ ಎಂಬುವರು 'ಅನಂತಮೂರ್ತಿ–ನೆನಪು ಮಾತ್ರ' ಎಂಬ ಸಂಸ್ಮರಣ ಲೇಖನವನ್ನು ಬರೆದಿದ್ದಾರೆ.

ಪುಸ್ತಕ ಪರಿಚಯ ವಿಭಾಗದಲ್ಲಿ ಉಪೇಂದ್ರ ಸೋಮಯಾಜಿ ಅವರು 'ಜೀವಿ ಸಮಗ್ರ ಸಾಹಿತ್ಯ ದರ್ಶನ', 'ಹತ್ತು ಪಾಶ್ಚಾತ್ಯ ಮಹಾಕಾದಂಬರಿಕಾರರ ಜೀವನ ಮತ್ತು ಸಾಧನೆ', 'ಮರೆವು', 'ಮಕ್ಕಳ ನೀತಿ ಸುಭಾಷಿತ', 'ಮಹಾಮಾತೆ ಮಲ್ಲಕ್ಕ ಮತ್ತು ಇತರ ಪ್ರಬಂಧಗಳು', ವಜ್ರಬಿಂಬ' ಇಷ್ಟು ಪುಸ್ತಕಗಳನ್ನು ಪರಿಚಯಿಸಿದ್ದಾರೆ. ಜಿ. ಎನ್. ಉಪಾಧ್ಯೆ ಅವರು 'ಲಲಿತ ಪ್ರಬಂಧದ ಹೆಜ್ಜೆ ಹಾದಿ', ಪರಮೇಶ್ವರಿ ಲೋಕೇಶ್ವರ ಅವರು 'ಇದು ಬರ್ಲಿನ್! ಇದು ಜರ್ಮನಿಯಾ', ಮಾಧುರಿ ಕೃಷ್ಣ ಅವರು 'ನಮ್ಮ ಆರೋಗ್ಯ ನಮ್ಮ ಕೈಯಲ್ಲಿ', ಕೃಷ್ಣವೇಣಿ, ದುರ್ಬೀಜ ಈ ಕೃತಿಗಳನ್ನು ಪರಿಚಯಿಸಿದ್ದಾರೆ.

ಶ್ರೀನಿವಾಸ ಕುಂಡಂತಾಯ ಅವರ 'ಇದೀಗ ಬಂದ ಸುದ್ದಿ' ಎಂಬ ಲಲಿತ ಪ್ರಬಂಧ ಮತ್ತು ಕೀರಿಕ್ಕಾಡು ವನಮಾಲ ಕೇಶವ ಭಟ್ಟ ಅವರ 'ಉಡುಗೊರೆ ಕೊಡುವ ಹಾಗೂ ಪಡೆಯುವ ಕುರಿತಾಗಿ ಒಂದಿಷ್ಟು ವಿವರಗಳು' ಎಂಬ ಮೌಲಿಕ ಲೇಖನಗಳಿವೆ.

ಇನ್ನು ವೈದ್ಯಕೀಯ ವಿಭಾಗದಲ್ಲಿ ಭಾಸ್ಕರ್ ಆಚಾರ್ಯ ಅವರ 'ಒಂದು ಸತ್ಯ ಘಟನೆ', 'ವೃತ್ತಿ ಜೀವನದಲ್ಲೊಂದು ಮರೆಯಲಾರದ ನೆನಪು', 'ಅನ್ನಬ್ರಹ್ಮನ ದೇಗುಲದಲ್ಲಿ' ಎಂಬ ಲೇಖನಗಳು ಪ್ರಕಟವಾಗಿವೆ.

ಇದು ಒಂದು ಸಂಚಿಕೆಯ ಉದಾಹರಣೆ ಮಾತ್ರ. ಈ ಮಾದರಿಯಲ್ಲಿ ಕಳೆದ ೧೦ ವರುಷಗಳಿಂದ ಈ ಪತ್ರಿಕೆ ನಿರಂತರವಾಗಿ ಪ್ರಕಟವಾಗುತ್ತ ಬಂದಿದೆ. ಮಾರುಕಟ್ಟೆಯಲ್ಲಿ ಬರುವ ಹೊಸ ಪುಸ್ತಕಗಳ ಸಮಗ್ರವಾದ ಮಾಹಿತಿಯ ಪರಿಚಯ ಈ ಪತ್ರಿಕೆಯಲ್ಲಿ ದೊರೆಯುತ್ತದೆ. ಈ ಪತ್ರಿಕೆಯಲ್ಲಿ ಎಲ್ಲ ಧರ್ಮದ ಎಲ್ಲ ವರ್ಗದ ಜನರು ಲೇಖನಗಳನ್ನು ಬರೆದು ಪ್ರಕಟಿಸಿದ್ದು ಭಾಸ್ಕರ ಆಚಾರ್ಯ ಅವರ ಸರ್ವಧರ್ಮ ಸಮಭಾವಕ್ಕೆ ಸಾಕ್ಷಿಯಾಗಿದೆ.

ಜೀವಣ್ಣ ಮಸಳಿಯವರ ಸಂಪಾದಕತ್ವದಲ್ಲಿ ಬಾಗಲಕೋಟಿಯ ಪರಿಸರದಲ್ಲಿ ೧೯೭೦ ದಶಕದಲ್ಲಿ 'ವಿಶ್ವದರ್ಶನ' ಪತ್ರಿಕೆಯನ್ನು ಪ್ರಾರಂಭಿಸಿದರು. ಈ ಪತ್ರಿಕೆಯಲ್ಲಿ ವಿಶ್ವಕರ್ಮರಗಿಂತ ವಿಶ್ವಕರ್ಮೇತರ ಬರಹಗಾರರಿಗೆ ಅವಕಾಶ ನೀಡಿದ್ದು, ಈ ಪತ್ರಿಕೆಗಳ ನಾಡವರ ಚಿಂತನೆಗಳಿಗೆ ದಾರಿ ಮಾಡಿಕೊಟ್ಟಿದೆ. ಈ ಪತ್ರಿಕೆ ತನ್ನ ಸಮುದಾಯದವರಲ್ಲದ ಸೃಜನಶೀಲ ಬರಹಗಾರರಾದ ಸಿ.ಎಂ.ಜೋಶಿ ಅವರು ಗುಳೇದಗುಡ್ಡ ಪರಿಸರದ ಸಾಹಿತಿಗಳಾಗಿ ಕನ್ನಡ ಸಾಹಿತ್ಯಕ್ಕೆ ಹಲವು ಕೃತಿಗಳನ್ನು ಅರ್ಪಿಸಿದ್ದಾರೆ. ಅದರೊಂದಿಗೆ ವಸ್ತುನಿಷ್ಠ ವರದಿಗಾರರಾಗಿ ಹೊರಹೊಮ್ಮಿದ್ದಾರೆ. ಇವರ ಸಾಹಿತ್ಯ ಮತ್ತು ಪತ್ರಿಕೆಯ ಅಭಿರುಚಿಯ ಸ್ಪೂರ್ತಿಯೇ ವಿಶ್ವದರ್ಶನ ಪತ್ರಿಕೆ. ಇದೇ ಪತ್ರಿಕೆಯಲ್ಲಿ 'ದಾರಿ ಬಿಟ್ಟಾರ' ಅಂಕಣ ಬರಹಕ್ಕೆ ಬರೆಯುತ್ತಿದ್ದರು. ಈ ಪತ್ರಿಕೆಯಿಂದ ಅವರು ತಮ್ಮ ಬದುಕಿನಲ್ಲಿ ಆದರ್ಶವನ್ನು ಕಲಿತ ಪರಿಣಾಮ ಇಂದು ಕನ್ನಡ ಪ್ರಭ ಪತ್ರಿಕೆ ಹಾಗೂ ಲೋಕದರ್ಶನ ಪತ್ರಿಕೆಗಳಿಗೆ ವರಿದಿಗಾರರಾಗಿ ಕಾರ್ಯವನ್ನು ಮಾಡುತ್ತಿದ್ದಾರೆ.

ಬಾಗಲಕೋಟಿ ವಿಭಾಗದಿಂದ ಪ್ರಸಾರವಾಗುತ್ತಿರುವ 'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆಯ ಸಂಪಾದಕರಾದ ಕಾರ್ಯ ನಿರ್ವಹಣೆ ಮಾಡುತ್ತಿರುವ ಶ್ರೀ ರಾಮು ಮನಗೂಳಿ ತಮ್ಮ ಪತ್ರಿಕಾ ವೃತ್ತಿಯ ಆರಂಭವು ವಿಶ್ವದರ್ಶನ ಪತ್ರಿಕೆಯ ಮೂಲಕ ಪ್ರಾರಂಭಿಸಿದರು.

ವಿಶ್ವದರ್ಶನ ಪತ್ರಿಕೆಯಿಂದ ಇನ್ನೋರ್ವ ಯುವ ಬರಹಗಾರರಾದ ಡಾ.ಪ್ರಕಾಶ ಖಾಡೆ ಒಬ್ಬರು. ಇವರು ಜಾನಪದ ಕ್ಷೇತ್ರದ ವಿಷಯಗಳಲ್ಲಿ ಪರಿಣಿತ ಹೊಂದಿದ್ದು, ಜೀವಣ್ಣ ಮಸಳಿಯವರ ಗರಡಿಯಲ್ಲಿ ಬರವಣಿಗೆ ಜ್ಞಾನವನ್ನು ಪಡೆದಿದ್ದಾರೆ. ಇವರ ಪತ್ರಿಕಾ ಮತ್ತು ದೃಶ್ಯ ಮಾಧ್ಯಮದ ಪ್ರಭಾವ ಇಂದಿಗೂ ಪ್ರಚಲಿತವಿದೆ. ಕೊರೊನಾ ವೈರಸ್ ಹರಡದಂತೆ ದೇಶ ವ್ಯಾಪಿ ಮಾಡಿರುವ ಲಾಕ್‌ಡೌನ್ ಅವಧಿಯಲ್ಲಿ ಆನ್ಲೈನ್ ಮಾಧ್ಯಮ ಮೂಲಕ 'ಬೆಳಕಾಯಿತು ಬಾಗಲಕೋಟೆ' ಎಂಬ ಸಾಹಿತ್ಯ ಸರಣಿಯ ಮೂಲಕ ಗುರುತಿಸಿಕೊಂಡಿದ್ದಾರೆ. ಕನ್ನಡ ಪತ್ರಿಕಾ ಜಗತ್ತಿಗೆ ವಿಶ್ವಕರ್ಮ ಸಮುದಾಯದ ಪತ್ರಿಕೆಗಳ ಮೂಲಕ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

**ವರದಿಗಾರರು** : ಯಾವುದೇ ಪತ್ರಿಕೆ ಸರ್ವಾಂಗ ಸುಂದರವಾಗಿ ಪ್ರಕಟವಾಗಲು ದಶದಿಕ್ಕುಗಳಿಂದಲೂ ಅದಕ್ಕೆ ಮಾಹಿತಿ ಒದಗಿ ಬರಬೇಕು. ಆಗ ಮಾತ್ರ ಪತ್ರಿಕೆ ನಾಡಿನ ತುಂಬ ಜನಪ್ರಿಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಜೀವಣ್ಣ ಮಸಳಿ ಅವರು ವಿಶ್ವದರ್ಶನ ಎಂಬ ದಿನಪತ್ರಿಕೆಯನ್ನು ಪ್ರಕಟಿಸುತ್ತಿದ್ದ ಸಂದರ್ಭದಲ್ಲಿ ಬಾಗಲಕೋಟ, ಧಾರವಾಡ, ಬೆಳಗಾವಿ, ಕಲಬುರ್ಗಿ ವಿಭಾಗಗಳಲ್ಲಿ ಅನೇಕ ವರದಿಗಾರರನ್ನು ನೇಮಿಸಿಕೊಂಡಿದ್ದರು. ಇಂದು ಕರ್ನಾಟಕದಲ್ಲಿ ಹೆಸರಾಂತ ಪತ್ರಕರ್ತರಾದ ಬಾಗಲಕೋಟೆಯಿಂದ 'ಸಂಯುಕ್ತ ಕರ್ನಾಟಕದ' ಉಪಸಂಪಾದಕರಾಗಿ ಕೆಲಸ ಮಾಡುತ್ತಿರುವ  ರಾಮು ಮನಗೂಳಿಯವರು ಗುಳೆದಗುಡ್ಡದ 'ಕನ್ನಡ ಪ್ರಭ' ವರದಿಗಾರರಾದ ಶ್ರೀ ಸಿ.ಎಂ.ಜೋಶಿ ಅವರು, 'ಪ್ರಜಾವಾಣಿ', 'ಸುಧಾ'ದಲ್ಲಿ ಕೆಲಸ ಮಾಡುತ್ತಿರುವ ಶ್ರೀ ಗಣೇಶ ಅಮೀನಗಡ ಅವರಂತಹ ಪ್ರತಿಭಾನ್ವಿತ ಪತ್ರಕರ್ತರು ರೂಪುಗೊಳ್ಳುವಲ್ಲಿ ಜೀವಣ್ಣ ಮಸಳಿಯವರ

ವಿಶ್ವದರ್ಶನ ಪತ್ರಿಕೆ ಪ್ರೋತ್ಸಾಹವಿದೆ. ಹಾಗೆಯೇ ಮಾಸಿಕ, ತ್ರೈಮಾಸಿಕ ಪತ್ರಿಕೆಗಳ ವಿಷಯವಾಗಿ ಗಮನಿಸಿದಂತೆ, ವಿಶ್ವಕರ್ಮ ಸಂದೇಶ, ಕಾಳಿಕಾದೇವಿ ವಾಣಿ, ವಿಶ್ವಕರ್ಮೋದಯ ಮೊದಲಾದ ಪತ್ರಿಕೆಗಳಿಗೆ ಅನೇಕ ಜನ ಸ್ಥಳೀಯರು ವರದಿಗಳನ್ನು ನೀಡಿದ್ದಾರೆ ಮತ್ತು ಲೇಖಗಳನ್ನು ಬರೆದಿದ್ದಾರೆ. ವಿಶ್ವಕರ್ಮ ವಿಕಾಸವಾಣಿಯಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ವಿದ್ವಾಂಸರಾದ ಡಾ. ಎಸ್.ಎಸ್.ಅಂಗಡಿಯವರು ಪ್ರೊ.ಕೆ.ಜಿ.ಕುಂದಣಗಾರ ಮತ್ತು ಡಾ.ಚಂದ್ರಶೇಖರ ಕಂಬಾರರ ಕುರಿತು ಹಿರಿಯ ವಿಮರ್ಶಕರಾದ ಡಾ. ರಹಮತ್ ತರಿಕೇರಿಯವರು 'ಶಿರಸಂಗಿ ಕಾಳಮ್ಮ ಮತ್ತು ಕಂಬಾರರು' ಎನ್ನುವ ಲೇಖನ ಬರೆದಿದ್ದು ಇಲ್ಲಿ ಉಲ್ಲೇಖನೀಯ.

ಸಂಪಾದಕೀಯ : ವಿಶ್ವಕರ್ಮ ಸಮಾಜದ ಎಲ್ಲ ಪತ್ರಿಕೆಗಳನ್ನು ನಾನು ಸೂಕ್ಷ್ಮವಾಗಿ ಗಮನಿಸಿದಾಗ, ಬೇರೆ ಸಮುದಾಯದವರು ಈ ಪತ್ರಿಕೆಗೆ ಸಂಪಾದಕೀಯ ಬರೆದ ವಿವರಗಳು ನಮಗೆ ಎಲ್ಲಿಯೂ ದೊರೆಯಲಿಲ್ಲ. ಆದರೆ ಇಂದು ಕೆ.ಪಿ. ನಂಜುಂಡಿ ಅವರ ಸಾರಥ್ಯದಲ್ಲಿ ದಿನಾಂಕ ೧೫ ಜನವರಿ ೨೦೧೬ರಿಂದ ಪ್ರಕಟವಾಗುತ್ತಿರುವ ವಿಶ್ವವಾಣಿ ಪತ್ರಿಕೆಗೆ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿರುವ ಹೆಸರಾಂತ ಪತ್ರಕರ್ತರಾದ ಶ್ರೀ ವಿಶ್ವೇಶ್ವರ ಭಟ್ ಅವರು ಬರೆಯುತ್ತಿರುವ ಸಮಯೋಚಿತ ಸಂಪಾದಕೀಯಗಳು ನಾಡವರ ಗಮನ ಸೆಳೆದಿವೆ. ವಿಶ್ವವಾಣಿ ಪತ್ರಿಕೆಯನ್ನು ಮೊದಲು ಪ್ರಾರಂಭಿಸಿದವರು ಡಾ. ಪಾಟೀಲ ಪುಟ್ಟಪ್ಪನವರು. ತಮ್ಮ ಆತ್ಮಕಥೆಯಲ್ಲಿ ವಿಶ್ವವಾಣಿ ಜನಪ್ರಿಯವಾದ ವಿಷಯವನ್ನು ಹೀಗೆ ಪ್ರಸ್ತಾಪಿಸಿದ್ದಾರೆ.

'ಪ್ರಪಂಚ'ದ ಯಶಸ್ಸನ್ನು ಕಂಡು ಒಂದು ದಿನಪತ್ರಿಕೆಯನ್ನು ಮಾಡಬೇಕೆಂದು ನಿರ್ಧರಿಸಿದೆ. ಓದುಗರಿಂದ ಮತ್ತು ಏಜೆಂಟರಿಂದ ಒಂದೇ ಸವನೆ ಬೇಡಿಕೆ ಬರಲಾರಂಭಿಸಿತ್ತು. ದಿನಪತ್ರಿಕೆ ಮುದ್ರಿಸುವಂತಹ ಯಂತ್ರವೊಂದು ಟೈಮ್ಸ್ ಆಫ್ ಇಂಡಿಯಾ'ದಲ್ಲಿದೆಯೆಂದು ಗೊತ್ತಾಯಿತು. ಮುಂಬೈಗೆ ಹೋಗಿ ಎಂಟು ಸಾವಿರ ರೂಪಾಯಿ ಕೊಟ್ಟು ಆ ಯಂತ್ರವನ್ನು ಖರೀದಿಸಿಕೊಂಡು ಬಂದೆ. ದಿನಪತ್ರಿಕೆಯೆಂದರೆ ಆನೆ ಸಾಕಿದಂತೆ. ಅದಕ್ಕೆ ನಿತ್ಯವೂ ಹೊಟ್ಟೆಗೆ ಹಾಕಬೇಕು. ಪ್ರತಿದಿನವೂ ಕಾಗದ, ಮಸಿ ಬೇಕು; ಅದಕ್ಕೆ ದುಡ್ಡು ಬೇಕು. ಏನು ಮಾಡಬೇಕೆಂಬುದೇ ತೋಚಲಿಲ್ಲ. ಹೆಂಡತಿಯ ಮುಂದೆ ಸಂಕಟ ತೋಡಿಕೊಂಡೆ. ಆಕೆ ನೀವ್ಯಾಕೆ ಚಿಂತೆ ಮಾಡ್ತೀರಿ? ನೀವು ಯಾವ ಕೆಲಸ ರೊಕ್ಕ ಇಟಗೊಂಡು ಮಾಡೀರಿ? ನೀವು ಮಾಡಬೇಕಾದುದನ್ನು ಮಾಡ್ತಾ ಹೋಗ್ರಿ; ರೊಕ್ಕ ತಾನಾಗಿಯೇ ಬರ್ತದೆ' ಎಂದು ಧೈರ್ಯ ತುಂಬಿದಳು. ಆಗಸ್ಟ್ ೩೧, ೧೯೫೯ ರಂದು ದಿನಪತ್ರಿಕೆ ವಿಶ್ವವಾಣಿ ಪ್ರಕಟಿಸುವುದೆಂದು ನಿರ್ಧರಿಸಲಾಗಿತ್ತು. ಬಿಡುಗಡೆಗೆ ಧಾರವಾಡದ ಮುರುಘಾಮಠದ ತಪಸ್ವಿಗಳಾದ ಮೃತ್ಯುಂಜಯ ಸ್ವಾಮಿಗಳನ್ನು ಕರೆತರುವುದೆಂದು ನಿರ್ಧರಿಸಿದ್ದೆ. ಆಗಸ್ಟ್ ೩೦ ರಾತ್ರಿ ಹತ್ತು ಗಂಟೆಯಾಗಿತ್ತು. ವಿಶ್ವವಾಣಿ ಎರಡನೆಯ ದಿನ ಬೆಳಗಿನ ಐದು ಗಂಟೆಗೆ ಬಿಡುಗಡೆಗೊಳ್ಳಬೇಕಿತ್ತು. ರಾತ್ರಿ ಭಾರೀ ಮಳೆ ಆರಂಭವಾಯಿತು. ಮುರುಘಾಮಠದ ಸ್ವಾಮಿಗಳನ್ನು ಕರೆತರಲು ರಾತ್ರಿ ಮಠಕ್ಕೆ ಬಂದೆ. ಮರಿಸ್ವಾಮಿಗಳು 'ಗುರುಗಳು ಯಾವಾಗ

ಏಳುತ್ತಾರೋ ಏನೋ, ಪೂಜೆ ಪುನಸ್ಕರಗಳಾಗಬೇಕು. ನಿಮ್ಮ ಮುಹೂರ್ತಕ್ಕೆ ಬರುವುದು ಸಾಧ್ಯವಾಗದ ಮಾತು' ಎಂದು ತಲೆ ಕೊಡವಿದರು. ನನ್ನ ನಿರ್ಧಾರ ಅಚಲವಾಗಿತ್ತು. 'ಅವರು ಬಂದು ಬಿಡುಗಡೆ ಮಾಡದಿದ್ದರೂ ಸರಿ; ಅವರಿಂದಲೇ ಪತ್ರಿಕೆ ಬಿಡುಗಡೆಯಾಯಿತೆಂದು ತಿಳಿಯುತ್ತೇನೆ' ಎಂದು ಹೇಳಿದೆ. ಅಷ್ಟರಲ್ಲಿ ಹಿರಿಯಸ್ವಾಮಿಗಳು ಹೊರಗೆ ಬಂದರು. ಮರಿಸ್ವಾಮಿಗಳು ಅವರಿಗೆ ಎಲ್ಲವನ್ನು ವಿವರಿಸಿ 'ಪುಟ್ಟಪ್ಪ ನಿಮ್ಮನ್ನು ಕರೆದೊಯ್ಯಲು ಬಂದಿದ್ದಾರೆ' ಎಂದು ಹೇಳಿದರು. ಹಿರಿಯಸ್ವಾಮಿಗಳು 'ಅವರು ಒಳ್ಳೆಯ ಕೆಲಸ ಮಾಡಿದ್ದಾರೆ. ಅವರು ಶಿವಯೋಗಿಯನ್ನೇ ಒಲಿಸಿಕೊಂಡಿದ್ದಾರೆ. ಈ ಕೆಲಸ ಹೇಗೆ ಬಿಡಲು ಸಾಧ್ಯ? ಅವರು ಕರೆದಲ್ಲಿಗೆ ಹೋಗಲೇಬೇಕು' ಎಂದರು. ನನಗೆ ರೋಮಾಂಚನವಾಯಿತು. ಸ್ನಾನಾದಿಗಳನ್ನು ಮುಗಿಸಿ ಬೆಳಗಿನ ಐದು ಗಂಟೆಗೆ ಸರಿಯಾಗಿ 'ವಿಶ್ವವಾಣಿ' (೧೯೫೯ ಆಗಸ್ಟ್ ೩೧ರಂದು) ಬಿಡುಗಡೆ ಮಾಡಿ ಆಶೀರ್ವದಿಸಿದರು. ಕೆಲವು ದಿನಗಳಲ್ಲಿಯೇ 'ವಿಶ್ವವಾಣಿ' ಜನಪ್ರಿಯವಾದ ದಿನಪತ್ರಿಕೆಯಾಯಿತು".[೩೩]

ಇಂಥ ಜನಪ್ರಿಯ ಪತ್ರಿಕೆಯನ್ನು ವಿಶ್ವಕರ್ಮ ಸಮಾಜದ ಹಿರಿಯ ಮುಖಂಡರಾದ ಕೆ.ಪಿ. ನಂಜುಂಡಿ ಅವರು ೧೫ ಜನವರಿ ೨೦೧೬ರಲ್ಲಿ ಪಾಟೀಲ ಪುಟ್ಟಪ್ಪನವರಿಂದ ಖರೀದಿಸಿದರು. ಅದಕ್ಕೆ ಸಂಪಾದಕರಾಗಿ ಬಂದವರು ವಿಶ್ವೇಶ್ವರ ಭಟ್ಟ ಅವರು. ಈ ಕ್ಷೇತ್ರದಲ್ಲಿ ಅಪಾರ ಅನುಭವ, ಲೋಕಾನುಭವ ಹೊಂದಿರುವ ವಿಶ್ವೇಶ್ವರ ಭಟ್ಟ ಅವರು ಈ ಪತ್ರಿಕೆಯ ಸಂಪಾದಕೀಯ ವಿಭಾಗದಲ್ಲಿ ಮೂರು ಭಾಗಗಳನ್ನಾಗಿ ಮಾಡಿದ್ದಾರೆ. ೧. ಸಂಪಾದಕೀಯ, ೨. ಸೊಂಪಾದಕೀಯ, ೩. ಸಂಪಾದಕರ ಸತ್ಯಶೋಧನೆ. ಈ ಮೂರು ಭಾಗಗಳಲ್ಲಿ ರೋಚಕವಾದ ವಿಷಯವನ್ನು ಬರೆಯುವ ಒಂದು ವಿಶಿಷ್ಟ ಗುಣ ಅವರಲ್ಲಿದೆ. ಅವರ ಸಂಪಾದಕೀಯ, ಸೊಂಪಾದಕೀಯ ಮತ್ತು ಸತ್ಯಶೋಧನೆಯ ಒಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿದ್ದೇನೆ.

ಸಂಪಾದಕೀಯ: ರಾಜಕೀಯ ಸೋಂಕು– ಕೆಲವೇ ತಿಂಗಳುಗಳ ಹಿಂದೆ ಕಾಣಿಸಿಕೊಂಡ ಕರೋನಾ ಸೃಷ್ಟಿಸುತ್ತಿರುವ ಸಮಸ್ಯೆ ಮತ್ತಷ್ಟು ಆತಂಕಗಳನ್ನು ಹುಟ್ಟುಹಾಕಿದೆ. ದಿನೇ ದಿನೇ ಕರೋನಾ ಸೋಂಕಿತರ ಸಾವಿನ ಸಂಖ್ಯೆಗಳಲ್ಲಿ ಏರಿಕೆ–ಇಳಿಕೆ ಕಂಡುಬರುತ್ತಿದೆ. ಇವುಗಳ ವ್ಯಾಖ್ಯಾನಗಳಲ್ಲಿ ಜಗತ್ತಿನ ಮತ್ತಷ್ಟು ಸಮಸ್ಯೆಗಳು ಆರಂಭಗೊಂಡಿವೆ. ಇಡೀ ಜಗತ್ತು ಇದೀಗ ಕರೋನಾದ ಬಗ್ಗೆಯೇ ಕಾಳಜಿ ವಹಿಸುತ್ತಿರುವ ಹಿನ್ನೆಲೆಯಲ್ಲಿ ಬೇರೆ ಬೇರೆ ರೀತಿಯ ಸಮಸ್ಯೆಗಳು ಕಡೆಗಣನೆಗೆ ಒಳಗಾಗುತ್ತಿವೆ. ಇಂಥ ಬೆಳವಣಿಗೆ ಸಾಮಾನ್ಯ. ಆದರೆ ಈ ಸಂದರ್ಭದಲ್ಲಿ ಪ್ರಮುಖ ಜವಾಬ್ದಾರಿ ಹೊಂದಿರುವ ಸಂಸ್ಥೆಯೊಂದು ಪ್ರಸ್ತುತ ಪ್ರದರ್ಶಿಸುತ್ತಿರುವ ವರ್ತನೆಗಳು ನಿಜಕ್ಕೂ ಆಘಾತ ಮತ್ತು ಆತಂಕವನ್ನು ಮೂಡಿಸುತ್ತಿದೆ. ಜಗತ್ತಿನ ಯಾವುದೇ ದೇಶಕ್ಕೆ ಅಗತ್ಯವಿರುವ ಆರೋಗ್ಯ ಸೇವೆ ಹಾಗೂ ಅಗತ್ಯ ಸೌಲಭ್ಯಗಳನ್ನು ಒದಗಿಸುವುದು ವಿಶ್ವ ಆರೋಗ್ಯ ಸಂಸ್ಥೆಯ ಕರ್ತವ್ಯ. ಆದರೆ ಇದೀಗ ಈ ಮಹತ್ವದ ಜವಾಬ್ದಾರಿ ಹೊಂದಿರುವ ಸಂಸ್ಥೆಯೇ ಆರೋಪ–ಪ್ರತ್ಯಾರೋಪಗಳಿಂದ ಕೂಡಿರುವುದು ವಿಷಾದನೀಯ ಸಂಗತಿ.

ವಿಶ್ವಸಂಸ್ಥೆಯ ವಿವಿಧ ಅಂಗ ಸಂಸ್ಥೆಗಳಲ್ಲಿ ವಿಶ್ವ ಆರೋಗ್ಯ ಸಂಸ್ಥೆ ಮಹತ್ವವಾದದ್ದು. ಅಗತ್ಯವಿರುವ ದೇಶಗಳಿಗೆ ಆರೋಗ್ಯ ಸೇವೆ, ಹಣಕಾಸು ನೆರವು, ಮಾರ್ಗದರ್ಶನ ಒದಗಿಸುವುದರ ಜೊತೆಗೆ ಔಷಧ ಶಿಫಾರಸ್ಸು ಮಾಡುವುದು ಈ ಸಂಸ್ಥೆಯ ಕರ್ತವ್ಯ. ಆದರೆ ಇದೀಗ ಅಂಥ ಮಹತ್ವದ ಸಂಸ್ಥೆಯೇ ಆರೋಪಗಳಿಗೆ ಸಿಲುಕಿ ರಾಜಕೀಯ ಸೋಂಕಿಗೆ ಒಳಗಾಗಿದೆ. ಈ ಸಂಸ್ಥೆಗೆ ಹಣ ಒದಗಿಸಲು ಅಮೆರಿಕ ಅಧ್ಯಕ್ಷ ಟ್ರಂಪ್ ನಿರಾಕರಿಸಿದ್ದಾರೆ. ಮುಂಜಾಗ್ರತ ಕ್ರಮಗಳ ಬಗ್ಗೆ ಮಾಹಿತಿ ನೀಡುವಲ್ಲಿ ವಿಫಲವಾಗಿದೆ ಎಂಬುದು ಕಾರಣ. ಈ ಸಂಸ್ಥೆಯ ಅಧ್ಯಕ್ಷರ ಆಯ್ಕೆಯಲ್ಲಿ ಚೀನಾ ಮಹತ್ವದ ಪಾತ್ರವಹಿಸಿದ್ದರಿಂದ ಅವರ ನಡೆ ಚೀನಾ ಕಡೆ ವಾಲುತ್ತಿದೆ ಎಂಬುದು ಮತ್ತೊಂದು ಆರೋಪ. ನಾನಾ ದೇಶಗಳು ಕರೋನಾ ಭೀತಿಯಿಂದ ಕಂಗೆಟ್ಟಿರುವ ಈ ವೇಳೆಯಲ್ಲಿ ಭರವಸೆ, ನೆರವು, ವೈದ್ಯಕೀಯ ಸೌಲಭ್ಯ ಒದಗಿಸಬೇಕಾದ ವಿಶ್ವ ಆರೋಗ್ಯ ಸಂಸ್ಥೆಯೇ ರಾಜಕೀಯ ಸೋಂಕಿಗೆ ಒಳಗಾಗಿರುವುದು ಬಹುದೊಡ್ಡ ದುರಂತ".[೩೪]

ಇದೇ ಕಾಲದಲ್ಲಿ ಸಂಪಾದಕರ ಸತ್ಯಶೋಧನೆ ಎಂಬ ಒಂದು ಭಾಗವಿದ್ದು ಅದರಲ್ಲಿ ತಮ್ಮ ಜೀವನದ ಪತ್ರಿಕಾ ಅನುಭವಗಳನ್ನು ವಿಶ್ವೇಶ್ವರ ಭಟ್ಟರು ತುಂಬ ಸ್ವಾರಸ್ಯವಾಗಿ ಕಟ್ಟಿಕೊಡುತ್ತಾರೆ. ದಿನಾಂಕ ೧-೫-೨೦೨೦ರ ಸಂಪಾದಕೀಯ ಕಾಲಂದಲ್ಲಿ 'ಪತ್ರಕರ್ತರು ಮಾಡುವ ಅನಾಹುತಗಳು' ಎಂಬ ಬರಹ ಹೀಗಿದೆ:

"ಲೋಕಸಭೆ ಮತ್ತು ವಿಧಾನಸಭಾ ಚುನಾವಣೆ ಬಂದರೆ ದಿಲ್ಲಿಯಿಂದ ಪತ್ರಕರ್ತರ ದಂಡೇ ಬರುತ್ತದೆ. ಕರ್ನಾಟಕದಲ್ಲಿ ಮೂರ್ನಾಲ್ಕು ದಿನಗಳ ಕಾಲ ಓಡಾಡಿ ವರದಿ ತಯಾರಿಸುತ್ತಾರೆ. ಕರ್ನಾಟಕದ ವಿದ್ಯಮಾನಗಳನ್ನು ಗಮನಿಸುವ ವರದಿಗಾರರಾದರೆ ಪರವಾಗಿಲ್ಲ. ಅವರಿಗೂ ನಿಖರವಾದ ವರದಿ ಮಾಡುವುದು ಕಷ್ಟವೇ. ಇಂಥವರು ಬೆಂಗಳೂರಿಗೆ ಬಂದವರೇ ಎರಡು-ಮೂರು ಅನುಭವಿ ಪತ್ರಕರ್ತರನ್ನು ಹಿಡಿದುಕೊಂಡು, ಅವರು ಹೇಳುವುದನ್ನೇ ಬರೆದು ಕಳಿಸುತ್ತಾರೆ. ಇದನ್ನೇ ಅವರನ್ನು ಕಳಿಸಿದ ಪತ್ರಿಕೆಗಳು 'ಗ್ರೌಂಡ ರಿಪೋರ್ಟ್' ಅಥವಾ 'ಸಾಕ್ಷಾತ್ ಸಮೀಕ್ಷೆ' ಎಂದು ಪ್ರಕಟಿಸುತ್ತವೆ. ಅಸಲಿಗೆ ಅವರು ಗ್ರೌಂಡ್‌ಗೆ ಹೋಗಿರುವುದಿಲ್ಲ. ಬೆಂಗಳೂರಿನಲ್ಲಿ ತಾವು ಉಳಿದುಕೊಂಡ ಹೊಟೆಲುಗಳಿಂದಲೋ, ಪ್ರೆಸ್ ಕ್ಲಬ್‌ನಿಂದಲೋ ಬರೆದು ಕಳಿಸುತ್ತಾರೆ. ಇನ್ನು ಕೆಲವರು ಕ್ಷೇತ್ರಗಳಿಗೆ ಹೋಗಬಹುದು. ಆದರೆ ಹತ್ತಾರು ಜನರ ಜತೆ ಮಾತಾಡಿದರೆ ಅವರ ಅಭಿಪ್ರಾಯಗಳೇ ಪ್ರಾತಿನಿಧಿಕ ಎಂದು ಹೇಳಲಾಗುವುದಿಲ್ಲ. ಅದಕ್ಕಿಂತ ಹೆಚ್ಚು ಜನರನ್ನು ಮಾತಾಡಿಸುವುದು ಸಾಧ್ಯವೂ ಇಲ್ಲ. ದಿಲ್ಲಿಯಿಂದ ಬಂದ ಪತ್ರಕರ್ತರಿಗೆ ಇಲ್ಲಿನ ಭಾಷೆ, ಭೂಗೋಳ, ಜನ, ಸಮಸ್ಯೆ, ಸಂಸ್ಕೃತಿ, ಪ್ರಾದೇಶಿಕ ವೈಶಿಷ್ಟ್ಯ ಯಾವವೂ ಗೊತ್ತಿರುವುದಿಲ್ಲ. ರಾಜಕಾರಣಿಗಳ ಪೂರ್ವಾಪರಗಳೂ ಗೊತ್ತಿರುವುದಿಲ್ಲ. ಗೂಗಲ್‌ನಲ್ಲಿ ಎಲ್ಲಾ ಮಾಹಿತಿಯೂ ಸಿಗುವುದಿಲ್ಲ. ಯಾವ ಕ್ಷೇತ್ರದಲ್ಲಿ ಯಾವ ಕೋಮಿನವರು ಇದ್ದಾರೆಂಬುದೂ ಗೊತ್ತಿರುವುದಿಲ್ಲ. ಮಂಡ್ಯದಲ್ಲೇ ಹುಟ್ಟಿ, ಹದಿನೈದು ಇಪ್ಪತ್ತು ವರ್ಷ ಅಲ್ಲೇ ವರದಿ ಮಾಡಿದ ಅನುಭವವಿರುವ

ವರದಿಗಾರರನ್ನು ಕೇಳಿ, ಈ ಸಲ ಮಂಡ್ಯ ಫಲಿತಾಂಶ ಏನಾಗಬಹುದು? ಅಂತ. ನಿಖರವಾಗಿ ಹೇಳಲು ಅವನಿಂದಲೂ ಸಾಧ್ಯವಿಲ್ಲ. ಎಲ್ಲಾ ಚುನಾವಣೆಯೂ ಹಿಂದಿನ ಚುನಾವಣೆಯಂತೆ ನಡೆಯುವುದಿಲ್ಲ. ಪ್ರತಿ ಚುನಾವಣೆಯೂ ಹೊಸತೇ. ಪ್ರತಿಸಲವೂ ರಾಜಕೀಯ ಲೆಕ್ಕಾಚಾರ, ಅಭ್ಯರ್ಥಿ, ಸಮಸ್ಯೆ, ವಿಷಯಗಳು ಬೇರೆ ಬೇರೆ ಆಗಿರುತ್ತವೆ. ಹೀಗಾಗಿ ಹಿಂದಿನ ಚುನಾವಣೆಗಳ ಅಂಕಿ ಅಂಶಗಳಿಂದ ಈ ಸಲದ ಚುನಾವಣೆಯನ್ನು ನಿರ್ಧರಿಸಲಾಗುವುದಿಲ್ಲ. ಚುನಾವಣೆಯಲ್ಲಿ ಸ್ಪರ್ಧಿಸಿದ ಪ್ರತಿಯೊಬ್ಬರಿಗೂ ತಮ್ಮ ಪಕ್ಷವೇ, ತಾವೇ ಆರಿಸಿ ಬರುವುದು ಎಂಬ ಭ್ರಮೆಯಲ್ಲಿರುತ್ತಾರೆ. ಅವರ ಹಿಂಬಾಲಕರೂ ಅದೇ ಮನಸ್ಥಿತಿಯಲ್ಲಿರುತ್ತಾರೆ. ಹೀಗಾದರೆ ಹೀಗಾಗಬಹುದು, ಹೀಗಾಗಬಹುದು ಎಂಬ ಕೆಲವು ಸಾಧ್ಯಾಸಾಧ್ಯತೆಗಳನ್ನು ಕೊಡಬಹುದೇ ಹೊರತು, ಅದಕ್ಕಿಂತ ಹೆಚ್ಚಿನದೇನನ್ನೂ ಮಾಡುವುದು ಸಾಧ್ಯವಿಲ್ಲ. ದಿಲ್ಲಿ ಪತ್ರಕರ್ತರು ಮಾಡುವ ಗ್ರೌಂಡ್ ರಿಪೋರ್ಟಿಂಗ್ ಅಂದ್ರೆ ಇದೇ. ಕಳೆದ ಲೋಕಸಭಾ ಚುನಾವಣೆ ವೇಳೆ ದಿಲ್ಲಿಯಿಂದ ಬಂದ ಪತ್ರಕರ್ತರೊಬ್ಬರು ನನ್ನನ್ನು ಭೇಟಿಯಾಗಿದ್ದರು. ಅವರ ಜತೆ ಹಳೆ ಮೈಸೂರು ಪ್ರದೇಶದ ರಾಜಕೀಯ ಚಿತ್ರಣವನ್ನು ವಿವರಿಸಿದೆ. ಅವರು ಕೇಳಿದ ಹತ್ತಾರು ಪ್ರಶ್ನೆಗಳಿಗೆ ಉತ್ತರಿಸಿದೆ. ತಕ್ಷಣ ಇವೆಲ್ಲವನ್ನೂ ಗ್ರಹಿಸಿದ ಕಷ್ಟವೇ. ನನ್ನನ್ನು ಉತ್ತರ ಪ್ರದೇಶದ ಅಥವಾ ಬಿಹಾರದ ಯಾವುದಾದರೂ ಲೋಕಸಭಾ ಕ್ಷೇತ್ರದಲ್ಲಿ ನಿಲ್ಲಿಸಿದರೆ ಹೇಗಾಗಬಹುದು? ಅಲ್ಲಿನ ಜಾತಿ ಸಮೀಕರಣ, ಪ್ರಾದೇಶಿಕ ಸಮಸ್ಯೆಗಳನ್ನೆಲ್ಲ ಅರ್ಥ ಮಾಡಿಕೊಳ್ಳುವುದು ಸುಲಭವಲ್ಲ. ಅವರು ಮಂಡ್ಯಕ್ಕೆ ಹೋಗಿ, ಅಲ್ಲಿ ಒಂದು ದಿನವಿದ್ದು ವಾಪಸ್ ಬಂದು ಒಂದು ವರದಿ ಬರೆದರು. ಅದನ್ನು ನನಗೂ ಕಳಿಸಿಕೊಟ್ಟರು. ಅದರಲ್ಲಿ ಒಂದೆಡೆ ಗೌಡರ ಮತ್ತು ಒಕ್ಕಲಿಗರ ನಡುವೆ ಹಣಾಹಣಿ ನಡೆಯಬಹುದು ಎಂದು ಬರೆದಿದ್ದರು. ನಾನು ಅವರನ್ನು ತಕ್ಷಣ ಸಂಪರ್ಕಿಸಿ ಮತ್ತೊಮ್ಮೆ ವಿವರಿಸಿದೆ. ಆಗಲೇ ಅವರಿಗೆ ತಮ್ಮ ತಪ್ಪು ಅರಿವಾಯಿತು. ಆ ವರದಿಯನ್ನು ಬದಲಿಸುವದಂತೆ ಹೇಳಿದೆ. ಹಾಗೆ ಮಾಡಿದರು. ಇಲ್ಲದಿದ್ದರೆ ನನ್ನ ಮರ್ಯಾದೆ ಹೋಗುತ್ತಿತ್ತು. ಕಾರಣ ಆ ವರದಿಯಲ್ಲಿ ಮೂರ್ನಾಲ್ಕು ಕಡೆ 'ಹಿರಿಯ ಪತ್ರಕರ್ತ ವಿಶ್ವೇಶ್ವರ ಭಟ್ ಹೇಳುವ ಪ್ರಕಾರ' ಎಂದು ಬರೆದಿದ್ದರು. ಪತ್ರಕರ್ತರು ಮಾಡುವ ಅನಾಹುತಗಳು ಒಂದಾ ಎರಡಾ?"[೩೫]

ಹೀಗೆ ತಮ್ಮ ಬದುಕಿನ ಅನುಭವಗಳನ್ನೇ ಓದುಗರಿಗೆ ಉಣಬಡಿಸುವ ಒಂದು ಚಾಣಾಕ್ಷ ಬರವಣಿಗೆ ವಿಶ್ವೇಶ್ವರ ಭಟ್ಟ ಅವರ ಸಂಪಾದಕೀಯದಲ್ಲಿದೆ.

**ಛಾಯಾಚಿತ್ರಗಾರರು** : ವಿಶ್ವಕರ್ಮ ಸಮಾಜದಿಂದ ಪ್ರಕಟವಾಗುತ್ತಿರುವ ಬಹುತೇಕ ಪತ್ರಿಕೆಗಳು ಮಾಸಿಕ ಪತ್ರಿಕೆಗಳಾಗಿವೆ. ಇವುಗಳಲ್ಲಿ ವಿಶ್ವಕರ್ಮ ಸಮಾಜದ ಸಭೆ-ಸಮಾರಂಭಗಳು ನಿರಂತರ ನಡೆಯುತ್ತವೆ. ಇಂಥ ಸಭೆ-ಸಮಾರಂಭಗಳ ವರದಿಗಳು ಫೋಟೋ ಸಹಿತ ಪ್ರಕಟವಾಗುತ್ತವೆ. ಇಂದು ತಂತ್ರಜ್ಞಾನ ಬಹಳಷ್ಟು ಮುಂದುವರಿದ ಪರಿಣಾಮವಾಗಿ ಯಾರು ಬೇಕಾದರೂ ತಮ್ಮ ಮೊಬೈಲ್‌ನಲ್ಲಿ ಫೋಟೋ ತೆಗೆದು ಕಳಿಸಬಹುದಾದ ಸಾಧ್ಯತೆಗಳು ಹೆಚ್ಚಿವೆ. ಆದರೆ ೧೫-೨೦

ವರುಷಗಳ ಹಿಂದೆ ಅಂಥ ಯಾವ ಸೌಲಭ್ಯಗಳೂ ಇಲ್ಲದ ಕಾಲದಲ್ಲಿ ಹೀಗೆ ಮಾಡುವುದು ಸಾಧ್ಯವಿರಲಿಲ್ಲ. ವಿಶ್ವಕರ್ಮ ಸಮಾಜದ ಕೆಲವು ಛಾಯಾಗ್ರಾಹಕರು ರಾಜ್ಯಮಟ್ಟದ ಅನೇಕ ಪತ್ರಿಕೆಗಳ ಮುಖಪುಟ ವಿನ್ಯಾಸ ಮಾಡಿರುವುದು ಗಮನಿಸುವಂಥದ್ದು.

ಅಪ್ಪು ಕುಟ್ಟನ್ ಆಚಾರ್ಯ ಎಂಬುವರು ಅಪರೂಪದ ಛಾಯಾಗ್ರಾಹಕರು. ಸುಧಾ ಪತ್ರಿಕೆಯ ಪ್ರಥಮ ಸಂಚಿಕೆಯ ಮುಖಪುಟ ವಿನ್ಯಾಸ ಮಾಡಿದ್ದು ಇವರ ಹೆಗ್ಗಳಿಕೆಯಾಗಿದೆ. ಚಂದ್ರನಾಥ ಆಚಾರ್ಯ ಅವರು ಪ್ರಸಿದ್ಧ ಛಾಯಾಗ್ರಾಹಕರಾಗಿದ್ದರು. ಸುಧಾ ಪತ್ರಿಕೆಯ ಮುಖಪುಟಕ್ಕೆ ಬೇಕಾದ ಚಿತ್ರಗಳನ್ನು ಒದಗಿಸುತ್ತಿದ್ದರು. ಸುಧಾ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಅನೇಕ ಪೌರಾಣಿಕ ಧಾರಾವಾಹಿಗಳ ಚಿತ್ರಗಳನ್ನು ಇವರು ಬಿಡಿಸಿದ್ದಾರೆ. ಕಂಪ್ಯೂಟರ್ ಚಿತ್ರಸಾಧನೆಯಲ್ಲಿಯೂ ಇವರು ಪ್ರಬುದ್ಧರು. ನವ್ಯ ಮಾದರಿಯ ಗೂಢ ಸಂಕೇತಾರ್ಥಗಳ ಇವರ ಛಾಯಾಚಿತ್ರಗಳು ಅಪೂರ್ವ.

ಸುಧಾಕರ ದರ್ಭೆ ವಿಶ್ವಕರ್ಮ ಸಮಾಜದ ಪ್ರಮುಖ ಛಾಯಾಗ್ರಾಹಕರು. ಕನ್ನಡ ಪ್ರಭ ಪತ್ರಿಕೆಯಲ್ಲಿ ಅನೇಕ ವರ್ಷ ಕೆಲಸ ಮಾಡಿದರು. ಕಥಾಚಿತ್ರ, ವ್ಯಂಗ್ಯ ಚಿತ್ರ ನಿರ್ಮಾಣದಲ್ಲಿಯೂ ಅವರು ಪ್ರಸಿದ್ಧರು. ಇತ್ತೀಚೆಗೆ ಕನ್ನಡದ ಪ್ರಸಿದ್ಧ ಲೇಖಕರ ಮುಖಪುಟ ವಿನ್ಯಾಸ ಮಾಡಿರುವುದು ಇವರ ವಿಶೇಷ ಸಾಧನೆಯಾಗಿದೆ.

ಶ್ರೀ ನವೀನ್‌ಕುಮಾರ ಎಂಬುವರು ಕನ್ನಡದ ಪ್ರಸಿದ್ಧ ಛಾಯಾಗ್ರಾಹಕರು. ಹಿಂದೂ ಪತ್ರಿಕೆಯ ಚಿತ್ರಗಾರರಾಗಿ ಕೆಲಸ ಮಾಡಿದ್ದಾರೆ. ಲೇಖನ ಚಿತ್ರ, ವ್ಯಂಗ್ಯಚಿತ್ರಗಳಿಂದ ಕರ್ನಾಟಕದ ತುಂಬ ಮನೆಮಾತಾಗಿದ್ದರು.

ಪಿ.ಎಸ್. ಆಚಾರ್ಯ ಎಂಬ ಫೋಟೋಗ್ರಾಫರು ನಾಡಿನ ತುಂಬ ಹೆಸರುವಾಸಿಯಾಗಿದ್ದಾರೆ. ಇವರು ತರಂಗ ಪತ್ರಿಕೆಯ ಛಾಯಾಗ್ರಾಹಕರಾಗಿ ಕೆಲಸ ಮಾಡಿದ್ದಾರೆ. ಇವರು ಕೂಡ ಪೌರಾಣಿಕ ಚಿತ್ರಗಳನ್ನು ಪ್ರಬುದ್ಧವಾಗಿ ಚಿತ್ರಿಸುವ ಕಲಾವಿದರಾಗಿದ್ದಾರೆ. ಯುವ ಮತ್ತು ಉತ್ಸಾಹಿ ಛಾಯಾಗ್ರಾಹಕರಾದ ಬಾಗಲಕೋಟೆಯ ಮುರನಾಳ ಗ್ರಾಮದ ಸಂಗಮೇಶ ಬಡಿಗೇರ 'ಪ್ರಜಾವಾಣಿ' ಮತ್ತು 'ಡೆಕ್ಕನ್ ಹೆರಾಲ್ಡ್'ನಂತಹ ಪತ್ರಿಕೆಗಳಿಗೆ ಛಾಯಾ ಚಿತ್ರಗಳನ್ನು ಒದಗಿಸುತ್ತ ಬಂದಿದ್ದಾರೆ. ಈಶ್ವರ ಬಡಿಗೇರ ಅನೇಕರು ಪ್ರಜಾವಾಣಿಯಂತಹ ಬೇರೆ ಬೇರೆ ದಿನಪತ್ರಿಕೆ, ವಾರಪತ್ರಿಕೆಯಲ್ಲಿ ಛಾಯಾಚಿತ್ರ ಮತ್ತು ಚಿತ್ರಗಳನ್ನು ಒದಗಿಸುತ್ತಲಿದ್ದಾರೆ. ಇವರ ಕೆಲವು ಛಾಯಾಚಿತ್ರ ಮತ್ತು ಚಿತ್ರಗಳು ವಿಶ್ವಕರ್ಮ ಪತ್ರಿಕೆಗಳಲ್ಲಿ ಬಳಕೆಯಾಗಿವೆ.

ಇಂದು ಕರ್ನಾಟಕದ ತುಂಬ ಅನೇಕ ಛಾಯಾಗ್ರಾಹಕರಿದ್ದರೂ ಅವರೆಲ್ಲರ ಮಾಹಿತಿ ಕಲೆ ಹಾಕುವುದು ಕಷ್ಟಸಾಧ್ಯ. ಅಲ್ಲದೆ ವಿಶ್ವಕರ್ಮ ಸಮಾಜದ ಪತ್ರಿಕೆಗಳಲ್ಲಿ ಅವರ ಹೆಸರನ್ನು ಪ್ರಕಟಿಸದೇ ಇರುವುದು ಅವರನ್ನು ಗುರುತಿಸಲು ಸಾಧ್ಯವಾಗದ ಒಂದು ಬಹುಮುಖ್ಯ ಕಾರಣವಾಗಿದೆ.

ತಾಂತ್ರಿಕ ವಿಭಾಗ : ಒಂದು ಪತ್ರಿಕೆ ಪ್ರಕಟವಾಗುವಲ್ಲಿ ಸಂಪಾದಕ–ವರದಿಗಾರರಷ್ಟೇ ತಾಂತ್ರಿಕ ವರ್ಗದ ಕೆಲಸವೂ ಮುಖ್ಯವಾಗುತ್ತದೆ. ಮುದ್ರಣ, ಪತ್ರಿಕೆಯ ವಿತರಕರು ಇವರೆಲ್ಲ ತಾಂತ್ರಿಕ ವರ್ಗದಲ್ಲಿ ಬರುತ್ತಾರೆ. ೧೯೩೦ರ ದಶಕದಲ್ಲಿ ವಿಶ್ವಕರ್ಮ ಸಮಾಜದ ಮೊಟ್ಟಮೊದಲ ಪತ್ರಿಕೆ 'ವಿಶ್ವಕರ್ಮ' ಪತ್ರಿಕೆಯು ಮೈಸೂರಿನ ಆರ್.ಎನ್.ಪಟ್ಟು ಅವರ ಉಪಾಧ್ಯೆಗಳಲ್ಲಿ ಪ್ರಕಟವಾಗುತ್ತಿತ್ತು. ಮೈಸೂರಿನ ಒಲ್ಡ್ ಪೋಸ್ಟ್ ಆಫೀಸ್ ರೋಡ್‌ನಲ್ಲಿ ಈ ಮುದ್ರಣಾಲಯವಿತ್ತು. ಲೇಖನಗಳ ಸಂಪಾದನೆ, ಪ್ರೂಫ್ ತಿದ್ದುವುದು ಮೊದಲಾದ ಕೆಲಸಗಳನ್ನು ಸಂಪಾದಕರು ಮಾಡುತ್ತಿದ್ದರು. ಮೊಳೆ ಜೋಡಿಸುವ ಕಾಲದಲ್ಲಿ ಇದು ತುಂಬಾ ಕಷ್ಟದ ಕೆಲಸವಾಗಿತ್ತು.

ವಿಶ್ವಕರ್ಮ ಸಮುದಾಯದ ಬಹುತೇಕ ಪತ್ರಿಕೆಗಳು ಬೇರೆ ಸಮುದಾಯದವರ ಮುದ್ರಣಾಲಯದಲ್ಲಿಯೇ ಪ್ರಕಟವಾಗುತ್ತ ಬಂದಿವೆ. ಅಲ್ಲಿಯ ತಾಂತ್ರಿಕ ವರ್ಗ ಜಾತಿ ಮತ ಭೇದಭಾವ ಮಾಡದೆ ಶ್ರದ್ಧೆಯಿಂದ ಕಾರ್ಯನಿರ್ವಹಿಸುತ್ತ ಬಂದಿವೆ. ತಾಂತ್ರಿಕ ವಿಭಾಗದಲ್ಲಿ ವಿಶ್ವಕರ್ಮ ಸಮುದಾಯದವರಿಗಿಂತ, ಬೇರೆ ಸಮುದಾಯದವರ ಕಾರ್ಯ ತೆರೆಮರೆಯಲ್ಲಿ ನಿರಂತರವಾಗಿ ನಡೆಯುತ್ತ ಬಂದಿದೆ. ಹೀಗೆ ವಿಶ್ವಕರ್ಮ ಸಮುದಾಯದ ಪತ್ರಿಕೆಗಳಿಗೆ ವಿಶ್ವಕರ್ಮೇತರ ಸಮುದಾಯದ ಜನ ಸಲ್ಲಿಸಿದ ಸೇವೆ ಅಪಾರವಾದುದು.

## ಕೊನೆ ಟಿಪ್ಪಣಿ


೧. ಚಿಂತನಶೀಲ ಬುದ್ಧಿಜೀವಿ, ಸಂಪುಟ-೧, ಸಂಚಿಕೆ-೬, ಫೆಬ್ರವರಿ, ೨೦೧೩

೨. ಸುರೇಶ :ಸಂಪಾದಕೀಯ ವಿಶ್ವಕರ್ಮೋದಯ ಪತ್ರಿಕೆ, ಪುಟ-೨, ಫೆಬ್ರವರಿ ೨೦೦೪

೩. ಮಂಜುನಾಥ ಆಚಾರ್ಯ: ಸಂಪಾದಕೀಯ ಪ್ರಬೋಧಕ. ಪುಟ-೪-೫, ಏಪ್ರಿಲ್ ೨೦೧೦

೪. ಸಿ. ಪಿ. ಮಾಯಾಚಾರಿ: ಸಂಪಾದಕೀಯ: ವಿಶ್ವಕರ್ಮ ವಿಕಾಸವಾಣಿ, ಪುಟ-೩, ಏಪ್ರಿಲ್ ೨೦೧೭

೫. ಬೈಕಾಡಿ ಜನಾರ್ದನ ಆಚಾರ್ :ಸಂಪಾದಕೀಯ ರೂವಾರಿ ಪತ್ರಿಕೆ, ಸಂಪುಟ ೧, ಸಂಚಿಕೆ ೯, ಜುಲೈ ೨೦೦೫,

೬. ಮೋಹನರಾವ್ :ವಿಶ್ವಬಂಧು, ಸಂಪಾದಕೀಯ ಸಂಪುಟ ೬, ಸಂಚಿಕೆ ೧೦, ಪು.೪, ಜೂನ್ ೨೦೦೬

೭. ಮೋಹನರಾವ್:ವಿಶ್ವಬಂಧು, ಸಂಪಾದಕೀಯ, ಸಂಪುಟ-೧, ಸಂಚಿಕೆ-೩, ಪು.-೩, ಮಾರ್ಚ ೨೦೦೦

೮. ಮಂಜುನಾಥ ಆಚಾರ್ಯ: ಸಂಪಾದಕೀಯ, ಆತ್ಮೀಯ ಬೋಧಕ, ಸಂಪುಟ ೩, ಸಂಚಿಕೆ ೬, ಪುಟ-೬, ಮೇ ೨೦೧೫

೯. ಬಿ.ಎ. ಆಚಾರ್ಯ: ಸಂಪಾದಕೀಯ ಸಹಚಿಂತನ, ಸಂ. ೩, ಸಂಚಿಕೆ ೧, ಪುಟ-೩ ಜನವರಿ ೨೦೧೨

೧೦. ಎನ್.ಸಿ. ಛಾಯಾಪತಿ: ಸಂಪಾದಕೀಯ,ವಿಧಾತೃ ಸಂ.೬, ಸಂಚಿಕೆ ೩, ಪುಟ-೩. ಏಪ್ರಿಲ್ ೨೦೧೫

೧೧. ಕೆ. ಸೂರ್ಯಾಚಾರ್ಯ: ಸಂಪಾದಕೀಯ, ವಿಶ್ವಕರ್ಮಕಲಾ, ಪುಟ-೩, ಜನವರಿ ೧೯೯೧

೧೨. ಗಣೇಶ ಆಚಾರ್ಯ: ವಿಶ್ವಕರ್ಮೋದಯ, ಸಂಚಿಕೆ-೨ ಪುಟ-೨೪, ಫೆಬ್ರವರಿ ೨೦೦೪

೧೩. ರೂವಾರಿ, ಸಂಚಿಕೆ ಪು ೩೦, ಆಗಸ್ಟ್ ೨೦೦೫

೧೪. ರೂವಾರಿ, ಸಂಚಿಕೆ ಪು ೨೬, ಜನವರಿ ೨೦೦೫

೧೫. ರೂವಾರಿ, ಮುಖಪುಟ, ಪತ್ರಿಕೆ ಸಂಪುಟ ೧, ಸಂಚಿಕೆ ೬, ಜನವರಿ ೨೦೦೫

೧೬. ರೂವಾರಿ, ಮುಖಪುಟ, ಸಂಪುಟ ೧, ಸಂಚಿಕೆ ೮, ಜೂನ್ ೨೦೦೫

೧೭. ರಂಗನಾಥ ದಿವಾಕರ: ಉಪನಿಷತ್ ಕಥೆಗಳು ಕುಮಾರ ನಚಿಕೇತ. ವಿಶ್ವಬ್ರಾಹ್ಮಣ, ಸಂಪುಟ ೬, ಸಂಚಿಕೆ ೬, ಪುಟ-೧೦-೧೪, ಫೆಬ್ರುವರಿ ೨೦೦೫

೧೮. ಸಿದ್ಧೇಶ್ವರ ಸ್ವಾಮಿಗಳು:ಆತ್ಮೋನ್ನತಿಗೆ ಬೇಕು ಆತ್ಮಾವಲೋಕನ, ವಿಶ್ವಕರ್ಮ ಸಂದೇಶ, ಸಂಪುಟ-೨, ಸಂಚಿಕೆ-೧೦-೧೧, ಪು.೧೪, ಜನೇವರಿ-ಫೆಬ್ರವರಿ ೨೦೦೭

೧೯. ಸಿದ್ಧೇಶ್ವರ ಸ್ವಾಮಿಗಳು: ಗುರು-ಶಿಷ್ಯರು: ವಿಶ್ವಕರ್ಮ ಸಂದೇಶ, ಸಂಪುಟ ೨, ಸಂಚಿಕೆ ೧೨, ಪುಟ-೧೩ ಮಾರ್ಚ ೨೦೦೭

೨೦. ಸಿದ್ಧೇಶ್ವರ ಸ್ವಾಮಿಗಳು: ಯೋಗಜೀವನ: ವಿಶ್ವಕರ್ಮ ಸಂದೇಶ ಸಂಪುಟ. ೩, ಸಂಚಿಕೆ ೧ಪುಟ-೧೭, ಜನವರಿ ೨೦೦೮

೨೧. ತರುಣ ಸಾಗರಜೀ :ಬದಲಾವಣೆ, ಕಾಳಿಕಾದೇವಿ ವಾಣಿ, ಸಂಪುಟ ೫, ಸಂಚಿಕೆ ೫, ಪುಟ-೩೩, ಸಪ್ಟೆಂಬರ್ ೨೦೧೩,

೨೨. ತರುಣ ಸಾಗರಜೀ:ಕಾಳಿಕಾದೇವಿ ವಾಣಿ, ಸಂಪುಟ-೫, ಸಂಚಿಕೆ-೧೧, ಪುಟ-೩೨, ಮಾರ್ಚ ೨೦೧೪

೨೩. ತರುಣ ಸಾಗರಜೀ:ಕಾಳಿಕಾದೇವಿ ವಾಣಿ, ಸಂಪುಟ ೫, ಸಂಚಿಕೆ ೬, ಪುಟ-೩೦,ಅಕ್ಟೋಬರ್ ೨೦೧೫

೨೪. ಜಯದೇವಪ್ಪ ಜೈನಕೇರಿ :ಕರ್ನಾಟಕ ಸಂಸ್ಕೃತಿ ಮತ್ತು ದೇವಾಲಯಗಳು :ವಿಶ್ವಕರ್ಮ ಸಂದೇಶ, ಸಂಪುಟ ೨, ಸಂಚಿಕೆ ೪, ಪು ೬-೭, ಅಗಷ್ಟ ೨೦೦೬

೨೫. ಜಯದೇವಪ್ಪ ಜೈನಕೇರಿ: ಕೆಲವು ಅಜ್ಞಾತ ವಚನಕಾರರು:ವಿಶ್ವಕರ್ಮ ಸಂದೇಶ, ಸಂಪುಟ ೫, ಸಂಚಿಕೆ ೬, ಪುಟ-೧೦-೧೨ ಜೂನ ೨೦೦೯

೨೬. ಜಿ. ಎಸ್. ಶಿವರುದ್ರಪ್ಪ: ಕನಕದಾಸರು : ಕೆಲವು ಚಿಂತನೆಗಳು - ಕಾಳಿಕಾದೇವಿ ವಾಣಿ, ಸಂಪುಟ ೬, ಸಂಚಿಕೆ ೯, ಪುಟ-೪-೬ ಜನವರಿ ೨೦೦೫

೨೭. ಹಿ. ಚಿ. ಬೋರಲಿಂಗಯ್ಯ: ಶ್ರೀಕೃಷ್ಣ ಪಾರಿಜಾತ: ರೂವಾರಿ ಪತ್ರಿಕೆ, ಸಂಪುಟ ೩, ಸಂಚಿಕೆ ೪, ಪುಟ-೯-೧೪, ಜುಲೈ ೨೦೦೭

೨೮. ಎ. ಆರ್. ಕೃಷ್ಣಶಾಸ್ತ್ರಿಗಳು : ಸಂಸ್ಕೃತಿ ಮತ್ತು ಶೀಲ- ವಿಶ್ವಕರ್ಮ, ಸಂ. ೫, ಸಂಚಿಕೆ ೬, ಪುಟ-೩-೭ ಏಪ್ರಿಲ್ ೧೯೫೩

೨೯. ದೇವುಡು : ರಾವಣನು ವಿಶ್ವಕರ್ಮ ವಂಶಜನು, ಕಾಳಿಕಾ ಸಂದೇಶ, ಸಂಪುಟ ೩, ಸಂಚಿಕೆ ೭, ಪುಟ-೧೫-೧೬, ಅಕ್ಟೋಬರ್ ೨೦೧೪,

೩೦. ಇಬ್ರಾಹಿಂ ಸುತಾರ : ಓದು ಬಲ್ಲವರೆಲ್ಲ ಜ್ಞಾನಿಗಳು, ಕಾಳಿಕಾ ಸಂದೇಶ, ಸಂಪುಟ ೭, ಸಂಚಿಕೆ ೩, ಪುಟ-೧೭-೧೮, ಮೇ ೨೦೧೮

೩೧. ಜಿ.ಶಂ. ಪರಮಶಿವಯ್ಯ : ಕಣಿವೆಯ ಬಾಳು- ವಿಶ್ವಕರ್ಮಾ, ಸಂಪುಟ ೫, ಸಂಚಿಕೆ ೬, ಪುಟ-೩೨-೩೩ ಏಪ್ರಿಲ್ ೧೯೫೩

೩೨. ಸ್ಥಿತಿಗತಿ ಪತ್ರಿಕೆ ಸಂಪುಟ ೧, ಸಂಚಿಕೆ ೩ಪುಟ-೨೩, ಜೂನ ೨೦೧೦

೩೩. ಸರಜೂ ಕಾಟ್ಕರ್: ನಾನು ಪಾಟೀಲ ಪುಟ್ಟಪ್ಪ ಆತ್ಮಕಥೆ ಪುಟ-೧೨೬

೩೪. ವಿಶ್ವವಾಣಿ, ಸಂಪಾದಕೀಯ, ದಿನಾಂಕ ೧-೫-೨೦೨೦

೩೫. ವಿಶ್ವವಾಣಿ, ಸಂಪಾದಕೀಯ, ದಿನಾಂಕ ೧-೫-೨೦೨೦ರ

# ಅಧ್ಯಾಯ–ಏಳು
## ವಿಶ್ವಕರ್ಮ ಪತ್ರಿಕೆಗಳಲ್ಲಿ ನಾಡು–ನುಡಿಯ ಸಂಬಂಧಿತ ಚರ್ಚೆಗಳು

ವಿಶ್ವಕರ್ಮ ಸಮಾಜದ ಪತ್ರಿಕೆಗಳು ಕೇವಲ ತನ್ನ ಸಮುದಾಯಕ್ಕಾಗಿ ಮೀಸಲಿರದೇ, ತಮಗೆ ಅನ್ನ ನೀಡುವ ಈ ನೆಲಕ್ಕಾಗಿ, ನಾಡು ನುಡಿಗಾಗಿ, ರಾಷ್ಟ್ರಾಭಿಮಾನಕ್ಕಾಗಿ ತನ್ನ ನಿಲುವುಗಳನ್ನು ಪ್ರಕಟಿಸುತ್ತಾ ಬಂದಿವೆ. ವಿಶ್ವಕರ್ಮ ಸಮಾಜದ ಹಿರಿಯರು ಒಗ್ಗಟ್ಟಿನಿಂದ ವಿಶ್ವಕರ್ಮ ಸಮಾಜಕ್ಕೆ ಮೀಸಲಾದ ಪತ್ರಿಕೆಗಳನ್ನು ಪ್ರಕಟಿಸಲು ಮುಂದಾಗುತ್ತಾರೆ. ಜಡವಾಗಿದ್ದ ಸಮಾಜವು, ಚೇತನಗೊಳ್ಳಬೇಕು, ಕ್ರಿಯಾಶೀಲವಾಗಬೇಕು. ಸಾಹಿತ್ಯ ಮತ್ತು ಸರಸ್ವತಿಯ ಅರಿವಿರದ ಸಮಾಜ ಹೆಳವಾಗುತ್ತದೆ. ನಮ್ಮನ್ನು ನಾವು ಕಟ್ಟಿಕೊಳ್ಳಲು ಸಾಹಿತ್ಯ ಉತ್ತಮ ಮಾರ್ಗ. ಸಂವೇದನಶೀಲತೆಯೇ ಸಂಘಟನೆಯ ಮೊದಲಮಂತ್ರ ಎನ್ನುವ ಸೃಜನಾತ್ಮಕ ದೃಷ್ಟಿಕೋನ ಈ ಪತ್ರಿಕೆಗಳ ಪ್ರಕಟಣೆಯ ಹಿಂದಿರುವ ಮುಖ್ಯ ತುಡಿತವಾಗಿದೆ. ಅದನ್ನು ವಿಶ್ವಕರ್ಮ ಪತ್ರಿಕೆಗಳು ತಮ್ಮ ಸಂಪಾದಕೀಯಗಳಲ್ಲಿ ನಾಡು ನುಡಿಯ ವಿಚಾರಗಳ ಕುರಿತು ಅರ್ಥಪೂರ್ಣವಾಗಿ ಹಿಡಿದಿಟ್ಟಿವೆ. ಸಮಾಜದ ಇತಿಮಿತಿಯನ್ನು ನಿಷ್ಪಕ್ಷಪಾತವಾಗಿ ತೆರೆದು ತೋರಿವೆ. ವಿಶ್ವಕರ್ಮರು ಜಾಗತೀಕರಣದ ಈ ದಿನಮಾನದಲ್ಲಿ ಕೇವಲ ತಮ್ಮ ಕುಲಕಸುಬುಗಳಿಗೆ ಒತ್ತು ಕೊಡದೆ, ತಮ್ಮ ಧನ ಸಂಪಾದನೆ ಮಾತ್ರ ತಮ್ಮ ಬದುಕು ಎಂಬುದನ್ನು ಮರೆತು, ತಾವು ಬದುಕುತ್ತಿರುವ ಈ ನಾಡಿಗಾಗಿ ಸಂಕ್ರಮಣದ ಸ್ಥಿತಿಯಲ್ಲಿಯೂ ವಿಶ್ವಕರ್ಮ ಸಮುದಾಯ ಪತ್ರಿಕೆಗಳ ಸಂಪಾದಕರು ತಮ್ಮ ನಾಡ ನುಡಿಯ ಕುರಿತಾದ ವಿಚಾರಗಳನ್ನು ಬರೆದಿದ್ದಾರೆ.

“ಈಗಿನ ನಾಗಾಲೋಟದ ಸ್ಪರ್ಧಾತ್ಮಕ ಸಮಾಜದ ಮಧ್ಯೆ ನಮ್ಮ ವಿದ್ಯಾಭ್ಯಾಸ ಜಾಗೃತಿ ಕಡಿಮೆ ಎಂದೇ ಹೇಳಬೇಕು. ನಮ್ಮ ಸಮಾಜದ ನಾಯಕರು ಸರ್ಕಾರದಿಂದ ಸೌಲಭ್ಯಗಳನ್ನು ಪಡೆಯಲು ಹೋರಾಡುತ್ತಿದ್ದಾರೆ. ಇವರ ಈ ಹೋರಾಟಕ್ಕೆ ಸಮಾಜ ಬಾಂಧವರ ಸಂಪೂರ್ಣ ಸಹಕಾರ ಅಗತ್ಯವಾಗಿದೆ. ಆದರೆ ರಾಜ್ಯಮಟ್ಟದ ವೇದಿಕೆಗಳು ಹೆಚ್ಚಾಗಿದ್ದು ಅವರವರ ಉದ್ದೇಶಿತ ಕಾರ್ಯವ್ಯಾಪ್ತಿಗಳು ಬೇರೆ ಬೇರೆಯಾಗಿರುವುದು ಸಂತೋಷದ ವಿಚಾರ...ನಮ್ಮ ಹಿರಿಯರು

ಪಂಚ ಕಸಬುಗಳಿಗೆ ಪ್ರಾಧಾನ್ಯತೆ ನೀಡುತ್ತಾ, ವೇದ ಅಧ್ಯಯನವನ್ನು ನಡೆಸುತ್ತಾ ಸಾಧನೆಯ ಮೆಟ್ಟಿಲುಗಳನ್ನೇರಿದ್ದರು. ಆದರೆ ಕಾಲ ಕಳೆದಂತೆಲ್ಲಾ ಕೇವಲ ಕುಲಕಸುಬುಗಳಿಗೆ ಪ್ರಾಧಾನ್ಯತೆ ನೀಡಿ, ವೇದ ಅಧ್ಯಯನವನ್ನು ಕಡೆಗಣಿಸಿದ ಫಲವೇ ಇಂದು ಬ್ರಾಹ್ಮಣತ್ವದ ಕೊರತೆಯನ್ನು ಎದುರಿಸುವಂತಾಗಿದೆ. ನಮ್ಮ ಕುಲಕಸುಬುಗಳನ್ನು ಉಳಿಸಿಕೊಳ್ಳುವುದರ ಜೊತೆಯಲ್ಲಿ ನಾವು ತಿರಸ್ಕರಿಸಿರುವ ಬ್ರಾಹ್ಮಣತ್ವವನ್ನು ಪಡೆಯುವ ಕಾರ್ಯ ನಮ್ಮೆಲ್ಲರದ್ದಾಗಲಿ".[೧]

ಸಂಪಾದಕರ ಈ ಮಾತುಗಳು ಆಧುನಿಕ ಜಗತ್ತಿನಲ್ಲಿ ವಿಶ್ವಕರ್ಮ ಜನಾಂಗವು ತನ್ನ ಹಕ್ಕು ಬಾಧ್ಯತೆಗಳನ್ನು ಪಡೆಯಲು ಸಂಘಟನಾತ್ಮಕವಾಗಿ ಜಾಗೃತವಾಗಿರುವ ಬಗೆಯನ್ನು ಪ್ರಮುಖವಾಗಿ ಎತ್ತಿ ತೋರಿಸುತ್ತವೆ. ಜ್ಞಾನ ಮತ್ತು ಕರ್ಮದಿಂದಲೆ ಚರಿತ್ರೆಯಲ್ಲಿ ಬಹುದೊಡ್ಡ ಗೌರವ ಸ್ಥಾನ ಪಡೆದಿದ್ದ ವಿಶ್ವಕರ್ಮ ಜ್ಞಾನಮಾರ್ಗದಿಂದ ವಿಮುಖರಾಗಿ ಕರ್ಮಮಾರ್ಗವನ್ನು ಆರಿಸಿಕೊಂಡ ಸಾಂಸ್ಕೃತಿಕ ವಿಸ್ಮೃತಿಗೆ ಸರಿದ ಬಗೆಯನ್ನು ಈ ಮಾತುಗಳು ಬಹಳ ಸೂಕ್ಷ್ಮವಾಗಿ ಹೇಳುತ್ತವೆ. ದೇಹಶ್ರಮ ಅಗೌರವ ಬೌದ್ಧಿಕ ಶ್ರಮ ಗೌರವಯುತವಾದದ್ದು ಎನ್ನುವ ಶ್ರೇಣೀಕೃತ ಚಿಂತನೆಗಳು ಹಾಗೂ ಮನೋಧರ್ಮಗಳು ವಿಶ್ವಕರ್ಮರಂತಹ ಕೌಶಲ್ಯಶೀಲ ಸಮುದಾಯಗಳನ್ನು ಶೂದ್ರಾತಿ ಶೂದ್ರರಂತೆ ಚಿತ್ರಿಸಿವೆ. ಬಹುದೊಡ್ಡ ಉತ್ಪಾದನೆ ಮತ್ತು ವಿನಿಮಯಶೀಲವಾದ ಭಾರತದ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯಲ್ಲಿ ದೊಡ್ಡ ಕೊಡುಗೆ ನೀಡಿದ ಪಾಂಚಾಳರು ಆಧುನಿಕ ಜಗತ್ತಿನಲ್ಲಿ ಅನಾಥರಾಗಿ ನಿಷ್ಕ್ರಿಯೆಗೆ ಸರಿದ ನೆಲೆಗಳನ್ನು ಈ ಮಾತುಗಳು ದಾಖಲಿಸುತ್ತವೆ. ಮತ್ತೆ ನಾವು ಪುಟಿದೇಳಬೇಕು ನಮ್ಮ ಸಾಂಸ್ಕೃತಿಕ ಹೆಮ್ಮೆಯನ್ನು ಪುನರ್ ಸ್ಥಾಪಿಸಿಕೊಳ್ಳಬೇಕೆನ್ನುವ ಅದಮ್ಯ ಉತ್ಸಾಹವನ್ನು ಅನೇಕ ಸಂಪಾದಕೀಯಗಳು ತೋರಿಸಿವೆ.

ವಿಶ್ವಕರ್ಮ ಸಮಾಜದಲ್ಲಿ ಮೊದಲು ಇಂತಹ ಸಾಂಸ್ಕೃತಿಕ ಜಾಗೃತಿಯನ್ನುಂಟು ಮಾಡಿದ ಪತ್ರಿಕೆಯೆಂದರೆ 'ವಿಶ್ವಕರ್ಮಾ'. ೧೯೪೮ರಿಂದ ಪ್ರಾರಂಭವಾದ ಈ ಪತ್ರಿಕೆ ಸುಮಾರು ಐವತ್ತು ವರ್ಷಗಳ ಕಾಲ ನಿರಂತರವಾಗಿ ಪ್ರಕಟಗೊಳ್ಳುತ್ತ ಬಂದಿದೆ. ಸ್ವಾತಂತ್ರ್ಯಾನಂತರ ವಿಶ್ವಕರ್ಮ ಸಮಾಜದ ಅಭಿವೃದ್ಧಿ ಹಾಗೂ ಬೆಳವಣಿಗೆ ಇತಿಹಾಸವನ್ನು ಅರಿತುಕೊಳ್ಳಬೇಕಾದರೆ ನಾವು ವಿಶ್ವಕರ್ಮಾ ಪತ್ರಿಕೆಯನ್ನು ಅವಶ್ಯವಾಗಿ ಅಧ್ಯಯನ ಮಾಡಲೇಬೇಕು. ಅಷ್ಟೇ ಅಲ್ಲ ದೇಶದ ಸಮಗ್ರ ಅಭಿವೃದ್ಧಿ ಬಗ್ಗೆ ಅದರ ಕಾರ್ಯಯೋಜನೆಗಳ ಬಗ್ಗೆಯೂ ಜಾಗೃತಿ ಮೂಡಿಸಿದ್ದು ಈ ಪತ್ರಿಕೆಯ ವಿಶೇಷತೆಯಾಗಿದೆ.

ಸ್ವಾತಂತ್ರ್ಯಾ ನಂತರ ನಾಡಿನ ಜನರಲ್ಲಿ ಅನೇಕ ಬಗೆಯ ಮಹತ್ವಾಕಾಂಕ್ಷೆಗಳು ಗರಿಗೆದರಿದವು. ವಿಶ್ವಕರ್ಮಾ ಪತ್ರಿಕೆಯ ಸಂಪಾದಕರು ತಮ್ಮ ಸಮಾಜ ಜಾಗೃತಿಯ ಜೊತೆಗೆ ನಾಡು-ನುಡಿ-ದೇಶದ ಸಮಗ್ರ ಅಭಿವೃದ್ಧಿಯಾಗಬೇಕೆಂಬ ಕಳಕಳಿ ಹೊಂದಿದ್ದರು. ಈ ಕಾರಣಕ್ಕಾಗಿ ದೇಶದ-ರಾಜ್ಯದ ರಾಜಕೀಯ-ಸಾಮಾಜಿಕ ವಿಷಯಗಳನ್ನು ತಮ್ಮ ಸಂಪಾದಕೀಯಗಳಲ್ಲಿ ಪ್ರಸ್ತಾಪಿಸಿ, ವಿಶ್ವಕರ್ಮ ಸಮಾಜದ 'ಲೋಕದೃಷ್ಟಿ'ಯನ್ನು ಅದೇ ಹೊತ್ತಿಗೆ ಹಾಗೂ ಇತರೆ ಸಮಾಜದ ಬಗ್ಗೆ ತಾನು ಹೊಂದಿದ್ದ ಸಕಾರಾತ್ಮಕ ದೃಷ್ಟಿಕೋನವನ್ನು ತೋರಿಸಿಕೊಟ್ಟರು.

೧೯೪೯ರಲ್ಲಿ ಪಂಡಿತ ನೆಹರೂ ಅವರು ಅಮೇರಿಕಾ ದೇಶಕ್ಕೆ ಹೋದಾಗ, ಅಲ್ಲಿನ ಅಧ್ಯಕ್ಷ ಟ್ರೂಮನ್ನರೇ ವಿಮಾನ ನಿಲ್ದಾಣಕ್ಕೆ ಬಂದು ಸ್ವಾಗತಿಸಿದ್ದರು. ಈ ಘಟನೆಯನ್ನು ಮುಖ್ಯವಾಗಿಟ್ಟುಕೊಂಡು ಸಂಪಾದಕ ಗಂಗಾಧರಮೂರ್ತಿ ಅವರು 'ಭಾರತವು ಒಗ್ಗಟ್ಟಿನಿಂದ ಸ್ವಾವಲಂಬಿಯಾಗಬೇಕು' ಎಂಬ ಮೌಲಿಕ ಸಂಪಾದಕೀಯ ಬರೆದಿದ್ದರು. "ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ಎದುರಾಳಿಯ ಒಂದು ತೊಟ್ಟು ರಕ್ತವೂ ಕೆಳಕ್ಕೆ ಬೀಳದಂತೆ ಸಂಗ್ರಾಮವು ನಡೆದು, ಇನ್ನೇನು ಸಂಪೂರ್ಣ ಪ್ರಜಾರಾಜ್ಯವಾಗಿ ರೂಪುಗೊಳ್ಳುತ್ತಿರುವ ಭಾರತಕ್ಕೆ ಈ ಸುವರ್ಣ ಸಂದರ್ಭದಲ್ಲಿ ಅದಕ್ಕುಚಿತ ರೀತಿಯಲ್ಲಿ ಪ್ರಪಂಚ ಮನ್ನಣೆಯು ಇಂದು ದೊರೆತಂತಾಯಿತು. ಆದರೆ ಭಾರತವು ಇಷ್ಟರಿಂದ ಮಾತ್ರ ಹೆಮ್ಮೆ ಪಡದೆ, ಕೇವಲ ನೈತಿಕ ಸಂಗ್ರಾಮದಿಂದ ರಾಜ್ಯವನ್ನು ಕಟ್ಟಿದೆವೆಂದು ಅಹಂಕಾರವನ್ನು ಮೈಗೂಡಿಸಿಕೊಳ್ಳದೆ, ಗಳಿಸಿದ ಸ್ವಾತಂತ್ರ್ಯವನ್ನು ಸರ್ವಸಾಹಸದಿಂದ ಕಾಪಾಡಿಕೊಳ್ಳುವ ಬಗೆಯನ್ನು ಕುರಿತು ಯಾವಾಗಲೂ ಆಲೋಚನೆ ನಡೆಸುತ್ತ ಪ್ರಪಂಚದ ಮತ್ತು ನಮ್ಮ ಸುತ್ತುಮುತ್ತಿನ ಪರಿಸ್ಥಿತಿಯನ್ನು ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸುತ್ತಾ ಒಳನಾಡಿನಲ್ಲಿ ಐಕ್ಯಮತವನ್ನೂ ಅಭಿವೃದ್ಧಿಯನ್ನೂ ಸಾಧಿಸಬೇಕಾದುದು ಇಂದಿನ ಪರಮ ಕರ್ತವ್ಯವಾಗಿದೆ"[೨] ಎಂದು ಬರೆಯುತ್ತಾರೆ. ಆ ಮೂಲಕ ವಿಶ್ವಕರ್ಮ ಪತ್ರಿಕೆಗಳ ಜಾತ್ಯತೀತ ದೃಷ್ಟಿಕೋನವನ್ನು ಸ್ಪಷ್ಟಪಡಿಸುತ್ತಾರೆ.

೧೯೪೯-೧೯೫೦ರ ಸಂಚಿಕೆಗಳಲ್ಲಿ ಹೀಗೆ ದೇಶದ ಪ್ರಗತಿಯ ಕುರಿತು, ನಾಡಿನ ಏಕೀಕರಣದ ಕುರಿತು ಮೌಲಿಕವಾದ ಸಂಪಾದಕೀಯಗಳು ಮೂಡಿಬಂದಿರುವುದು ವಿಶೇಷವಾಗಿದೆ. ಕೇವಲ ವಿಶ್ವಕರ್ಮ ಸಮಾಜದ ಕುರಿತು ಮಾತ್ರ ಚಿಂತಿಸದೆ, ಒಟ್ಟು ದೇಶದ ಪ್ರಗತಿಗಾಗಿ ಹಂಬಲಿಸಿದ್ದು ಸಂಪಾದಕರ ವಿಶಾಲ ಲೋಕದೃಷ್ಟಿಗೆ ನಿದರ್ಶನವಾಗಿದೆ.

ಎಪ್ಪತ್ತು ವರ್ಷಗಳ ಹಿಂದೆ (೧೯೪೯) ವಿಶ್ವಕರ್ಮ ಸಮಾಜವು ಯಾವ ರೀತಿ ಪತ್ರಿಕೆಯ ಮೂಲಕ ಮುಂದೆ ಬರಬೇಕೆಂಬ ಸಂಪಾದಕೀಯವೊಂದನ್ನು 'ವಿಶ್ವಕರ್ಮ ವಾಚಕರಲ್ಲಿ ಪ್ರಾರ್ಥನೆ' ಎಂಬ ಶೀರ್ಷಿಕೆಯಲ್ಲಿ ಗಂಗಾಧರಮೂರ್ತಿಯವರು ತುಂಬ ಅರ್ಥಪೂರ್ಣವಾಗಿ ಬರೆದಿದ್ದಾರೆ.

"ವಿಶ್ವಕರ್ಮಾ ಪತ್ರಿಕೆಯು ಜನ್ಮಧಾರಣ ಮಾಡಿ ಎರಡನೆಯ ವರ್ಷಕ್ಕೆ ಕಾಲಿಟ್ಟಿದೆ. ಪತ್ರಿಕೆಯ ವಾಚಕರು ಅನೇಕರು ಕೇವಲ ಅಭಿಮಾನದಿಂದ, ಇದೊಂದು ನಮ್ಮ ಮನೆಯಲ್ಲಿರಲಿ ಎಂಬ ಪ್ರೀತಿಯಿಂದ, ವಿಶ್ವಕರ್ಮನ ಹೆಸರಿನಲ್ಲಿ ಹೊರಟಿದೆ, ಇದಕ್ಕೆ ಸಹಾಯ ಮಾಡಲೇಬೇಕೆಂಬ ಉದಾರ ಬುದ್ಧಿಯಿಂದ ಚಂದಾದಾರರಾಗಿದ್ದಾರೆ. ಅಭಿಮಾನವಿಷ್ಟೇ ಸಾಲದು. ಮಾಸ ಮಾಸವೂ ಒಂದಕ್ಷರವನ್ನೂ ಬಿಡದೆ ಓದಿ, ತಮ್ಮ ಮನೆಯವರಿಗೆಲ್ಲ ಓದಿ ತಿಳಿಸಿ, ನಾಲ್ಕು ಜನ ಸೇರಿದ ಕಡೆ ಇದರಲ್ಲಿಯ ಕಥೆಯನ್ನೋ ಲೇಖನವನ್ನೋ ಚರ್ಚಿಸಿ, ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕಲ್ಲದೆ, ತಿಳಿವಳಿಕೆಯುಳ್ಳ ಹಿರಿಯರು ಇದರಲ್ಲಿಯ ಕುಂದುಗಳನ್ನು ತೋರಿಸಿ ಕೊಡುವುದರ ಜೊತೆಗೆ ತಮ್ಮ ಜ್ಞಾನಾನುಭವ, ಗ್ರಂಥಾವಲೋಕನ, ದೇಶಾಭ್ಯುದಯ ವಿಷಯ, ತಮ್ಮ ಮನಸ್ಸಿನಲ್ಲಿ ನಡೆಯುವ ವಿಚಾರ ಮಂಥನಗಳನ್ನು ಎಲ್ಲರಿಗೂ ತಿಳಿಯುವಂತೆ ಲೇಖನಗಳನ್ನು ಬರೆದು

ಕಳುಹಿಸಿ, ಈ ಪತ್ರಿಕೆಯನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ. ಈ ಪತ್ರಿಕೆಯಲ್ಲಿ ಕನ್ನಡ ನಾಡಿನಾದ್ಯಂತ ನಡೆಯುವ ಸಮಾಜ ಚಟುವಟಿಕೆಗಳನ್ನು ಪ್ರಕಟಿಸುತ್ತಿದ್ದೇವೆ. ಇದರ ಮುಖ್ಯ ಪ್ರಯೋಜನವನ್ನು ವಾಚಕರು ಪಡೆಯಬೇಕು. ಈಗ ಜಗತ್ತು ಮುಂದುಮುಂದಕ್ಕೆ ಓಡುತ್ತಿದ್ದೆ. ರೇಡಿಯೋ, ವಿಮಾನಗಳು ಮುಂತಾದ ಸಾಧನಗಳಿಂದ ದೂರ ದೂರವಿದ್ದ ವಿಶಾಲ ದೇಶಗಳು ನಮ್ಮ ಹತ್ತಿರ ಹತ್ತಿರ ಬರುತ್ತಿವೆ. ವಿಶ್ವವೇ ಒಂದಾಗುತ್ತಿದೆ. ಈ ಪರಿಸ್ಥಿತಿಗೆ ತಕ್ಕಂತೆ ನಮ್ಮ ಭಾವನೆಗಳನ್ನು ನಾವು ಬೆಳೆಸಿಕೊಂಡು ಕಾಲದ ಜತೆಯಲ್ಲಿ ಸಾಗಬೇಕಾಗಿದೆ. ಈಗ ನಾವು ಹಾಗಿಲ್ಲದಿರುವುದರಿಂದ ಜಗತ್ತಿನ ದೃಷ್ಟಿಗೆ ನಾವು ಬೀಳದೇ ಹೋಗಿದ್ದೇವೆ. ದೃಷ್ಟಿಗೆ ಬೀಳದಿದ್ದರೆ ಹೋಗಲಿ, ಪೂರ್ವ ಔನ್ನತ್ಯದಿಂದ ಮೆರೆದ ನಮ್ಮ ಜನಾಂಗವು ಕಾಲಚಕ್ರದ ಹಲ್ಲಿಗೆ ಸಿಕ್ಕಿ ಪುಡಿಪುಡಿಯಾಗಿ ಹೋಗಿದೆ. ನಾವೀಗ ದೇಶದ ಪ್ರಗತಿಯ ನಾಗಾಲೋಟವನ್ನು ಮನಗಂಡು ಅದಕ್ಕೆ ತಕ್ಕಂತೆ ನಮ್ಮನ್ನು ನಾವು ಸಿದ್ಧಮಾಡಿಕೊಳ್ಳಬೇಕಾಗಿದೆ. ಮೊಟ್ಟಮೊದಲು ನಾವು ಪ್ರತಿಯೊಂದು ಊರಿನಲ್ಲಿಯೂ ಇರುವ ನಾಲ್ಕೇ ಮನೆಗಳಾಗಲಿ, ಹತ್ತೇ ಜನರಾಗಲಿ ಪರಸ್ಪರ ಕಚ್ಚಾಡುವುದನ್ನು ಬಿಟ್ಟು, ಒಬ್ಬರಿಗೊಬ್ಬರು ಹೀಗಳೆಯುವುದನ್ನು ತ್ಯಜಿಸಿ, ಒಂದಾಗಿ, ಪರಸ್ಪರ ಅವನತಿಯನ್ನು ಕುರಿತು ಚರ್ಚಿಸಿ, ಒಗ್ಗಾಟ್ಟಾಗಿ ಬೆಳೆಯಬೇಕಾಗಿದೆ. ನಮ್ಮಲ್ಲಿರುವ ಅನೇಕ ಒಳಪಂಗಡಗಳಲ್ಲಿ ನಾವು ಶ್ರೇಷ್ಠರು ಇತರರು ಕನಿಷ್ಠರು, ನಾವು ಶುದ್ಧರು ಇತರರು ಅಶುದ್ಧರು, ನಾವು ಪರಮ ಸಾತ್ವಿಕರು, ಇತರರು ದುಷ್ಟಚರಿತರು, ನಾವು ಶ್ರೀಮಂತರು, ಇತರರು ರಿಕ್ತರು, ನಾವು ವಿದ್ಯಾವಂತರು ಇತರರು ಮೂಢರು ಎಂಬ ಭೇದಬುದ್ಧಿಯನ್ನು ಮನಸ್ಸಿನಿಂದ ಬುಡಮಟ್ಟ ತೆಗೆದುಹಾಕಿ, ಸರ್ವರೂ ಸಮಾನರು ಎಂಬ ಪ್ರೀತಿಯ ಭಾವದಿಂದ, ಅಂತರಂಗ ಪ್ರೇಮದಿಂದ ಒಳಪಂಗಡ ಭಾವನೆಯನ್ನೇ ರೂಢಮೂಲವಾಗಿ ಕಿತ್ತೊಗೆದು, ಒಳಪಂಗಡಗಳಲ್ಲಿ ಬಂಧುತ್ವವನ್ನು ವೃದ್ಧಿ ಪಡಿಸಿಕೊಂಡು ವಿಶ್ವಕರ್ಮ ಜನಾಂಗವೆಂದರೆ ಒಂದೇ ಮನೆಯವರೆಂಬ ಉದಾತ್ತ ಬುದ್ಧಿಯನ್ನು ಬೆಳೆಸಿಕೊಳ್ಳಬೇಕಾಗಿದೆ. ಪ್ರತಿ ಊರಿನಲ್ಲಿಯೂ ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು, ಆಯಾ ಊರಿನ ಮತೀಯರೊಬ್ಬರನ್ನೂ ಬಿಡದೆ ಸದಸ್ಯರನ್ನಾಗಿ ಮಾಡಿಕೊಂಡು ಆ ಮೂಲಕ ನಮ್ಮ ಜನಾಂಗವನ್ನು ಎದುರಿಸುತ್ತಿರುವ ಎಡರು ತೊಡರುಗಳನ್ನು ದೃಷ್ಟಿಯಲ್ಲಿರಿಸಿಕೊಂಡು, ಸದಸ್ಯರಿಂದ ಮಾಸಿಕವಾಗಿಯೋ ಪಾಕ್ಷಿಕವಾಗಿಯೋ ಚಂದಾ ಹಣವನ್ನು ಕೂಡಿಸಿ, ಪ್ರತಿಯೊಬ್ಬ ಬಾಲಕ-ಬಾಲಕಿಗೂ ಪುಸ್ತಕ ಸ್ಲೇಟು ಇತ್ಯಾದಿ ಅಭ್ಯಾಸ ಸಾಮಗ್ರಿಗಳನ್ನು ಕೊಡಿಸಿ, ಅಕ್ಷರಾಭ್ಯಾಸ ಮಾಡಿಸುವ ಕಾರ್ಯಕ್ರಮವನ್ನಿಟ್ಟುಕೊಳ್ಳಬೇಕು. ಕೊಂಚ ಓದು ಬರುವ ವಿದ್ಯಾರ್ಥಿಗಳಿಗೆ ನಮ್ಮ ಶಿಲ್ಪ ಕೆಲಸಗಳನ್ನು-ಕೈ ಕೆಲಸಗಳನ್ನು ಕಲಿಸುವುದರ ಜತೆಗೆ ಮುಂದೆ ಓದುವುದಕ್ಕೂ ಸಹಾಯ ಮಾಡಬೇಕು. ಪ್ರೌಢ ವಿದ್ಯಾರ್ಥಿಗಳಿಗೆ ಕಾರ್ಖಾನೆಗಳ ಕೆಲಸಕ್ಕೆ ಸಹಾಯ ಮಾಡುವಂತಹ ಟೆಕ್ನಿಕಲ್ ಶಿಕ್ಷಣವನ್ನು ಕೊಡಿಸಲು ವೇತನಗಳನ್ನೂ ಕೊಡಬೇಕು. ನಮ್ಮಲ್ಲಿ ಇದ್ದ ಇರುವ ಉತ್ತಮೋತ್ತಮ ವಿಷಯಗಳನ್ನು ಪ್ರಕಟಿಸಿ. ನಮ್ಮ ವಿಷಯದಲ್ಲಿರುವ ಇತರ ಮತೀಯರ ಅನಾದರಣೆಯನ್ನು ಹೋಗಲಾಡಿಸಿ. ನಮ್ಮನ್ನು ಸಮಾನ ಭಾವನೆಯಿಂದ.

ಗೌರವ ಬುದ್ಧಿಯಿಂದ ಕಾಣುವಂತಾಗುವ ಪರಿವರ್ತನೆಯನ್ನು ತರಬೇಕು. ಸ್ವಾತಂತ್ರ್ಯ ಸಾಧನೆಯಲ್ಲಿ ನಾವು ವಹಿಸಿದ ಭಾಗ-ಪಾತ್ರ ನಮ್ಮ ಜನಾಂಗದ ಪರಿಮಾಣಕ್ಕೆ ತಕ್ಕ ಪ್ರಮಾಣದಲ್ಲಿ ಇರಲಿಲ್ಲವೆಂಬುದನ್ನು ನಾವು ಕೊಂಚ ಯೋಚಿಸಿದರೆ ಅದು ಗಾತ್ರದಲ್ಲಿ ಸಣ್ಣದಾದುದರಿಂದ ಯೋಗ್ಯತೆಯಲ್ಲಿ ಹೆಚ್ಚಿನದಾದರೂ ಸ್ವಾತಂತ್ರ್ಯದ ಪ್ರಯೋಜನಫಲಗಳು ನಮ್ಮ ಪಾಲಿಗೆ ಬರದೇ ಹೋಗಿವೆ. ಈಗಲಾದರೂ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವುದರಲ್ಲಿ, ದೇಶಾಭಿವೃದ್ಧಿ ಕಾರಕ ಪ್ರಯತ್ನಗಳಲ್ಲಿ ನಾವು ಇತರ ಪಂಗಡಗಳ ಸಮಸಮವಾಗಿ ಭಾಗವಹಿಸಿದರೇ ನಮ್ಮ ಉಳಿವು; ಇಲ್ಲವೇ ನಮ್ಮ ಅಳಿವು ಶತಸಿದ್ಧ. ಹಾಗೆ ನಾವು ಉಳಿಯಬೇಕಾದರೆ ನಮ್ಮ ಸಾಮಾಜಿಕ ಪ್ರಯತ್ನಗಳು ಸಾರ್ವಜನಿಕ ಕ್ಷೇತ್ರವನ್ನು ವ್ಯಾಪಿಸಬೇಕು. ಸಾರ್ವಜನಿಕರನ್ನು ನಮ್ಮ ಸಮಾಜ ಕಾರ್ಯಗಳಲ್ಲಿ ಭಾಗವಹಿಸುವಂತೆ ಆಹ್ವಾನಿಸಿ, ದಲಿತವಾಗಿರುವ ನಮ್ಮ ಜನಾಂಗದ ಅಭಿವೃದ್ಧಿಗೆ ಎಲ್ಲರೂ ತಾವಾಗಿಯೇ ಸಹಾಯ ಮಾಡುವಂತೆ ನಮ್ಮ ಕಾರ್ಯಕ್ರಮಗಳನ್ನು ರೂಪಿಸಬೇಕು. ಇಂತಹ ಜಾಗೃತಿಯನ್ನು ನಮ್ಮ ಜನರಲ್ಲಿ ತರುವುದಕ್ಕಾಗಿಯೇ ಈ ಪತ್ರಿಕೆಯು ರೂಪತಾಳಿದೆ. ಪತ್ರಿಕೆಯ ಪೂರ್ಣ ಪ್ರಯೋಜನವನ್ನು ನಮ್ಮ ಜನತೆ ಪಡೆಯಬೇಕಾದರೆ ಇದು ಎಲ್ಲೆಲ್ಲಿಯೂ ಹೆಚ್ಚು ಪ್ರಚಾರವಾಗಬೇಕು. ಪ್ರತಿಯೊಬ್ಬ ವಿಶ್ವಕರ್ಮನ ಹಸ್ತವನ್ನೂ ಮನಸ್ಸನ್ನೂ ಈ ಪತ್ರಿಕೆಯು ಅಲಂಕರಿಸಬೇಕು. ಕನ್ನಡ ನಾಡಿನ ಪ್ರತಿಯೊಬ್ಬ ವಿಶ್ವಕರ್ಮನೂ ತಾನು ಚಂದಾದಾರನಾಗದಿದ್ದರೆ ಒಂದು ಕರ್ತವ್ಯಲೋಪ ಮಾಡಿದಂತೆ ಭಾವಿಸುವುದಾದರೆ ಪತ್ರಿಕೆಯು ತನ್ನ ಸಮಸ್ತ ಶಕ್ತಿಯನ್ನೂ ಜನಾಂಗ ಸೇವೆಗೆ ಅರ್ಪಿಸಲು ಶಕ್ತವಾಗುವುದು. ಆ ಶಕ್ತಿಯನ್ನು ಒದಗಿಸಿಕೊಟ್ಟ ನಮ್ಮ ಜನತೆಯ ಅಭಿವೃದ್ಧಿಯನ್ನು ಸಾಧಿಸಬೇಕೆಂದು ಮತ್ತೊಮ್ಮೆ ಎಲ್ಲರಲ್ಲಿಯೂ ಕೇಳಿಕೊಳ್ಳುತ್ತೇನೆ".[೩]

ಏಳು ದಶಕಗಳ ಹಿಂದೆ ವಿಶ್ವಕರ್ಮ ಸಮಾಜ ಯಾವ ರೀತಿ ಒಡಮುರಿದೇಳಬೇಕೆನ್ನುವ ಆಶಯ ಸಂಪಾದಕರಿಗಿತ್ತು ಎಂಬುದನ್ನು ಈ ಸುದೀರ್ಘವಾದ ಸಂಪಾದಕೀಯ ನಮಗೆ ತಿಳಿಸುತ್ತದೆ. ಆಗ ರೇಡಿಯೋ ವಿಮಾನಗಳು ಚಲಾವಣೆಗೆ ಬಂದು ದೇಶ ಮುಂದೆ ಹೋಗುತ್ತಿದೆ ಎಂದು ಸಂಪಾದಕರು ಹೇಳಿದರೆ, ಇಂದು ಕಂಪ್ಯೂಟರ್-ಮೊಬೈಲ್‌ಗಳು ಬಂದು ದೇಶವೇ ಒಂದು ಹಳ್ಳಿಯಂತಾಗಿ ಪರಿಣಮಿಸಿದೆ. ಅಂದು ಶಿಕ್ಷಣಕ್ಕಾಗಿ ಸಮಾಜದ ಬಡಮಕ್ಕಳು ಹಂಬಲಿಸುವಂತೆ, ಇಂದೂ ಬಡಮಕ್ಕಳಿಗೆ ಸೂಕ್ತ ಅವಕಾಶವಿಲ್ಲದೆ ಪರದಾಡುತ್ತಿದ್ದಾರೆ. ಯೋಗ್ಯತೆ ಇದ್ದರೂ ಒಳ್ಳೆಯ ಶಿಕ್ಷಣವಾಗಲೀ, ಸರ್ಕಾರಿ ನೌಕರಿಯಾಗಲಿ ದೊರೆಯುವುದು ದುರ್ಲಭವಾಗಿದೆ. ವಿಶ್ವಕರ್ಮ ಸಮಾಜಕ್ಕೆ ಈ ಏಳು ದಶಕಗಳಿಂದಲೂ ರಾಜಕೀಯವಾಗಿ ಯಾವುದೇ ಪ್ರಾತಿನಿಧ್ಯ ಸಿಕ್ಕಿಲ್ಲ. ಈ ಮೇಲಿನ ಸಂಪಾದಕೀಯದಲ್ಲಿ ಸಾರ್ವಜನಿಕವಾಗಿ ವಿಶ್ವಕರ್ಮರು ಹೆಚ್ಚು ತೊಡಗಿಸಿಕೊಳ್ಳಬೇಕು. ಅವರು ಸಮಾಜದಿಂದ ಪ್ರತ್ಯೇಕವಾಗಿ ಉಳಿಯಬಾರದು. ಅಂದಾಗ ಮಾತ್ರ ತಮ್ಮ ಉಳಿವು ಎಂದು ಸಂಪಾದಕರು ಎಚ್ಚರಿಸಿದ್ದು ಸಕಾಲಿಕವಾಗಿದೆ.

ವಿಶ್ವಕರ್ಮಾ ಪತ್ರಿಕೆಯ ಸಂಪಾದಕರು ಭಾರತ ಸಂವಿಧಾನವನ್ನು ಅಂಗೀಕರಿಸಿ ಪ್ರಜಾರಾಜ್ಯವಾದ ದಿನಾಂಕ:೨೬-೧-೧೯೫೦ರ ಸವಿನೆನಪಿಗಾಗಿ ಭಾರತ ಪ್ರಜಾರಾಷ್ಟ್ರೋದಯ ಸಂಚಿಕೆ ಎಂಬ ವಿಶೇಷಾಂಕವನ್ನು ಪ್ರಕಟಿಸಿದ್ದಾರೆ.

"ನಮ್ಮ ಭಾರತದೇಶ 'ಸಾರ್ವಭೌಮ ಪ್ರಜಾಸತ್ತಾತ್ಮಕ ಜಾತ್ಯತೀತ ಸಮಾಜವಾದೀ ಗಣರಾಜ್ಯ' ಎಂದು ಖ್ಯಾತಿ ಪಡೆದಿದೆ. ಪ್ರಜೆಗಳೆ ಸಾರ್ವಭೌಮರಾಗಿರುವ ನಮ್ಮ ಜನತಂತ್ರದಲ್ಲಿ ಧರ್ಮ, ಜಾತಿಗಳ ತಾರತಮ್ಯವಿಲ್ಲದೆ ಎಲ್ಲ ನಾಗರಿಕರಿಗೂ ಸರಿಸಮಾನವಾದ ಹಕ್ಕು ಬಾಧ್ಯತೆಗಳನ್ನು ನೀಡಲಾಗಿದೆ. ಸಮಾಜದ ಎಲ್ಲ ವರ್ಗಗಳ ಜನರಿಗೂ ಜೀವನಾವಶ್ಯಕ ಸೌಲಭ್ಯಗಳನ್ನು ಪಡೆಯುವ ಅವಕಾಶ ಒದಗಿಸಿರುವುದು ಮತ್ತು ಕೆಳವರ್ಗದ ಜನರೂ ಇತರರಂತೆ ನಿರ್ಭಯವಾಗಿ ಬಾಳಲು ಅನುಕೂಲಕರ ವಾತಾವರಣ ನಿರ್ಮಿಸಿರುವುದು ನಮ್ಮ ಜನತಂತ್ರದ ಹೆಗ್ಗಳಿಕೆಯಾಗಿದೆ.

ಭಾರತದ ಸಂವಿಧಾನವು ೩೯೫ ಪರಿಚ್ಛೇದ ಹಾಗು ೯ ಪರಿಶಿಷ್ಟಗಳನ್ನು ಹೊಂದಿದ ಬೃಹತ್ ಲಿಖಿತ ಸಂವಿಧಾನವಾಗಿದ್ದು, ಲಿಂಗ, ಜಾತಿ, ಮತ, ಪಂಥ ಹಾಗೂ ಧರ್ಮಗಳ ಭೇದವಿಲ್ಲದೆ ಎಲ್ಲರಿಗೂ ಸಮಾನ ಅವಕಾಶ ನೀಡಿರುವುದು ಈ ಸಂವಿಧಾನದ ವಿಶೇಷತೆ. ಈ ದೇಶದಲ್ಲಿ ಇಂದು ಪ್ರತಿಯೊಬ್ಬರಿಗೂ ವಾಕ್ ಸ್ವಾತಂತ್ರ್ಯವಿದೆ. ತಮ್ಮ ಮತ ಧರ್ಮಗಳಂತೆ ನಡೆದುಕೊಳ್ಳುವ, ಧಾರ್ಮಿಕ ಸಂಸ್ಥೆಗಳನ್ನು ಸ್ಥಾಪಿಸುವ ಅಧಿಕಾರವಿದೆ. ವಿವಿಧ ಭಾಷೆ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದವರು ತಮ್ಮದೇ ಆದ ಸಾಂಸ್ಕೃತಿಕ ಹಾಗು ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸುವ, ತಮಗಿಷ್ಟ ಬಂದಲ್ಲಿ ವಾಸಿಸುವ, ತಮಗಿಷ್ಟವಾದ ಉದ್ಯೋಗ ವ್ಯವಹಾರಗಳನ್ನು ನಡೆಸುವ ಸ್ವಾತಂತ್ರ್ಯವೂ ಇದೆ. ಹೀಗೆ ಶ್ರೀಸಾಮಾನ್ಯನ ಹಿತವನ್ನು ರಕ್ಷಿಸಿ ಅವನು ಆತ್ಮಗೌರವದಿಂದ ಬದುಕಲು ಅವಕಾಶ ಕಲ್ಪಿಸಿರುವ ನಮ್ಮ ಸಂವಿಧಾನದಲ್ಲಿ ಪ್ರತಿಯೊಬ್ಬರೂ ಈ ದೇಶದ ಏಕತೆ, ಸಮಗ್ರತೆ, ಸಂಸ್ಕೃತಿ, ಪರಿಸರ, ನೆಲ-ಜಲ ಹಾಗು ಸಾರ್ವಜನಿಕ ಆಸ್ತಿಪಾಸ್ತಿಗಳ ಸಂರಕ್ಷಣೆಯನ್ನು ಮಾಡಬೇಕಾದ ಆವಶ್ಯಕತೆಯನ್ನು ಒತ್ತಿ ಹೇಳಲಾಗಿದೆ. ನಾವಿಂದು ಈ ಕಡೆ ಗಮನ ಹರಿಸಬೇಕಾದುದು ಅತ್ಯಗತ್ಯ. ಸಂಕುಚಿತ ಪ್ರಾದೇಶಿಕತೆಯ ಭಾವನೆಯಿಂದ ಹೊರಬಂದು ಗಡಿ, ಜಲ ವಿವಾದಗಳನ್ನು ಬಗೆಹರಿಸಿಕೊಳ್ಳಬೇಕು. ಅಜ್ಞಾನ, ಅನಕ್ಷರತೆ, ಬಡತನ, ನಿರುದ್ಯೋಗ ಇವುಗಳ ನಿವಾರಣೆಗಾಗಿ ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ವಿಜ್ಞಾನ ತಂತ್ರಜ್ಞಾನದಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿರುವ ನಮ್ಮ ದೇಶದಲ್ಲಿಂದು ಧಾರ್ಮಿಕ ಮೂಲಭೂತವಾದ ತಲೆ ಎತ್ತಿ ನಾವೆಲ್ಲ ತಲೆತಗ್ಗಿಸುವಂತಾಗಿದೆ. ಪರಸ್ಪರ ಪ್ರೀತಿ-ವಿಶ್ವಾಸ ಹಾಗೂ ಭಾವೈಕ್ಯತೆಯಿಂದ ಬದುಕಬೇಕಾದ ನಾವು ಧರ್ಮದ ಹೆಸರಿನಲ್ಲಿ ಕೊಲೆ-ಸುಲಿಗೆಗಳಿಗೆ ಅವಕಾಶ ಕೊಡಬಾರದು. 'ಅಹಿಂಸಾ ಪರಮೋಧರ್ಮಃ' ಎಂಬುದನ್ನರಿತು ಆಚರಿಸುವುದು ಇಂದಿನ ಅಗತ್ಯಗಳಲ್ಲೊಂದು. ಚುನಾವಣೆಗಳಲ್ಲಿ ಜಾತಿ-ಧರ್ಮಗಳ ಪ್ರಾಬಲ್ಯ ಸಲ್ಲದು. ಜಾತಿ ಧರ್ಮಗಳ ಹೆಸರಿನಲ್ಲಿ ಮತಗಳಿಸಲು ಪ್ರಯತ್ನಿಸುವ, ಬೌದ್ಧಿಕವಾಗಿ ಪ್ರಬುದ್ಧರಲ್ಲದ ಮತ್ತು ನೈತಿಕವಾಗಿ ಅಧಃಪತನ ಹೊಂದಿದ ವ್ಯಕ್ತಿಗಳನ್ನು ತಿರಸ್ಕರಿಸಬೇಕು. ಅಂಥವರೆಂದೂ

ಜನಪ್ರತಿನಿಧಿಗಳಾಗದಂತೆ ಮತ್ತು ದೇಶದ ಯಾವುದೇ ಕ್ಷೇತ್ರದಲ್ಲಿ ಶಕ್ತಿ ಸಾಮರ್ಥ್ಯಗಳ ಅಪವ್ಯಯ, ದುಂದುಗಾರಿಕೆ, ಭ್ರಷ್ಟಾಚಾರ ಹಾಗೂ ದಬ್ಬಾಳಿಕೆ ನಡೆಯದಂತೆ ಎಚ್ಚರವಹಿಸಬೇಕು. ರಾಜಕೀಯ ವ್ಯಕ್ತಿಗಳಿಗೆ ಪಕ್ಷಹಿತಕ್ಕಿಂತಲೂ ರಾಷ್ಟ್ರಹಿತ ಮುಖ್ಯವಾಗಬೇಕು. ಪ್ರತಿಯೊಬ್ಬ ದೇಶವಾಸಿಯೂ ಉಚಿತ ಶಿಕ್ಷಣ, ಉಣ್ಣಲು ಅನ್ನ, ಉಡಲು ಬಟ್ಟೆ, ಇರಲು ಮನೆಯನ್ನು ಹೊಂದಿ ಸುಖ, ಶಾಂತಿ ಹಾಗು ನೆಮ್ಮದಿಯ ಜೀವನ ನಡೆಸುವಂತಾಗಬೇಕು. ಅದುವೆ ಜನತಂತ್ರದ ಸಾಫಲ್ಯ.

ಯಾವುದೇ ಒಂದು ದೇಶದ ಜನತಂತ್ರ ಯಶಸ್ವಿಯಾಗಿ ಸತ್ಫಲಗಳನ್ನು ನೀಡುವಲ್ಲಿ ಆ ದೇಶದ ಜನರ ಚಾರಿತ್ರ್ಯ, ಪ್ರಾಮಾಣಿಕತೆ, ಕರ್ತವ್ಯದಕ್ಷತೆ, ರಾಷ್ಟ್ರೀಯಪ್ರಜ್ಞೆ, ಸೇವೆ, ತ್ಯಾಗ ಹಾಗು ರಾಷ್ಟ್ರಭಕ್ತಿ ಇವು ಪ್ರಮುಖ ಪಾತ್ರವಹಿಸುತ್ತವೆ. ಆದ್ದರಿಂದ ದೇಶವಾಸಿಗಳಾದ ನಾವೆಲ್ಲ ಈ ಮೌಲ್ಯಗಳನ್ನು ನಮ್ಮಲ್ಲಿ ಅಳವಡಿಸಿಕೊಂಡು ಶಾಂತಿ, ಸಹನೆ ಹಾಗು ಸಹಕಾರ ಮನೋಭಾವದಿಂದ ವರ್ತಿಸಿದಾಗ ವ್ಯಷ್ಟಿ-ಸಮಷ್ಟಿಗಳೆರಡರ ಹಿತವೂ ಸಾಧ್ಯವಾಗುತ್ತದೆ. ಆಗ ನಮ್ಮ ಜನತಂತ್ರಕ್ಕಿಂತ ಉತ್ತಮವಾದ ಸರಕಾರ ಬೇರೊಂದಿಲ್ಲ ಎಂಬ ಶ್ರೇಷ್ಠತೆಗೆ ಭಾರತೀಯರಾದ ನಾವು ಪಾತ್ರರಾಗುತ್ತೇವೆ”.[೪]

ಈ ಆಶಯದ ಒಂದು ಅಮೂಲ್ಯವಾದ ಸಂಪಾದಕೀಯವನ್ನು ಬರೆಯುವುದಲ್ಲದೆ, ರಾಜ್ಯಾಂಗ ಸಭೆಯಲ್ಲಿ ಡಾ. ಅಂಬೇಡ್ಕರ್ ಅವರು ಮಾಡಿದ ಪರಿಸಮಾಪ್ತಿಯ ಭಾಷಣದ ಅನುವಾದವನ್ನೂ ಪ್ರಕಟಿಸಿದ್ದಾರೆ. ಅಂಬೇಡ್ಕರ್ ಅವರು ತಮ್ಮ ಭಾಷಣದಲ್ಲಿ ಹೇಳಿದ ಮಾತುಗಳು ಇಂದಿಗೂ ಪ್ರಸ್ತುತವಾಗಿವೆ ಎಂಬುದಕ್ಕೆ ಆ ಮಾತುಗಳು ಸಾಕ್ಷಿಯಾಗಿವೆ.

“೨೬ನೇ ಜನವರಿ ೧೯೫೦ನೇ ದಿನ ಇಂಡಿಯವು ಸ್ವತಂತ್ರ ದೇಶವಾಗುವುದು. ಆ ಸ್ವಾತಂತ್ರ್ಯವು ಮುಂದೇನಾಗುವುದು? ಇಂಡಿಯವು ಅದನ್ನು ಉಳಿಸಿಕೊಳ್ಳುವುದೇ ಅಥವಾ ಕಳೆದುಕೊಳ್ಳುವುದೇ? ಭಯಗೊಳಿಸುವ ಸಂಗತಿಯೆಂದರೆ ಅದು ಹಿಂದೊಮ್ಮೆ ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದಿತಷ್ಟೇ ಅಲ್ಲ; ತನ್ನವರೇ ಆದ ದ್ರೋಹಿಗಳಿಂದ ಅದನ್ನು ಕಳೆದುಕೊಂಡಿತ್ತು. ಅದೇ ಕಥೆಯು ಪುನರಾವರ್ತಿಸುವುದೇ? ಗೊತ್ತಾಗುವುದಿಲ್ಲ. ಆದರೆ ಇಷ್ಟು ಮಾತ್ರ ನಿಜ; ಪಕ್ಷಗಳು ತಮ್ಮ ಧ್ಯೇಯಗಳನ್ನು ದೇಶಕ್ಕಿಂತ ಮಿಗಿಲಾಗಿ ಕಂಡರೆ ಮತ್ತೊಮ್ಮೆ ಸ್ವಾತಂತ್ರ್ಯವು ಕೈಕಳಚುವುದು, ಅಷ್ಟೇ ಅಲ್ಲ ಇನ್ನು ಎಂದೆಂದಿಗೂ ಅಲಭ್ಯವಾಗುವುದು. ಈ ಪರಿಣಾಮವಾಗದಂತೆ ನಾವೆಲ್ಲರೂ ದೃಢಮನಸ್ಸಿನಿಂದ ಎಚ್ಚರಿಕೆ ತೆಗೆದುಕೊಳ್ಳಬೇಕು. ನಮ್ಮ ರಕ್ತದ ಕೊನೆಯ ತೊಟ್ಟು ನಮ್ಮ ಸ್ವಾತಂತ್ರ್ಯವನ್ನು ಕಾಪಾಡಲು ಸಂಕಲ್ಪ ಮಾಡಬೇಕು. ನಾವಾಗಲೆ ಒಂದು ಜನಾಂಗವೆಂದು ನಂಬಿದ್ದರೆ, ಅದೊಂದು ನಮ್ಮ ಸ್ವಪ್ನವೇ ಸರಿ. ಸಾವಿರಾರು ಜಾತಿಗಳಾಗಿ ವಿಭಾಗವಾಗಿರುವ ಜನ ಅದು ಹೇಗೆ ಒಂದು ಜನಾಂಗವಾದಾರು? ಜಾತಿಗಳು ಅರಾಷ್ಟ್ರೀಯಗಳು. ನಿಜವಾಗಿಯೂ ನಾವೊಂದು ರಾಷ್ಟ್ರವಾಗಬೇಕಾದರೆ ನಾವೀ ಎಡರುಗಳಿಂದ ಪಾರಾಗಬೇಕು. ೨೬ ಜನವರಿ ೧೯೫೦ರಂದು ನಾವೆಲ್ಲ ರಾಜಕೀಯವಾಗಿ ಸಮಾನತೆಯನ್ನು ಪಡೆಯುತ್ತೇವೆ. ಆದರೆ

ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ ಅಸಮಾನತೆಯಲ್ಲಿರುತ್ತೇವೆ. ಆದಷ್ಟು ಜಾಗ್ರತೆ ನಾವೀ ಅಸಂಬದ್ಧತೆಯನ್ನು ಹೋಗಲಾಡಿಸಬೇಕು. ಇಲ್ಲದಿದ್ದರೆ ಯಾರು ಈ ದಿನ ಅಸಮಾನತೆಯನ್ನು ಅನುಭವಿಸುತ್ತಿರುವರೋ ಅವರೇ ನಾವಿಷ್ಟು ಕಷ್ಟಪಟ್ಟು ಕಟ್ಟಿರುವ ರಾಜಕೀಯ ಪ್ರಜಾಸತ್ತೆ ಬುಡಮೇಲು ಮಾಡುವರು".[೫]

ಅಂಬೇಡ್ಕರ್ ಅವರು ಅಂದು ಹೇಳಿದಂತೆ ನಾವು ಕೇವಲ ರಾಜಕೀಯದಲ್ಲಿ ಸಮಾನತೆ ಪದಪ್ರಯೋಗ ಮಾಡುತ್ತಿದ್ದೇವೆ. ಆರ್ಥಿಕ ಮತ್ತು ಸಾಮಾಜಿಕ ನೆಲೆಯಲ್ಲಿ ಇನ್ನೂ ಅಸಮಾನತೆ ತಾಂಡವಾಡುತ್ತಿರುವುದು ನಿಜಕ್ಕೂ ವಿಪರ್ಯಾಸ ಸಂಗತಿಯಾಗಿದೆ.

**ನಾಡು–ನುಡಿ ಚಿಂತನೆ :**

ಕನ್ನಡ ಏಕೀಕರಣ ಚಳುವಳಿಯ ಸಂದರ್ಭದಲ್ಲಿಯೂ ವಿಶ್ವಕರ್ಮಾ ಪತ್ರಿಕೆಯು ಆಗಾಗ ಸಕಾಲಿಕ ಜಾಗೃತಿಯ ಲೇಖನಗಳನ್ನು, ಸಂಪಾದಕೀಯಗಳನ್ನು ಬರೆದು ನಾಡು ನುಡಿ ಅಭಿಮಾನವನ್ನು ಅಭಿವ್ಯಕ್ತಿಸಿದ್ದು ಸ್ಮರಣೀಯವೆನಿಸಿದೆ. "ಕರ್ನಾಟಕ ಪ್ರಾಂತ್ಯ ರಚನೆಗಾಗಿ ಹಾತೊರೆಯುತ್ತಿರುವವರು ವಿಶೇಷ ಉತ್ತರ ಕರ್ನಾಟಕದವರೇ ಹೆಚ್ಚಾಗಿದ್ದಾರೆ. ಮೈಸೂರವರು ಇದನ್ನು ಇನ್ನಷ್ಟು ದೂರ ತಳ್ಳುವುದರಲ್ಲಿಯೂ ಮಿಕ್ಕವರು ಅನಾಸಕ್ತಿ ವಹಿಸಿಯೂ ಇರುವಂತೆ ತೋರಿ ಬರುತ್ತಿದೆ. ಅಖಂಡ ಕನ್ನಡ ಪ್ರಾಂತ್ಯ ರಚನೆಯು ತ್ವರಿತವಾಗಿ ಎಲ್ಲರ ಬೆಳವಣಿಗೆಗಾಗಿಯೂ ಆಗಬೇಕಾಗಿರುವಾಗ ಕನ್ನಡ ಹಿತಚಿಂತನೆಯನ್ನು ಮರೆತು ಸ್ವಾರ್ಥಿಗಳಾಗಿರುವರೆಂದು ಮೈಸೂರನ್ನೂ, ಮುಂದುವರೆದ ಮೈಸೂರು ಹಿಂದುಳಿದಿರುವ ಕರ್ನಾಟಕದಲ್ಲಿ ಸೇರಬಯಸುವುದಿಲ್ಲ. ಕರ್ನಾಟಕದವರು ಬೇಕಾದರೆ ಅವರೇ ಒಂದು ಪ್ರಾಂತ್ಯ ನಿರ್ಮಿಸಿಕೊಳ್ಳಲಿ ಎಂದು ಕರ್ನಾಟಕದವರನ್ನೂ, ಒಬ್ಬರಿಗೊಬ್ಬರು ಆರೋಪಣೆ ಪ್ರತ್ಯಾರೋಪಣೆಗಳಲ್ಲಿ ತೊಡಗುವುದು, ಹೈದರಾಬಾದಿನಲ್ಲಿ ಅದರ ಪ್ರಗತಿಗೆ ಕಾಂಗ್ರೆಸ್ ವೈಮನಸ್ಯವು ಎಷ್ಟು ಮಟ್ಟಿಗೆ ಕುಂಠಿತವನ್ನೊಡ್ಡಿದೆಯೋ ಅಷ್ಟೇ ಮಟ್ಟಿಗೆ ಕನ್ನಡ ಪ್ರಾಂತ್ಯ ರಚನೆಗೆ ಅಹಿತಕಾರಿಯಾಗಿದೆ. ಈಗ ಕರ್ನಾಟಕ ಪ್ರಾತೀಯ ಕಾಂಗ್ರೆಸ್ ಕಾರ್ಯ ಸಮಿತಿಯವರೂ ಮಂಗಳೂರು ಬಳ್ಳಾರಿ ಕೊಳ್ಳೇಗಾಲ ಕೊಡಗು, ನೀಲಗಿರಿ ಮುಂತಾದ ಎಲ್ಲ ಕನ್ನಡ ಪ್ರದೇಶಗಳ ಪ್ರತಿನಿಧಿಗಳೂ ಒಂದು ದುಂಡು ಮೇಜಿನ ಪರಿಷತ್ತಿನಲ್ಲಿ ಸೇರಿ, ಕನ್ನಡ ಪ್ರಾಂತ್ಯ ದೃಷ್ಟಿಯಿಂದ ಯಾವ ಸ್ವಾರ್ಥಕ್ಕೂ ಮನಸೋಲದೆ ಒಂದು ತೀರ್ಮಾನಕ್ಕೆ ಬಂದು, ಕನ್ನಡ ಪ್ರಾಂತ್ಯ ರಚನೆಯ ತೊಡಕುಗಳನ್ನು ಬಿಡಿಸಿ ಸುಗಮ ಮಾಡಿ, ತ್ರಿಮೂರ್ತಿ ವರದಿಯನ್ನೊಪ್ಪುವ ರೀತಿಯಲ್ಲಿ ಒಕ್ಕೊರಲಿನಿಂದ ಪ್ರಾಂತ್ಯ ಬೇಡಿಕೆಯನ್ನು ರಾಷ್ಟ್ರ ಕಾಂಗ್ರೆಸ್ಸಿನಲ್ಲಿ ಪ್ರಾರ್ಥಿಸಿದರೆ ಕನ್ನಡ ಪ್ರಾಂತ್ಯದ ಕನಸು ನನಸಾಗಬಹುದು...ಕನ್ನಡ ಪ್ರಾಂತ್ಯ ರಚನೆಯು ಕನ್ನಡಿಗರಿಗೆ ಏಕಮೇವ ಧ್ಯೇಯ ಮಾತ್ರವಲ್ಲದೆ ಅದು ಕೂಡಲೆ ಅಸ್ತಿತ್ವದಲ್ಲಿ ಬರಬೇಕಾಗಿದೆ. ಹರಿದು ಹಂಚಿ ಹೋಗಿರುವ ಕನ್ನಡ ಜನರು ಪ್ರೀತಿಯಿಂದ ಒಂದಾಗಬೇಕಾದರೆ, ಕೇವಲ ಬಡವರಾಗಿ ದಟ್ಟ ದರಿದ್ರರಾಗಿರುವ ಇವರು ಪುಷ್ಟಿಯುತರಾಗಿ ಬೆಳೆಯಬೇಕಾದರೆ, ಈಗಿಗಿಂತ ಹೆಚ್ಚಾಗಿ ಭಾರತ ಸೇವೆಯನ್ನು ಉತ್ಸಾಹದಿಂದ ನಡೆಸಬೇಕಾದರೆ ಕನ್ನಡ ಪ್ರಾಂತ್ಯವು

ಕೂಡಲೆ ರಚನೆ ಆಗಲೇಬೇಕು. ಈ ಸಮಯದಲ್ಲಿ ಸುಮ್ಮನೆ ಕಣ್ಣು ಮುಚ್ಚಿಕೊಂಡು ಭಾವಾವೇಶದಿಂದ ಮಾತನಾಡದೆ ಪರಿಸ್ಥಿತಿಯನ್ನು ಪೂರ್ಣ ಮನಗಂಡು ವಿಚಾರ ಮಾಡಿ ತ್ವರಿತವಾಗಿ ಎಲ್ಲರೂ ಸಹಕರಿಸಿ ಕಾರ್ಯ ಮಾಡಬೇಕು".[೬]

ಕರ್ನಾಟಕ ಏಕೀಕರಣದ ವಿಷಯದಲ್ಲಿ ವಿಶ್ವಕರ್ಮಾ ಸಂಪಾದಕರ ಹೃದಯ ವೈಶಾಲ್ಯದ ದೃಷ್ಟಿಯನ್ನು ನೋಡುತ್ತೇವೆ. ಮೈಸೂರು–ಹೈದರಾಬಾದ ಪ್ರದೇಶದ ಜನರು ಈ ಏಕೀಕರಣಕ್ಕೆ ಅಡ್ಡಿಮಾಡದೆ, ಒಗ್ಗಟ್ಟು ಪ್ರದರ್ಶನ ಮಾಡುವ ಮೂಲಕ ಸ್ವಾರ್ಥತ್ಯಾಗ ಮಾಡಿ ಹೋರಾಡಬೇಕಾದ ಅನಿವಾರ್ಯತೆಯನ್ನು ತುಂಬ ಸ್ಪಷ್ಟವಾಗಿ ಈ ಸಂಪಾದಕೀಯದಲ್ಲಿ ನಿರೂಪಿಸಿದ್ದು ಅವರ ನಾಡು ನುಡಿ ಕಳಕಳಿಗೆ ಉಜ್ವಲ ನಿದರ್ಶನವಾಗಿದೆ.

ಸಾಹಿತ್ಯ ಸಂಸ್ಕೃತಿಗಳ ವಿಷಯ ಬಂದಾಗಲೂ ವಿಶ್ವಕರ್ಮ ಪತ್ರಿಕೆಗಳ ಸಂಪಾದಕರು ಸಾಂದರ್ಭಿಕ ಸಂಪಾದಕೀಯಗಳನ್ನು ಬರೆಯುವ ಮೂಲಕ ಸಮಾಜದ ಮುಂದಿಡುವ ಕೆಲಸ ಮಾಡಿದ್ದಾರೆ. ಸೊಲ್ಲಾಪುರದಲ್ಲಿ ನಡೆದ ೩೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಎಂ. ಆರ್. ಶ್ರೀನಿವಾಸ ಮೂರ್ತಿಗಳ ಭಾಷಣವನ್ನು ವಿಶ್ವಕರ್ಮಾ ಪತ್ರಿಕೆಯ ಸಂಪಾದಕರು ಪ್ರಕಟಿಸುವುದರ ಜೊತೆಗೆ, ಆ ಕುರಿತು ಸಕಾಲಿನ ಸಂಪಾದಕೀಯವನ್ನು ಬರೆದು, ಸಾಹಿತ್ಯ ಕ್ಷೇತ್ರದ ಬೆಳವಣಿಗೆಯಲ್ಲಿ ಶಿಲ್ಪ ಸಂಗೀತ ಕಲೆಗಳ ಪಾತ್ರವೂ ಗಮನಾರ್ಹವಾಗಿದೆ. ಈ ನಿಟ್ಟಿನಲ್ಲಿ ವಿಶ್ವಕರ್ಮ ಸಮಾಜದವರು ಏನು ಮಾಡಬಹುದು ಎಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಬಹುವಿಧ ಜ್ಞಾನ, ಶಿಸ್ತಿನ ಅಗತ್ಯದ ಪ್ರತಿಪಾದನೆಗಾಗಿ "ಕನ್ನಡ ಸಂಸ್ಕೃತಿ ವರ್ಧಿಸಬೇಕಾದರೆ ಅದರ ಸಾಹಿತ್ಯಾಭಿವೃದ್ಧಿಯ ಜತೆಗೆ ಶಿಲ್ಪ ಸಂಗೀತಾದಿ ಕಲೆಗಳು ಅಭಿವೃದ್ಧಿ ಹೊಂದಬೇಕಾದುದು ಅತ್ಯವಶ್ಯ...ಸಮ್ಮೇಳನಾಧ್ಯಕ್ಷರು ನಾನಾ ವಿಧ ಕನ್ನಡಿಗರಲ್ಲಿ ಅರಿಕೆ ಮಾಡಿಕೊಂಡಂತೆ ವಿಶ್ವಕರ್ಮ ಮತೀಯ ವಿದ್ಯಾರ್ಥಿಗಳು, ವಿದ್ವಾಂಸರು, ಶಿಲ್ಪಿಗಳು, ಅಧಿಕಾರಿಗಳು, ಕೆಲಸಗಾರರು, ವ್ಯಾಪಾರಿಗಳು, ಶ್ರೀಮಂತರು ಮೊದಲಾದವರಲ್ಲಿ ವರ್ಷಕ್ಕೆ ಐವತ್ತು ರೂಪಾಯಿಗಳಷ್ಟಾದರೂ ಕನ್ನಡ ಗ್ರಂಥಗಳನ್ನು ಕೊಂಡು ಓದಬೇಕೆಂದು ನಾವು ಪ್ರಾರ್ಥಿಸುತ್ತೇವೆ. ಇದರ ಜತೆಗೆ ವಿಶ್ವಕರ್ಮ ಪುರಾಣ, ಮೂಲಸ್ತಂಭ, ಗೋತ್ರಾಧ್ಯಾಯ, ನಾಗರಖಂಡ, ಕಂಚಿಸಿದ್ಧಾಂತ, ರಥಕಾರಾಧಿಕರಣ, ವಿಶ್ವಕರ್ಮಾನ್ವಯ ಭೂಷಣ, ವಿಶ್ವಬ್ರಾಹ್ಮಣ ವಂಶಾಗಮ, ಮಯಮತಾದಿ ಶಿಲ್ಪ ಗ್ರಂಥಗಳು ಮುಂತಾದ ಪುಸ್ತಕಗಳನ್ನು ಶೇಖರಿಸಿ ಒಂದು ಸಣ್ಣ ಪುಸ್ತಕ ಭಂಡಾರವನ್ನು ಅವರವರ ಮನೆಯಲ್ಲಿಟ್ಟುಕೊಂಡು ಓದಿ ಜ್ಞಾನಾರ್ಜನೆ ಮಾಡಬೇಕೆಂದು ಆಗ್ರಹಪೂರ್ವಕ ವಿನಂತಿ ಮಾಡುತ್ತೇವೆ. ವರ್ಷಕ್ಕೊಮ್ಮೆಯಾದರೂ ಬೇಲೂರು ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೊಳ, ಅಜಂತಾ, ಎಲ್ಲೋರ, ಬಾದಾಮಿಗಳಂತಹ ಕ್ಷೇತ್ರಗಳಿಗೆ ಯಾತ್ರೆ ಹೊರಟು ಶಿಲ್ಪ ಕೃತಿಗಳನ್ನು ಅಧ್ಯಯನ ಮಾಡಿ, ಪರೀಕ್ಷಿಸಿ ಜ್ಞಾನವನ್ನು ಹೆಚ್ಚಿಸಿಕೊಂಡು ಶಿಲ್ಪ ಗ್ರಂಥ ಕೃತಿ ರಚನೆಗಳಿಂದ ಸಾಹಿತ್ಯಾಭಿವೃದ್ಧಿಯನ್ನು ಕೈಕೊಂಡು ಸಾಹಿತ್ಯ ಸಮ್ಮೇಳನಾಧ್ಯಕ್ಷರ ಕರೆಗೆ ಓಗೊಡಬೇಕೆಂದೂ ಬೇಡಿಕೊಳ್ಳುತ್ತೇವೆ".[೭] ಪ್ರತ್ಯೇಕ ಜ್ಞಾನದ ಪ್ರತಿಪಾದನೆ ಈ ಪತ್ರಿಕೆಯ ಸಂಪಾದಕೀಯಗಳಿಂದ ತಿಳಿದುಬರುತ್ತದೆ.

ಕೆಲವು ಪತ್ರಿಕೆಗಳು ಸಂಪಾದಕೀಯ ಮೂಲಕ ಸ್ವಾತಂತ್ರ್ಯ ನಂತರದ ಶಿಕ್ಷಣದ ಹಕ್ಕಿನ ಪ್ರತಿಪಾದನೆಯನ್ನು ಮಾಡಿವೆ. ತಮ್ಮ ಸಮಾಜದ ಮಕ್ಕಳು ಶಿಕ್ಷಣ ಪಡೆಯಬೇಕೆಂಬ ಕಳಕಳಿ ಈ ಪತ್ರಿಕೆಗಳ ಸಂಪಾದಕರದು. ಅದಕ್ಕಾಗಿ ಆರ್ಥಿಕವಾಗಿ ಬಡವರಾಗಿರುವ ವಿಶ್ವಕರ್ಮ ಸಮಾಜದ ಬಡಮಕ್ಕಳಿಗೆ ಶಿಕ್ಷಣ ದಕ್ಕುವಂತಾಗಬೇಕೆಂಬ ಕಾಳಜಿಯ ಸಂಪಾದಕೀಯಗಳನ್ನು ಬರೆದಿರುವುದು ನನ್ನ ಗಮನಕ್ಕೆ ಬಂದಿದೆ. ವಿಶ್ವಕರ್ಮಾ ಪತ್ರಿಕೆಯ ಸಂಪಾದಕರು ೧೯೫೦ರಲ್ಲಿಯೇ 'ವಿಶ್ವಕರ್ಮ ವಿದ್ಯಾರ್ಥಿಗಳು ದುರ್ವ್ಯವಿಗಳೆನ್ನಿಸುವಿರಾ?' ಎಂಬ ಸಾಂದರ್ಭಿಕ ಸಂಪಾದಕೀಯ ಬರೆದು– "ಓದಿಗೇ ಬೆನ್ನು ತಿರುಗಿಸಿದ್ದ ನಮ್ಮ ಬಹುಮಂದಿ ಈಗೀಗ ತಮ್ಮ ಹುಡುಗರನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಅವರೂ ಒಂದಾದ ಮೇಲೊಂದು ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಿದ್ದಾರೆ. ಅಂದರೆ ನಮ್ಮ ಮತೀಯ ಬಾಲಕರೆಲ್ಲರೂ ಶಾಲೆಗಳಿಗೆ ಹೋಗುತ್ತಿದ್ದಾರೆ, ಅವರು ಪರೀಕ್ಷೆಗಳನ್ನು ಮಾಡಿಕೊಂಡು ನಿರ್ವಿಘ್ನವಾಗಿ ಮೇಲಿನ ಮಜಲನ್ನು ಮುಟ್ಟುತ್ತಿದ್ದಾರೆಂದು ಅರ್ಥವಲ್ಲ. ಹಾಗಿದ್ದರೆ ಈ ಸಂಪಾದಕೀಯವನ್ನು ಬರೆಯುವ ಆವಶ್ಯಕತೆಯೇ ಇರಲಿಲ್ಲ. ನಮ್ಮಲ್ಲಿ ವಿದ್ಯೆಯ ಕಕ್ಷೆಗೆ ಬರುವವರೇ ಅಲ್ಪಮಂದಿ. ಅವರೂ ಮುಂದುವರಿಯದಿದ್ದರೆ ಏನು ಗತಿ ಎಂಬ ಬಗ್ಗೆ ನಾವು ತೀವ್ರ ಆಲೋಚಿಸಬೇಕಾಗಿದೆ....ಶಿಕ್ಷಣವು ನಮ್ಮ ಎಷ್ಟೋ ಬಾಲಕರಿಗೆ ಆಕಾಶ ಚಂದ್ರನಾಗಿರುವುದು. ಇನ್ನು ಮುಂದಿನ ವಿಶ್ವವಿದ್ಯಾಲಯ ಶಿಕ್ಷಣದ ವಿಷಯವನ್ನು ಹೇಳ ಕೆಲಸವಿಲ್ಲ. ಅದಕ್ಕೋಸ್ಕರವೇ ನಮ್ಮಲ್ಲಿ ಪದವೀಧರರ ಅಭಾವ"[೪] ಎಂದು ಆ ಕಾಲದ ಬಡಮಕ್ಕಳ ಶಿಕ್ಷಣದ ವ್ಯವಸ್ಥೆಗೆ ಕನ್ನಡಿ ಹಿಡಿಯುವ ಕೆಲಸ ಮಾಡಿದ್ದಾರೆ.

ಬ್ರಿಟಿಷ್ ಶಿಕ್ಷಣದ ಪರಿಣಾಮವಾಗಿ ಆಯಾ ಸಮಾಜ ಬಾಂಧವರು ತಮ್ಮ ತಮ್ಮ ಧರ್ಮ ಸಮಾವೇಶಗಳನ್ನು ಆಯೋಜಿಸಿ ಜಾಗೃತಿಯನ್ನುಂಟು ಮಾಡುವ ಪ್ರಯತ್ನದಲ್ಲಿ ಮುಂದಾದರು. ೧೯೦೪ರಲ್ಲಿ ಅರಟಾಳ ರುದ್ರಗೌಡರು–ಶಿರಸಂಗಿ ಲಿಂಗರಾಜ ಮೊದಲಾದ ಮಹಾನುಭಾವರು ಅಖಿಲ ಭಾರತ ವೀರಶೈವ ಮಹಾಸಭೆಯನ್ನು ಸ್ಥಾಪಿಸಿ, ಸಮಾಜೋನ್ನತಿಯ ಕಾರ್ಯದಲ್ಲಿ ತೊಡಗಿದರು. ಹಾಲುಮತ ಸಮಾಜದವರು 'ಹಾಲು ಮತೋಜಕ ಸಭೆ'ಯನ್ನು ಅಸ್ತಿತ್ವಕ್ಕೆ ತಂದರು. ಹಾಗೆ ವಿಶ್ವಕರ್ಮರು ಅಖಿಲ ಭಾರತ ಮಟ್ಟದಲ್ಲಿ ಸಂಘಟಿತರಾಗ ತೊಡಗಿದರು. ಮುಂಬೈ, ಹೈದರಾಬಾದ ಮೊದಲಾದ ಪರರಾಜ್ಯಗಳಲ್ಲಿ ರಾಷ್ಟ್ರಮಟ್ಟದ ವಿಶ್ವಕರ್ಮ ಸಮ್ಮೇಳನಗಳನ್ನು ಆಯೋಜಿಸತೊಡಗಿದರು. ಆಯಾ ಸಮ್ಮೇಳನಗಳಲ್ಲಿ ಮಂಡಿತವಾದ ವಿಷಯಗಳ, ನಿರ್ಣಯಗಳ ಕುರಿತು ಇಂದು ನಮಗೆ ಅಧಿಕೃತ ಮಾಹಿತಿ ಒದಗಿಸುವ ಪ್ರಮುಖ ಆಕರಗಳಾಗಿ ವಿಶ್ವಕರ್ಮ ಪತ್ರಿಕೆಗಳು ಸಹಾಯ ಮಾಡುತ್ತವೆ.

ದಿನಾಂಕ ೭, ೮ ಮತ್ತು ೯ ಏಪ್ರಿಲ್ ೧೯೫೦ರಂದು ಮುಂಬೈ ಮಹಾನಗರದಲ್ಲಿ ಜರುಗಿದ ವಿಶ್ವಕರ್ಮ ಬ್ರಹ್ಮಕುಲೋತ್ಪನ್ನ ಪಂಚಾಲ ಜ್ಞಾತಿ ಪರಿಷತ್ತಿನ ಮೊದಲನೆಯ ಅಧಿವೇಶನವು ಶಾಂತಾರಾಮ ಮಾಧವರಾವ ಅಣ್ಣಾಸಾಹೇಬ ಡಹಾಣೂಕರ ಅವರ ಅಧ್ಯಕ್ಷತೆಯಲ್ಲಿ ಅತ್ಯಂತ

ವಿಧಾಯಕವಾಗಿ ಜರುಗಿತು. ಈ ಸಮ್ಮೇಳನದ ವೈಶಿಷ್ಟ್ಯಗಳನ್ನು ಕುರಿತು ವಿಶ್ವಕರ್ಮಾ ಪತ್ರಿಕೆಯ ಸಂಪಾದಕರೂ ಸಂಪಾದಕೀಯ ರೂಪದಲ್ಲಿ ಬರೆದು ಸಮಾಜದ ಮುಂದಿಡುವ ಕಾರ್ಯ ಮಾಡಿದ್ದಾರೆ. ಆ ಸಂಪಾದಕೀಯದಲ್ಲಿಯೇ ಅಧಿವೇಶನದ ನಿರ್ಣಯಗಳನ್ನು ಪ್ರಕಟಿಸಿದ್ದಾರೆ. ೬೮ ವರ್ಷಗಳ ಹಿಂದಿನ ಆ ನಿರ್ಣಯಗಳು ಇಂದಿಗೂ ಪ್ರಸ್ತುತವಾಗಿವೆ. ಆ ನಿರ್ಣಯಗಳು ಹೀಗಿವೆ:

"೧. ರಾಷ್ಟ್ರನಿಷ್ಠೆ ಮತ್ತು ಸಮಾಜೋನ್ನತಿ ಎಂಬ ಮೊದಲನೆಯ ಠರಾವಿನ ಮೇಲೆ ಚರ್ಚೆ ಮಾಡಿ ಎಲ್ಲರೂ ದೇಶದ ಸಲುವಾಗಿ ಈಗಿನ ಸರಕಾರಕ್ಕೆ ಸಹಕಾರ ಮಾಡಬೇಕು.

೨. ತಮ್ಮ ಕರ್ತೃತ್ವ ಶಕ್ತಿಯಿಂದ ನಮ್ಮ ಸಮಾಜದಲ್ಲಿ ಹೆಸರುವಾಸಿಯಾದ ವ್ಯಕ್ತಿಗಳ ಅಭಿನಂದನೆಯಾಯಿತು.

೩. ಇಲ್ಲಿಯ ವಿಶ್ವಕರ್ಮ ಪಂಚಾಲ ಮಂಡಳವು ನಡೆಸುತ್ತಿರುವ ಬ್ಯಾಂಕ್ ಮತ್ತು ಶಿಲ್ಪಿ ಕುಲೋತ್ತೇಜಕ ಸಹಕಾರಿ ಮಂಡಳ ಮುಂತಾದ ಕಾರ್ಯಗೌರವಗಳನ್ನು ಉಳಿದ ಎಲ್ಲ ಕಡೆಗೂ ಅನುಕರಿಸಬೇಕು. ನಮ್ಮ ಜನರು ಇದಕ್ಕೆ ಸಹಕಾರ ನೀಡಬೇಕು.

೪. ಅಖಿಲ ಭಾರತ ವಿಶ್ವಕರ್ಮ ಪಂಚಾಲ ಸಂಸ್ಥೆಯ ಕೇಂದ್ರ ಸಂಘವನ್ನು ಸ್ಥಾಪಿಸುವ ಕುರಿತು ಒಂದು ಘಟನಾ ಸಮಿತಿ ಸ್ಥಾಪನೆ ಮಾಡಬೇಕು.

೫. ವಿಶ್ವಕರ್ಮ ಪಂಚಾಲ ಸಮಾಜದ ಸರ್ವವಿಧ ಉನ್ನತಿಗಾಗಿ ಒಂದು ಮಾಸಪತ್ರಿಕೆಯನ್ನು ಹೊರಡಿಸಬೇಕು.

೬. ವಿಶ್ವಕರ್ಮ ಪಂಚಾಲ ಸಮಾಜದ ಮಧ್ಯಮ ವರ್ಗದ ಜನರ ಸಲುವಾಗಿ ಮನೆಗಳನ್ನು ಕಟ್ಟಿ ಒದಗಿಸುವುದು.

೭. ಶಿಕ್ಷಣ ಪ್ರಸಾರ ಮತ್ತು ವಿದ್ಯಾಶಾಲೆಗಳಿಗಾಗಿ ಫಂಡು ಕೂಡಿಸಬೇಕು.

೮. ಸ್ತ್ರೀಯರ ಉನ್ನತಿಗಾಗಿ ನಮ್ಮ ಕರ್ತವ್ಯ."

ಸಮಾಜದ ಅಭಿವೃದ್ಧಿಗಾಗಿ ಇಂಥ ಸಮಾವೇಶಗಳು–ಅಧಿವೇಶನಗಳು ಕಾಲಕಾಲಕ್ಕೆ ನಡೆದು, ಅಲ್ಲಿ ತೆಗದುಕೊಂಡ ನಿರ್ಣಯಗಳ ಪರಿಣಾಮವಾಗಿಯೇ ವಿಶ್ವಕರ್ಮ ಸಮಾಜವು ಇಂದು ಅಭಿವೃದ್ಧಿಯತ್ತ ಸಾಗಿದೆ ಎಂದರೆ ಅತಿಶಯೋಕ್ತಿ ಎನಿಸದು. ಅದೇ ರೀತಿ ೨೩ ಜುಲೈ ೧೯೫೦ರಂದು ಮದ್ರಾಸ (ಇಂದಿನ ಚೆನ್ನೈ) ನಗರದಲ್ಲಿ ಜರುಗಿದ ೧೬ನೇ ವಿಶ್ವಕರ್ಮ ಮಹಾಜನ ಸಮ್ಮೇಳನದ ವರದಿಯ ಜೊತೆಗೆ ಅಲ್ಲಿ ನಡೆದ ಕಾರ್ಯಕಲಾಪಗಳ ಸಮಗ್ರ ವಿವರವನ್ನು ಸಂಪಾದಕೀಯದಲ್ಲಿ ಕೊಟ್ಟಿರುವುದು ಪತ್ರಿಕೆಯ ಸಮಕಾಲೀನ ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿದೆ.

ವಿಶ್ವಕರ್ಮ ಪತ್ರಿಕೆಗಳು ನಾಡು ನುಡಿಯ ವಿಷಯಗಳು ಚರ್ಚೆಗೆ ಬಂದಾಗ, ಅವುಗಳನ್ನೇ ಪ್ರಧಾನ ಅಂಕಣದಲ್ಲಿ ಪ್ರಸಾರ ಮಾಡುವದರೊಂದಿಗೆ ನಾಡ ಪ್ರೇಮವನ್ನು ಈ ಪತ್ರಿಕೆಗಳಲ್ಲಿ ಗುರುತಿಸಬಹುದು.

"ಭಾರತದಲ್ಲಿ ಕನ್ನಡ ಚಿತ್ರಗಳಿಗೆ ಬಂದಿರುವ ದುರ್ಗತಿಯು ಯಾವ ದೇಶ ಭಾಷಾ ಚಿತ್ರಗಳಿಗೂ ಬಂದಿಲ್ಲವೆಂದರೆ ಅಸತ್ಯವೇನಿಲ್ಲ. ಹಿಂದಿ, ತಮಿಳು, ತೆಲುಗು ಚಿತ್ರಗಳು ಹಾಗಿರಲಿ, ಮಲೆಯಾಳ ಚಿತ್ರಗಳೂ ಸಹ ಜಯಭೇರಿಯನ್ನು ಹೊಡೆಯುತ್ತಿರುವ ಕಾಲದಲ್ಲಿ ಕನ್ನಡ ಚಿತ್ರಗಳು ಬಂದುವೆಂದರೆ ನಿರಾಶೆಯೇ ಉಂಟಾಗುತ್ತಿದೆ.

ಇದುವರೆಗೂ ತಯಾರಾಗಿರುವ ಕನ್ನಡ ಚಿತ್ರಗಳನ್ನು ಎರಡು ಭಾಗವಾಗಿ ವಿಂಗಡಿಸಬಹುದು. ಒಂದು, ಯುದ್ಧಪೂರ್ವದಲ್ಲಿ ನಾಲ್ಕಾರು ಚಿತ್ರಗಳು ಬಂದವು. ಅವು ಒಂದೊಂದು ಒಬ್ಬೊಬ್ಬ ಹಣಗಾರನನ್ನು ಹಾರಿಸಿದುವು. ಎರಡು, ಯುದ್ಧಾ ನಂತರ ಈ ಚಿತ್ರಗಳು ಪ್ರಣಾಳಿಕೆಯು ಮಹಾತ್ಮಾ ಪಿಕ್ಚರ್ಸ್‌ರವರ ಕೃಷ್ಣಲೀಲಾದಿಂದ ಆರಂಭವಾಗಿ ಅನತಿಕಾಲದಲ್ಲಿಯೇ ಏಳೆಂಟು ಚಿತ್ರಗಳು ತಯಾರಾದವು. ಒಂದೊಂದರ ವಿಷಯವನ್ನೂ ಹೇಳಬೇಕೆಂದರೆ ಒಂದೊಂದು ಮಹಾ ಪುರಾಣವೇ ಆಗುವಷ್ಟು ಬರೆಯಬೇಕಾಗಬಹುದು."[೧೦] ಎಂದು ಕನ್ನಡ ಚಿತ್ರಗಳ ದುರ್ಗತಿಯ ಬಗ್ಗೆ ವಿಮರ್ಶಕ: ಡಿ.ಕಾಮೇಶ್ ಇವರು ಬರೆದಿರುವುದನ್ನು ನಾಡು ನುಡಿಗಾಗಿ ಧ್ವನಿ ಎತ್ತಿರುವುದನ್ನು ಇಲ್ಲಿ ಗುರ್ತಿಸಲಾಗುತ್ತದೆ.

ತಿಂತಿಣಿ ಮೌನೇಶ್ವರರು ವಚನ ರಚನೆ ಮಾಡಿ, ಕನ್ನಡ ವಚನ ಸಾಹಿತ್ಯಲೋಕಕ್ಕೆ ಅಮೂಲ್ಯವಾದ ಕಾಣಿಕೆ ನೀಡಿದ್ದಾರೆ. ಅದಕ್ಕಾಗಿ ವಿಶ್ವಕರ್ಮ ಸಮಾಜದವರು 'ವಚನಗಳನ್ನು ಅಧ್ಯಯನ' ಮಾಡಬೇಕೆಂಬ ಕಳಕಳಿ ವಿಶ್ವಕರ್ಮೋದಯ ಪತ್ರಿಕೆಯ ಸಂಪಾದಕರಾದ ಸಿ.ಆರ್. ಸುರೇಶ ಅವರದು.

"ನಮ್ಮ ವಿಶ್ವಕರ್ಮ ಧರ್ಮದಲ್ಲಿ ಅನೇಕ ವಚನಕಾರರು ಸಮಾಜ ಸುಧಾರಣೆ ಜೊತೆಗೆ ಲೋಕಕಲ್ಯಾಣ ಕಾರ್ಯದಲ್ಲೂ ಮುಂಚೂಣಿಯಲ್ಲಿದ್ದರು. ಇವರಲ್ಲಿ ೧೨ನೇ ಶತಮಾನದ ಕಿನ್ನರಿ ಬ್ರಹ್ಮಯ್ಯ, ಬಾಚಿಕಾಯಕದ ಬಸವಯ್ಯ, ಹಾವಿನಾಳ ಕಲ್ಲಯ್ಯ, ಘಟ್ಟಿವಾಳಯ್ಯ, ತಿಂಥಣಿ ಮೌನೇಶ್ವರ ಮೊದಲಾದವರು ಪ್ರಚಲಿತದಲ್ಲಿರುವರು. ಇವರಲ್ಲದೆ ಅಪ್ರಚಲಿತದಲ್ಲಿರುವ ಎಷ್ಟೋ ವಿಶ್ವಕರ್ಮ ಸಮಾಜದ ವಚನಕಾರರು ಅಜ್ಞಾತಾವಸ್ಥೆಯಲ್ಲಿರುವರು. ಅವರ ಮತ್ತು ಅವರುಗಳ ವಚನಗಳನ್ನು ಸಂಶೋಧನೆ ಮೂಲಕ ಬೆಳಕಿಗೆ ತರಬೇಕಾಗಿದೆ...ನಾವು ವೇದ ಧರ್ಮೀಯರು ಹೌದು, ವಚನ ಸಾಹಿತ್ಯ ಪ್ರಧಾನರೂ ಹೌದು ಎಂಬುದಕ್ಕೆ ನಮ್ಮವರು ಬರೆದಿರುವ ವಚನ ಭಂಡಾರವೇ ಸಾಕ್ಷಿ. ಇವುಗಳ ಕಡೆ ಗಮನ ಹರಿಸಿ ಜನಮನದಲ್ಲಿ ತರುವುದು ಅವಶ್ಯ ಹಾಗೂ ಅವುಗಳ ಸಾರವನ್ನು ನಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಲ್ಲಿ ಧರ್ಮರಕ್ಷಣೆ ಕಾರ್ಯಗತವಾಗುವುದು. ಶ್ರೀ ಮೌನೇಶ್ವರರ ವಚನಗಳನ್ನು ನಮ್ಮ ಸಾಹಿತಿಗಳು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇನ್ನುಳಿದ ವಚನಕಾರರ ವಚನಗಳನ್ನು ಸಹ ಇವುಗಳ ಜೊತೆಯಲ್ಲಿ ಹೆಚ್ಚು ಹೆಚ್ಚು ಸಂಗ್ರಹಿಸಿ, ಪ್ರಕಟಿಸಿ, ಪ್ರಚಾರಗೊಳಿಸಬೇಕಾಗಿದೆ. ನಮ್ಮವರು ಯಾವುದೇ ಆಹ್ವಾನ ಪತ್ರಿಕೆ ಮುದ್ರಣ ಸಮಯದಲ್ಲಿ ಕೊನೆಯ ಒಂದು ಪುಟವನ್ನು ವಚನಗಳಿಗಾಗಿ ಮುಡುಪಿಟ್ಟು ವಿವಿಧ ವಚನಗಳನ್ನು

ಪ್ರಕಟಿಸುವ ಸುವ್ಯವಸ್ಥೆ ಬರಬೇಕಾಗಿದೆ."[೧೧] ಈ ನಿಟ್ಟಿನಲ್ಲಿ ವಿವಿಧ ವಿಶ್ವಕರ್ಮ ವಚನಕಾರರ ವಚನಗಳನ್ನು 'ವಚನಾಮೃತ' ಎಂಬ ಸ್ಥಿರ ಅಂಕಣದಲ್ಲಿ ನಿರಂತರವಾಗಿ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತ ಬಂದಿರುವುದು ಅವರ ವಚನಪ್ರೀತಿಗೆ ಸಾಕ್ಷಿಯಾಗಿದೆ. ವಿಶ್ವಕರ್ಮರಿಗೇ ವೇದವೂ ಬೇಕು, ವಚನವೂ ಬೇಕು ಎಂಬ ಅವರ ಸಮನ್ವಯ ದೃಷ್ಟಿ ವಿನೂತನವಾದುದು.

ತಮ್ಮ ಧಾರ್ಮಿಕ ಮಠಗಳ ಜಾಗೃತಿಗಾಗಿ ಅನೇಕರು ಸಂಪಾದಕೀಯಗಳನ್ನು ಕಾಲಕಾಲಕ್ಕೆ ಬರೆದಿದ್ದಾರೆ. ಗಾಯತ್ರಿ, ಸಾವಿತ್ರಿ, ಸರಸ್ವತಿ, ಸಚಿ, ಸೌಂಜ್ಞಾ ಇವು ವಿಶ್ವಕರ್ಮರ ಪ್ರಮುಖ ಪಂಚಪೀಠಗಳು. ಗಾಯತ್ರಿಪೀಠವು ಆಂಧ್ರಪ್ರದೇಶದಲ್ಲಿದ್ದರೆ, ಸಾವಿತ್ರಿ ಪೀಠ ಮತ್ತು ಸರಸ್ವತಿ ಪೀಠಗಳು ಕರ್ನಾಟಕದಲ್ಲಿವೆ. ಸಚಿ ಮತ್ತು ಸೌಂಜ್ಞಾಪೀಠಗಳು ಉತ್ತರಭಾರತದಲ್ಲಿವೆ.

ಕರ್ನಾಟಕದ ಆನೆಗುಂದಿಯಲ್ಲಿರುವ ಸರಸ್ವತಿಪೀಠವು ೨೦೦೬ರಲ್ಲಿ ಪುನರ್‌ನಿರ್ಮಾಣ ಕಾರ್ಯ ಪ್ರಾರಂಭವಾದ ಸಂದರ್ಭದಲ್ಲಿ ವಿಶ್ವಕರ್ಮೋದಯ ಪತ್ರಿಕೆ ಸಂಪಾದಕರು ಸಂಪಾದಕೀಯದಲ್ಲಿ– "ಸುವರ್ಣಯುಗವೆಂದೇ ಪ್ರಸಿದ್ಧಿ ಪಡೆದಿದ್ದ ವಿಜಯನಗರ ಸಾಮ್ರಾಜ್ಯದ ಆಡಳಿತ ಸಂದರ್ಭದಲ್ಲಿ ಆನೆಗುಂದಿಯ ಸರಸ್ವತಿ ಪೀಠದ ಪೂಜ್ಯರು ರಾಜಗುರುಗಳಾಗಿದ್ದು, ಈ ಪೀಠದ ಮತ್ತು ರಾಜಾಶ್ರಯದಲ್ಲಿ ಸಾವಿರಾರು ವಿಶ್ವಕರ್ಮ ಕುಟುಂಬಗಳು ಇದ್ದವು. ಕಾಲನ ತುಳಿತಕ್ಕೆ ಸಿಲಿಕಿ ಅಲ್ಲಿನ ರಾಜ್ಯಾಡಳಿತ, ಸರಸ್ವತಿ ಪೀಠ ಮತ್ತು ಆ ವಿಶ್ವಕರ್ಮ ಕುಟುಂಬಗಳು ದಿಕ್ಕಾಪಾಲಾಗುವ ಪರಿಸ್ಥಿತಿ ಬಂದೆರಗಿ ಈ ಪೀಠವು ದಿವ್ಯ ನಿರ್ಲಕ್ಷ್ಯಕ್ಕೊಳಗಾಗಿ ಅಜ್ಞಾತಾವಸ್ಥೆಯಲ್ಲಿದ್ದರೂ ಅಲ್ಲಿಂದ ಸ್ಥಳಾಂತರಗೊಂಡ ಶ್ರೀಪೀಠದ ಪರಂಪರೆಯು ಅಂದಿನಿಂದ ಇಂದಿನವರೆಗೂ ತಮ್ಮ ಬಿರುದಾಂಕಿತಗಳಲ್ಲಿ ಶ್ರೀಮದ್ ಆನೆಗುಂದಿ ಸರಸ್ವತಿಪೀಠ ಎಂಬುದನ್ನು ಎಂತಹ ಸಂದರ್ಭದಲ್ಲಿಯೂ ನಿರ್ಲಕ್ಷಿಸದೆ ಪಾಲಿಸಿಕೊಂಡು ಬಂದುದರ ಫಲವೇ ಇಂದು ಮೂಲಪೀಠದ ಸಂಶೋಧನೆಗೆ ನಾಂದಿಯಾಗಿ ಈ ಪೀಠದ ಅಜ್ಞಾತಾವಸ್ಥೆಯು ವಿಮುಕ್ತಿ ಆಗುತ್ತಲಿದೆ".[೧೨] ಸಂಪಾದಕೀಯ ಮಾತುಗಳಿಗೆ ಪೂರಕವೆಂಬಂತೆ ಕೆ.ವಿ.ಪತ್ತಾರ ಅವರ 'ಶ್ರೀಮದ್ ಆನೆಗುಂದಿ ವಿಶ್ವಕರ್ಮ ಜಗದ್ಗುರು ಪಂಚಸಿಂಹಾಸನ ಸರಸ್ವತಿಪೀಠ' ಎಂಬ ಕಿರುಲೇಖನವೂ ಈ ಸಂಚಿಕೆಯಲ್ಲಿದೆ. ನೂತನವಾಗಿ ನಿರ್ಮಿಸಲಿರುವ ಆಶ್ರಮದ ಭೂಮಿಪೂಜೆ, ಮಹಾದ್ವಾರದ ಫೋಟೋಗಳನ್ನು ಸಾಂದರ್ಭಿಕವಾಗಿ ಪ್ರಕಟಿಸಿದ್ದಾರೆ.

ವಿಶ್ವಕರ್ಮೋದಯ ಪತ್ರಿಕೆಗೆ ನಾಲ್ಕು ವರುಷಗಳು ತುಂಬಿದಾಗ ಏಪ್ರಿಲ್ ೨೦೦೭ರ ಸಂಚಿಕೆಯ ಸಂಪಾದಕೀಯದಲ್ಲಿ ಚಂದಾಹಣವನ್ನು ದಯವಿಟ್ಟು ನೀಡಿ ವಿಶ್ವಕರ್ಮ ಧರ್ಮ, ಸಂಸ್ಕೃತಿಯನ್ನು ಅರಿತು ಆಚರಣೆಯಲ್ಲಿ ಅಳವಡಿಸಿಕೊಂಡು ಹೋಗಲು ಸಹಾಯವಾಗುತ್ತದೆ ಎಂಬ ವಿನಂತಿ ಇದೆ. ಹಾಗೆ ಸಮಾಜದ ಹಿತದೃಷ್ಟಿಯಿಂದ ವೈಯಕ್ತಿಕ ವಿಷಯಗಳಿಗೆ ಮತ್ತು ಸ್ವಾರ್ಥಪರ ವಿಷಯಗಳಿಗೆ ಹೆಚ್ಚು ಒತ್ತುಕೊಡದೆ ಒಗ್ಗಟ್ಟಿನಿಂದ ಕಾರ್ಯೋನ್ಮುಖರಾಗಬೇಕೆಂಬ ಪ್ರಾರ್ಥನೆಯೂ ಇದೆ.

ತಮ್ಮ ಸಮಾಜಕ್ಕೆ ಅಪಮಾನವಾದಾಗ ಸಂಪಾದಕರು ಪ್ರತಿಭಟನಾತ್ಮಕ ಸಂಪಾದಕೀಯಗಳನ್ನು ಬರೆದಿದ್ದಾರೆ. ಜುಲೈ-ಆಗಸ್ಟ್ ೨೦೦೭ರ ವಿಶ್ವಕರ್ಮೋದಯ ಸಂಚಿಕೆಯ ಸಂಪಾದಕೀಯದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದವರು ಡಾ. ಚಂದ್ರಶೇಖರ ದಾಮ್ಲೆಯವರ ಸಂಪಾದಕತ್ವದಲ್ಲಿ ಹೊರತಂದ ಪಿ.ಯು.ಸಿ. ಎರಡನೇ ವರ್ಷದ ಸಮಾಜ ಶಾಸ್ತ್ರ ಪಠ್ಯಪುಸ್ತಕದ ಅಧ್ಯಾಯ ೬ರಲ್ಲಿ ಭಾರತದಲ್ಲಿ ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆ ಎಂಬ ಶಿರೋನಾಮದಡಿ ಎಡಜಾತಿಗಳು ಎಂಬ ಉಪಶೀರ್ಷಿಕೆಯಲ್ಲಿ ಸಂಸ್ಕೃತಾನುಕರಣೆಯ ಬಗ್ಗೆ ಉಲ್ಲೇಖಿಸುತ್ತ ವಿಶ್ವಕರ್ಮ ಸಮಾಜವನ್ನು ಅವಹೇಳನದ ಬರಹವನ್ನು ಪ್ರತಿಭಟಿಸಿದ್ದಾರೆ. ಈ ಕುರಿತು ಅಂದಿನ ಶಿಕ್ಷಣ ಸಚಿವರಾದ ಬಸವರಾಜ ಹೊರಟ್ಟಿ ಅವರಿಗೆ ಈ ಪಠ್ಯಪುಸ್ತಕವನ್ನು ಹಿಂತೆಗೆದುಕೊಳ್ಳಬೇಕೆಂದು ಪ್ರತಿಭಟನಾತ್ಮಕ ಮನವಿ ನೀಡಿದ ವರದಿಯನ್ನು ಪ್ರಕಟಿಸಿದ್ದಾರೆ.

ಈ ದೇಶದಲ್ಲಿ ಮತಾಂತರ ಎಂಬ ಪಿಡುಗು ಧಾರ್ಮಿಕ ಜಗತ್ತನ್ನು ಮೇಲಿಂದ ಮೇಲೆ ಕಾಡುವ ಸಮಸ್ಯೆಯಾಗಿದೆ. ಈ ಕುರಿತು ಸಂಪಾದಕರು ಸಮಕಾಲೀನ ಸಂದರ್ಭಕ್ಕೆ ತಕ್ಕಂತೆ ತಮ್ಮ ಸಂಪಾದಕೀಯಗಳಲ್ಲಿ ವಿಶ್ವಕರ್ಮ ಸಮಾಜದ ಜನರಲ್ಲಿ ಜಾಗೃತಿಯನ್ನುಂಟು ಮಾಡುವ ಪ್ರಯತ್ನ ಮಾಡಿದ್ದಾರೆ. “ಇತ್ತೀಚೆಗೆ ಮತಾಂತರದ ಪಿಡುಗು ಸಾಂಕ್ರಾಮಿಕ ರೋಗದಂತೆ ಹರಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಜಾತ್ಯತೀತ ರಾಷ್ಟ್ರವಾದ ಭಾರತದಲ್ಲಿ ಮತಾಂತರ ಪ್ರಕ್ರಿಯೆ ಆರೋಗ್ಯದಾಯಕವಲ್ಲ. ಹೀಗಿದ್ದರೂ ಅದಕ್ಕೆ ಬೇರೆ ಬೇರೆ ಬಣ್ಣಗಳನ್ನು ಬಳಿದು ಅದಕ್ಕಿನ್ನೂ ಮೆರುಗು ನೀಡುತ್ತಿದ್ದಾರೆ. ನೂರಾರು ಜನ ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ರಾಜಕಾರಣಿಗಳು ಪಕ್ಷಾಂತರ ಮಾಡಿದಂತೆ ದಿನ ಬೆಳಗಾಗುವುದರೊಳಗೆ ಹಿಂದು ಮುಂದು ನೋಡದೆ ಹಾರುತ್ತಿರುವುದು ಸ್ವ-ಪ್ರೇರಣೆಯಿಂದಂತೂ ಅಲ್ಲವೆನ್ನುವುದು ಸ್ಪಷ್ಟ... ಹಿಂದಿನ ಕಾಲದಲ್ಲಿ ಕತ್ತಲೆಯನ್ನು ಹಣತೆಯ ದೀಪದಿಂದ ದೂರ ಮಾಡುತ್ತಿದ್ದರೆ ಈಗ ವಿದ್ಯುದ್ದೀಪಗಳನ್ನು ಬೆಳಗಿಸುತ್ತಿದ್ದೇವೆ. ಹಣತೆಯದ್ದೇ ಆಗಲಿ, ವಿದ್ಯುದ್ದೀಪದ್ದೇ ಆಗಲಿ ಕತ್ತಲಿನ ತಾತ್ಕಾಲಿಕ ನಿವಾರಣೆಗೆ ಜ್ಯೋತಿಯಂತೂ ಅಗತ್ಯ. ಅದೇ ರೀತಿ ಹುಟ್ಟು ಸಾವು, ಕಷ್ಟ-ನಷ್ಟ ಎಂಬಿತ್ಯಾದಿ ಕತ್ತಲಿನಂತಹ ಪರಿಸ್ಥಿತಿಗಳನ್ನು ಮಾನವನು ಎದುರಿಸಬೇಕಾದರೆ ಧರ್ಮಜ್ಯೋತಿಯು ಅಗತ್ಯ ಎನ್ನುವುದನ್ನು ನಾಸ್ತಿಕನೂ ಸರಿಯಾಗಿ ಯೋಚಿಸಿದರೆ ಅಲ್ಲಗಳೆಯುವಂತಿಲ್ಲ. ಈ ಆಧುನಿಕ ಕಾಲದಲ್ಲೂ ಕೂಡ ತನ್ನತನವನ್ನು ಕಳಕೊಳ್ಳದ ಹಿಂದೂ ಧರ್ಮವು ಮಾನವನ ಜೀವನ ಯಾತ್ರೆಗೆ ನಂದದ ನಂದಾದೀವಿಗೆಯಾಗಿ ಬೆಳಕು ನೀಡಬಲ್ಲ ಸಾಮರ್ಥ್ಯ ಹೊಂದಿರುವ ‘ಸನಾತನ ಧರ್ಮ’ವಾಗಿರುತ್ತದೆ”.[೧೩] ಎಂದು ಬೈಕಾಡಿ ಜನಾರ್ದನ ಆಚಾರ್ ಅವರು ವಿನಂತಿಸಿಕೊಂಡಿದ್ದಾರೆ.

ವಿಶ್ವಕರ್ಮ ಪತ್ರಿಕೆಗಳಲ್ಲಿ ಅಂದಿನ ಕನ್ನಡ ಸಾಹಿತ್ಯ ಸಮ್ಮೇಳನದ ಕುರಿತಾಗಿ ಸಂಪಾದಕೀಯ ವರ್ಣಿಸಿರುವ ಬರಹ ಹೀಗಿದೆ. “ಕನ್ನಡ ಸಾಹಿತ್ಯ ರಚನೆಗೆ ಕೈಹಾಕುವಾಗ ಮೂರು ತಿಂಗಳಲ್ಲಿ

ಆದಿ ಪುರಾಣವನ್ನೂ ಆರು ತಿಂಗಳಲ್ಲಿ ವಿಕ್ರಮಾರ್ಕವಿಜಯವನ್ನೂ ರಚಿಸಿದ ಪಂಪನಂತಹ ಮಹಾ ಕವಿಗಳ ಸತ್ವವನ್ನು ಸ್ಮರಣೆ ಮಾಡಿಕೊಳ್ಳಿ; ಉನ್ನತವೂ ಭವ್ಯವೂ ಆದ ಗೊಮ್ಮಟೇಶ್ವರ ವಿಗ್ರಹವನ್ನು ಕಡೆದು ರೂಪಿಸಿ ಪ್ರತಿಷ್ಠಾಪಿಸಿದ ಮಹಾ ವ್ಯಕ್ತಿಗಳ ಮಹಾ ಸಾಹಸೋದ್ಯಮವನ್ನು ನೆನೆಸಿಕೊಳ್ಳಿ; ಎಲ್ಲೋರ ಅಜಂತಗಳ ಗುಹಾಂತರ ದೇವಾಲಗಳನ್ನು ಕೊರೆದು ನಿರ್ಮಿಸಿದ ಮಹಾ ಪ್ರಯತ್ನ ಶೀಲರನ್ನು ಚಿತ್ತಕ್ಕೆ ತಂದುಕೊಳ್ಳಿ; ಬೇಲೂರು ಹಳೆಬೀಡು ಸೋಮನಾಥಪುರಗಳ ಸುಂದರವಾದ ಬಹು ಶ್ರಮಸಾಧ್ಯವಾದ ಆ ದೇವಮಂದಿರಗಳನ್ನು ನಿರ್ಮಿಸಿದ ಶಿಲ್ಪಿ ಬ್ರಹ್ಮರನ್ನು ಜ್ಞಾಪಿಸಿಕೊಳ್ಳಿ. ಕನ್ನಡಿಗರ–ನಮ್ಮ ಪೂರ್ವಿಕರ–ಸತ್ವವನ್ನು ನೋಡಿ! ಕೆಚ್ಚನ್ನು ನೋಡಿ! ಆದ್ದರಿಂದ ಪ್ರಪಂಚದ ಸಾಹಿತ್ಯದಲ್ಲಿ ಕನ್ನಡ ಸಾಹಿತ್ಯಕ್ಕೆ ಗೌರವಸ್ಥಾನ ದೊರೆಬೇಕೆಂಬ ಸಂಕಲ್ಪದಿಂದ ಸಾಹಿತ್ಯ ರಚನೆಯಗೆ ಕೈಹಾಕಿ", ಎಂಬುದಾಗಿ ಕನ್ನಡ ವಚನ ವಾಙ್ಮಯದ ವಿದ್ವನ್ಮಣಿಗಳೂ ಉದ್ದಾಮ ಸಾಹಿತಿಗಳೂ ಆದ ಶ್ರೀ ಯಂ. ಆರ್. ಶ್ರೀನಿವಾಸ ಮೂರ್ತಿಗಳು ಸೋಲಾಪುರದಲ್ಲಿ ನಡೆದ ಮೂವತ್ತು ಮೂರನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪೀಠದಿಂದ ಭಾಷಣ ಮಾಡುತ್ತ ಹೇಳಿದರು.[೧೪]

ರಾಜಕೀಯದಲ್ಲಿಯೂ ತಮ್ಮ ಸಮಾಜಕ್ಕೆ ಪ್ರಾತಿನಿಧ್ಯ ದೊರೆಯಬೇಕೆಂಬ ಆಶಯ ಕೆಲವು ಪತ್ರಿಕಾ ಸಂಪಾದಕರ ಮನದಾಳದಲ್ಲಿ ಆಗಾಗ ಮೂಡಿ ನಿಂತಿದೆ. ರಾಜಕೀಯ ಶಕ್ತಿಯಾಗಿಯೂ ನಾವು ಬೆಳೆಯಬೇಕು. ಕರ್ನಾಟಕದಲ್ಲಿ ಒಕ್ಕಲಿಗ–ಲಿಂಗಾಯತರ ಪ್ರಾಬಾಲ್ಯದ ರಾಜಕೀಯದ ನಡುವೆ, ನಮ್ಮ ಸಮಾಜಕ್ಕೂ ಸೂಕ್ತ ಪ್ರಾತಿನಿಧ್ಯ ದೊರೆಯಬೇಕೆಂದು ಅನೇಕರು ಪ್ರತಿಪಾದಿಸುತ್ತ ಬಂದಿದ್ದಾರೆ. ವಿಶ್ವಕರ್ಮಾ ಪತ್ರಿಕೆಯ ಸಂಪಾದಕರು ೩೮ ವರುಷಗಳ ಹಿಂದೆ 'ರಾಜಕೀಯದಲ್ಲಿ ನಮ್ಮ ಸಮಾಜ...?' ಎಂಬ ಸಂಪಾದಕೀಯ ಬರೆದು– "ಕರ್ನಾಟಕ ರಾಜ್ಯದಲ್ಲಿ ನಮ್ಮ ಸಮಾಜದ ಜನಸಂಖ್ಯೆ ೧೦ ಲಕ್ಷಕ್ಕೂ ಮಿಕ್ಕಿರುವುದಾದರೂ ನಾವಿನ್ನೂ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ರಂಗಗಳಲ್ಲಿ ಹಿಂದುಳಿದಿರುವುದು ನಗ್ನಸತ್ಯ.... ರಾಜಕೀಯದಲ್ಲಿ ನಾವಿನ್ನೂ ಪ್ರಥಮ ಹೆಜ್ಜೆಯನ್ನೂ ಇಟ್ಟಿಲ್ಲ. ಇತರ ಸಮಾಜವೆಲ್ಲವೂ ರಾಜಕೀಯದಲ್ಲಿ ಮುನ್ನುಗ್ಗಿ, ಹಲವು ವಿಧಗಳಲ್ಲಿ ತಮ್ಮ ತಮ್ಮ ಪ್ರಗತಿಯನ್ನು ಸಾಧಿಸಿಕೊಂಡಿರುವುದನ್ನು ನಾವು ಪ್ರತ್ಯಕ್ಷವಾಗಿ ಕಾಣಬಲ್ಲೆವು. ಕೇವಲ ನಮ್ಮ ಜಿಲ್ಲೆಗೇ ಸೀಮಿತವಾಗಿರುವ ಅಲ್ಪಸಂಖ್ಯಾತ ಸಮಾಜವೂ ರಾಜಕೀಯ ರಂಗದಲ್ಲಿ ಕ್ರಿಯಾಶೀಲರಾಗಿ ತಮ್ಮ ಪ್ರತಿಷ್ಠೆಯನ್ನು ಬೆಳೆಸಿಕೊಂಡಿವೆ. ಹೀಗಿರಲು ಅಖಿಲ ಭಾರತ ವ್ಯಾಪ್ತಿಯಲ್ಲಿರುವ ವಿಶ್ವಕರ್ಮ ಸಮಾಜ ಮಾತ್ರ ನಮ್ಮ ರಾಜ್ಯದಲ್ಲಿ ಹರಿಜನ ಗಿರಿಜನರಿಗಿಂತಲೂ ರಾಜಕೀಯವಾಗಿ ಹಿಂದುಳಿದಿದೆ ಎಂದರೆ, ನಮ್ಮ ರಾಜಕೀಯ ಪ್ರಜ್ಞೆ ಎಷ್ಟು ಕೆಳಮಟ್ಟದಲ್ಲಿದೆ ಎಂಬುದನ್ನು ತೋರಿಸಿಕೊಡುತ್ತದೆ. ಸ್ವಾತಂತ್ರ್ಯ ಸಿಕ್ಕಿ ೩೫ ವರ್ಷಗಳಾದರೂ (ಈ ಸಂಪಾದಕೀಯ ಬರೆದದ್ದು ನವೆಂಬರ್ ೧೯೮೨ರಲ್ಲಿ) ನಮ್ಮ ಸಮಾಜದಿಂದ ಒಬ್ಬನೇ ಒಬ್ಬ ಶಾಸಕ ನಮ್ಮ ರಾಜ್ಯ ವಿಧಾನಸಭೆಗೆ ಕಳೆದ ಬಾರಿ ಮಾತ್ರ ಆರಿಸಿ ಬರುವಂತಾಯಿತು. ಅವರೇ ಮಾಜಿ ಶಾಸಕ ಪಿ.

ವಿ. ಪತ್ತಾರ್...ಕಾಂಗ್ರೆಸ್ ಸಹಿತ ಯಾವುದೇ ಪಕ್ಷಗಳು ನಮ್ಮನ್ನು ಕಡೆಗಣಿಸಿವೆ ಎಂದು ಆರೋಪವನ್ನು ಹೊರೆಸುವುದೂ ಸಮಂಜಸವಲ್ಲ. ಏಕೆಂದರೆ, ನಾವು ಯಾವುದಾದರೊಂದು ಪಕ್ಷಕ್ಕೆ ಸೇರಿ ರಾಜಕೀಯದಲ್ಲಿ ಸಕ್ರಿಯ ಭಾಗವಹಿಸಿದ್ದೆವೆಯೇ ಎಂಬುದು ಮುಖ್ಯಪ್ರಶ್ನೆ. ನಾವು ಯಾವುದೇ ಪಕ್ಷಗಳಲ್ಲಿ ದುಡಿಯದೇ ಇದ್ದರೆ, ನಮಗೆ ರಾಜಕೀಯ ಸ್ಥಾನಗಳು ಸಿಗುವುದಾದರೂ ಹೇಗೆ? ಹಾಗೆಂದು ನಮ್ಮ ಇಡೀ ಸಮಾಜವನ್ನು ಯಾವುದೇ ಒಂದು ರಾಜಕೀಯ ಪಕ್ಷಕ್ಕೆ ಸೇರಿಸಿಕೊಳ್ಳುವುದಾಗಲೀ ಅಥವಾ ಬೆಂಬಲಿಸುವುದಾಗಲೀ ಸಾಧ್ಯವಾಗಲಾರದು–ನ್ಯಾಯವೂ ಆಗಲಾರದು. ಆ ಪ್ರಯುಕ್ತ ನಮ್ಮ ಸಮಾಜ ಬಂಧುಗಳು ತಮ್ಮ ತಮ್ಮ ರಾಜಕೀಯ ಪ್ರಜ್ಞೆ ಬೆಳೆಸಿ, ಅವರು ಇಷ್ಟಪಡುವ ಪಕ್ಷಗಳಲ್ಲಿ ಸಕ್ರಿಯ ಪಾತ್ರವಹಿಸಿ, ರಾಜಕೀಯ ಸ್ಥಾನಮಾನಗಳನ್ನು ಗಿಟ್ಟಿಸಿಕೊಳ್ಳಲು ಪ್ರಯತ್ನಿಸುವುದಲ್ಲದೆ ಅಂತಹ ಸ್ಥಾನಮಾನಗಳನ್ನು ದೊರಕಿಸಿಕೊಂಡಾಗ, ಸಮಾಜವನ್ನು ಮರೆಯದೆ ಅದರ ಹಿತವನ್ನೇ ಬಯಸುವುದು ಧರ್ಮವಾಗಿದೆ".[೧೫]

ರಾಜಕೀಯ ಹಿತಾಸಕ್ತಿಗಾಗಿ ಇಡೀ ಸಮಾಜವನ್ನೇ ಬಲಿಕೊಡಬಾರದು ಎಂಬ ಕಳಕಳಿಯೂ ಸಂಪಾದಕರಿಗಿರುವುದು ಮುಖ್ಯವಾಗಿ ಗಮನಿಸುವ ಅಂಶವಾಗಿದೆ. ಇತ್ತೀಚೆಗೆ ಕೆ.ಪಿ.ನಂಜುಂಡಿ ಅವರು ರಾಜಕೀಯ ಕ್ಷೇತ್ರದಲ್ಲಿ ಮುನ್ನುಗ್ಗುತ್ತಿದ್ದರೂ ಸಿಗಬೇಕಾದ ಪ್ರಾತಿನಿಧ್ಯ ಇನ್ನೂ ಸಿಕ್ಕಿಲ್ಲವೆಂದೇ ಹೇಳಬೇಕು.

ಬೈಕಾಡಿ ಜನಾರ್ದನ ಆಚಾರ್ ಅವರು ವಿಶ್ವಕರ್ಮಾ ಮಾಸಪತ್ರಿಕೆಯ ಸಂಪಾದಕರು. ಆಗಸ್ಟ್ ೧೯೮೧ರ ಸಂಪಾದಕೀಯಲ್ಲಿ "ಇಂದು ಸಣ್ಣ ಪತ್ರಿಕೆಗಳು ಬದುಕಿಗಾಗಿ ಹೋರಾಟ ನಡೆಸಬೇಕಾಗಿದೆ. ಜೀವನಾವಶ್ಯಕ ವಸ್ತುಗಳ ಬೆಲೆ ಏರಿಕೆಯೊಂದಿಗೆ ಇತರ ಎಲ್ಲಾ ವಸ್ತುಗಳ ಬೆಲೆಗಳೂ ಆಕಾಶ ಮುಟ್ಟಲು ಸ್ಪರ್ಧಿಸುವಂತಿದೆ. ಅದಕ್ಕಾಗಿ ಚಂದಾ ಹಣ ನವೀಕರಿಸಿ" ಎಂದು ವಿನಂತಿಸುವದರೊಂದಿಗೆ "ಕಲಾ ಪ್ರತಿಭೆಗಳಿಗೆ ಆಗರವಾದ ನಮ್ಮ ಸಮಾಜದಲ್ಲಿ ಬರಹಗಾರರಿಗೂ ಕೊರತೆಯಿಲ್ಲ. ಅಲ್ಲದೆ ಉದಯೋನ್ಮುಖ ಲೇಖಕರು ಹರಿತ ಲೇಖನಿಯೊಂದಿಗೆ ಹುಟ್ಟುತ್ತಿದ್ದಾರೆ. ಅವರಿಗೆ ಆಶ್ರಯ ನೀಡುವುದರೊಂದಿಗೆ 'ವಿಶ್ವಕರ್ಮಾ'ದ ಪುಟಗಳನ್ನು ಹೆಚ್ಚಿಸಿ ಮೌಲಿಕ ಲೇಖನಗಳನ್ನು ಬೇರೆ ಬೇರೆ ವಿಭಾಗಗಳಲ್ಲಿ ನಿಮಗೆ ನೀಡುವ ಸಾಹಸ ಮಾಡುತ್ತೇವೆ"[೧೬] ಎಂದು ಭರವಸೆ ನೀಡಿದ್ದಾರೆ.

ಬಹುತೇಕ ಸಂಪಾದಕರು ಮೇಲಿಂದ ಮೇಲೆ ಹೀಗೆ ಆರ್ಥಿಕ ಮುಗ್ಗಟ್ಟಿನಿಂದ ಪತ್ರಿಕೆಗಳು ನಿಂತು ಹೋಗುವ ಮಟ್ಟಕ್ಕೆ ಹೋದ ಸಂದರ್ಭವನ್ನು ತಮ್ಮ ಸಂಪಾದಕೀಯಗಳಲ್ಲಿ ಪ್ರಾಂಜಲ ಮನಸ್ಸಿನಿಂದ ನಿವೇದಿಸಿಕೊಂಡಿದ್ದಾರೆ.

ಇತ್ತೀಚೆಗೆ ಚಿಕ್ಕಬಳ್ಳಾಪುರ ಜಿಲ್ಲೆಯ ಸಿದ್ಧನಗವಿ ನಂದಿ ಜ್ಞಾನಾನಂದ ಆಶ್ರಮದ ಪರಮಪೂಜ್ಯ ಶ್ರೀ ಶ್ರೀ ಸ್ವಾಮಿ ಶಿವಾತ್ಮಾನಂದ ಸರಸ್ವತೀ ಮಹಾಸ್ವಾಮೀಜಿ ಅವರನ್ನು ಭೇಟಿ ಮಾಡಿದೆ.

ಪೂಜ್ಯರು ಕನ್ನಡದಲ್ಲಿ ಸನ್ಯಾಸ ಪರಂಪರೆ ಎಂಬ ಮೌಲಿಕ ಗ್ರಂಥವನ್ನು ಪ್ರಕಟಿಸಿದ್ದಾರೆ. ಇಂಗ್ಲಿಷ್ ಭಾಷೆಯಲ್ಲಿ ವಿಶ್ವಕರ್ಮ ಧರ್ಮದ ದರ್ಶನಶಾಸ್ತ್ರದ ಹಿನ್ನೆಲೆಯಲ್ಲಿ 'ಯುನಿವರ್ಸಲ್ ಟ್ರೂಥ್' ಎಂಬ ಮಹತ್ವದ ಇಂಗ್ಲಿಷ್ ಕೃತಿಯನ್ನು ರಚಿಸಿದ್ದಾರೆ. ಪೂಜ್ಯರು ಒಂದು ಕಾಲಕ್ಕೆ 'ಜಗತ್ ಕಲ್ಯಾಣ' ಪತ್ರಿಕೆಗೆ ಅನೇಕ ಲೇಖನಗಳನ್ನು, ಸಂಪಾದಕೀಯಗಳನ್ನು ಬರೆದಿರುವ ಕುರಿತು ನನ್ನ ಗಮನ ಸೆಳೆದರು. ಶಾಂತಸ್ವರೂಪಿಗಳು, ತಪಸ್ವಿಗಳೂ ಲೋಕದ ಜಂಜಡಗಳಿಂದ ಮುಕ್ತರಾಗಿ ಪ್ರಶಾಂತವಾದ ಗವಿಯಲ್ಲಿ ವಾಸಿಸುತ್ತಿರುವ ಪೂಜ್ಯರ ದರ್ಶನ ಭಾಗ್ಯ ದೊರೆತದ್ದು ನನ್ನ ಭಾಗ್ಯವೆಂದು ತಿಳಿದಿರುವೆ. ಪೂಜ್ಯರು ಇನ್ನೂ ಮಹತ್ವದ ವಿಷಯ ಕುರಿತು ನನಗೆ ವಿವರಿಸುತ್ತ ಜೀವಣ್ಣ ಮಸಳಿ ಅವರು ಕೂಡ ಒಂದು 'ವಿಶ್ವಕರ್ಮ' ಎಂಬ ಪತ್ರಿಕೆಯನ್ನು ಸಂಪಾದಿಸಿ ಪ್ರಕಟಿಸುತ್ತಿದ್ದರು ಎಂಬ ಮಹತ್ವದ ವಿಷಯದತ್ತ ನನ್ನ ಗಮನ ಸೆಳೆದರು. ಆದರೆ ಆ ಪತ್ರಿಕೆಯ ಸಂಚಿಕೆಗಳಿಗಾಗಿ ನಾನು ಕ್ಷೇತ್ರಕಾರ್ಯ ಮಾಡಿರುತ್ತೇನೆ.

ಕಾಳಿಕಾ ಸಂದೇಶ, ಕಾಳಿಕಾದೇವಿ ವಾಣಿ, ವಿಶ್ವಕರ್ಮ ಸಂದೇಶ, ವಿಶ್ವಬಂಧು, ವಿಶ್ವಬ್ರಾಹ್ಮಣ, ವಿಶ್ವಕರ್ಮ ವಿಕಾಸವಾಣಿ, ವಿಧಾತೃ, ಸ್ಥಿತಿಗತಿ ಮೊದಲಾದ ಸಂಪಾದಕೀಯಗಳು ಅತ್ಯಂತ ಸಂಕ್ಷಿಪ್ತವಾಗಿ–ಸರಳವಾಗಿ ಸಂದರ್ಭಕ್ಕೆ ತಕ್ಕಂತೆ ಕೆಲವು ಸಮಕಾಲೀನ ಮಹತ್ವದ ವಿಷಯಗಳನ್ನು ತಿಳಿಸುತ್ತವೆ.

ಶೀ ತಾ.ವೆಂ.ಮುತ್ತಾಚಾರ್ಯರು ಕನ್ನಡ ನಾಡು ನುಡಿಯ ಕುರಿತು ಪ್ರಕಟಿತವಾದ ಕವನ 'ನಿನ್ನ ತಾಯಿ ನುಡಿಯೊಂದೆ ಬೆಳಕು ನಿನಗೆ' ಈ ಕವನದ ಆರಂಭದ ಸಾಲುಗಳನ್ನು ನೋಡಿದಾಗ 'ಸಾಕು ಸಾಕಿಷ್ಟು ದಿನಗಳ ಗೈದುದಾಸೀನ ಓ ಕನ್ನಡಿಗನೆ ಎಚ್ಚರಗೊಳ್ಳು, ಏಳು'.[೧೨] ಈ ಸಾಲುಗಳಲ್ಲಿ ಕನ್ನಡದ ಅಭಿಮಾನದ ಮೂಲಕ ಕನ್ನಡಿಗರನ್ನು ಎಚ್ಚರಿಸುವ ಒಗ್ಗೂಡಿಸುವ ಕೆಲಸವನ್ನು ಏಕೀಕರಣದ ಸಮಯದಲ್ಲಿ ರಚಿತವಾದ ಈ ಕವನ ಕನ್ನಡಿಗರಿಗೆ ಕೈಗನ್ನಡಿಯಾಗಿದೆ ಎಂದು ಗುರುತಿಸಲಾಗಿದೆ.

ವಿಶ್ವಕರ್ಮ ಪತ್ರಿಕಗಳು ಕನ್ನಡ ನಾಡು ನುಡಿಯ ವಿಷಯಗಳು ಬಂದಾಗ ನೇರವಾಗಿ ಅವುಗಳನ್ನು ಪ್ರಕಟಿಸುವ ಸಹೃದಯತೆಯನ್ನು ಈ ಸಮುದಾಯ ಪತ್ರಿಕೆಗಳು ಮಾಡಿವೆ. ಕೆ.ಶ್ಯಾಮಕುಮಾರಿಯವರ 'ಕನ್ನಡ ಭಾವಗೀತೆಗಳ ಚರಿತ್ರೆ' ಅತ್ಯಂತ ಮಹತ್ವದ್ದಾಗಿದೆ. "ಜೈನ ಸಾಹಿತ್ಯಕ್ಕಿಂತ ಮೊದಲು ಕನ್ನಡದಲ್ಲಿ ಬೌದ್ಧ ಸಾಹಿತ್ಯವಿದ್ದಿತ್ತೆಂದು ಸಾಕಷ್ಟು ಸಾಧನಗಳಿಲ್ಲದಿರುವದರಿಂದ ಅದರ ಸ್ವರೂಪವನ್ನು ತಿಳಿಯುವುದು ಬಹು ಕಷ್ಟವೆಂದು ಪ್ರೊ॥ ವೆಂಕಣ್ಣಯ್ಯನವರು ಹೇಳಿದರು. ಅದುದರಿಂದ ನಮಗೆ ದೊರಕುವ ಜೈನ ಸಾಹಿತ್ಯದಿಂದಲೇ ವಿಮರ್ಷೆಯನ್ನು ಆರಂಬಿಸಬೇಕು. ಕನ್ನಡಕ್ಕೆ ಆದಿಕವಿಯಾದ ಪಂಪನ ಕೃತಿಗಳಲ್ಲಿ ಭಾವಗೀತೆಗಳೆನಿಸುವ ಭಾಗಗಳಿವೆ. ನಿದರ್ಶನಕ್ಕಾಗಿ ಪಂಪಭಾರತದಲ್ಲಿ ಬರುವ ಬನವಾಸಿ ದೇಶದ ವರ್ಣನೆ! ಇಲ್ಲಿ ಕವಿಯ ನಾಡ ಪ್ರೇಮ ಹರಿದು ಬಂದಿದೆ: 'ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪ ನಾಳ್ದಗೇ. ಯಂ ಕಿವಿಮೊಕ್ಕೊಡಂ ಬಿರಿದ ಮಲ್ಲಿಗೆ

ಕಂಡೊಡಮಾದ ಕೆಂದಲಂ, ಪಂ ಕೆಳೆಗೊಂಡೊಡಂ ಮಧುಮಹೋತ್ಸವಮಾಡೇನನೆಂಬನಾ, ರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ॥' ಎಂದು ಪಂಪನ ಕಾವ್ಯದಲ್ಲಿದೆ."[೧೮] ಈ ರೀತಿಯಾಗಿ ಕನ್ನಡ ನಾಡುನುಡಿಯ ಕುರಿತಾಗಿ ಹಲವಾರು ಲೇಖನಗಳ ಮೂಲಕ ಕನ್ನಡ ಪ್ರೇಮವನ್ನು ನಾಡಿಗೆ ಉಣಬಡಿಸಿದ ಹೆಗ್ಗಳಿಕೆ ವಿಶ್ವಕರ್ಮ ಸಮುದಾಯದ ಪತ್ರಿಕೆಗಳದ್ದಾಗಿದೆ ಎಂದು ಈ ಮೂಲಕ ಗುರುತಿಸಿದ್ದೇನೆ.

**ಕೊನೆ ಟಿಪ್ಪಣಿ**

೧. ವಿಶ್ವಕರ್ಮೋದಯ, ಸಂಪಾದಕೀಯ, ಪುಟ–೪ ಮೇ, ಜೂನ ೨೦೦೭.

೨. ಸಂಪಾದಕೀಯ: ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧, ಪುಟ–೮, ನವೆಂಬರ್ ೧೯೪೯.

೩. ಸಂಪಾದಕೀಯ: ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೧, ಪುಟ–೧೦–೧೨, ನವೆಂಬರ್ ೧೯೪೯.

೪. ವಿಶ್ವಕರ್ಮಾ, ಸಂಪುಟ–೨ ಸಂಚಿಕೆ ೩–೪, ಪುಟ–೭, ಜನೇವರಿ–ಫೆಬ್ರುವರಿ ೧೯೫೦.

೫. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೩–೪, ಪುಟ–೯–೧೦, ಜನವರಿ ೧೯೫೦.

೬. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೨, ಪುಟ–೪, ಡಿಶಂಬರ್ ೧೯೪೯.

೭. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೫, ಪುಟ–೧೧, ಮಾರ್ಚ ೧೯೫೦.

೮. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೯, ಪುಟ–೪–೫, ಜುಲೈ ೧೯೫೦.

೯. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೯, ಪುಟ–೧೧–೧೨, ಜುಲೈ ೧೯೫೦.

೧೦. ವಿಶ್ವಕರ್ಮಾ, ಸಂಪುಟ–೩, ಸಂಚಿಕೆ–೪,೫, ಫೆಬ್ರವರಿ–ಮಾರ್ಚ್ ೧೯೫೧.

೧೧. ವಿಶ್ವಕರ್ಮೋದಯ, ಸಂಪುಟ–೪, ಸಂಚಿಕೆ–೧೦, ಪುಟ–೩, ಜನೆವರಿ ೨೦೦೭.

೧೨. ಅದೇ ಸಂಪಾದಕೀಯ, ಪುಟ–೩, ಮಾರ್ಚ ೨೦೦೭.

೧೩. ಜೈಕಾಡಿ ಜನಾರ್ದನ ಆಚಾರ್: ಸಂಪಾದಕೀಯ ವಿಶ್ವಕರ್ಮಾ, ಪುಟ–೧, ನವೆಂಬರ್ ೧೯೮೧.

೧೪. ವಿಶ್ವಕರ್ಮಾ, ಸಂಪುಟ–೨, ಸಂಚಿಕೆ–೫, ಮಾರ್ಚ್ ೧೯೫೦.

೧೫. ವಿಶ್ವಕರ್ಮಾ, ಪುಟ–೧–೨, ನವೆಂಬರ್ ೧೯೮೨.

೧೬. ವಿಶ್ವಕರ್ಮಾ, ಪುಟ–೧, ಆಗಸ್ಟ್ ೧೯೮೧.

೧೭. ವಿಶ್ವಕರ್ಮಾ, ಸಂಪುಟ–೪, ಸಂಚಿಕೆ–೪, ಪುಟ–೪, ಫೆಬ್ರವರಿ ೧೯೫೨.

೧೮. ವಿಶ್ವಕರ್ಮಾ, ಸಂಪುಟ–೪, ಸಂಚಿಕೆ–೬–೭, ಪುಟ–೨೯, ಏಪ್ರಿಲ್–ಮೇ ೧೯೫೨.

## ಅಧ್ಯಾಯ–ಎಂಟು
## ವಿಶ್ವಕರ್ಮ ಪತ್ರಿಕೆಗಳ ಅನನ್ಯತೆ

ಮಾನವನು ಸಂಘಜೀವಿ ಅವನು ಸಮಾಜವನ್ನು ಬಿಟ್ಟು ಬದುಕಿರಲಾರ ಎಂಬುದನ್ನು ಪ್ರಾಚೀನ ಗ್ರೀಕ್ ತತ್ವಜ್ಞಾನಿ ಅರಿಷ್ಟಾಟಲ್ ಹೇಳಿದುದ್ದನ್ನು ನಾವು ಮರೆಯದಿದ್ದರೂ, ಇಂದು ವ್ಯಕ್ತಿ, ಸಂಘ ಮತ್ತು ಸಮಾಜದೊಳಗಿರುವ ಸಂಬಂಧ ಒಂದು ರೀತಿಯಲ್ಲಿ ಜೀವನವನ್ನು ನಾಟಕೀಕವಾಗಿರಿಸಿದೆ ಎಂದರೂ ತಪ್ಪಲ್ಲ. ಮನುಷ್ಯ ಸಂವಹನಕ್ಕಾಗಿ ಮಾಧ್ಯಮವನ್ನು ಅವಂಬಿಸಿ ಅದರೊಂದಿಗೆ ತನ್ನ ಅನನ್ಯತೆಯನ್ನು ಕಟ್ಟಿಕೊಂಡಿದ್ದಾನೆ. ಸಮಾಜೋದ್ಧಾರಕ ಸಂಘಗಳು ನಮ್ಮ ಕಣ್ಣೆದುರು ಹುಟ್ಟಿಕೊಳ್ಳುತ್ತವೆ. ಅಷ್ಟೇ ವೇಗವಾಗಿ ಕ್ಷೀಣಿಸುತ್ತವೆ. ಮಾಧ್ಯಮವೂ ಕೂಡ ಯಾವುದೋ ಉದ್ದೇಶಗಳನ್ನು ಮುಂದಿಟ್ಟುಕೊಂಡು ಹುಟ್ಟಿರುವ ಪತ್ರಿಕೆಗಳು ಆ ಉದ್ದೇಶಗಳು ಈಡೇರದಿದ್ದಾಗ ಚಡಪಡಿಸುವುದನ್ನು ನಾವು ಕಾಣುತ್ತೇವೆ. ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಶೈಕ್ಷಣಿಕ ಸ್ಥಾನಮಾನಗಳಿಗಾಗಿ ತಾಮುಂದೆ ನಾಮುಂದೆ ಎನ್ನುವ ಜಾಗತೀಕರಣದ ಸ್ಪರ್ದೆಯಲ್ಲಿರುವ ಸಮುದಾಯ ಪತ್ರಿಕೆಗಳು ಮಾನವ ಮತ್ತು ಸಮಾಜದೊಂದಿಗೆ ಅನನ್ಯತೆಯನ್ನು ಬೆಳೆಸಿಕೊಂಡು ಬಂದಿವೆ.

ವಿಶ್ವಕರ್ಮ ಸಮಾಜವನ್ನು ಪ್ರಾದೇಶಿಕ ನೆಲೆಯಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತ ಬಂದಿದ್ದಾರೆ. ದಕ್ಷಿಣ ಕರ್ನಾಟಕದಲ್ಲಿ ವಿಶ್ವಕರ್ಮ ಎಂಬ ಪದ ಹೆಚ್ಚು ಪ್ರಚಲಿತವಾದಂತೆ, ಉತ್ತರ ಕರ್ನಾಟಕದಲ್ಲಿ ಈ ಸಮುದಾಯವನ್ನು 'ಪಾಂಚಾಳರು' ಎಂದು ಕರೆಯುತ್ತಾರೆ.

ಖ್ಯಾತ ವಿದ್ವಾಂಸರಾದ ಡಾ.ವೀರೇಶ ಬಡಿಗೇರ ಅವರು 'ಪಾಂಚಾಳ ಮತ್ತು ವಿಶ್ವಕರ್ಮ ಪದಗಳೊಂದಿಗೆ ಒಂದು ಅನುಸಂಧಾನ' ಎಂಬ ಅಪರೂಪದ ಸಂಶೋಧನಾತ್ಮಕ ಲೇಖನವನ್ನು ಬರೆದಿದ್ದಾರೆ.[1]

ಪಾಂಚಾಳ ಮತ್ತು ವಿಶ್ವಕರ್ಮ ಪದಗಳು ಪ್ರಾದೇಶಿಕವಾಗಿ ಬಳಕೆಯಾಗಿದ್ದರೂ ಅದರಲ್ಲೂ ಶ್ರೇಷ್ಠ–ಕನಿಷ್ಠ ಎಂಬ ಭೇದ ಸಂಸ್ಕೃತಿ ಬೆಳೆದು ಬಂದಿದೆ. ಅದನ್ನು ಹೋಗಲಾಡಿಸಬೇಕೆಂಬ

ಆಶಯ ಪ್ರಸ್ತುತ ಮೇಲಿನ ಲೇಖನದಲ್ಲಿ ಕಾಣುತ್ತದೆ. ವಿಶ್ವಕರ್ಮ ದೇವನ ಮಕ್ಕಳಾದ ಐದು ಜನರನ್ನು ಪಾಂಚಾಳರೆಂದು ಕರೆಯುತ್ತ ಬರಲಾಗಿದೆ. ಮಹಾರಾಷ್ಟ್ರ, ಗುಜರಾತ್, ಆಂಧ್ರ, ಉತ್ತರ ಕರ್ನಾಟಕದ ಭಾಗದಲ್ಲಿ ವಿಶ್ವಕರ್ಮ ಸಮಾಜವನ್ನು ಪಾಂಚಾಳ ಎಂಬ ಜಾತಿಸೂಚಕವಾಗಿಯೇ ಕರೆಯುತ್ತಾರೆ. ಸುಶಿಕ್ಷಿತ ಪ್ರದೇಶ ಕರಾವಳಿಯಲ್ಲಿ ಮಾತ್ರ 'ವಿಶ್ವಕರ್ಮ' 'ವಿಶ್ವಬ್ರಾಹ್ಮಣ' ಎಂದು ಕರೆಯುತ್ತ ಬಂದಿದ್ದಾರೆ. ಡಾ. ವೀರೇಶ ಬಡಿಗೇರ ಅವರು ಪಾಂಚಾಳ ಶಬ್ದದ ನಿಷ್ಪತ್ತಿಯನ್ನು ಪ್ರಾಚೀನ ಸಂಸ್ಕೃತ ಗ್ರಂಥಗಳ ಆಧಾರದಿಂದ ಪರಿಶೀಲಿಸುತ್ತ "ಪಾಂಚಾಳ ಎನ್ನುವ ಜನವರ್ಗ ಆದಿಕಾಲದಿಂದಲೂ ಪಂಚವೃತ್ತಿಗಳಲ್ಲಿ ನಿರತರಾಗಿ ವಿವಿಧ ಜನವರ್ಗಗಳ ಸಂಸರ್ಗದಿಂದ ಚಲನಶೀಲವಾಗುತ್ತಾ ಭೇದಮುಕ್ತ ಸ್ಥಿತಿಯಲ್ಲಿ ಬದುಕುತ್ತಿತ್ತು. ಇಂಥ ಸಮುದಾಯ ಪ್ರಜ್ಞೆಯ ಬದುಕನ್ನು ವೈದಿಕ ಯುಗದಲ್ಲಿ ಶ್ರೇಣೀಕರಣಕ್ಕೊಳಪಡಿಸಲಾಯಿತು. ಆಗ ಪಂಚಾಳ ವೃತ್ತಿ ಮತ್ತು ಸಮುಚ್ಚಯಗಳ ಸಂಸ್ಕೃತೀಕರಣಕ್ಕೊಳಗಾದವು".[೨]

ಹಾಗೆಯೇ ವಿಶ್ವಕರ್ಮ ಎಂಬ ಪದವನ್ನು ಒತ್ತಾಯಪೂರ್ವಕವಾಗಿ ಕುಲಸೂಚಕವಾಗಿ ಬಳಸಲಾಗುತ್ತಿದೆ ಎಂಬ ಅಭಿಪ್ರಾಯ ಅವರದು. ಅಕ್ಷರ ಪ್ರಧಾನವಾದ ಭಾಷೆ ಮತ್ತು ಸಾಹಿತ್ಯ ಸಂಸ್ಕೃತಿಗಳ ಮೂಲಕ ನಾಗರೀಕತೆಯನ್ನು ಪರಿಪೋಷಿಸುವ ಸಂದರ್ಭದಲ್ಲಿ ಅವರ ಚೌಕಟ್ಟಿನೊಳಗೆ ಬಾರದ ಎಲ್ಲವನ್ನು ಅನಾಗರಿಕವೆಂದು ಕರೆದು ನಿರ್ಲಕ್ಷಿಸುತ್ತ ಬಂದರು. ಈ ಕುರಿತು ಡಾ. ವೀರೇಶ ಬಡಿಗೇರ ಅವರು ಪಾಂಚಾಳ ಮತ್ತು ವಿಶ್ವಕರ್ಮ ಪದಗಳ ಪ್ರಾದೇಶಿಕ ವ್ಯತ್ಯಾಸವನ್ನು ಅತ್ಯಂತ ಸರಳವಾಗಿ ವಿಶ್ಲೇಣೆಗೆ ಒಳಪಡಿಸಿದ್ದಾರೆ.

"ಸಂಸ್ಕೃತಿಯ ಬಹುಮುಖಿ ಸಂವೇದನೆಗಳಿಂದ ನಿರೂಪಿತವಾದ ಮಾನವಾನುಭವದ ಒಂದು ವ್ಯಾಪಕ ಮಜಲನ್ನು ಅನಾಗರಿಕವೆಂದು ಹಿಂದೆ ತಳ್ಳಿ, ಅಕ್ಷರ ಪ್ರಧಾನ ಪ್ರತಿಷ್ಠಿತ ಸಂಸ್ಕೃತಿಗಳ ಶುಷ್ಕತೆಯನ್ನು ಒಟ್ಟು ಸಮುದಾಯ ಬದುಕಿನ ಅನುಭವವೆಂದು ಸ್ಥಿರೀಕರಿಸುವ ಹುನಾರುಗಳು ವೇದಕಾಲದಿಂದಲೂ ವ್ಯವಸ್ಥಿತವಾಗಿ ನಡೆದು ಬಂದಿವೆ. 'ಪಾಂಚಾಳ' ಅಥವಾ 'ವಿಶ್ವಕರ್ಮ' ಎನ್ನುವ ಕುಲವಾಚಿ ಪದಸಮುಚ್ಚಯಗಳನ್ನು ಕೇವಲ ವೇದಾಗಮ ಪುರಾಣಗಳ ಒಡಲಿನಿಂದ ನಿರ್ವಚಿಸಿಕೊಳ್ಳದೇ ಸಮುದಾಯದ ಸೃಜನಶೀಲ ನೆಲೆಗಳಿಂದ ನಿರ್ವಚಿಸಿಕೊಳ್ಳುವ ಅಗತ್ಯವಿದೆ. ಪಾಂಚಾಳ ಪದ ವೃತ್ತಿಮೂಲವಾದ ಸಹಜ ಬದುಕಿನ ಅನನ್ಯತೆಯನ್ನು ಸೂಚಿಸಿದರೆ, 'ವಿಶ್ವಕರ್ಮ' ಪದವು ಸಂಸ್ಕೃತೀಕರಣ ಪ್ರಧಾನವಾದ ಏಕಘಾನಾಕೃತಿಯೊಂದನ್ನು ಕಟ್ಟಿಕೊಡುತ್ತದೆ. ಪಾಂಚಾಳ ಪದದಲ್ಲಿರುವ ವೃತ್ತಿಮೂಲ ವೈವಿಧ್ಯತೆ ಮತ್ತು ಕ್ರಿಯಾಶೀಲತೆ ಸಶಕ್ತಯುತವಾದದ್ದು. ಬೇರು ಮರೆತು ಮರ ಎಂದೂ ಚಿಗುರದು. ಹೀಗಾಗಿ ವಿಶ್ವಕರ್ಮ ಎನ್ನುವ ಪದದ ಬಳಕೆಗಿಂತ ಪಾಂಚಾಳ ಎನ್ನುವ ಪದ ಸೂಕ್ತವಾದುದು. ಜಾಗತೀಕರಣದ ಈ ಹೊತ್ತಿನಲ್ಲಿ ಪ್ರತಿಯೊಂದು ಸಮುದಾಯವು ತನ್ನ ವಿಸ್ಮೃತಿಯನ್ನು ಜಾಡಿಸಿ ತನ್ನ ಅಸ್ತಿತ್ವಕ್ಕಾಗಿ ಹಂಬಲಿಸುವ ಸಂದರ್ಭದಲ್ಲಿ ಈ ಜನಾಂಗವೂ ತನ್ನ ಐದು ವೃತ್ತಿಗಳ ಅನನ್ಯತೆಒಂದಿಗೆ ತನ್ನ ಅಸ್ತಿತ್ವವನ್ನು ಸ್ಥಾಪಿಸಬೇಕಿದೆ.

ಇದಕ್ಕಾಗಿ ಸಂಸ್ಕೃತೀಕರಣಕ್ಕೊಳಗಾದ ಪರಿಸರಗಳಿಂದ ಅನ್ಯಮೂಲಗಳ ಸಹಾಯದಿಂದ ತನ್ನ ಇರುವಿಕೆಯನ್ನು ತಾಕತ್ತನ್ನು ಪ್ರಕಟಿಸದೇ ತನ್ನ ವೃತ್ತಿಸಹಜ ಬದುಕಿನೊಳಗಡೆಯಿಂದಲೇ ಒಡಮುರಿದೇಳಬೇಕಾಗಿದೆ. ವೇದಾಗಮಗಳಲ್ಲಿ ದೊರೆಯುವ ಅಮೂರ್ತ ನಿದರ್ಶನಗಳಿಗಿಂತ ತನ್ನ ಕಣ್ಣೆದುರೇ ಇರುವ ವಾಸ್ತವ ಬದುಕು ಪಾಂಚಾಳ ಕುಲದ ವಿವೇಚನೆಗೆ ದಾರಿಯಾಗಬೇಕಜಾಗಿದೆ. ಸಂಸ್ಕೃತ ಸಂಸ್ಕೃತಿ ಪ್ರಧಾನವಾದ ಸ್ಥಿರ ಸಮಾಜದ ಮಾದರಿಗಳಿಗಿಂತ ತನ್ನ ವೃತ್ತಿಮೂಲ ಕುಲನೆಲೆಯ ಕ್ರಿಯಾಶೀಲ ಸಂವೇದನೆಗಳು ಮುಖ್ಯವಾಗಬೇಕಾಗಿದೆ. ಕಾರಣ ಪಾಂಚಾಳ ಸಮುದಾಯ ಅದೊಂದು ಪ್ರಯೋಗಶೀಲ ಸಮುದಾಯ ಎಂಬುದು ಬಹುಮುಖ್ಯ ವಿಚಾರ".[೩]

ಡಾ. ವೀರೇಶ ಬಡಿಗೇರ ಅವರ ಅಭಿಪ್ರಾಯದಂತೆ ವಿಶ್ವಕರ್ಮ ಪದಕ್ಕಿಂತಲೂ ಪಾಂಚಾಳ ಪದ ನೆಲಮೂಲ ಸಂಸ್ಕೃತಿಯಿಂದ ಬಂದುದು, ಅದು ದೇಶಿಯತೆಯಿಂದ ಕೂಡಿದ ಪದವಾಗಿರುವುದರಿಂದ ಹೆಚ್ಚು ಆಪ್ತವಾಗುತ್ತದೆ.

ವಿಶ್ವಕರ್ಮ ಪತ್ರಿಕೆಗಳು ಪ್ರಾದೇಶಿಕವಾಗಿ ಎಲ್ಲ ಭಾಗದಿಂದಲೂ ಪ್ರಕಟವಾಗುತ್ತ ಬಂದಿವೆ. ವಿಶೇಷವಾಗಿ ಕಲಬುರ್ಗಿ ಪ್ರದೇಶವೊಂದನ್ನು ಹೊರತುಪಡಿಸಿ ಬೆಂಗಳೂರು, ಮೈಸೂರು, ಬೆಳಗಾವಿ, ಚಿತ್ರದುರ್ಗ, ಮಂಗಳೂರು ಹೀಗೆ ಎಲ್ಲ ಭಾಗದಿಂದಲೂ ಪತ್ರಿಕೆಗಳು ಪ್ರಕಟವಾಗುತ್ತಿವೆ. ಆಯಾ ಪ್ರದೇಶಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟರೂ ಎಲ್ಲರ ಉದ್ದೇಶ ಒಟ್ಟು ಕರ್ನಾಟಕದಲ್ಲಿ ವಿಶ್ವಕರ್ಮ ಸಮಾಜವನ್ನು ಒಂದುಗೂಡಿಸುವುದೇ ಆಗಿದೆ. ಈ ಪ್ರಾದೇಶಿಕ ಅನನ್ಯತೆಯನ್ನು ಕಾಯ್ದುಕೊಳ್ಳುವ ಸಲುವಾಗಿ ಜಿಲ್ಲಾ ವಿಶ್ವಕರ್ಮ ಸಮಾಜಗಳು ಅಸ್ತಿತ್ವಕ್ಕೆ ಬಂದಿವೆ. ಈ ಎಲ್ಲ ಜಿಲ್ಲಾ ಘಟಕಗಳ ಕಾರ್ಯಕ್ರಮಗಳ ವರದಿಯನ್ನು ವಿಶ್ವಕರ್ಮ ಪತ್ರಿಕೆಗಳು ಪ್ರಕಟಿಸುತ್ತ ಬಂದಿವೆ. ೨೦೦೪ರಲ್ಲಿ ಅಖಿಲ ಕರ್ನಾಟಕ ವಿಶ್ವಕರ್ಮ ಮಹಾಸಮ್ಮೇಳನ ಸಮಿತಿಯು ಪ್ರಾದೇಶಿಕ ಹಿನ್ನೆಲೆಯಲ್ಲಿ ಸಮಾವೇಶಗಳನ್ನು ಏರ್ಪಡಿಸಲು ಆಯೋಜಿಸಿದ ಒಂದು ಪ್ರಕಟಣೆ ವಿಶ್ವಕರ್ಮೋದಯ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅಲ್ಲಿ ಪ್ರಾದೇಶಿಕವಾಗಿ ಸಮಾವೇಶಗಳನ್ನು ವಿಭಾಗಿಸಿದ್ದು ಹೀಗೆ–

| | |
|---|---|
| ಚಿತ್ರದುರ್ಗ | ದಿನಾಂಕ: ೧೨-೨-೨೦೦೪ |
| ದಾವಣಗೆರೆ | ದಿನಾಂಕ: ೧೪-೨-೨೦೦೪ |
| ಬೆಳಗಾವಿ | ದಿನಾಂಕ: ೧೬-೨-೨೦೦೪ |
| ಮಂಡ್ಯ | ದಿನಾಂಕ: ೨೦-೨-೨೦೦೪ |

ಹೀಗೆ ಆಯಾ ಪ್ರದೇಶಗಳಲ್ಲಿ ಸಮಾವೇಶಗಳನ್ನು ಜರುಗಿಸುವ ಪ್ರಕಟಣೆ ಹೊರಡಿಸಿದ್ದಾರೆ.

ವಿಶ್ವಕರ್ಮ ಸಮಾಜವು ಸಾಮುದಾಯಿಕವಾಗಿ ಅಭಿವೃದ್ಧಿ ಹೊಂದಬೇಕೆಂಬ ಹಂಬಲದಿಂದ ಏನೆಲ್ಲ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಸಾಧ್ಯವಿದೆ ಎಂಬುದನ್ನು ಈ ವಿಶ್ವಕರ್ಮ ಪತ್ರಿಕೆಗಳು ತೋರಿಸಿಕೊಟ್ಟಿವೆ. ಎಲ್ಲ ಒಳಪಂಗಡಗಳು ತಮ್ಮ ಭೇದಭಾವ ಮರೆತು ಒಗ್ಗಟ್ಟಾಗಿ

ಮುನ್ನಡೆಯಬೇಕೆಂಬ ಕಳಕಳಿಯ ಅನೇಕ ಬರಹಗಳು ಆಯಾ ಪತ್ರಿಕೆಗಳ ಸಂಚಿಕೆಗಳಲ್ಲಿ ಕಾಣುತ್ತೇವೆ.

ಕರ್ನಾಟಕ ಸರಕಾರವು ದಿನಾಂಕ ೩೦-೩-೨೦೦೨ರಂದು ಒಂದು ಆದೇಶವನ್ನು ಹೊರಡಿಸಿತು. ಅದರಲ್ಲಿ ವಿಶ್ವಕರ್ಮ ಸಮಾಜದ ಒಳಪಂಗಡಗಳನ್ನು ೨-ಎ ವರ್ಗದಲ್ಲಿ ಸೇರಿಸಿದ ಮಾಹಿತಿಯನ್ನು ವಿಶ್ವಕರ್ಮೋದಯ ಪತ್ರಿಕೆಯ ಸಂಪಾದಕರು ಜುಲೈ ೨೦೦೪ರ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ.

೨-ಎ ವರ್ಗದಲ್ಲಿ ವಿಶ್ವಕರ್ಮ ಜನಾಂಗವನ್ನು ಸೇರಿಸಲಾಗಿದ್ದು ಈ ಕೆಳಕಂಡ ವಿವಿಧ ವಿಶ್ವಕರ್ಮ ಜನಾಂಗದ ಒಳಪಂಗಡಗಳನ್ನು ನಮೂದಿಸಲಾಗಿದೆ.

| | | |
|---|---|---|
| ವಿಶ್ವಕರ್ಮ | ಗಜ್ಜೆಗಾರ | ಪಂಚಾಲ್ |
| ಆಚಾರಿ | ಕಂಬಾರ | ಪತ್ತಾರ್ |
| ಅಕ್ಕಸಾಲಿ | ಕಮ್ಮಾಲನ್ | ಶಿಲ್ಪಿ |
| ಆಸುಲ | ಕಂಸಾರ | ಸೋಹಗಾರಂ |
| ಬಡಿಗಾರ | ಕಂಸನ್ | ಸೋನಾರ್ |
| ಬಡಿವಾಡ್ಲ | ಕಂಚಗಾರ | ಸೋನಿ |
| ಬೈಲಪತ್ತಾರ | ಕಂಚೋರ | ಸುತಾರ್ |
| ಬೈಲು ಅಕ್ಕಸಾಲಿ | ಕಂಚೋರಿ | ವಿಶ್ವಬ್ರಾಹ್ಮಣ |
| ಬೈಲಕಮ್ಮಾರ | ಕಂಚುಗಾರ | ತಾಸೆಹಾನಂ |
| ಬೋಗಾರ | ಕನ್ಸಾರ್ | ತಾಟ್ಟನ್ |
| ಜಪ್ಪೇಗಾರ | ಕಸಾರ್ | ಅಕಸಾಲಿ |
| ಜಾರೋಡಿ | ಲುಹಾರ್ | ಬಡಗಿ |
| ದೈವಜ್ಞ | ಬ್ರಾಹ್ಮಣ | ಮೆಸ್ತ |

೨-ಎ ವರ್ಗದಲ್ಲಿ ವಿಶ್ವಕರ್ಮ ಜನಾಂಗ ಅಲ್ಲದೆ ಈ ಕೆಳಕಂಡ ಜಾತಿಗಳನ್ನು ಸೇರಿಸಲಾಗಿದೆ.

| | | | | |
|---|---|---|---|---|
| ಅಗಸ | ಈಡಿಗ | ಕುರುಬ | ಬನ್ನಾ | ತಿಗಳ |
| ಉಸ್ತುಮ | ಅಘೋರಿ | ಅಗ್ನಾನಿ | ಅಂಬಲವಾಸು | ಅಂದುರಾನ್ |
| ಅತರಿ | ಬಹುರೂಪಿ | ಬಕದರ | ಬತಾಲ | ಬಾವತಾರ್ |
| ಭಾಟ್ | ಬಿನಾಪ್ಪ | ಬಿಂಗಿ | ಬಗಡಿ | ಚಾಲಿಯಾನ್ |
| ಚಂಬೋಟಿ | ಚಂಬುಕುಟ್ಟಿ | ಮೆಸ್ತ | ಜಿಂಗಾರ್ | ವಾಡಿ |

| | | | | |
|---|---|---|---|---|
| ವಾಡಿಸಿ | ಪಿಂಗ್ಲೆ | ಗೋಸಾವಿ | ಗುಜ್ಜಾರ | ಗುರುವ |
| ಗಬ್ಬಿಟ್ | ಹಂಡೆವಜೀರ್ | ಹಂಡೆರುತ್ | ಹೊನ್ನಿಯಾರ್ | ಹೂವಾಡಿಗ |
| ಕಾಡುಕೊಂಕಣಿ | ಕರಿಕುಡುಂಬಿ | ಕುರುವ | ಖಾತಿಕ್ | ಬೋಗಾರ್ |
| ಕಾಸ್ಪಿನ್ | ಕೊಲಾಯಿತಿ | ಕಾನಿಸಾನ್ | ಕುಟುಮ ಮಾರ್ತ | |
| ಮಾರಾಯನ್ | ಮರ್ರಾರಿ | ನಾಡೊರ | ನಾಲ್ಕಿ | ಓಸ್ತಾನ್ |
| ಪಂಡೋರಾಮ್ | ಪನಾಬ | ಪತ್ರ | ಪಿಚಾಟಿ | ಪುಲ್ಲವನ್ |
| ಪನ್ನೆಕಾರಕೊಂಕಣಿ | ರಾಜಾಪುರಿ | ಸನಿಯಾರ್ | ಶಾನನ್ | ಸುಧಿರ್ |
| ಸುಟ್‌ಸಾಲಿ | ತಾಜಾಯಿರಿ | ತಿಲ್ವಿ | ಗಾವಂಡಿ | ವೆಟ್ಟುವನ್ |
| ಎಕಲರ್ | ಗಟ್ಟಿ | ಗುಡಿಗಾರ | ದರ್ಜಿ | ದೇವಾಂಗ |
| ನೇಯ್ಗಿ | ಪಟ್ವೇಗಾರ | ಗಾಣಿಗ | ಅಮ್ಮಕೊಡವ | ಅನಾಪ್ಪನ್ |
| ರಜೂತ್ | ಅಂಡಿ | ಬಾಂದಿ | ಬೊಲಹಲ್ಲ | ಬಾಟಿಹಲ್ಲ |
| ಚಕ್ಕನ್ | ದೋಗ್ರ | ಹಿಂದುನಾದರು | ಜಟ್ಟಿ | ಕಲಾವಂತಿ |
| ಸೋಮವಂಶಕ್ಷತ್ರಿಯ | ಕೋಟೆಗಾರ | ಕ್ಷತ್ರಿಯ | ಮಲವ | ಮಲೆಯ |
| ಆರ್ಯನ್ | ರಾಜುಕ್ಷತ್ರಿಯ | ಕನಕನ್ | ಸ್ಥಾನಿಕ | ತುಳ |

ಎಷ್ಟೋ ವೇಳೆ ನಮ್ಮ ಜಾತಿ ಯಾವುದು ಎಂಬುದು ಗೊತ್ತಾಗುವುದೇ ಇಲ್ಲ. ಅಷ್ಟೊಂದು ಜಾತಿಗಳು ನಮ್ಮಲ್ಲಿ ಹುಟ್ಟಿಕೊಂಡಿವೆ. ವಿಶ್ವಕರ್ಮ ಜನಾಂಗದಲ್ಲಿ ನೂರಕ್ಕೂ ಹೆಚ್ಚು ಒಳಪಂಗಡಗಳಿರುವುದು ಈ ಪಟ್ಟಿಯನ್ನು ನೋಡಿದಾಗ ತಿಳಿಯುತ್ತದೆ. ಲಿಂಗಾಯತ ಸಮುದಾಯದಲ್ಲಿ ನೂರಕ್ಕೂ ಹೆಚ್ಚು ಒಳಪಂಗಡಗಳಿವೆ. ಒಳಜಾತಿಗಳು ಒಮ್ಮೊಮ್ಮೆ ಲೆಕ್ಕಕ್ಕೆ ಬರುವುದಿಲ್ಲ. ಆದರೂ ಜಾತಿವ್ಯವಸ್ಥೆಯ ಅಡಿಯಲ್ಲಿ ಇಂದು ಬದುಕುತ್ತಿರುವ ನಾವು ಇಷ್ಟೆಲ್ಲ ಜಾತಿಭೇದಗಳು ಇರುವುದನ್ನು ನೋಡಲೇಬೇಕಾಗುತ್ತದೆ.

ಒಂದು ಸಮುದಾಯವೆಂದಾಗ ಇದೆಲ್ಲ ಅವಶ್ಯಕವೆನಿಸುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ಹಳ್ಳಿಗಳೆಲ್ಲ ಸ್ವತಂತ್ರವಾಗಿದ್ದವು. ಅಲ್ಲಿಯ ಜನರು ಆಯಾ ವೃತ್ತಿಗಳನ್ನು ಮಾಡುತ್ತ ಪರಸ್ಪರ ಅವಲಂಬಿತರಾಗಿದ್ದರು. ವಿಶ್ವಕರ್ಮರು ದೇವಸ್ಥಾನ, ಶಿಲ್ಪಕಲೆ, ಚಿತ್ರಕಲೆ, ಆಭರಣ ತಯಾರಿಕೆ ಮೊದಲಾದ ಕಾರ್ಯಗಳನ್ನು ಮಾಡುತ್ತಿದ್ದರು. ಕಂಬಾರರು ರೈತರಿಗೆ ಬೇಕಾದ ಸಾಮಾನುಗಳನ್ನು ತಯಾರಿಸಿ ಕೊಡುತ್ತಿದ್ದರು. ಕುಂಬಾರರು ಗಡಿಗೆ ಮಡಿಕೆಗಳನ್ನು ಮಾಡಿಕೊಡುತ್ತಿದ್ದರು. ಡೋಹರ ಜನಾಂಗದವರು ಚರ್ಮವನ್ನು ಹದ ಮಾಡಿ ಪಾದರಕ್ಷೆ, ಬಾರುಕೋಲು, ಮಟ್ಟಿ ಮಿಣಿ ಮೊದಲಾದ ಸಾಧನಗಳನ್ನು ಮಾಡುತ್ತಿದ್ದರು. ಹೀಗೆ ಒಂದು ಸಮುದಾಯವೆಂದರೆ, ಅದು

ಪರಸ್ಪರ ಅವಲಂಬಿತ ಸಮಾಜವಾಗಿತ್ತು. ಯಾವಾಗ ಸ್ವಾತಂತ್ರ್ಯ ಬಂತೋ ನಮ್ಮ ಹಳ್ಳಿಗಳು ಪರಾಧೀನವಾದವು. ಸ್ವಾತಂತ್ರ್ಯವನ್ನು ಕಳೆದುಕೊಂಡವು. ಆಯಾ ವೃತ್ತಿಗಾರರು ತಮ್ಮ ವೃತ್ತಿಗಳನ್ನು ಬಿಟ್ಟು ನಗರ ಪ್ರದೇಶಕ್ಕೆ ವಲಸೆ ಬರತೊಡಗಿದರು. ಹೀಗಾಗಿ ಸಾಮುದಾಯಿಕ ಬದಲಾವಣೆಗಳು ನಡೆದು ಹೋದವು.

ಸಮುದಾಯದಲ್ಲಿ ಒಡಕನ್ನುಂಟು ಮಾಡದೆ, ಏಕತೆಯನ್ನು ಸಾಧಿಸುವುದು ವಿಶ್ವಕರ್ಮ ಪತ್ರಿಕೆಗಳ ಪರಮ ಗುರಿಯಾಗಿದೆ. ಅದಕ್ಕಾಗಿ ಇತ್ತೀಚೆಗೆ ವಿಶ್ವಬ್ರಾಹ್ಮಣ ಮತ್ತು ದೈವಜ್ಞ ಬ್ರಾಹ್ಮಣರ ಮಧ್ಯೆ ಭಿನ್ನಾಭಿಪ್ರಾಯಗಳು ಮೂಡಿದಾಗ, ಈ ಭಿನ್ನಾಭಿಪ್ರಾಯಗಳಿಗೆ ಕೈಗನ್ನಡಿ ಹಿಡಿಯುವಂತೆ ವಿಶ್ವಕರ್ಮೋದಯ ಪತ್ರಿಕೆಯ ಸಂಪಾದಕರು ಪ್ರೊ. ಎಸ್.ಯು. ಪೋತದಾರ ಅವರಿಂದ 'ವಿಶ್ವಕರ್ಮ ಬ್ರಾಹ್ಮಣ ಮತ್ತು ದೈವಜ್ಞ ಬ್ರಾಹ್ಮಣರ ಪರಂಪರೆ' ಎಂಬ ಸಂಶೋಧನಾತ್ಮಕ ಲೇಖನವನ್ನು ಅಕ್ಟೋಬರ್ ೨೦೦೪ರ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ.

"ದೈವಜ್ಞ ಬ್ರಾಹ್ಮಣರು ಬಹುಪ್ರಾಚೀನ ಕಾಲದಿಂದಲೂ ಸಂಸ್ಕೃತದಿಂದ ವಿಕಾಸಗೊಂಡ ಪ್ರಾಕೃತಜನ್ಯ ಭಾಷೆಯಾದ 'ಕೊಂಕಣಿ'ಯನ್ನು ತಮ್ಮ ಮಾತೃಭಾಷೆಯಾಗಿ ಉಳ್ಳವರಾಗಿದ್ದಾರೆ. ಆದರೆ ವಿಶ್ವಕರ್ಮ ಬ್ರಾಹ್ಮಣರಾರೂ ಕೊಂಕಣಿ ಮಾತೃಭಾಷೆಯನ್ನಾಗಿ ಉಳ್ಳವರಾಗಿಲ್ಲ. ಅವರು ತಾವು ನೆಲೆನಿಂತ ಸ್ಥಳೀಯ **ಪ್ರಾದೇಶಿಕ** ಭಾಷೆಯನ್ನೇ ತಮ್ಮ ಮಾತೃಭಾಷೆಯನ್ನಾಗಿ ಉಳ್ಳವರಾಗಿದ್ದಾರೆ. ಉದಾ: ಕರ್ನಾಟಕದಲ್ಲಿ ನೆಲೆಸಿದ್ದವರು ಕನ್ನಡ ತಮಿಳುನಾಡಿನಲ್ಲಿ ನೆಲೆಸಿದ್ದವರು ತಮಿಳು, ಆಂಧ್ರದಲ್ಲಿ ನೆಲೆಸಿದ್ದವರು ತೆಲುಗು, ಮಹಾರಾಷ್ಟ್ರದಲ್ಲಿ ನೆಲೆಸಿದ್ದವರು ಮರಾಠಿ ಹಾಗೂ ಹಿಂದಿ ಭಾಷೆ ಹೀಗೆ ಪ್ರಾದೇಶಿಕ ಭಾಷೆಗಳನ್ನಾಡುತ್ತಾರೆ. ಆದರೆ ದೈವಜ್ಞ ಬ್ರಾಹ್ಮಣರು ಯಾವ ಪ್ರದೇಶದಲ್ಲಿ ನೆಲೆಸಿದ್ದರೂ ತಮ್ಮ ಕೊಂಕಣಿ ಭಾಷೆಯನ್ನೇ ಮಾತೃಭಾಷೆಯನ್ನಾಗಿ ಉಳ್ಳವರಾಗಿದ್ದಾರೆ. ದೈವಜ್ಞ ಬ್ರಾಹ್ಮಣರು ಸೌರಾಷ್ಟ್ರದಿಂದ ದಕ್ಷಿಣಕ್ಕೆ ವಲಸೆ ಹೊರಟು ಗೋವಾ ಪ್ರಾಂತ್ಯದಲ್ಲಿ ಸ್ಥಿರವಾಗಿ ನೆಲೆಸಿ ತಮ್ಮ ಉದರ ನಿರ್ವಹಣೆಗಾಗಿ ಪರಂಪರಾಗತವಾಗಿ ಒಲಿದ ಸುವರ್ಣ ಕಲಾಗಾರಿಕೆಯನ್ನೇ ವೃತ್ತಿಯನ್ನಾಗಿ ಅನುಸರಿಸಿದ್ದರೂ ತಮ್ಮ ವೈದಿಕ ಪರಂಪರಾಗತ ಸನಾತನ ಸಂಸ್ಕೃತಿಯಲ್ಲೇ ಮುಂದುವರಿದು ಶಿವ-ವಿಷ್ಣು-ಶಕ್ತಿ ದೇವತೆ ನಾಗದೇವತೆಗಳ ಆರಾಧಕರಾಗಿ ಗೋವೆಯ ನೆಲದಲ್ಲಿ ಈ ಎಲ್ಲ ದೇವತೆಗಳ ದೇವಾಲಯಗಳನ್ನು ಸ್ಥಾಪಿಸಿ ಆ ದೇವತೆಗಳನ್ನೇ ವಿಭಿನ್ನ ಗೋತ್ರದವರು ತಮ್ಮ ಕುಲದೇವತೆಗಳನ್ನಾಗಿ ಬಹುಕಾಲದಿಂದ ಇಂದಿನವರೆಗೂ ಪೂಜಿಸುತ್ತಿದ್ದಾರೆ".[೪]

ಪ್ರಾದೇಶೀಕವಾಗಿ ವಿಶ್ವಕರ್ಮರು ಸ್ಥಳೀಯವಾಗಿರುವ ದೈವತೆಗಳ ಬಗ್ಗೆ ಭಕ್ತಿ ಗೌರವ ಇಟ್ಟುಕೊಂಡು ಮುನ್ನಡೆದಿದ್ದಾರೆ. ಬೆಳಗಾವಿ ಭಾಗದ ವಿಶ್ವಕರ್ಮರು ಶಿರಸಂಗಿ ಕಾಳಿಕಾದೇವಿಗೆ ನಡೆದುಕೊಳ್ಳುವಂತೆ, ಉತ್ತರ ಕರ್ನಾಟಕದ ಬಹುತೇಕ ವಿಶ್ವಕರ್ಮರು ವರವಿ ಕ್ಷೇತ್ರದ ಮೌನೇಶ್ವರರಿಗೂ ನಡೆದುಕೊಳ್ಳುತ್ತಾರೆ. ಹಾಗೆಯೇ ನಾಗಲಿಂಗ ಸ್ವಾಮಿಗಳಿಗೂ ಭಕ್ತಿ ಸಲ್ಲಿಸುತ್ತಾರೆ. ಆನೆಗೊಂದಿ ಪೀಠ ವಿಶ್ವಕರ್ಮರ ಆಶ್ರಿತೆಯ ಪೀಠವಾಗಿದೆ. ಹಾಗೆಯೇ ದಕ್ಷಿಣ ಕನ್ನಡದಲ್ಲಿ ಬರುವ ಸಿದ್ಧಪ್ಪಾಜಿ.

ವೀರಬ್ರಹ್ಮೇಂದ್ರ ಸ್ವಾಮೀಜಿ ಹೀಗೆ ತಮ್ಮ ಪ್ರದೇಶಕ್ಕೆ ಸಮೀಪವಿರುವ ದೇವತೆಗಳ, ಮಹಾಪುರುಷರಲ್ಲಿ ಭಕ್ತಿ ತೋರಿಸುತ್ತಾರೆ. ಪ್ರಾದೇಶಿಕವಾಗಿ ಭಿನ್ನವಾಗಿದ್ದರೂ ವಿಶ್ವಕರ್ಮ ಸಮಾಜದ ಒಗ್ಗಟ್ಟಿನ ಸಂದರ್ಭದಲ್ಲಿ ನಾವೆಲ್ಲ ಒಂದೇ ಎಂಬ ಭಾವ ಮೂಡಬೇಕೆಂದು ವಿಶ್ವಕರ್ಮ ಪತ್ರಿಕೆಗಳು ಸಾರುತ್ತವೆ.

ಹೀಗಿದ್ದೂ ಕೆಲವು ಪತ್ರಿಕೆಗಳು ಆಯಾ ಪ್ರದೇಶದಲ್ಲಿ ಪ್ರಕಟವಾಗುತ್ತಿರುವ ಕಾರಣಕ್ಕಾಗಿ ಅಲ್ಲಿಯ ಪ್ರಾದೇಶಿಕ ಸಮಸ್ಯೆಗಳ ಬಗ್ಗೆಯೂ ಧ್ವನಿ ಎತ್ತಿ, ವಿಶ್ವಕರ್ಮ ಸಮಾಜದಲ್ಲಿ ಜಾಗೃತಿಯನ್ನುಂಟು ಮಾಡುತ್ತಿದ್ದಾರೆ. ಪ್ರಬೋಧಕ ಪತ್ರಿಕೆ ಸಂಪಾದಕರಾದ ಮಂಜುನಾಥ ಆಚಾರ್ಯ ಅವರು ಏಪ್ರಿಲ್ ೨೦೧೦ರ ಸಂಚಿಕೆಯಲ್ಲಿ 'ಸಂಸ್ಕೃತಾನುಕರಣಕ್ಕಿಂತಲೂ ಇದು ಬಲು ಕೆಡುಕು' ಎಂಬ ಹೆಸರಿನಲ್ಲಿ ಸಂಪಾದಕೀಯ ಬರೆದು, ಕರಾವಳಿ ಪ್ರದೇಶದಲ್ಲಿ ವಿಶ್ವಕರ್ಮರನ್ನು ಶೂದ್ರರಂತೆ ಕಾಣುವ ಸಂಗತಿಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಕರಾವಳಿ ಪ್ರದೇಶದ ವಿಶ್ವಬ್ರಾಹ್ಮಣರು ಪರಶುರಾಮನ ಸೃಷ್ಟಿಯೆಂದು ನಂಬಿದ್ದಾರೆ. ಸರಕಾರಿ ಉದ್ಯೋಗಿಗಳನ್ನು ಬಿಟ್ಟರೆ, ಗ್ರಾಮೀಣ ಭಾಗದ ವಿಶ್ವಕರ್ಮರು ಇತರ ಮೇಲ್ವರ್ಗದ ಜನರ ದೃಷ್ಟಿಯಲ್ಲಿ ನಿಕೃಷ್ಟರಾಗಿ ಬದುಕುತ್ತಿದ್ದಾರೆ. ಅಂಥ ಸಮುದಾಯಕ್ಕೆ ಸ್ವಾಭಿಮಾನ ಮೂಡಿಸಿ, ಪ್ರಾದೇಶಿಕ ವೈರುಧ್ಯಗಳನ್ನು ಹೋಗಲಾಡಿಸಿ ನಾವೆಲ್ಲ ಒಂದು ಎಂಬ ಸಂದೇಶ ಸಾರಬೇಕೆಂದು ಸಂಪಾದಕರು ಕರೆ ನೀಡಿದ್ದಾರೆ.

ಕರ್ನಾಟಕದಲ್ಲಿರುವ ವಿಶ್ವಕರ್ಮ ಸಮುದಾಯವು ಕನ್ನಡ ಭಾಷೆಯನ್ನೇ ತಮ್ಮ ಮಾತೃಭಾಷೆಯನ್ನಾಗಿ ಮಾಡಿಕೊಂಡಿದೆ. ವಿಶ್ವಕರ್ಮ ಧರ್ಮದ ಪ್ರಾಚೀನ ಗ್ರಂಥಗಳು ಸಂಸ್ಕೃತದಲ್ಲಿವೆ. ಆದರೂ ಕರ್ನಾಟಕದ ಈ ಸಮುದಾಯ ಕನ್ನಡವನ್ನೇ ತಮ್ಮ ಮಾತೃಭಾಷೆಯನ್ನಾಗಿ ಬಳಸುತ್ತ ಬಂದಿದೆ. ಆದರೆ ಕರಾವಳಿ ಕರ್ನಾಟಕದಲ್ಲಿ ವಾಸಿಸುವ ದೈವಜ್ಞ ಬ್ರಾಹ್ಮಣರು ಮಾತ್ರ ಕೊಂಕಣಿ ಭಾಷೆಯನ್ನು ಬಳಸುತ್ತಾರೆ.

ಹೀಗಿದ್ದೂ ಸಮಾಜದ ಸಂಘಟನೆಗಾಗಿ ವಿಶ್ವಕರ್ಮರು ಸಂಸ್ಕೃತ ಭಾಷೆಯನ್ನು ಕಲಿಯಬೇಕೆಂಬ ಕಳಕಳಿ ಕನ್ನಡ ವಿಶ್ವಕರ್ಮ ಪತ್ರಿಕೆಗಳದಾಗಿದೆ. ಸಂಸ್ಕೃತ, ವೇದ, ಆಯುರ್ವೇದ, ವೇದಾಂತ, ದರ್ಶನ, ಸೂತ್ರ, ಪ್ರಸ್ಥಾನತ್ರಯ, ಆಗಮ, ಪೌರೋಹಿತ್ಯ, ಆಚಾರ್ಯತ್ವ, ಶಿಲ್ಪ, ವಾಸ್ತು, ಜ್ಯೋತಿಷ್ಯ, ಸ್ಥಾಪತ್ಯ, ಸಂಗೀತ, ವಾದ್ಯ, ಭರತನಾಟ್ಯ, ಚಿತ್ರಕಲಾ, ಕಾವ್ಯ, ಸಾಹಿತ್ಯ, ಇತಿಹಾಸ, ಶಾಸನ, ವಿಜ್ಞಾನ, ಗಣಿತ ವಿವಿಧ ಶಾಸ್ತ್ರಗಳು ಮುಂತಾದ ಅನೇಕ ಸಂಸ್ಕೃತಾಧಾರಿತ ಶಾಸ್ತ್ರ ವಿಷಯಗಳ ತಜ್ಞರು ಪಂಡಿತರು, ವಿದ್ವಾಂಸರು, ಗುರುಗಳು, ಪ್ರಾಧ್ಯಾಪಕರು, ಉಪನ್ಯಾಸಕರು, ವಿದ್ಯಾರ್ಥಿಗಳು, ಚಿಂತಕರು, ಸಾಹಿತಿಗಳು, ಸಂಶೋಧಕರು, ಪ್ರಕಾಶಕರು, ಪ್ರಚಾರಕರು ಕೂಡಿ ಸಂಸ್ಕೃತ ಭಾಷೆಯಲ್ಲಿ ಪ್ರಾವೀಣ್ಯತೆ ಪಡೆದು ವಿಶ್ವಕರ್ಮ ಸಂಸ್ಕೃತಿಯ ನಿಜವಾದ ಜ್ಞಾನವನ್ನು ಪಡೆದುಕೊಳ್ಳಬೇಕೆಂಬ ಅಪೇಕ್ಷೆ ಪತ್ರಿಕೆಗಳ ಸಂಪಾದಕರದ್ದು.

ವೇಲಾಚಾರಿ ವಿಶ್ವನಾಥ ಶರ್ಮಾ ಎಂಬುವರು 'ಸಂಸ್ಕೃತ ಸಮಾಜ ಸಂಘಟನೆಗಾಗಿ' ಎಂಬ ಚಿಕ್ಕ ಲೇಖನವನ್ನು ಬರೆದಿದ್ದಾರೆ. ಸಂಸ್ಕೃತ ಸಮಾಜ ಸಮ್ಮಿಲನದ ಉದ್ದೇಶವನ್ನು ಕುರಿತು ಅವರು ಹೀಗೆ ವಿವರಿಸುತ್ತಾರೆ–

೧. ಸಂಸ್ಕೃತವನ್ನಾಧರಿಸಿ ಮತ್ತು ಸಂಸ್ಕೃತದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಮಾಜದವರನ್ನು ಒಂದೆಡೆ ಸೇರಿಸುವ–ಸಂಘಟಿಸುವ ಪ್ರಯತ್ನ. ಸಹೃದಯತೆ, ಮುಕ್ತತೆ, ಸ್ನೇಹತ್ವದಿಂದ ಸಮ್ಮಿಲನಗೊಳಿಸುವ ಪ್ರಯತ್ನ. ೨. ಅರ್ವಾಚೀನ, ಶಾಸ್ತ್ರಾದಿಗಳ ಶಿಕ್ಷಣ ಅಧ್ಯಯನ, ಅಧ್ಯಾಪನ, ಸಂಶೋಧನ ಪ್ರಕಾಶನ, ೩. ಪ್ರಾಚೀನತ್ವ, ಶ್ರೇಷ್ಠತ್ವ, ಸಂಸ್ಕಾರತ್ವ, ಆಚಾರತ್ವ, ಧಾರ್ಮಿಕತ್ವ ಇತ್ಯಾದಿ ನಾವೂ ತಿಳಿದು ಮುಂದಿನವರಿಗೂ ತಿಳಿಸುವ ಪ್ರಯತ್ನ. ೪. ಸಂಸ್ಕಾರಯುಕ್ತ, ಧಾರ್ಮಿಕಯುಕ್ತ, ಶೈಲ್ಯ–ಬ್ರಾಹ್ಮಣ–ಸದೃಢ–ಸಗೌರವ ಸಮಾಜ ನಿರ್ಮಾಣ ಪ್ರಯತ್ನ, ೫. ಆದಿಭೌತಿಕ–ಆಧ್ಯಾತ್ಮಿಕ–ಆಧಿದೈವಿಕ, ಜ್ಞಾನಸಿದ್ಧಿ ಶಿಕ್ಷಣ ಪಡೆದು ಮುಂದಿನವರೂ ಪಡೆಯಲು ತಿಳಿಸುವ ಪ್ರಯತ್ನ, ತಾರತಮ್ಯ ನಿವಾರಿಸುವ ಪ್ರಯತ್ನ. ಇದೆಲ್ಲವನ್ನು ಸಾಧಿಸಬೇಕಾದರೆ ವಿಶ್ವಕರ್ಮರು ಅಸಡ್ಡೆ, ಉಡಾಫೆ, ಪೂರ್ವಾಗ್ರಹ, ದುರಾಗ್ರಹ, ಅನಾಸಕ್ತಿ, ಅನಾದರ, ಅನಧ್ಯಯನ, ಸತ್ಯವಿದ್ದರೂ ಒಪ್ಪಬಾರದೆಂಬ ಧೋರಣೆ, ಔದಾಸೀನ್ಯ, ಅಪರೀಕ್ಷತೆ, ಅಗೌರವ, ವೈರುಧ್ಯ, ಪ್ರತ್ಯೇಕತೆ, ವಿನಾಕಾರಣ ಅರ್ಹತೆಯಿಲ್ಲದ ವ್ಯಕ್ತಿ–ವಿಷಯಗಳನ್ನು ಓಲೈಸುವುದು, ಪಕ್ಷಪಾತತ್ವ ಇತ್ಯಾದಿ ಗುಣಗಳನ್ನು ಬಿಡಬೇಕು. ಅದಕ್ಕೆ ಪೂರಕವಾಗಿ ಆಸಕ್ತಿ, ಆದರ, ಅಧ್ಯಯನಶೀಲತೆ, ಸದಚಾರ, ಸತ್ಯಕುತೂಹಲ, ಯಥಾರ್ಥ ಸತ್ವ–ಋತ–ಸತ್ಯಜ್ಞಾನ–ಸಹೃದಯತೆ, ಮುಕ್ತತೆ, ಸ್ನೇಹತ್ವ, ಅನೌದಾಸೀನ್ಯ, ಅಸತ್ವ–ಅನೃತ–ಅಸತ್ಯ, ಅಜ್ಞಾನ ನಿರಾಕರಣ, ನಿಷ್ಪಕ್ಷಪಾತ ಇತ್ಯಾದಿ ಗುಣಗಳನ್ನು ಬೆಳೆಸಿಕೊಂಡು ಸಹಕರಿಸಬೇಕು".[೫]

ಸಹಚಿಂತನ ಪತ್ರಿಕೆಯಲ್ಲಿ ಸಂಸ್ಕೃತ ಸಂಭಾಷಣಮ್ ಎಂಬ ಅಂಕಣವೇ ಪ್ರಕಟವಾಗುತ್ತಿದೆ. ಕನ್ನಡಿಗರು ಅದರಲ್ಲೂ ವಿಶ್ವಕರ್ಮ ಕನ್ನಡಿಗರು ಸಂಸ್ಕೃತವನ್ನು ಕಲಿಯುವ ಮೂಲಕ ತಮ್ಮ ಪ್ರಾಚೀನ ಸಂಸ್ಕೃತಿಯ ವಿಶ್ವವಿಕಾಸವನ್ನು ಅರಿತುಕೊಳ್ಳಬೇಕೆಂಬುದು ಸಹಚಿಂತನ ಸಂಪಾದಕರ ಸದಾಶಯ. ವಾಸುದೇವ ಆಚಾರ್ ಪರ್ಕಳ ಎಂಬುವರು ಪ್ರತಿ ಸಂಚಿಕೆಯಲ್ಲಿ ಈ ಸಂಭಾಷಣಮ್ ಅಂಕಣ ಬರೆಯುತ್ತ ಬಂದಿದ್ದಾರೆ. ಒಂದು ಉದಾಹರಣೆ ನೋಡುವುದಾದರೆ–

| | | |
|---|---|---|
| ಓಹೋ! ಏವಂ ವಾ? | = | ಓಹೋ! ಹೀಗೋ? |
| ಭವತು | = | ಆಗಲಿ |
| ಆಗಚ್ಛತು | = | ಬನ್ನಿ |
| ಉಪವಿಶತು | = | ಕುಳಿತುಕೊಳ್ಳಿ |
| ಸಮಾಪ್ತಂ ವಾ | = | ಮುಗಿಯಿತಾ? |

| | | |
|---|---|---|
| ಕಸ್ಮಿನ್ ಸಮಯೇ? | = | ಎಷ್ಟು ಹೊತ್ತಿಗೆ? |
| ತಸ್ಯ ಕಃ ಅರ್ಥಃ? | = | ಅದರ ಅರ್ಥವೇನು? |
| ಸ್ಮರತಿ ಕಿಲ? | = | ನೆನಪಿದೆಯಲ್ಲ? |
| ಅದ್ಯ ಏವ | = | ಇವತ್ತೇ |
| ಇದಾನಿಂ ಏವ | = | ಈಗಲೇ |
| ವಿಸ್ಮರತು | = | ಮರೆತು ಬಿಡು |
| ತದನಂತರಮ್ | = | ಅನಂತರ |
| ಜ್ಞಾತಂ | = | ಗೊತ್ತಾಯಿತು |
| ಜ್ಞಾತಂ ವಾ? | = | ಗೊತ್ತಾಯಿತಾ? |
| ಅದ್ಯ ಏವ ವಾ? | = | ಇವತ್ತೇನಾ? |
| ಅಸ್ತು | = | ಆಗಲಿ |
| ಅಸ್ತುವಾ? | = | ಆಗಬಹುದಾ? |
| ಲಬ್ಧಂ | = | ಸಿಕ್ಕಿತು |
| ಲಬ್ಧಂ ವಾ? | = | ಸಿಕ್ಕಿತಾ? |
| ತತ್ ತಥಾ ನ | = | ಅದು ಹಾಗಲ್ಲ |
| ತಥೈವ ಅಸ್ತು | = | ಹಾಗೇ ಆಗಲಿ |
| ಸಮೀಚೀನಾ ಸೂಚನಾ | = | ಒಳ್ಳೇ ಸಲಹೆ |
| ಅನ್ಯತ್ ಕಿಂ? | = | ಮತ್ತೇನು? |
| ಅನ್ಯಃ ಕಃ ವಿಶೇಷಃ | = | ಮತ್ತೇನು ವಿಶೇಷ? |
| ಕಃ ವಿಶೇಷಃ | = | ಏನು ವಿಶೇಷ? |

ಪರಸ್ಪರ ಭೇಟಿಯಾದಾಗ ದಯವಿಟ್ಟು ಸಂಸ್ಕೃತ ಶಬ್ದಗಳನ್ನು ಒಂದೊಂದಾಗಿ ಬಳಸೋಣ. ಕ್ರಮೇಣ ಅರ್ಥವಾಗುತ್ತದೆ. ಭಾಷೆಯ ಬಳಕೆಯಾದಾಗ ತನ್ನಿಂದ ತಾನೇ ಸಂಸ್ಕೃತ ತಿಳಿಯುತ್ತದೆ. ಎಂಬ ಸಂಪಾದಕರ ಆಶಯ ಇಲ್ಲಿ ಕೆಲಸ ಮಾಡಿದಂತಿದೆ.

ವಿಶ್ವಕರ್ಮ ಪತ್ರಿಕೆಗಳು ಕರ್ನಾಟಕದ ವಿವಿಧ ಭಾಗಗಳಿಂದ ಪ್ರಕಟವಾಗುತ್ತಿವೆ. ಕರಾವಳಿ ಕರ್ನಾಟಕದಿಂದ ಸಹಚಿಂತನ, ಋಷಿಸ್ವರಂ ಮೊದಲಾದ ಪತ್ರಿಕೆಗಳು ಪ್ರಕಟವಾಗುತ್ತಿವೆ. ಕರಾವಳಿ ಪ್ರದೇಶ ಸಾಂಸ್ಕೃತಿಕವಾಗಿ ವೈವಿಧ್ಯಮಯವಾಗಿರುವಂಥದ್ದು. ಅಲ್ಲಿಯ ಭೂತಾರಾಧನೆ ತುಂಬ

ಪ್ರಸಿದ್ಧವಾದುದು. ಕರಾವಳಿ ಒಂದು ರೀತಿಯಲ್ಲಿ ಜನಪದ ಕಲೆಗಳ ಸಂಪ್ರದಾಯಗಳ ತವರೂರು. ಭೂತಾರಾಧನೆಯಲ್ಲಿ ಭೂತಕೋಲ, ದೈವದರ್ಶನ, ಅಗೆಲು, ತಂಬಿಲ ಮುಂತಾದ ಆಚರಣೆಗಳನ್ನು ಮಾಡುವುದರ ಮೂಲಕ ಭೂತಗಳನ್ನು ಆರಾಧನೆ ಮಾಡಲಾಗುತ್ತದೆ. ಇಲ್ಲಿ ಕೋಲ ಎಂಬ ಶಬ್ದಕ್ಕೆ ಅಲಂಕಾರ ಎಂಬ ಅರ್ಥವಿದೆ. ಭೂತಗಳ ವಾಸಸ್ಥಾನಕ್ಕೆ ಗುಡಿಗಳು ಮಾಡುಗಳು ಬನಗಳು ಕಲ್ಲುಗಳಿವೆ. ಅವುಗಳಿಗೆ ಕೋಲ, ತಂಬಿಲ, ನೇಮ ಕೊಡುವ ಪದ್ಧತಿ ಇದೆ. ಆಟಿಯಲ್ಲಿ ದೇವರನ್ನು ಆರಾಧಿಸುವಂತಿಲ್ಲ. ಬದಲಾಗಿ ಶೂದ್ರ ಭೂತಗಳಾದ ಗುಳಿಗ, ಕಲ್ಲುರ್ಟಿ, ಮಾರಿ ಇತ್ಯಾದಿಗಳನ್ನು ಆರಾಧಿಸಬೇಕೆಂಬುದು ಆರಾಧನಾ ಪರಿಕಲ್ಪನೆಗೆ ಸಂಬಂಧಿಸಿದ ಒಂದು ನಿಯಮ. ಭೂತಗಳ ಚರಿತ್ರೆಗಳನ್ನು ಒಳಗೊಂಡ ಸ್ತುತಿಪಾಠಗಳು ಪ್ರಾರ್ಥನೆಗಳಾಗಿವೆ. ಈ ಪ್ರಾರ್ಥನೆಯೇ ತುಳು ಭಾಷೆಯಲ್ಲಿ ಪಾಡ್ದನ ಎಂದು ಕರೆಯಲಾಗಿದೆ. ಅಂತಹ ಭೂತಗಳ ಬಗೆಗಿನ ಶಿವಪಾರ್ವತಿಯ ಸಂಭಾಷಣೆಯ ಪಾಡ್ದನವು ಈ ರೀತಿಯಾಗಿದೆ.

"ಇಂದ ಪಾರ್ವತಿ ಕೇನ್ಲಯೇನ ಪಾರ್ಸ್ವಬಾಗೋಡು ಈ ಸಾರತ್ತೊಂಜಿ ಗಂಡಗಣ ಸಾರತ್ತೊಂಜಿ ಭೂತಲಾ ಉದ್ಧವಾದ್ ಪುಟ್ಯೋ ಅಕುಳು ಎನನ್ ಏಪಲ ಸೇವೆ ಮತ್ತೊಂದು ಆಶ್ರಯ ಮಲ್ತೊಂದು ಇತ್ತ ಆಪಗ ಯಾಗ ಆಕುಲೇ ಮೆಚ್ಚಿದ್ ಸಾಯೊಗು ಬೋಡಾತ್ ಸಾರತ್ತೊಂಜಿ ರೋಗಲೇನು ಪುಟ್ಪಾಯೇ ಪಾಪಿಷ್ಠರೇನ್ ಭಂಗ ಮಲ್ಪೆರೆ ಬೋಡಾತ್ ಉಂದೆನ್ ಮಲ್ಪೊಡಾಂಡ್".[೭]

ಪ್ರತಿ ೨೦ ಕಿ.ಮೀ.ದಂತೆ ಪ್ರಾದೇಶಿಕವಾಗಿ ಭಾಷೆಗಳು ಬದಲಾಗುತ್ತ ಹೋಗುತ್ತವೆ. ವಿಶ್ವಕರ್ಮ ಸಮುದಾಯವು ಕರ್ನಾಟಕದ ತುಂಬ ವ್ಯಾಪಿಸಿರುವುದರಿಂದ ಏಕರೂಪದ ಭಾಷೆಯ ಬಳಕೆಯಿಂದ ಒಗ್ಗಟ್ಟು ಮೂಡುತ್ತದೆ ಎಂಬ ಆಶಯ ವಿಶ್ವಕರ್ಮ ಪತ್ರಿಕೆಗಳಿಗಿದೆ. ತಮ್ಮ ಸಮುದಾಯಕ್ಕೆ ಧಕ್ಕೆ ಬಂದಾಗಲೆಲ್ಲ ಈ ಪತ್ರಿಕೆಗಳು ಒಗ್ಗಟ್ಟಾಗಿ ಪ್ರತಿಭಟಿಸಿವೆ. ರಾಜ್ಯದ ಯಾವ ಮೂಲೆಯಲ್ಲಿಯೇ ವಿಶ್ವಕರ್ಮ ಸಮಾಜಕ್ಕೆ ಧಕ್ಕೆ ಒದಗಿದಾಗ ಪ್ರತಿರೋಧ ವ್ಯಕ್ತಪಡಿಸುವ ಕಾರ್ಯವನ್ನು ಮಾಡುತ್ತ ಬಂದಿವೆ. ಕೆಲವು ಪಠ್ಯಪುಸ್ತಕಗಳಲ್ಲಿ ವಿಶ್ವಕರ್ಮ ಸಮಾಜಕ್ಕೆ ಅವಹೇಳನವಾದಾಗ ಒಗ್ಗಟ್ಟಿನಿಂದ ಪ್ರತಿಭಟನೆ ಮಾಡಿರುವುದು ಈ ಪತ್ರಿಕೆಗಳಲ್ಲಿ ದಾಖಲಾಗಿದೆ.

೨೦೧೧ರಲ್ಲಿ ನಾಗವೇಣಿ ಅವರ 'ಗಾಂಧಿ ಬಂದ' ಕಾದಂಬರಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಪಠ್ಯಪುಸ್ತಕವಾಗಿ ಆಯ್ಕೆಯಾಯಿತು. ಈ ಕಾದಂಬರಿಯಲ್ಲಿ ವಿಶ್ವಕರ್ಮ ಸಮಾಜವನ್ನು ಅವಹೇಳನ ಮಾಡಿ ಬರೆಯಲಾಗಿತ್ತು. ಕಾದಂಬರಿ ವಸ್ತು ವಿನ್ಯಾಸ ೧೯೨೦-೨೭ರ ಕಾಲಘಟ್ಟದ್ದು. ಕಾದಂಬರಿಯಲ್ಲಿ ಒಂದು ಘಟನೆ ಬರುತ್ತದೆ. ಸಮಾಜ ಸುಧಾರಣೆಯ ಕಾರ್ಯಕ್ರಮವಾಗಿ ಪಣಂಬೂರು ಜಾತ್ರೆಯಲ್ಲಿ ಕಾರ್ನಾಡು ಸದಾಶಿವರಾಯರ ಸಲಹೆಯಂತೆ ಗುರ್ಕಾರರು ಸಾಮೂಹಿಕ ಊಟ ಪಂಕ್ತಿ ಏರ್ಪಡಿಸಿದಾಗ ಆಚಾರಿಗಳು ನಾವು ನೂಲು ಹಾಕಿದ ಬ್ರಾಹ್ಮಣರು ನಮಗೆ ಶೂದ್ರರ ಜೊತೆ ಊಟವೇ ಎಂದು ಗುಲ್ಲೆಬ್ಬಿಸಿದಾಗ ಕಾದಂಬರಿಯಲ್ಲಿ ಬರುವ ಮಾತುಗಳು ಹೀಗಿವೆ:

“ಇದೆಲ್ಲದರ ಮಧ್ಯೆ ಮರಕೆತ್ತುವ, ಚಿನ್ನ ಕಬ್ಬಿಣ ಗುದ್ದುವ ಆಚಾರಿಗಳದ್ದು ಮತ್ತೊಂದು ಕಿರಿಕಿರಿ ಆರಂಭವಾಗಿತ್ತು. ನಾವು ನೂಲು ಹಾಕಿದವರು ವಿಶ್ವಕರ್ಮ ಬ್ರಾಹ್ಮಣರು. ನಮ್ಮನ್ಯಾಕೆ ನೂಲು ಇಲ್ಲದವರ ಜತೆ ಕೂರಿಸಿ ಕುಲಕೆಡಿಸಿದಿರಿ ಎಂಬ ಬಿರುಸಿನ ಮಾತು ಬಂತು. ನೂಲಿಲ್ಲದ ಶೂದ್ರರೆಲ್ಲ ಇರುವೆಗಳಂತೆ ಒಂದಾಗಿ ನೀವೆಂತಾ ನೂಲು ಬ್ರಾಹ್ಮಣರು ಮಾರಾಯಾ? ನೀವೂ ನಮ್ಮಂತೇ ತಿನ್ನುವವರು. ನಮಗಿಂತಲೂ ಯಾವುದರಲ್ಲಿ ನೀವು ಹೆಚ್ಚಿನವರು? ಕೊಳಕಲ್ಲಲ್ಲೇ? ಆಸ್ತಿಯಲ್ಲೇ? ಅಂತಸ್ತಿನಲ್ಲೇ ಸಂಸ್ಕಾರದಲ್ಲೇ? ಎಂದು ಕೊಂಕು ಮಾತಿನಿಂದ ಕುಕ್ಕಲಾರಂಭಿಸಿದರು”.[೮]

ಈ ವಿಷಯ ವಿಶ್ವಕರ್ಮ ಸಮಾಜಕ್ಕೆ ತಿಳಿದು ನಾಗವೇಣಿ ಅವರಿಗೆ ವಿಶ್ವಕರ್ಮ ಒಕ್ಕೂಟ ಲಾಯರ್ ನೋಟಿಸು ಕೊಟ್ಟಿತು. ಆಗ ನಾಗವೇಣಿ ಅವರು ಪ್ರಜಾವಾಣಿ ಪತ್ರಿಕೆಯ ಸಂಗತ ಕಾಲಂನಲ್ಲಿ ದಿನಾಂಕ ೨೯-೨೨-೨೦೧೧ರಂದು ಹೀಗೆ ಬರೆದರು-

“ಈ ಕಾದಂಬರಿ ಬರೆಯುವಾಗ ನನ್ನೆದುರು ಇದ್ದಿದ್ದು ರಾಷ್ಟ್ರೀಯ ವಸ್ತುವೊಂದನ್ನು ತಂದು ತುಳು ನಾಡಿನ ಸಾಂಸ್ಕೃತಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿದ್ದು ಕೋಮು ಜ್ವಾಲೆಯಿಂದ ತಲ್ಲಣಿಸುತ್ತಿದ್ದ ತುಳುವ ಮಣ್ಣಿಗೆ ವೈಚಾರಿಕ ಸಂಪನ್ನೆರೆಯಬೇಕು ಎಂಬುದು ಮಾತ್ರ. ಹಾಗೆ ನೋಡಿದರೆ ನಾನು ಬೆಳೆದದ್ದೇ ಕಮ್ಮಾರ, ಬಡಗಿಗಳ ಕುಟುಂಬಗಳ ಮಧ್ಯೆ. ಅವರ ಆಚಾರ ವಿಚಾರ ನಡವಳಿಕೆಗಳನ್ನು ನಾನು ಕಣ್ಣಾರೆ ಕಂಡವಳು. ನನ್ನನ್ನು ಹೆತ್ತ ತಾಯಿ ಹೆತ್ತ ಆರು ತಿಂಗಳಲ್ಲೇ ನನ್ನಿಂದ ದೂರ ಇರಬೇಕಾದಾಗ ನನ್ನನ್ನು ಎದೆ ಹಾಲು ನೀಡಿ ಮಮತೆಯಿಂದ ಪೋಷಿಸಿದ ಸಾಕು ತಾಯಿ-ನನ್ನ ಅಮ್ಮನ ನಿಕಟವರ್ತಿ ಲಚುಮಾರ್ಚಾತಿ”.[೯]

ಈ ಪತ್ರಕ್ಕೆ ಪ್ರತಿಕ್ರಿಯೆ ಎಂಬಂತೆ ವಿಮರ್ಶಕ ರಾಜೇಂದ್ರ ಚೆನ್ನಿ ಅವರು ಅದೇ ಪ್ರಜಾವಾಣಿ ಪತ್ರಿಕೆಯಲ್ಲಿ ದಿನಾಂಕ ೨-೧೨-೨೦೧೧ರಂದು ಸಂಗತ ಕಾಲಂನಲ್ಲಿ ಜಾತಿ ಸಂಘಗಳ ಒತ್ತಡಕ್ಕೆ ಕೃತಿಮೌಲ್ಯ ನಿರ್ಣಯಿಸಲ್ಲ ಎಂಬ ಶಿರೋನಾಮೆಯಲ್ಲಿ ಲೇಖನವೊಂದನ್ನು ಪ್ರಕಟಿಸಿ ವಿಶ್ವಕರ್ಮರನ್ನು ಮತ್ತಷ್ಟು ಅವಹೇಳನಕ್ಕೆ ಗುರುಪಡಿಸಿದರು. ಅವರ ಲೇಖನದ ಸಾರಾಂಶ ಹೀಗಿದೆ-

“ಇಂದು ಕೂಡ ವಿಶ್ವಕರ್ಮರನ್ನು ಅವರ ವೃತ್ತಿ ಹಿನ್ನೆಲೆಯಲ್ಲಿ ‘ಆಚಾರಿ’ಗಳೆಂದೇ ಸಾಮಾನ್ಯವಾಗಿ ಗುರುತಿಸುವುದು. ಅದನ್ನೇನೂ ಯಾರೂ ಅವಮಾನಕಾರಿ ಸಂಬೋಧನೆಯ ಅರಿವಿನಲ್ಲಿ ಮಾಡುವುದಿಲ್ಲ. ಈಗ ವಿಶ್ವಕರ್ಮರು ಬಹುಪಾಲು ಮಧ್ಯಮ ಜಾತಿಗಳಂತೆ ತಮ್ಮನ್ನು ಸಾಂಸ್ಕೃತಿಕವಾಗಿ ಮೇಲ್‌ಸ್ತರದಲ್ಲಿ ಗುರುತಿಸಿಕೊಳ್ಳಲು ಹಳೆಯ ಪುರಾಣ ಮತ್ತು ಕೋರ್ಟು ತೀರ್ಪುಗಳನ್ನು ಹುಡುಕಿ ಹಾಕಿ ತಮ್ಮನ್ನು ಬ್ರಾಹ್ಮಣರೆಂದು ಕೆಲವೆಡೆ ಬ್ರಾಹ್ಮಣರಿಗಿಂತ ಶ್ರೇಷ್ಠರೆಂದು ಕರೆದುಕೊಳ್ಳಲು ಪ್ರಯತ್ನಿಸುತ್ತಿರುವರಾದರೂ ಅದಕ್ಕೆ ಸಾರ್ವತ್ರಿಕ ಮಾನ್ಯತೆ ಸಿಕ್ಕಿಲ್ಲ. ಬಹುಪಾಲು ವಿಶ್ವಕರ್ಮರು ಜನಿವಾರವನ್ನು ಒಂದು ಔಪಚಾರಿಕತೆ ಎಂಬಂತೆ ಮದುವೆಯ ಸಂದರ್ಭದಲ್ಲಿ ಮಾತ್ರ ಧರಿಸುತ್ತಾರೆ. ಬ್ರಾಹ್ಮಣರಂತೆ ಪ್ರತ್ಯೇಕ ಆಚರಣೆಯಾಗಿ ಉಪನಯನ ನೆರವೇರಿಸುವ ರಿವಾಜು ಇಲ್ಲ. ಈಗ

ಬ್ರಾಹ್ಮಣೀಕರಣದ ಮೋಹ ಆರಂಭವಾದ  ಕೆಲವರಲ್ಲಿ ಇದು ಆರಂಭವಾಗಿರಬಹುದು. ಈ ಜನಿವಾರ ಅಧಿಕಾರದ ಮಾನ್ಯತೆಯಿಂದ ತಾವು ಬ್ರಾಹ್ಮಣರ ಮಟ್ಟಕ್ಕೇ ಏರಿದ್ದರೆ ನಮ್ಮ ರಾಜ್ಯದ ಹಿಂದುಳಿದ ವರ್ಗಗಳ ಆಯೋಗಗಳ ಪ್ರಕಾರ ಇವರು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಜಾತಿಗಳ ಪಟ್ಟಿಗೆ ಏಕೆ ಸೇರುತ್ತಿದ್ದರು?"[೧೦] ಎಂದು ರಾಜೇಂದ್ರ ಚೆನ್ನಿ ಪ್ರಶ್ನಿಸಿದ್ದಾರೆ.

ಇಂಥ ವಿಚಾರಗಳು ದಿನಪತ್ರಿಕೆಗಳಲ್ಲಿ ಪ್ರಕಟವಾದಾಗ ವಿಶ್ವಕರ್ಮ ಸಮುದಾಯ ಅದಕ್ಕೆ ಪ್ರತಿಭಟನೆ ರೂಪದಲ್ಲಿ ತಮ್ಮ ಸಮಾಜದ ಪತ್ರಿಕೆಗಳಲ್ಲಿ ತೀವ್ರವಾಗಿ ಖಂಡಿಸುವ ಕಾರ್ಯವನ್ನು ಮಾಡಿದೆ. ದಿನೇಶ ಕಟ್ಪಾಡಿ ಅವರು 'ಗಾಂಧಿ ಬಂದ ಕಾದಂಬರಿಯಲ್ಲಿ ವಿಶ್ವಕರ್ಮರ ಅವಹೇಳನ : ಒಗ್ಗಟ್ಟಿನಿಂದ ಪ್ರತಿಭಟಿಸಬೇಕಾದ ಅವಶ್ಯಕತೆ' ಎಂಬ ಸುದೀರ್ಘ ಲೇಖನವನ್ನೇ ಬರೆದಿದ್ದಾರೆ. (ದಿನೇಶ ಕಟ್ಪಾಡಿ : ಸಹಚಿಂತನ ಮಾರ್ಚ ೨೦೧೨ ಪು. ೬)

ವಿಶ್ವಕರ್ಮ ಪತ್ರಿಕೆಗಳನ್ನು ದಮನಿಸುವ ಪ್ರಯತ್ನ ನಡೆದಿರುವುದನ್ನು ಬಿ. ಎ. ಅಚಾರ್ಯ ಅವರು ತಮ್ಮ ಸಂಪಾದಕೀಯದಲ್ಲಿ ಹೀಗೆ ಹೇಳಿದ್ದಾರೆ–

ವಿಶ್ವಬ್ರಾಹ್ಮಣ ಸಮುದಾಯದಲ್ಲೂ ಪತ್ರಿಕೆಗಳನ್ನು ದಮನಿಸುವ ಪ್ರಯತ್ನ ನಡೆಯುತ್ತಿರುವದು ವಿಷಾದನೀಯ. ಒಂದು ಪತ್ರಿಕೆಯ ಸಂಪಾದಕರು ಒಬ್ಬ ನಾಯಕನಿಂದ ತನಗಾಗುತ್ತಿರುವ ಹಿಂಸೆಯನ್ನು  ಪತ್ರಿಕೆಯಲ್ಲಿ ಬರೆದಿದ್ದಾರೆ. ಇನ್ನೊಂದು ಪತ್ರಿಕೆಗೆ ಬಹಿಷ್ಕಾರದ ಬೆದರಿಕೆ ಒಂದು ವರ್ಗದಿಂದ ಬಂದಿರುವುದು ಗುಟ್ಟಾಗಿ ಉಳಿದಿಲ್ಲ. ಸಹಚಿಂತನ ಪತ್ರಿಕೆ ತನ್ನ ಮೂಗಿನ ನೇರಕ್ಕೆ ನಡೆಯಲಿಲ್ಲ ಎಂಬ ಕಾರಣಕ್ಕೆ ಒಬ್ಬರು ಹಂತ ಹಂತದ ಕಿರುಕುಳದ ಕಡೆ ಮುಖ ಮಾಡುತ್ತಿದ್ದರೆ ಇದು ಆರೋಗ್ಯಕರ ಲಕ್ಷಣವಲ್ಲ".[೧೧]

ಹಂಪಿ ಕನ್ನಡ ವಿಶ್ವವಿದ್ಯಾಲಯ ೨೦೦೭ರಲ್ಲಿ ಪ್ರಕಟಿಸಿದ ಪಿ.ಯು.ಸಿ. ಎರಡನೆಯ ವರ್ಷದ ಸಮಾಜಶಾಸ್ತ್ರದ ಪಠ್ಯಪುಸ್ತಕದ ಆರನೆಯ ಅಧ್ಯಾಯದಲ್ಲಿ 'ಭಾರತದಲ್ಲಿ ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆ' ಎಂಬ ಶೀರ್ಷಿಕೆಯಡಿಯಲ್ಲಿ ಪು. ೧೮೭ರಲ್ಲಿ 'ಎಡಜಾತಿಗಳು' ಎಂಬ ಉಪಶೀರ್ಷಿಕೆಯಲ್ಲಿ ಸಂಸ್ಕೃತಾನುಕರಣೆಯ ಬಗ್ಗೆ ಉಲ್ಲೇಖಿಸುತ್ತಾ 'ಎಡಜಾತಿ'ಗೆ ಸಮರ್ಪಕ ಉದಾಹರಣೆ ವಿಶ್ವಕರ್ಮ ಬ್ರಾಹ್ಮಣರು. ಅವರು ಜನಿವಾರ ಧರಿಸುತ್ತಾರೆ ಹಾಗೂ ಬ್ರಾಹ್ಮಣರಂತೆ ಅನೇಕ ಸಂಸ್ಕಾರಗಳನ್ನು ಆಚರಿಸುತ್ತಾರೆ. ಜಾತಿ ಪದ್ಧತಿಯ ವಿನ್ಯಾಸದೊಳಗಿರುವ ಹರಿಜನರ ಸಹಿತವಾಗಿ ಯಾವ ಜಾತಿಯವರು ಇತ್ತೀಚಿನವರೆಗೂ ವಿಶ್ವಕರ್ಮರು ಮುಟ್ಟಿದ ಆಹಾರ–ಪೇಯಗಳನ್ನು ತಿರಸ್ಕರಿಸಿದ್ದರು. ಇದಲ್ಲದೆ ಅವರು ಅನೇಕ ಅನರ್ಹತೆಗಳನ್ನು ಅನುಭವಿಸಬೇಕಾಗಿತ್ತು. ಊರಿನ ಬೀದಿಗಳಲ್ಲಿ ಅವರ ಮೆರವಣಿಗೆ ಹೋಗಬಾರದಿತ್ತು...'

ಈ ವಿಷಯ ವಿಶ್ವಕರ್ಮ ಸಮಾಜಕ್ಕೆ ಗೊತ್ತಾದಾಗ, ಕರ್ನಾಟಕದ ತುಂಬ ತೀವ್ರವಾಗಿ ಪ್ರತಿಭಟನೆ ಮಾಡಿದರು. ವಿಶ್ವಕರ್ಮ ಒಕ್ಕೂಟದ ಅಧ್ಯಕ್ಷ ಎಸ್.ಪಿ.ಆಚಾರ್. ಆನೆಗೊಂದಿ

ಸಂಸ್ಥಾನಮಠದ ಶ್ರೀಗಳು, ಮಂಗಳೂರು ಶ್ರೀ ಕಾಳಿಕಾಂಬಾ ಕ್ಷೇತ್ರದವರು, ಪುತ್ತೂರಿನ ವಿಶ್ವಕರ್ಮ ಸಮುದಾಯ ಮೊದಲಾದ ಕಡೆ ಪ್ರತಿಭಟನೆಗಳಾದವು. ಕಡಪಾಡಿಯಲ್ಲಿ ಆನೆಗೊಂದಿ ಸಂಸ್ಥಾನದ ಕಾಳಹಸ್ತೇಂದ್ರ ಸರಸ್ವತಿ ಸ್ವಾಮೀಜಿ ಮಾತನಾಡಿ "ವಿಶ್ವಕರ್ಮರು ವಸ್ತುಸ್ಥಿತಿಯ ಅವಲೋಕನ ಮಾಡಬೇಕು. ದೌರ್ಬಲ್ಯಗಳಿಂದ ದೂರವಾಗಬೇಕು. 'ಅಶ್ವಂ ನೈವ ಗಜಂ ನೈವ ವ್ಯಾಘ್ರಂ ನೈವ ಚ ನೈವ ಚ । ಅಜಾಪುತ್ರಂ ಬಲಿಂ ದದ್ಯಾತ್ ದೇವೋ ದುರ್ಬಲ ಘಾತಕಃ॥ ( ಕುದುರೆಯನ್ನಲ್ಲ, ಆನೆಯನ್ನಲ್ಲ, ಹುಲಿಯನ್ನಂತೂ ಸರ್ವಥಾ ಅಲ್ಲ, ಮೇಕೆ ಮರಿಯನ್ನು ಬಲಿ ಕೊಡಬೇಕಂತೆ) ದೇವರೂ ಸಹ ದುರ್ಬಲರನ್ನೇ ಕೊಲ್ಲುತ್ತಾನೆ. ಚಿತ್ತೂರು ಜಿಲ್ಲಾ ಅದಾಲತ್ ತೀರ್ಪನ್ನು ಗಮನಿಸಬೇಕು. ನಾವು ಬ್ರಾಹ್ಮಣ್ಯವನ್ನು ಯಥಾವತ್ ಸ್ವೀಕರಿಸಲು ತಯಾರಾಗಬೇಕು. ಸದ್ಯದ ಈ ಪಠ್ಯಕ್ರಮದ ರದ್ಧತಿಗಾಗಿ ಶ್ರಮಿಸಲು ಸಾಮಾಜಿಕ ಸಂಘಟನೆ ಸಂಘಟನೆ ವಿಶ್ವಕರ್ಮ ಒಕ್ಕೂಟಕ್ಕೆ ನೇತೃತ್ವ ನೀಡಲಾಗಿದೆ. ಕರಾವಳಿಯ ಸಮಸ್ತ ಸಂಘಟನೆಗಳು ಧಾರ್ಮಿಕ ಕ್ಷೇತ್ರಗಳ ಸಹಕಾರ ನೀಡಬೇಕು. ಜೊತೆಗೆ ಅಲ್ಲಲ್ಲಿ ಸಾರ್ವಜನಿಕ ಹಿತಾಸಕ್ತಿಯ ನೆಲೆಯ ಕಾನೂನು ಕ್ರಮ ಇತ್ಯಾದಿಗಳ ಬಗ್ಗೆಯೂ ಚಿಂತಿಸಬೇಕು. ಒಟ್ಟಿನಲ್ಲಿ ಮುಂದೆಂದೂ ಚಿಗುರೊಡೆಯದಂತೆ ಬೇರು ಸಹಿತ ಕಿತ್ತೊಗೆಯುವ ಕಾರ್ಯ ಆಗಬೇಕು".[೧೨]

ಆನೆಗೊಂದಿ ಶ್ರೀಗಳು ತಮ್ಮ ಮಾತುಗಳಲ್ಲಿ ಹೇಳಿದಂತೆ, ವಿಶ್ವಕರ್ಮ ಒಕ್ಕೂಟದ ಅಧ್ಯಕ್ಷರು ಮುಖ್ಯಮಂತ್ರಿಗಳಿಗೆ ಪತ್ರಬರೆದರು. ಪತ್ರದಲ್ಲಿಯ ಕೆಲವು ವಿಚಾರಗಳು ಹೀಗಿವೆ–

"ಚಂದ್ರಶೇಖರ ದಾಮ್ಲೆಯವರು ಸತ್ಯಕ್ಕೆ ದೂರವಾದ ಮಾತುಗಳನ್ನೇ ಬರೆಯುತ್ತ ನಾಡಿನ ಸಮಸ್ತ ವಿಶ್ವಬ್ರಾಹ್ಮಣರ ಮನಸ್ಸಿಗೆ ತೀವ್ರ ಆಘಾತ, ನೋವು ಉಂಟು ಮಾಡಿದ್ದಾರೆ. ವಿಶ್ವಕರ್ಮ ಬ್ರಾಹ್ಮಣರು ಎಂದೂ ಸಂಸ್ಕೃತಾನುಕರಣಕ್ಕೆ ಒಳಪಟ್ಟವರಲ್ಲ. ವೇದೋಪನಿಷತ್ತುಗಳ ಕಾಲದಿಂದಲೇ ಈ ವಿಶ್ವಕರ್ಮ ಬ್ರಾಹ್ಮಣರ ಉಲ್ಲೇಖವಿದೆ. ಅಂದಿನಿಂದಲೂ ಉತ್ಕೃಷ್ಟ ಸಂಸ್ಕಾರ, ಸಂಸ್ಕೃತಿ ಈ ಸಮಾಜದ್ದು. ಆದರೆ ತಮ್ಮ ಮೌಢ್ಯದಿಂದಾಗಿ ಎಂ. ಎನ್. ಶ್ರೀನಿವಾಸ್ ಹಾಗೂ ಇತರ ಕೆಲವು ಲೇಖಕ, ಪ್ರಾಧ್ಯಾಪಕರು ಆಳ ಅಧ್ಯಯನ ನಡೆಸದೆ ಕುಳಿತಲ್ಲೇ ಸಂಶೋಧನೆ ನಡೆಸಿ ಈ ರೀತಿಯ ಅಪಾದನೆ ಮಾಡಿ ಒಂದು ಸಂಸ್ಕಾರಯುಕ್ತ ಸಮಾಜವನ್ನು ವ್ಯವಸ್ಥಿತವಾಗಿ ತುಳಿಯುವ ಪ್ರಯತ್ನವನ್ನು ಬುದ್ಧಿಜೀವಿಗಳೆಂದು ಹಣೆಪಟ್ಟಿಕೊಂಡಿರುವವರು ಮಾಡುತ್ತಾ ಬಂದಿರುವುದು ಖೇದಕರ. ನಮ್ಮ ನಾಡು, ನುಡಿ, ಕಲೆ, ಸಂಸ್ಕೃತಿಯ ಏಳಿಗೆಗೆಂದೇ ಹುಟ್ಟಿಕೊಂಡ ಹಂಪಿ ವಿಶ್ವವಿದ್ಯಾಲಯದಿಂದ ಈ ಪುಸ್ತಕ ಪ್ರಕಟವಾದದ್ದು ಇನ್ನೂ ದೊಡ್ಡದುರಂತ.

ಜಿ. ಜ್ಞಾನಾನಂದರ 'ಸಂಸ್ಕೃತಾನುಕರಣ ಮತ್ತು ವಿಶ್ವಬ್ರಾಹ್ಮಣರು' ಎಂಬ ಗ್ರಂಥದ ಕೆಲವು ಪುಟಗಳ ಜೆರಾಕ್ಸ್ ಪ್ರತಿ ಲಗತ್ತಿಸಿದ್ದೇವೆ. ಓಂದೊಮ್ಮೆ ಇದೇ ವಿಷಯದ ಕುರಿತಂತೆ ಮೈಸೂರಿನ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯವರು ತಮ್ಮ ಸಿದ್ಧಪಾಠಗಳಲ್ಲಿ ಪ್ರಸ್ತಾಪಿಸಿದ ವಿಷಯಗಳನ್ನು ತೆಗೆದುಹಾಕಿರುವ ನಿರ್ದೇಶನದ ಪ್ರತಿಯನ್ನು ಲಗತ್ತಿಸಿದ್ದೇವೆ.

ವಿಶ್ವಕರ್ಮ ಬ್ರಾಹ್ಮಣರ ಇತಿಹಾಸ, ಸಂಸ್ಕಾರ, ಸಂಸ್ಕೃತಿಗಳ ಕರಿತಾಗಿ ಆಳವಾಗಿ ಅಧ್ಯಯನ ನಡೆಸದೆ, ಬುದ್ಧಿಜೀವಿಗಳೆಂದು ಹೇಳಿಕೊಳ್ಳುವವರು ಪಠ್ಯಪುಸ್ತಕ ರಚನೆಗಳಲ್ಲಿ ಹೇಗೋ ಸೇರಿಕೊಂಡು ತಪ್ಪು ಸಂದೇಶವನ್ನು ವಿದ್ಯಾರ್ಥಿ ಸಂಕುಲಕ್ಕೆ ಯುವ ಜನಾಂಗಕ್ಕೆ ಕಳಿಸುತ್ತಿರುವುದು ಖಂಡನೀಯ. ಸಾಮರಸ್ಯದಿಂದ ಬದುಕುತ್ತಿರುವ ನಮ್ಮೀ ರಾಜ್ಯದಲ್ಲಿ ಜಾತಿ ಜಾತಿಗಳ ನಡುವೆ ವಿಷ ಬೀಜ ಬಿತ್ತಿ ಸಂತಸ ಪಡುವ ವಿಘ್ನ ಸಂತೋಷಿಗಳು ಈ ಲೇಖಕರು.

ವೇದಗಳ ಕಾಲದಿಂದಲೂ ಘನತೆ–ಗೌರವಗಳನ್ನು ಉಳಿಸಿ ಬೆಳೆಸಿಕೊಂಡು, ವೈದಿಕ ಮತ್ತು ಶಿಲ್ಪ ಕಾರ್ಯಗಳಿಗೆ ಸಮಾನ ಮೌಲ್ಯ ನೀಡಿ ನಾಡಿನ ಕಲೆ ಮತ್ತು ಸಂಸ್ಕೃತಿಗೆ ಅಪಾರ ಕೊಡುಗೆ ನೀಡಿದ ವಿಶ್ವಕರ್ಮ ಬ್ರಾಹ್ಮಣರ ಬಗ್ಗೆ ತಿಳಿಯದೆ ಬರೆಯುವವರು ಅಲ್ಪಮತಿಗಳೇ ಸರಿ. ವಿಶ್ವಕರ್ಮರೂ ಸಿಂಧೂ ಕಂದರದ ನಾಗರಿಕತೆಗಳ ಕಾಲದಿಂದಲೂ ಬ್ರಾಹ್ಮಣರೇ ಆಗಿರುವುದರಿಂದ ಎಂ. ಎನ್. ಶ್ರೀನಿವಾಸ್ ಹೇಳುವ 'ಸಂಸ್ಕೃತಾನುಕರಣ'ದ ಪ್ರಶ್ನೆಯೇ ಬರುವುದಿಲ್ಲ. ವಿಶ್ವವಿದ್ಯಾಲಯ ಅಥವಾ ಕಾಲೇಜೊಂದರ ಉಪನ್ಯಾಸಕನಾಗಿ ಡಾಕ್ಟರೇಟ್ ಹೊತ್ತ ಮಾತ್ರಕ್ಕೆ ಅವರು ಹೇಳುವುದೆಲ್ಲ ಸತ್ಯವಾಗಿರಬೇಕಾಗಿಲ್ಲ.

ಮಾನ್ಯರೆ, ಒಮ್ಮೆ ಪುಸ್ತಕದಲ್ಲಿ ಪ್ರಕಟವಾಯಿತು ಎಂದರೆ ವಿದ್ಯಾರ್ಥಿಗಳು ಮತ್ತು ಜನರು ಅದು ಸತ್ಯವಾಗಿರಬೇಕು ಎಂದು ಭಾವಿಸುತ್ತಾರೆ. ಮಾತ್ರವಲ್ಲ, ಒಂದು ಇಡೀ ಸಮಾಜದ ಬಗ್ಗೆ ತಪ್ಪು ಮಾಹಿತಿ ನೀಡಿ, ಭಾವೀ ಸಮಾಜದ ಜನರು ಇದು ಸತ್ಯ ಎಂದು ಭಾವಿಸುವ ಪ್ರಮೇಯ ಇರವುದರಿಂದ, ಈ ಸಮಾಜವನ್ನು ಬಹು ಹತ್ತಿರದಿಂದ ತಿಳಿದಿರುವ ತಾವು ವಿಷಯ ಪರಿಶೀಲಿಸಿ ಈ ಶೈಕ್ಷಣಿಕ ವರ್ಷದ ಆರಂಭದಿಂದಲೇ ಸಮಾಜಶಾಸ್ತ್ರದ ಈ ಉಲ್ಲೇಖವನ್ನು ಅದು ಹಂಪಿ ವಿ.ವಿ. ಸಮಾಜಶಾಸ್ತ್ರದ ಪಠ್ಯದಲ್ಲಿರಲಿ, ಬೆಂಗಳೂರು, ಮಂಗಳೂರು ವಿಶ್ವವಿದ್ಯಾಲಯಗಳ ಸಮಾಜಶಾಸ್ತ್ರ ಪಠ್ಯದಲ್ಲಿರಲಿ ಅದನ್ನು ಕೂಡಲೇ ಹಿಂತೆಗೆದುಕೊಳ್ಳಬೇಕಾಗಿ ತಮ್ಮಲ್ಲಿ ನಮ್ರವಾಗಿ ವಿನಂತಿಸಿಕೊಳ್ಳುತ್ತಿದ್ದೇವೆ.

ಹಿಂದೆಯೂ ಇದೇ ರೀತಿಯ ಜಿಜ್ಞಾಸೆಗಳು ಹುಟ್ಟಿಕೊಂಡಿದ್ದಾಗ ವಿಶ್ವಕರ್ಮ ಬ್ರಾಹ್ಮಣರು ನ್ಯಾಯಾಲಯಕ್ಕೂ ಹೋಗಿದ್ದಾರೆ. ಈ ಸಮಾಜ ಬ್ರಾಹ್ಮಣ ಸಮಾಜ ಎಂಬುದಾಗಿ ಕೋರ್ಟು ತೀರ್ಪು ಕೊಟ್ಟಿದೆ. ಗುಂಟೂರು ಹಾಗೂ ಚಿತ್ತೂರು ಜಿಲ್ಲಾ ನ್ಯಾಯಾಲಯಗಳ ತೀರ್ಪುಗೇ ಇದಕ್ಕೆ ಸಾಕ್ಷಿ.

ಆದರೆ ರಾಜಕೀಯ ಹಾಗೂ ಆರ್ಥಿಕ ಶಕ್ತಿ ಇಲ್ಲದ ಈ ವಿಶ್ವಕರ್ಮ ಬ್ರಾಹ್ಮಣ ಸಮಾಜವನ್ನು ತುಳಿಯಲೆತ್ನಿಸುವ ಶಕ್ತಿಗಳಿಂದ ರಕ್ಷಿಸಬೇಕಾದ ಹೊಣೆ ಗೌರವಾನ್ವಿತರಾದ ತಮ್ಮ ಮೇಲಿದೆ. ತಕ್ಷಣ ತಾವು ನಮ್ಮ ವಿನಂತಿಗೆ ಪ್ರತಿಕ್ರಿಯಿಸುತ್ತೀರಿ ಎಂಬ ಭರವಸೆ ನಮಗಿದೆ".[೧೩]

ಅವರ ಪತ್ರದ ಪ್ರಖರತೆಯನ್ನು ಕಂಡು ಉಪಮುಖ್ಯಮಂತ್ರಿಗಳು ತಕ್ಷಣ ಜಾತಿನಿಂದನೆಯ ಪಠ್ಯವನ್ನು ತೆಗೆದು ಹಾಕುವಂತೆ ಆದೇಶ ನೀಡಿದರು. ಅವರ ಆದೇಶದಲ್ಲಿ– "ಹತ್ತು ಹಲವು

ಸತ್ಯಕ್ಕೆ ದೂರವಾದ ಸಂಗತಿಗಳನ್ನು ಉಲ್ಲೇಖಿಸಿದ್ದು ಇದರಿಂದ ವಿಶ್ವಕರ್ಮರ ಭಾವನೆಗಳಿಗೆ ತೀವ್ರ ನೋವುಂಟಾಗಿರುತ್ತದೆ. ಅದು ಜಾತಿ ವೈಷಮ್ಯಕ್ಕೆ ಎಡೆಮಾಡಿಕೊಡುವುದಲ್ಲದೆ, ಸಂವಿಧಾನದ ಪರಿಚ್ಛೇದ ೨೧ರ ಪ್ರಕಾರ ನಾಗರೀಕರು ಘನತೆ ಗೌರವದಿಂದ ಬಾಳುವ ಹಕ್ಕಿಗೆ ವಿರೋಧ ವ್ಯಕ್ತಪಡಿಸುವ ಅಂಶವಾಗಿದ್ದು. ಈ ವಿವಾದಾತ್ಮಕ ಪಠ್ಯಪುಸ್ತಕವನ್ನು ಹಿಂತೆಗೆದುಕೊಳ್ಳಲು ಸಂಬಂಧಿಸಿದವರಿಗೆ ಸೂಚಿಸಲು ಕೋರಿದೆ".[೧೪]

ಹೀಗೆ ಸಮಾಜದ ಅವಹೇಳನ ಆದಾಗಲೆಲ್ಲ ವಿಶ್ವಕರ್ಮ ಪತ್ರಿಕೆಗಳು ಪ್ರತಿಭಟನೆಯ ಲೇಖನಗಳನ್ನು ಪ್ರಕಟಿಸಿ, ಜನರಲ್ಲಿ ಜಾಗೃತಿಯನ್ನುಂಟು ಮಾಡಿ, ತಮ್ಮ ಧರ್ಮ ಸಂಸ್ಕೃತಿಯ ಬಗೆಗೆ ಅಭಿಮಾನ ತಾಳುವಂತೆ ಮಾಡಿವೆ.

**ಜಾಹೀರಾತುಗಳು :**

ಜಾಹೀರಾತುಗಳು ಪತ್ರಿಕೆಗೆ ಆರ್ಥಿಕ ಚೈತನ್ಯವನ್ನು ತಂದು ಕೊಡುತ್ತವೆ. ಹೀಗಾಗಿ ಬಹುತೇಕ ಪತ್ರಿಕೆಗಳು ಸುಗಮವಾಗಿ ಸಾಗಲು ಜಾಹೀರಾತುಗಳನ್ನು ನಂಬಿ ಬದುಕುತ್ತಿರುತವೆ. ವಿಶ್ವಕರ್ಮ ಸಮಾಜದ ಪತ್ರಿಕೆಗಳನ್ನು ಅವಲೋಕಿಸಿದಾಗ, ಕೆಲವು ಪತ್ರಿಕೆಗಳು ಜಾಹೀರಾತುಗಳಿಲ್ಲದೆ, ಶುದ್ಧ ಸಾಹಿತ್ಯಿಕ–ಸಾಂಸ್ಕೃತಿಕ ಪತ್ರಿಕೆಯಾಗಿ ರೂಪಿಸಲು ಪ್ರಯತ್ನಿಸಿದ್ದಾರೆ. ಇನ್ನು ಕೆಲವರು ಪತ್ರಿಕೆಯ ಎರಡು, ಮೂರು ಮತ್ತು ಕೊನೆಯ ಪುಟಗಳನ್ನು ವರ್ಣರಂಜಿತವಾಗಿ ಮುದ್ರಿಸುವ ಕಾರಣ, ಈ ಪುಟಗಳನ್ನು ಜಾಹೀರಾತುಗಳಿಗೆ ಮೀಸಲಿಟ್ಟಿದ್ದಾರೆ.

ಜಾಹೀರಾತುಗಳಲ್ಲಿ ವಿಶೇಷವಾಗಿ ವಿಶ್ವಕರ್ಮ ಸಮಾಜದ ಕೆಲವರು ಸ್ವಂತ ಬಿಜಿನೆಸ್ ಮಾಡುವವರು ತಮ್ಮ ಕಂಪನಿಗಳ ಜಾಹೀರಾತು ಕೊಟ್ಟಿದ್ದಾರೆ. ಅದಕ್ಕಿಂತ ಮಿಗಿಲಾಗಿ ವಿಶ್ವಕರ್ಮರು ತಮ್ಮ ಸಮಾಜದ ಪತ್ರಿಕೆಗಳಿಗೆ ಜೀವ ತುಂಬಬೇಕೆಂಬ ಕಾರಣಕ್ಕಾಗಿ, ತಮ್ಮ ಮಕ್ಕಳ, ಮೊಮ್ಮಕ್ಕಳ ಹುಟ್ಟುಹಬ್ಬದ ಜಾಹೀರಾತು ನೀಡಿದ್ದಾರೆ. ವಿವಾಹ ಮಹೋತ್ಸವಗಳ ಜಾಹೀರಾತು ನೀಡಿದ್ದಾರೆ. ತಮ್ಮ ಚಿಕ್ಕ ಮಕ್ಕಳ ಬ್ರಹ್ಮೋಪದೇಶ ಕಾರ್ಯಕ್ರಮಗಳ ಜಾಹೀರಾತು ಕೊಟ್ಟಿದ್ದಾರೆ. ವಿಶ್ವಕರ್ಮ ಸಮಾಜದ ವ್ಯಕ್ತಿಗಳ ಷಷ್ಟ್ಯಬ್ದ ಸಮಾರಂಭ, ಅಮೃತ ಮಹೋತ್ಸವ, ಶತಮಾನೋತ್ಸವ ಕಾರ್ಯಕ್ರಮಗಳ ಜಾಹೀರಾತುಗಳನ್ನು ನೀಡಿದ್ದಾರೆ. ಸಮಾಜದ ಗಣ್ಯ ವ್ಯಕ್ತಿಗಳು ನಿಧನರಾದಾಗ ಪುಣ್ಯಸ್ಮರಣೆಯ ಜಾಹೀರಾತುಗಳು ಪ್ರಕಟಗೊಂಡಿವೆ.

ಇನ್ನು ಕೆಲವು ಸಂಪಾದಕರು ಸ್ವಯಂ ಪ್ರೇರಿತರಾಗಿ ತಮ್ಮ ಸಮಾಜದ ಯುವಜನರಿಗೆ ಉಪಯೋಗವಾಗಲಿ ಎಂಬ ಕಾರಣಕ್ಕಾಗಿ, ವಿಶ್ವಕರ್ಮ ಸಮಾಜದ ಶಿಬಿರ ಸಮ್ಮೇಳನಗಳಲ್ಲಿ ಭಾಗವಹಿಸಲು ಜಾಹೀರಾತು ಪ್ರಕಟಿಸಿದ್ದಾರೆ. ಕರಕುಶಲ ತರಬೇತಿ ಶಿಬಿರಗಳ ಜಾಹೀರಾತು ನೀಡಿದ್ದಾರೆ. ಐ.ಟಿ.ಐ. ತರಬೇತಿ ಸಲುವಾಗಿ, ಹಾಸ್ಟೆಲ್ ಸಲುವಾಗಿ ಸಮಾಜದ ವತಿಯಿಂದ ಜಾಹೀರಾತುಗಳನ್ನು ಪ್ರಕಟಿಸಿ, ಉಪಯುಕ್ತ ಮಾಹಿತಿ ನೀಡಿ ಸಹಕರಿಸಿದ್ದಾರೆ.

ಕಾಳಿಕಾ ಸಂದೇಶ ಪತ್ರಿಕೆಯಲ್ಲಿ ಪ್ರಕಟವಾದ ಒಂದು ಜಾಹೀರಾತು ನೋಡಿ ಗಡೀಹಳ್ಳಿ ಮೌನೇಶ್ವರಚಾರ್ ಎನ್ನುವರು ಸಂಪಾದಕರಿಗೆ ಪತ್ರ ಬರೆದು– "ಹ್ಯಾಮರ್‌ಸನ್ಸ್‌ಗೋಲ್ಡ್ ಆರ್ಟಿಕಲ್ಸ್ ಪ್ರೈ ಲಿ. ಬೆಳಗಾವಿ ಇವರ ಜಾಹೀರಾತು ನೋಡಿ ಬಹಳ ಸಂತೋಷವಾಯಿತು. ವಿಶ್ವಕರ್ಮ ಸಮಾಜದ ಬಡ ವಿದ್ಯಾರ್ಥಿಗಳಿಗೆ ಈ ಯೋಜನೆ ಒಂದು ವರದಾನ ಸಮಾಜದ ಆರ್ಥಿಕ ಹಿಂದುಳಿದವರು ಈ ಮೂಲಕ ತರಬೇತಿ ಪಡೆದು ತಮ್ಮ ಜೀವನಮಟ್ಟ ಸುಧಾರಿಸಿಕೊಳ್ಳಲು ಒಂದು ಉತ್ತಮವಕಾಶ ಕಲ್ಪಿಸಿದ್ದಾರೆ. ಅವರಿಗೆ ನಮ್ಮ ಸಮಾಜದ ಪರವಾಗಿ ಅಭಿನಂದಿಸುತ್ತೇವೆ. ಇಂತಹ ಜಾಹೀರಾತು ಪ್ರಕಟಣೆಗಳನ್ನು ಪ್ರಕಟಿಸಿ ಸಮಾಜಕ್ಕೆ ಉಪಯೋಗ ಮಾಡಿದ 'ಕಾಳಿಕಾ ಸಂದೇಶ'ಕ್ಕೆ ಅಭಿನಂದನೆಗಳು".[೧೫]

ಹೀಗೆ ವಿಶ್ವಕರ್ಮ ಪತ್ರಿಕೆಗಳು ಪ್ರಾದೇಶಿಕವಾಗಿ, ಸಾಮುದಾಯಿಕವಾಗಿ ಐಕ್ಯತೆ ಮೂಡಿಸಲು, ಭಾವೈಕ್ಯತೆ ಸಾರಲು ಪ್ರಯತ್ನ ಮಾಡಿವೆ. ಮಹಿಳಾ ಸಂವೇದನೆಯೂ ಅರ್ಥಪೂರ್ಣವಾಗಿ ಹೊರಹೊಮ್ಮಿದೆ. ವಿಶ್ವಕರ್ಮ ಸಮಾಜ ಬಾಂಧವರು ತಮ್ಮ ಮಕ್ಕಳ, ಮೊಮ್ಮಕ್ಕಳ ಹುಟ್ಟುಹಬ್ಬ, ಸಂಸ್ಕಾರ ಕಾರ್ಯಕ್ರಮ, ಷಷ್ಟ್ಯಬ್ದ, ಅಮೃತ ಮಹೋತ್ಸವ ಮೊದಲಾದ ಕಾರ್ಯಕ್ರಮಗಳ ಜಾಹೀರಾತುಗಳನ್ನು ನೀಡಿ, ಪತ್ರಿಕೆಗಳು ಸರ್ವಾಂಗ ಸುಂದರವಾಗಿ ಹೊರಬರಲು ಕಾರಣರಾಗಿದ್ದಾರೆ. ಇಂತಹ ಅನನ್ಯತೆ ಹೊಂದಿರುವ ಸಮುದಾಯ ಪತ್ರಿಕೆಯು ಇತರೆ ಸಮುದಾಯದ ಪತ್ರಿಕೆಗಳಿಗೆ ಮಾದರಿಯಾಗಿದೆ.

## ಕೊನೆ ಟಿಪ್ಪಣಿ

೧. ಡಾ. ವೀರೇಶ ಬಡಿಗೇರ: ಪಾಂಚಾಳ ಮತ್ತು ವಿಶ್ವಕರ್ಮ ಪದಗಳೊಂದಿಗೆ ಒಂದು ಅನುಸಂಧಾನ. ಕಾಳಿಕಾ ಸಂದೇಶ, ಪು. ೧೦-೧೨, ಮಾರ್ಚ ೨೦೧೫

೨. ಅದೇ ಪು. ೧೧

೩. ಅದೇ ಪು. ೧೨

೪. ಎಸ್. ಯು. ಪೋತದಾರ: ವಿಶ್ವಕರ್ಮ ಬ್ರಾಹ್ಮಣ ಮತ್ತು ದೈವಜ್ಞ ಬ್ರಾಹ್ಮಣರ ಪರಂಪರೆ ವಿಶ್ವಕರ್ಮೋದಯ ಸಂ. ೨, ಸಂಚಿಕೆ ೭, ಪು. ೧೦-೧೧ ಸೆಪ್ಟಂಬರ್ ೨೦೦೪,

೫. ವೇಲಾಪುರಿ ವಿಶ್ವನಾಥ ಶರ್ಮಾ: ಸಂಸ್ಕೃತ ಸಮಾಜ ಸಂಘಟನೆಗಾಗಿ: ಸಹಚಿಂತನ ಪು.-೮ ಜನವರಿ ೨೦೧೨,

೬. ವಾಸುದೇವ ಆಚಾರ್: ಸಂಸ್ಕೃತ ಸಂಭಾಷಣಮ್ ಸಹ ಚಿಂತನ, ಪು. ೪ ಮಾರ್ಚ ೨೦೧೨

೭. ಚಂದ್ರಶೇಖರ ಪಿ. ಕರಾವಳಿಯಲ್ಲಿ ಭೂತಾರಾಧನೆ : ಸಹಚಿಂತನ, ಪು. ೫, ಮಾರ್ಚ ೨೦೧೨

೮. ಎಚ್. ಎಲ್. ನಾಗವೇಣಿ : ಗಾಂಧಿ ಬಂದ ಪು. ೪೮

೯. ನಾಗವೇಣಿ : ಸಂಗತ ಪ್ರಜಾವಾಣಿ, ಪು. ೬, ದಿ: ೨೯-೧೧-೨೦೧೧

೧೦. ರಾಜೇಂದ್ರ ಚೆನ್ನಿ : ಸಂಗತ- ಪ್ರಜಾವಾಣಿ, ಪು ೬ ದಿ:೨-೧೨-೨೦೧೧

೧೧. ಬಿ. ಎ. ಆಚಾರ್ಯ : ಸಂಪಾದಕೀಯ ಸಹಚಿಂತನ, ಪು. ೩, ಮಾರ್ಚ ೨೦೧೨

೧೨. ಸಮಾಜ ಶಾಸ್ತ್ರ ಪಠ್ಯದಲ್ಲಿ ಜಾತೀಯ ನಿಂದನೆ ಆನೆಗುಂದಿ ಶ್ರೀಗಳ ನೇತೃತ್ವದಲ್ಲಿ ಕಟಪಾಡಿಯಲ್ಲಿ ಖಂಡನಾ ಸಭೆ-ಸಹಚಿಂತನ, ಪು. ೧೨, ಜುಲೈ ೨೦೦೭

೧೩. ಮುಖ್ಯಮಂತ್ರಿ-ಉಪಮುಖ್ಯಮಂತ್ರಿ, ಶಿಕ್ಷಣ ಸಚಿವರಿಗೆ ಕೊಟ್ಟ ದೂರು ಪತ್ರ: ಸಹಚಿಂತನ ಪತ್ರಿಕೆ, ಪು. ೧೩ ಜುಲೈ ೨೦೦೭

೧೪. ಮುಖ್ಯಮಂತ್ರಿಗಳ ಪತ್ರ : ಸಹಚಿಂತನ, ಪು. ೧೭, ಜುಲೈ ೨೦೦೭

೧೫. ಗಡೀಹಳ್ಳಿ ಮೌನೇಶ್ವರಚಾರ್ : ಶುಭ ಸಂದೇಶ ಕಾಳಿಕಾ ಸಂದೇಶ, ಪು. ೨೦, ಜುಲೈ ೨೦೧೮

# ಅಧ್ಯಾಯ–ಒಂಬತ್ತು
# ಸಮಾರೋಪ

ಆಧುನಿಕ ಕಾಲದಲ್ಲಿ ಅಕ್ಷರ ಜಗತ್ತಿಗೆ ತೆರೆದುಕೊಂಡ ಈ ಸಮುದಾಯದ ಮೊದಲ ತಲೆಮಾರಿನ ಲೇಖಕರು ಅಕ್ಷರ ಮತ್ತು ಅನ್ನದ ಜೊತೆಗೆ ವಿಶ್ವಕರ್ಮ ಸಮಾಜದ ಧಾರ್ಮಿಕ, ಸಾಹಿತ್ಯಕ, ಸಾಮಾಜಿಕ ಹಾಗೂ ಆರ್ಥಿಕ ಸಬಲೀಕರಣಕ್ಕೆ ತುಡಿದವರು. ವ್ಯಕ್ತಿಗತವಾಗಿ, ಸಾಮಾಜಿಕವಾಗಿ, ಮಠ ಹಾಗೂ ಪೀಠಗಳ ನೆರವಿನಿಂದ ತಮ್ಮನ್ನು ತಾವು ಕಟ್ಟಿಕೊಳ್ಳಲು, ಸಂಘಟಿಸಿಕೊಳ್ಳಲು ಹಂಬಲಿಸಿದವರು. ಈ ಹಂಬಲವನ್ನು ನಾನು ಪ್ರಮುಖವಾಗಿ ಎರಡು ಧಾರೆಗಳಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಮೊದಲನೆಯದು ಧರ್ಮ ಮತ್ತು ಸಂಪ್ರದಾಯಗಳ ಪುನಾರಚನೆ. ಎರಡನೆಯದು ಸಾಹಿತ್ಯ ಮತ್ತು ಕಲೆಗಳ ಪುನರುಜ್ಜೀವನ ಹಾಗೂ ಹೊಸಸೃಷ್ಟಿ. ಮೊದಲ ಭಾಗದಲ್ಲಿ ತಮ್ಮ ಸನಾತನ ಆಚರಣೆ, ಸಂಪ್ರದಾಯ, ಧರ್ಮ, ಪೌರೋಹಿತ್ಯ ಬ್ರಾಹ್ಮಣತ್ವದ ಮತ್ತು ಆ ಕುರಿತು ಹಕ್ಕುಬಾಧ್ಯತೆಗಳನ್ನು ಗಳಿಸಿಕೊಳ್ಳಬೇಕೆನ್ನುವ ತುರ್ತುಗಳಿದ್ದರೆ, ಎರಡನೆಯ ಭಾಗದಲ್ಲಿ ಕಲೆ. ಸಾಹಿತ್ಯ, ಚಿತ್ರ, ಸಂಗೀತ, ಮುಂತಾದ ಲಲಿತ ಕಲೆಗಳ ಮೂಲಕ ಈ ಜಗತ್ತಿನಲ್ಲಿ ತನ್ನ ಅಸ್ತಿತ್ವವನ್ನು ಹುಡಿಕಿಕೊಳ್ಳುವ ಮತ್ತು ಮರುಕಟ್ಟಿಕೊಳ್ಳುವ ಒತ್ತಾಸೆಗಳನ್ನು ಕಾಣುತ್ತೇವೆ. ಆಧುನಿಕ ಅಕ್ಷರ ಮತ್ತು ಪಾರಂಪರಿಕ ಅನುಭವವನ್ನು ಬೆಸೆದು ಹೊಸಸೃಷ್ಟಿಗೆ ಹಾತೊರೆಯುವ ಅಧಮ್ಯ ಉತ್ಸವಾಹವನ್ನು ಕಾಣಬಹುದು. ಅದಕ್ಕಾಗಿ ಪ್ರಬಲ ಮಾಧ್ಯಮವಾದ ಪತ್ರಿಕೆಯನ್ನು ತನ್ನೆಲ್ಲ ಅಸ್ತಿತ್ವೀಯ ಹಾಗೂ ಅನನ್ಯ ಅಭಿವ್ಯಕ್ತಿಗಳಿಗೆ ಬಳಸಿಕೊಂಡಿದ್ದು ಆ ಸಮಾಜದ ರಚನಾತ್ಮಕ ಚಿಂತನೆಯ ಪ್ರತೀಕವಾಗಿದೆ.

೧೯೪೦ರ ದಶಕದಿಂದ ವಿಶ್ವಕರ್ಮ ಸಮಾಜದ ಮೊದಲ ತೆಲೆಮಾರಿನ ಅಕ್ಷರಸ್ಥ ಹಿರಿಯರು ಪ್ರಕಟಿಸುತ್ತ ಬಂದ ವಿವಿಧ ರೀತಿಯ ಪತ್ರಿಕೆಗಳು ಹಾಗೂ ಸಾಹಿತ್ಯ ಕೃತಿಗಳು ಸಮಾಜ ಜಾಗೃತಿಯನ್ನು ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡಿದ್ದವು. ವಿಶ್ವಕರ್ಮ ಪತ್ರಿಕೆಗಳು ಧರ್ಮ, ಸಾಹಿತ್ಯ, ಕಲೆ, ಸಂಸ್ಕೃತಿಯನ್ನು ಹೊಸ ತಲೆಮಾರಿನ ಲೇಖಕರನ್ನು ಬೆಳಸುವ ಪ್ರಾಮಾಣಿಕ

ಪ್ರಯತ್ನ ಮಾಡುತ್ತಿವೆ. ಹೀಗಾಗಿ ವಿಶ್ವಕರ್ಮ ಸಮಾಜ ಶೈಕ್ಷಣಿಕ ಹಾಗೂ ಸಾಮಾಜಿಕ ಏಳ್ಗೆಯಲ್ಲಿ ಪತ್ರಿಕೆಗಳ ಪಾತ್ರ ಗಣನೀಯವಾಗಿದೆ. ಧರ್ಮಗಳು ಜಾತಿಗಳಾಗಿ ಪರಿಣಮಿಸುತ್ತಿರುವ ಜಾಗತೀಕರಣದ ಸಂದರ್ಭದಲ್ಲಿ ಎಲ್ಲ ಧರ್ಮ-ಸಮಾಜಗಳು ತನ್ನ ಸಾಂಸ್ಕೃತಿಕ ಜವಾಬ್ದಾರಿಗಳನ್ನು ಅರಿಯುತ್ತಿರುವ ಮತ್ತು ಮರೆಯುತ್ತಿರುವ ಕ್ರಿಯೆ ಒಟ್ಟೊಟ್ಟಿಗೆ ನಡೆಯುತ್ತಿದೆ. ಈ ದೃಷ್ಟಿಯಿಂದ ವಿಶ್ವಕರ್ಮ ಪತ್ರಿಕೆಗಳು ಕಳೆದ ಎಂಬತ್ತು ದಶಕಗಳಿಂದ ಕಟ್ಟಿಕೊಂಡ ಸಾಂಸ್ಕೃತಿಕ ಅಸ್ತಿತ್ವವನ್ನು ಈ ಅಧ್ಯಯನದಲ್ಲಿ ಪ್ರಧಾನವಾಗಿ ಗುರುತಿಸಿದ್ದೇನೆ.

ಲಭ್ಯವಾಗಿರುವ ವಿಶ್ವಕರ್ಮ ಪತ್ರಿಕೆಗಳನ್ನು ಕ್ರೋಢಿಕರಿಸಿ ಅಧ್ಯಯನ ಮಾಡಿರುವಂತೆ, ನವೆಂಬರ್ ೧೯೪೮ ರಂದು 'ವಿಶ್ವಕರ್ಮಾ' ಎಂಬ ಮಾಸಪತ್ರಿಕೆಯು ಮೈಸೂರಿನ ಮ. ಗಂಗಾಧರಮೂರ್ತಿ ಅವರ ಸಂಪಾದಕತ್ವದಲ್ಲಿ ಪ್ರಥಮವಾಗಿ ಪ್ರಕಟಗೊಳ್ಳುತ್ತದೆ. ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ವಿಶ್ವಕರ್ಮ ಜನಾಂಗವನ್ನು ಕುರಿತು ಪ್ರಾರಂಭವಾದ ಮೊಟ್ಟ ಮೊದಲ ಪತ್ರಿಕೆ ಇದಾಗಿದೆ. ಮ. ಗಂಗಾಧರ ಮೂರ್ತಿ ಅವರು ಮೈಸೂರು ಮಹಾರಾಜರ ಕೃಪಾಶೀರ್ವಾದಕ್ಕೆ ಪಾತ್ರರಾದರಾಗಿದ್ದರು. ಹೀಗಾಗಿ 'ವಿಶ್ವಕರ್ಮ ಹಿತೈಷಿಣೀ ಗ್ರಂಥಮಾಲೆ'ಯನ್ನು ಮೈಸೂರಿನಲ್ಲಿ ಅಸ್ತಿತ್ವಕ್ಕೆ ತಂದರು. ಮಹಾರಾಜರ ಆಸಕ್ತಿ, ವಿಶ್ವಕರ್ಮ ಜನಾಂಗದವರ ಪ್ರೀತಿ ಕಾರಣವಾಗಿ ಪತ್ರಿಕೆ ನಿಯಮಿತವಾಗಿ ಪ್ರಕಟಗೊಂಡು ಸರ್ವಜನಾದರಣೀಯವಾಗಿತ್ತು. ಹೆಸರಿಗೆ 'ವಿಶ್ವಕರ್ಮಾ' ಎಂದು ಪತ್ರಿಕೆಯಿದ್ದರೂ ಅದು ಸರ್ವಮಾಹಿತಿಗಳ ಭಂಡಾರವಾಗಿತ್ತು. ಇದೇ ಕಾಲದಲ್ಲಿ ಭಾರತ ಸ್ವಾತಂತ್ರ್ಯ ಪಡೆದ ಕಾರಣ ಭಾರತ ಸ್ವಾವಲಂಬಿಯಾಗಬೇಕು, ಕರ್ನಾಟಕ ಏಕೀಕರಣವಾಗಬೇಕು ಎಂಬ ಹತ್ತು ಹಲವು ಸಾರ್ವತ್ರಿಕ ಸಮಸ್ಯೆಗಳ ಕುರಿತು ವಿಶ್ವಕರ್ಮ ಪತ್ರಿಕೆಗಳ ಸಂಪಾದಕೀಯದಿಂದ ಗುರುತಿಸಿದ್ದೇನೆ. ಹೀಗೆ ವಿಶ್ವಕರ್ಮ ಪತ್ರಿಕೆಗಳು ಸಮಾಜಮುಖಿಯಾಗಿ ಪ್ರಕಟವಾಗುತ್ತ ಬಂದಿವೆ.

ಪತ್ರಿಕೆಗಳು ವಿಶ್ವಕರ್ಮ ಸಮಾಜದಿಂದ ಪ್ರಕಟವಾದರೂ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಅವು ನೀಡಿದ ಅಮೂಲ್ಯ ಕಾಣಿಕೆಯನ್ನು ಮರೆಯಲು ಸಾಧ್ಯವಿಲ್ಲ. ಅನುವಾದ, ಸಂಶೋಧನೆ, ಧಾರ್ಮಿಕ ಸಾಹಿತ್ಯ, ಸೃಜಶೀಲ ಸಾಹಿತ್ಯ, ಅಂಕಣ ಸಾಹಿತ್ಯ ಹೀಗೆ ಹತ್ತು ಹಲವು ಆಯಾಮಗಳಲ್ಲಿ ಮುಂಚಾಚುತ್ತ ಹಲವಾರು ಪ್ರತಿಭಾನ್ವಿತ ಸಾಹಿತಿಗಳು ಬೆಳೆಯಲು ಇಂಬು ನೀಡಿದ್ದು ಮಹತ್ವದ ಸಂಗತಿಯಾಗಿದೆ. ವಿಶ್ವಕರ್ಮೇತರ ಸಾಹಿತಿ, ಸಂಶೋಧಕರ ಲೇಖನಗಳನ್ನು, ನಿಲುವುಗಳನ್ನು ಟೀಕೆ ಟಿಪ್ಪಣಿಗಳನ್ನು ಪ್ರಕಟಿಸುವ ಮೂಲಕ ತಾನೂ ಬೆಳೆದು ಆ ಮೂಲಕ ಸುಧೀರ್ಗ ೮೦ ವರ್ಷಗಳ ಕಾಲ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿದ್ದು, ಗಮನಿಸುವ ವಿಚಾರವಾಗಿದೆ. ಹೀಗೆ ತನ್ನ ಉದ್ದೇಶಿತ ಕಾರ್ಯಸಾಧನೆ ಜೊತೆಗೆ ಅನ್ಯರನ್ನೊಳಗೊಂಡಂತೆ ತನ್ನ ಸಾಹಿತ್ಯಕ ಮತ್ತು ಸಾಂಸ್ಕೃತಿಕ ನೆಲಗಳನ್ನು ಶೋಧಿಸಿ ಮರು ಕಟ್ಟಿಕೊಳ್ಳುವಲ್ಲಿ ಆ ಸಮಾಜದ ಪತ್ರಿಕೆಗಳು ತೋರಿದ ಸೃಜನಶೀಲ ಸ್ವಾತಂತ್ರ್ಯ ಉಳಿದ ಸಮುದಾಯಗಳಿಗೆ ಮಾದರಿಯಾದುದಾಗಿದೆ. ವ್ಯಕ್ತಿಗತ ಆರ್ಥಿಕ ಹಾಗೂ ಸಾಮಾಜಿಕ ಒಕ್ಕಟ್ಟುಗಳನ್ನು ಮೀರಿ ವಿಶ್ವಕರ್ಮ ಪತ್ರಿಕೆಗಳು ಮುನ್ನುಗ್ಗಿದ್ದು, ಅದರ ಸಮಾಜಿಕ

